॥ ಶ್ರೀಃ ॥

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯಾ — ೧೯.

# ಶ್ರೀ ಲಿಂಗಮಹಾಪುರಾಣಂ

(ಸಂಸ್ಕೃತಮೂಲ, ಕನ್ನಡದಲ್ಲಿ ಅರ್ಥಾನುವಾದ, ವಿವರಣೆಗಳೊಡನೆ)

ಪೂರ್ವಭಾಗ—ಸಂಪುಟ ೧

ಅಧ್ಯಾಯಗಳು ೧–೩೯


**ಅನುವಾದಕ:**

ಆಸ್ಥಾನ ಮಹಾವಿದ್ವಾನ್

**ಎಡತೊರೆ ಚಂದ್ರಶೇಖರ ಶಾಸ್ತ್ರೀ, ಎಂ.ಎ.**

**ಸಾಹಿತ್ಯ ವಿದ್ವಾನ್**





**ಮೈಸೂರು:**

**ಬೆಂಗಳೂರು ಪ್ರೆಸ್ ಬ್ರಾಂಚ್**

**೧೯೪೫**

# ಮುನ್ನುಡಿ

॥ ಶ್ರೀ ಗಣೇಶಶಾರದಾಗುರುಭ್ಯೋ ನಮಃ ॥

---

ಪುರಾಣಗಳಲ್ಲಿ ಸಾಮಾನ್ಯವಾಗಿರುವ ಲಕ್ಷಣಗಳನ್ನು "ಸರ್ಗಶ್ಚ ಪ್ರತಿಸರ್ಗಶ್ಚ ವಂಶೋ ಮನ್ವಂತರಾಣಿ ಚ। ವಂಶಾನುಚರಿತಂ ಚೇತಿ ಪುರಾಣಂ ಪಂಚಲಕ್ಷಣಂ" ಎಂಬ ಕೋಶದಿಂದ ತಿಳಿಯಬಹುದು. ಮಹಾಪುರಾಣಗಳಲ್ಲಿ ೧. ಸರ್ಗಃ, ೨. ವಿಸರ್ಗಃ, ೩. ವೃತ್ತಿಃ, ೪. ರಕ್ಷಾ, ೫. ಅಂತರಂ, ೬. ವಂಶಃ, ೭. ವಂಶ್ಯಾನುಚರಿತಂ, ೮. ಸಂಸ್ಥಾ, ೯. ಹೇತುಃ, ೧೦. ಅಪಾಶ್ರಯಃ ಎಂಬ ಹತ್ತು ಲಕ್ಷಣಗಳಿರುತ್ತವೆಂದು ಹೇಳಿದೆ. ಇವುಗಳು ಈ ಲಿಂಗಮಹಾಪುರಾಣದಲ್ಲೂ ಇವೆ ಎಂಬ ಅಂಶವನ್ನು ಅಲ್ಲಲ್ಲಿಯೇ ವಿವರಿಸಿರುತ್ತದೆ. ಈ ಪುರಾಣಗಳಲ್ಲಿ ಮಹಾಪುರಾಣಗಳೆಂದೂ, ಉಪಪುರಾಣಗಳೆಂದೂ, ಎರಡು ಬಗೆ ಇದೆ. ಈ ಲಿಂಗಪುರಾಣವನ್ನು ಮಹಾಪುರಾಣವೆಂದು ಭಾವಿಸಲಾಗಿದೆ. ಇದರಲ್ಲಿ ಇರುವ ಕಥೆಗಳು, ತಿಳಿಯಿಸಿರುವ ಧರ್ಮಗಳು, ಮತ್ತು ನೀತಿಗಳು, ವಿವರಿಸಿರುವ ವೇದಾಂತ ತತ್ವಗಳು, ಇವುಗಳನ್ನು ಗಮನಿಸಿದರೆ, ಇದೂ ಮಹಾಪುರಾಣಗಳ ಸಾಲಿನಲ್ಲಿ ಸೇರಲು ಅರ್ಹವಾಗಿದೆ ಎಂಬುದೂ ಗೊತ್ತಾಗುತ್ತದೆ. ಈ ಪುರಾಣಗಳನ್ನು ಎಲ್ಲವನ್ನೂ ವ್ಯಾಸರೇ ರಚಿಸಿ, ಶಿಷ್ಯ ಪ್ರಶಿಷ್ಯರ ಮುಖಾಂತರವಾಗಿ ಪ್ರಚಾರಪಡಿಸಿದರೆಂಬ ಅಂಶವು "ಅಷ್ಟಾದಶ ಪುರಾಣಾನಾಂ ಕರ್ತಾ ಸತ್ಯವತೀಸುತಃ" ಎಂಬ ವಾಕ್ಯದಿಂದ ಗೊತ್ತಾಗುತ್ತದೆ. ಇವನ್ನು ಜನಸಾಮಾನ್ಯದ ಉದ್ಧಾರಕ್ಕಾಗಿ, ಅವರ ತಿಳಿವಳಿಕೆಯನ್ನೂ ನಡೆವಳಿಕೆಯನ್ನೂ ಮೇಲ್ಪಡಿಸಿ, ಅವರ ಜೀವನ

ವನ್ನೂ ಸಾರ್ಥಕಗೊಳಿಸುವುದಕ್ಕಾಗಿಯೇ, ವ್ಯಾಸರು ರಚಿಸಿ ಬೋಧಿಸಿದ ರೆಂಬುದು, "ಸ್ತ್ರೀ ಶೂದ್ರ ದ್ವಿಜ ಬಂಧೂನಾಂ ತ್ರಯೀ ನ ಶ್ರುತಿಗೋಚರಾ ಇತಿ ಭಾರತಮಾಖ್ಯಾನಂ ಕೃಪಯಾಮುನಿನಾ ಕೃತಂ॥ ಎಂಬ ವಚನದಿಂದ ತಿಳಿದುಬರುತ್ತದೆ. ಜ್ಞಾನವನ್ನು ಪಡೆಯಲು ಮಾನವ ಸಾಮಾನ್ಯಕ್ಕೇ ಹಕ್ಕಿದೆ. ಈ ಉದ್ದೇಶವನ್ನು ನೆರವೇರಿಸಲು ಸಹಕರಿಸುವುದು ಪಂಡಿತರ ಮತ್ತು ಧನಿಕರ ಮುಖ್ಯ ಕರ್ತವ್ಯ ಧರ್ಮವಾಗಿದೆ. ಇವನ್ನು ಓದಿ ಅಥವಾ ಓದಿಸಿಕೇಳಿ, ತಮ್ಮ ಬಾಳನ್ನು ಸಫಲಗೊಳಿಸಿಕೊಳ್ಳುವುದು ಎಲ್ಲ ಜನರ ಮುಖ್ಯ ಕರ್ತವ್ಯಧರ್ಮವಾಗಿದೆ.

ಈ ಲಿಂಗಮಹಾಪುರಾಣದಲ್ಲಿ ಸುಮಾರು ಒಂಬತ್ತು ಸಾವಿರದ ನಾಲ್ಕುನೂರು ಶ್ಲೋಕಗಳಿವೆ. ಇದರಲ್ಲಿ ಪೂರ್ವಭಾಗವೆಂದೂ ಉತ್ತರ ಭಾಗವೆಂದೂ ಎರಡು ಭಾಗಗಳಿವೆ. ಪೂರ್ವಭಾಗದಲ್ಲಿ ಒಂದುನೂರೆಂಟು ಅಧ್ಯಾಯಗಳೂ ಉತ್ತರ ಭಾಗದಲ್ಲಿ ಐವತ್ತೈದು ಅಧ್ಯಾಯಗಳೂ ಇವೆ. ಈ ಮೊದಲನೆಯ ಸಂಪುಟದಲ್ಲಿ ಮೊದಲಿನ ಮುವತ್ತೊಂಭತ್ತು ಅಧ್ಯಾಯ ಗಳನ್ನು ಕನ್ನಡದಲ್ಲಿ ಅರ್ಥಾನುವಾದದೊಡನೆ ಮುದ್ರಿಸಿ ಪ್ರಕಟಿಸಲಾಗಿದೆ. ಐದು ಸಂಪುಟಗಳಲ್ಲಿ ಈ ಮಹಾಪುರಾಣವನ್ನು ಸಮಗ್ರವಾಗಿ ಅಡಕ ಮಾಡಿ ಪ್ರಕಟಿಸಲಾಗಬಹುದೆಂದು ನಿರೀಕ್ಷಿಸುತ್ತೇನೆ.

ಕರುಣಾಮಯಳೂ ಜಗನ್ಮಾತೆಯೂ ಆಗಿರುವ, ಶ್ರೀ ಮಹಾ ತ್ರಿಪುರ ಸುಂದರೀ, ಭುವನೇಶ್ವರೀ, ಚಾಮುಂಡೇಶ್ವರೀ, ಮುಂತಾದ ನಾಮ, ರೂಪಗಳಿಂದ ಪ್ರಸಿದ್ಧಳಾಗಿರುವ, ದೇವಿಯ ಕೃಪೆಯಿಂದಲೂ, ನಮ್ಮ ನ್ನಾಳುತ್ತಿರುವ ಧಾರ್ಮಿಕ ಪ್ರಭುಗಳಾದ **ಶ್ರೀ ಜಯಚಾಮರಾಜೇಂದ್ರ ಒಡೆಯರ್ ಬಹದ್ದೂರ್, ಜಿ. ಸಿ. ಎಸ್. ಐ.** ಮಹಾಸ್ವಾಮಿಯವರ ಔದಾರ್ಯ ಪ್ರೋತ್ಸಾಹಗಳಿಂದಲೂ, ದೇವೀ ಭಾಗವತವೆಂಬ ಮಹಾಪುರಾಣ ವನ್ನು ಕನ್ನಡ ಅರ್ಥಾನುವಾದದೊಡನೆ ಬರೆದು ಮುದ್ರಿಸಿ ಹನ್ನೆರಡು ಸಂಪುಟಗಳಲ್ಲಿ ಪ್ರಕಟಿಸಲಾಗಿದೆ. ಈಗ ಇನ್ನೂ ಒಂದು ಮಹಾ ಪುರಾಣ ವಾದ ಈ ಗ್ರಂಥವನ್ನೂ ಹಾಗೆಯೇ ಪ್ರಕಟಿಸುವುದರಲ್ಲಿ ನನ್ನ ಸೇವೆ ಯನ್ನು ದೇವರಿಗೂ, ಪ್ರಭುಗಳಿಗೂ, ಜನತೆಗೂ, ಸಲ್ಲಿಸುವಂತಾಗಿರುವುದು, ನನ್ನ ಪೂರ್ವಪುಣ್ಯದ ಫಲವೆಂದು ತಿಳಿದಿರುತ್ತೇನೆ. ಇಂತಹ ಸೇವೆಗೆ ಅವಕಾಶವನ್ನು ಕಲ್ಪಿಸಿಕೊಟ್ಟಿರುವ ಮಹಾಸ್ವಾಮಿಯವರಿಗೆ ಕೃತಜ್ಞ ನಾಗಿರುತ್ತೇನೆ. ಹೀಗೆ ಪ್ರಭುಗಳು ಜನತೆಯ ತಿಳಿವಳಿಕೆ, ನಡೆವಳಿಕೆಗಳು ಮೇಲ್ಪಟ್ಟು, ಜನಸಾಮಾನ್ಯದ ಸಂಸ್ಕೃತಿಯು ಮೇಲ್ಪಡಲೆಂಬ ಉದ್ದೇಶ

ದಿಂದ ಈ ಮಹಾ ಕಾರ್ಯವನ್ನು ನೆರವೇರಿಸಲು ಅಪ್ಪಣೆ ಮಾಡಿರುವುದು ಕನ್ನಡಿಗರೆಲ್ಲರ ಭಾಗ್ಯೋದಯವಾಗಿದೆ. ಇದರಿಂದ ಜನರೂ ಪ್ರಯೋಜನವನ್ನು ಪಡೆಯಬೇಕಾಗಿದೆ. "ಇಹ ಚೇದ ವೇದೀತ್ ಅಥ ಸತ್ಯಮಸ್ತಿ ನ ಚೇದಿಹಾ ವೇದೀತ್ ಮಹತೀ ವಿನಷ್ಟಿಃ" ಎಂದು ಕೇನೋಪನಿಷತ್ತಿನಲ್ಲಿ ಶ್ರುತಿಮಾತೆಯೂ ಮಾಡಿರುವ ಎಚ್ಚರಿಕೆಯು ಬುದ್ಧಿವಾದವನ್ನು ಜನರೆಲ್ಲರೂ ಅನುಸರಿಸುವಂತಾಗಲೆಂದೂ, ಈ ಧಾರ್ಮಿಕ ಮನೋವೃತ್ತಿಯು ಸಾಮಾನ್ಯ ಜನರಲ್ಲೂ, ಜನತೆಯ ಮುಖಂಡರಲ್ಲೂ, ಬೇರೂರಿ ಬೆಳೆದು ಜಗತ್ತಿನಲ್ಲಿ ಈಗ ಸಂಭವಿಸಿರುವ ಈ ಘೋರ ಯುದ್ಧವು ನಿಂತು, ಮುಂದೆ ಯುದ್ಧಗಳು ಸಂಭವಿಸದಂತೆ ಆಗಿ, ದೇಶದಲ್ಲಿ ಶಾಂತಿ ನೆಮ್ಮದಿ ಸುಖಗಳು ನೆಲೆಸುವಂತಾಗಲೆಂದೂ, ದೇವರಲ್ಲಿ ಅನನ್ಯ ಭಕ್ತಿಯಿಂದ ಪ್ರಾರ್ಥಿಸುತ್ತಿರುತ್ತೇನೆ.

| | |
|---|---|
| ಪಾರ್ಥಿವ ಸಂವತ್ಸರದ<br>ನಿಜಚೈತ್ರ ಶುಕ್ಲ ಪೂರ್ಣಿಮಾ<br>ಗುರುವಾರ ೨೭-೪-೧೯೪೫ | ಎಡತೊರೆ ದೇವಯ್ಯ ದೀಕ್ಷಿತರ ಮಗ,<br>**ಚಂದ್ರಶೇಖರ ಶಾಸ್ತ್ರೀ.** |



# ವಿಷಯಗಳ ಸೂಚಿಕೆ.

## ಮೂವತ್ತೇಳನೆಯ ಅಧ್ಯಾಯ—

ಸನತ್ಕುಮಾರನ ಪ್ರಶ್ನೆಗೆ ಉತ್ತರವಾಗಿ ನಂದಿಯು ತನ್ನ ಉತ್ಪತ್ತಿಯ ಕಥೆಯನ್ನು ಹೇಳಿದುದು; ಮೇಘ ವಾಹನ ಕಲ್ಪದಲ್ಲಿ ವಿಷ್ಣುವು ಮೇಘವಾಗಿ ಈಶ್ವರ ನನ್ನು ತನ್ನ ಮೇಲೆ ಕೂಡಿಸಿಕೊಂಡಿದ್ದುದು; ವಿಷ್ಣು ವಿನಿಂದ ಬ್ರಹ್ಮನ ಉತ್ಪತ್ತಿ; ವಿಷ್ಣು ಬ್ರಹ್ಮರಿಗೆ ಶಿವನ ಅನುಗ್ರಹ. .. ೩೭೫–೩೮೩

## ಮೂವತ್ತೆಂಟನೆಯ ಅಧ್ಯಾಯ—

ವಿಷ್ಣುವು ಮಹೇಶ್ವರನ ಮಹಿಮೆಯನ್ನು ಬ್ರಹ್ಮ ನಿಗೆ ವಿವರಿಸಿ ಹೇಳಿದುದು; ವಿಷ್ಣುವು ವರಾಹ ರೂಪದಿಂದ ಭೂಮಿಯನ್ನು ಉದ್ಧರಿಸಿ ಮುಂಚಿ ನಂತೆಯೇ ಸ್ಥಾಪಿಸಿ ಸೃಷ್ಟಿಯನ್ನು ಮುಂದುವರಿಸಲು ಅನುಕೂಲ ಮಾಡಿದುದು; ಕುಮಾರರ ಸೃಷ್ಟಿ, ನಿವೃತ್ತಿ ಧರ್ಮಾಚರಣೆ; ಮಾನಸ ಪುತ್ರರ ಸೃಷ್ಟಿ; ಪ್ರವೃತ್ತಿ ಧರ್ಮಾಚರಣೆಯಿಂದ ಪ್ರಜೆಗಳ ಸೃಷ್ಟಿಗೆ ಮೊದಲಾದುದು; ಇದುವರೆಗೆ ವಿಷ್ಣುವಿನ ಮುಖ್ಯ ಸೃಷ್ಟಿಯು. .. ೩೮೪–೩೮೭

## ಮೂವತ್ತೊಂಭತ್ತನೆಯ ಅಧ್ಯಾಯ—

ದೇವೇಂದ್ರನು ಶಿಲಾದನಿಗೆ ಯುಗಧರ್ಮಗಳನ್ನು ವಿವರಿಸಿ ಹೇಳಿದುದು; ಕೃತಾ, ತ್ರೇತಾ, ದ್ವಾಪರ, ಕಲಿಯುಗಗಳಲ್ಲಿ ಮುಂದಾಗಿದ್ದ ಧರ್ಮಗಳ ಸ್ವರೂಪ; ಯುಗಗಳ ಕಾಲಪರಿಮಾಣ; ಪ್ರಜೆಗಳ ಜೀವನದ ರೀತಿ ನೀತಿಗಳು; ಕೃತಯುಗದಲ್ಲಿ ವರ್ಣಾಶ್ರಮ ಧರ್ಮಾಚರಣೆ; ನಿಷ್ಕಾಮ ಕರ್ಮಾಚರಣೆಯಿಂದ ಜನ ರಲ್ಲಿ ಶಾಂತಿ ನೆಮ್ಮದಿ ಸುಖಗಳು; ತ್ರೇತಾಯುಗದಲ್ಲಿ ಮಳೆ ಬೆಳೆಗಳನ್ನು ಅವಲಂಬಿಸಿ ಜೀವನ; ಜನಗಳಲ್ಲಿ ಸ್ವಾರ್ಥಪರತೆ, ಆತ್ಮಾಶೆಗಳುಂಟಾದುದು; ಧರ್ಮವು

ಕಾಲುಭಾಗ ಕಡಿಮೆಯಾಗಿದ್ದುದು; ಕಡೆಗೆ ಸೀತೋಷ್ಣಾದಿ ದ್ವಂದ್ವಬಾಧೆ; ಗೃಹರಚನೆ; ವ್ಯವಸಾಯ ಜೀವಿಕಾವೃತ್ತಿ; ಹದಿನಾಲ್ಕು ಬಗೆಯ ಧಾನ್ಯಗಳು ಜನರು ಜೀವನಕ್ಕಾಗಿ ಸ್ವಾರ್ಥಪರತೆಯಿಂದ ಇತರರ ದ್ರವ್ಯಾಪಹಾರಮಾಡಲು, ಜನಕ್ಷೋಭವನ್ನು ತಪ್ಪಿಸಿ ಕಾಪಾಡಲು ಕ್ಷತ್ರಿಯರನ್ನು ಗೊತ್ತುಮಾಡಿದುದು; ಸ್ವಧರ್ಮದಿಂದಲೇ ಎಲ್ಲರೂ ಜೀವಿಸಬೇಕೆಂಬ ನಿರ್ಬಂಧ ನಿಯಮ; ಯಜ್ಞಗಳ ಆಚರಣೆ; ದ್ವಾಪರದಲ್ಲಿ ಜೀವನವು ಕಷ್ಟಸಾಧ್ಯವಾಯಿತು; ಜನರಲ್ಲಿ ದುಷ್ಟ ಭಾವಗಳು ಹೆಚ್ಚಿತು; ಸಂಬಳದಿಂದ ಸೇವಿಸುವುದು; ವಾಣಿಜ್ಯದಿಂದ ಪರಸ್ಪರ ಯುದ್ಧಗಳುಂಟಾದುದು; ವರ್ಣಾಶ್ರಮ ಧರ್ಮಾಚರಣೆಗೆ ಲೋಪ; ಇತಿಹಾಸ ಪುರಾಣಗಳು ಭಿನ್ನ ಭಿನ್ನವಾದುದು; ಕಲಿಯುಗದಲ್ಲಿ ತಮೋಗುಣದ ಪ್ರಾಬಲ್ಯ; ಧರ್ಮಕ್ಕೆ ಗ್ಲಾನಿ ನಾಶಗಳು. .. ೩೮೩–೪೦೨



ಶ್ರೀ ಗಣೇಶಶಾರದಾಗುರುಭ್ಯೋನಮಃ

# ಶ್ರೀ ಲಿಂಗಮಹಾಪುರಾಣಂ

## ಪೂರ್ವಾರ್ಧೇ ಪ್ರಥಮೋಽಧ್ಯಾಯಃ

ಓಂ ನಮಶ್ಶಿವಾಯ

**ನಮೋ ರುದ್ರಾಯ ಹರಯೇ ಬ್ರಹ್ಮಣೇ ಪರಮಾತ್ಮನೇ ।**
**ಪ್ರಧಾನ ಪುರುಷೇಶಾಯ ಸರ್ಗ ಸ್ಥಿತ್ಯಂತಕಾರಿಣೇ ॥ ೧ ॥**

---

**ವಂದೇ ದೇವಂ ಪ್ರಪಂಚಪ್ರಭವಭರಣಸಂಹಾರ ತಂತ್ರಸ್ವತಂತ್ರಂ**
**ಶಕ್ತ್ಯಾ ಮಾಯಯಾ ಪ್ರಕೃತ್ಯಾ ತ್ರಿಗುಣವಿಷಮಯಾ ನಾಮರೂಪೈರ್ವಿಭಾಂತಂ ।**
**ಜೀವಾನಾಂ ಕರ್ಮಭೇದೈಃ ತದುಚಿತಫಲದಂ ಸರ್ವಭೂತಾತ್ಮಭೂತಂ**
**ಸರ್ವಾಂತರ್ಯಾಮಿರೂಪಂ ಸಹಕೃತಿಸಮತಾಪ್ರೀತಿ ವಿಶ್ವಾಸ ಹೇತುಂ ॥**

ಈ ಚರಾಚರ ಪ್ರಪಂಚದ ಸೃಷ್ಟಿ, ಸಂರಕ್ಷಣ, ಉಪಸಂಹಾರಗಳೆಂಬ ಮಹಾಕಾರ್ಯಗಳನ್ನು ನೆರವೇರಿಸುವುದರಲ್ಲಿ ಸರ್ವಜ್ಞನೂ ಸರ್ವಸಮರ್ಥನೂ ಸ್ವತಂತ್ರನೂ ಆಗಿರುವ, ಸೃಜ್ಯಮಾನರಾಗಿರುವ ಜೀವರ ಕರ್ಮಾನುಸಾರವಾಗಿ ತನ್ನಲ್ಲಿ ಆಪೇಕ್ಷಿಕವಾಗಿ ಉಂಟಾಗುತ್ತಿರುವ ಮೊದಲನೆಯ ಸ್ಪಂದರೂಪವಾದ ಶಕ್ತಿಯಿಂದಲೂ, ವೇದಾಂತಶಾಸ್ತ್ರದಲ್ಲಿ ಮಾಯೆಯೆಂದೂ, ಸಾಂಖ್ಯಾದಿಶಾಸ್ತ್ರಗಳಲ್ಲಿ ಪ್ರಕೃತಿ ಎಂದೂ ಪ್ರಸಿದ್ಧವಾಗಿರುವ ಶಕ್ತಿಯಿಂದ ಎಂದರೆ ಸತ್ವರಜಸ್‌ತಮಸ್ ಎಂಬ ಮೂರು ಗುಣಗಳ ಹೆಚ್ಚುಕಡಿಮೆಗಳಿಂದ ಆಗುವ ಅನೇಕವಾದ ಪರಿಣಾಮರೂಪವಾದ ನಾಮಗಳಿಂದಲೂ ರೂಪಗಳಿಂದಲೂ ಪ್ರಕಾಶಿಸುತ್ತಿರುವ, ಎಂದರೆ ಮೊದಲು ಅರ್ಧನಾರೀಶ್ವರಭಾವ, ಆಮೇಲೆ, ಬ್ರಹ್ಮಾ, ವಿಷ್ಣು, ರುದ್ರ, ವಾಣೀ, ಲಕ್ಷ್ಮೀ, ಉಮಾ, ಎಂಬ ತ್ರಿಮೂರ್ತಿಗಳ ಮತ್ತು ಅವರ ಸಹಧರ್ಮಿಣಿಯರ ರೂಪದಿಂದಲೂ ನಾನಾ ಬಗೆಯ ಜೀವರು ಮತ್ತು ಜಡವಸ್ತುಗಳು ಇವುಗಳಿಂದ ಕೂಡಿರುವ ಈ ಅನಂತವಾಗಿರುವ ಪ್ರಪಂಚಗಳ ರೂಪದಿಂದಲೂ ತೋರಿ ಬರುತ್ತಿರುವ, ನಾನಾ ಜೀವರು ತಮ್ಮ ತಮ್ಮ ಸಂಸ್ಕೃ

ತಿಯ ಮಟ್ಟ, ರುಚಿ, ಸನ್ನಿವೇಶಗಳನ್ನು ಅನುಸರಿಸಿ ಮಾಡಿಯೂ ಮಾಡು ತ್ತಲೂ ಇರುವ ಅನಾದಿಯಾದ ವಾಸನಾನುರೂಪವಾದ ಕರ್ಮಗಳಿಗೆ ತಕ್ಕಂತೆ ಸುಖ, ದುಃಖ, ಜನ್ಮ, ಮರಣ, ರೂಪವಾದ ಫಲಗಳನ್ನು ಕೊಡುತ್ತಿರುವ, ಎಲ್ಲ ಪ್ರಾಣಿಗಳಿಗೂ ಪದಾರ್ಥಗಳಿಗೂ ಆತ್ಮರೂಪವಾಗಿರುವ, 'ಇದೆ' ಎಂಬ ಪ್ರತೀತಿಗೆ ವಿಷಯವಾಗಿ ಎಲ್ಲರ ತಿಳಿವಳಿಕೆಯ ರೂಪವಾಗಿ ಸುಖ ಮತ್ತು ಆನಂದ ರೂಪವಾಗಿಯೂ ಎಲ್ಲರ ಅನುಭವಕ್ಕೆ ಗೋಚರವಾಗುತ್ತಿ ರುವುದರಿಂದ ಸಚ್ಚಿದಾನಂದ ಸ್ವರೂಪನಾಗಿರುವ, ಅಷ್ಟು ಮಾತ್ರವಲ್ಲದೆ ಎಲ್ಲರ ಹೃದಯದಲ್ಲೂ ಇರುತ್ತಾ ಅವರನ್ನು ಕುರಿತು, "ಒಳ್ಳೆಯದನ್ನು ಮಾಡು, ಕೆಟ್ಟದನ್ನು ಮಾಡಬೇಡ." ಎಂದು ನಿಯಮಿಸುತ್ತಿರುವ, ಆದುದ ರಿಂದಲೇ "ಇತರರೂ ನಮ್ಮ ಹಾಗೆಯೇ ಅಲ್ಲವೇ?" ಎಂದು ಹೇಳುತ್ತಾ ಇರುವ ನಮ್ಮನ್ನು "ಪರೋಪಕಾರಃ ಪುಣ್ಯಾಯ ಪಾಪಾಯ ಪರಪೀ ಡನಂ।" ಎಂದು ವೇದಶಾಸ್ತ್ರಪುರಾಣಗಳಲ್ಲಿ ಬೋಧಿತವಾಗಿರುವ ವಿಶ್ವ ಧರ್ಮದ ಆಚರಣೆಗೆ ಪ್ರೇರಿಸುತ್ತಾ, ಎಲ್ಲರನ್ನೂ ಒಬ್ಬರೊಡನೆ ಮತ್ತೊಬ್ಬರು ಸಹಕರಿಸುವಂತೆಯೂ, ಎಲ್ಲ ಪ್ರಾಣಿಗಳೂ ಒಂದನ್ನು ಮತ್ತೊಂದು ಪ್ರೀತಿಸುವಂತೆಯೂ, ನಂಬುವಂತೆಯೂ, ಪ್ರೇರಿಸುತ್ತಿರುವ, ಸ್ವಪ್ರ ಕಾಶಸ್ವರೂಪನಾಗಿರುವ ಎಂದರೆ ತನ್ನನ್ನು ತಿಳಿಯಿಸಿಕೊಡಲು ಇನ್ನೊಂದು ಬೆಳಕನ್ನು ಅಪೇಕ್ಷಿಸಬೇಕಾದ ಅವಶ್ಯಕತೆ ಇಲ್ಲದೆ ತನ್ನಲ್ಲಿ ತನಗೆ ತಾನೇ ತೋರಿಬರುತ್ತಿರುವ ಚೈತನ್ಯರೂಪನಾದ ದೇವನನ್ನು ನಮಸ್ಕರಿಸುತ್ತೇನೆ.

ಸೂತ ಪೌರಾಣಿಕರು ಶೌನಕಾದಿ ಋಷಿಗಳ ಪ್ರಾರ್ಥನೆಯನ್ನು ಅನುಸರಿಸಿ ಶಿವನ ಸರ್ವೋತ್ಕರ್ಷವನ್ನು ನಿರೂಪಿಸುವ ಈ ಲಿಂಗಮಹಾ ಪುರಾಣದ ಕಥೆಯನ್ನು ಹೇಳುತ್ತಾರೆ. ವೇದವ್ಯಾಸರು ಈ ಪುರಾಣವನ್ನು ಮೊದಲು ರಚಿಸಿ ಶಿಷ್ಯರಿಗೆ ಬೋಧಿಸಿದ್ದರು. ವ್ಯಾಸರು ಗ್ರಂಥಾರಂಭದಲ್ಲಿ ನಿರ್ವಿಘ್ನಪರಿಸಮಾಪ್ತಿಗಾಗಿಯೂ, ಶಿಷ್ಯಶಿಕ್ಷೆಯಿಂದ ಮಂಗಳಾಚರಣೆಯ ಸಂಪ್ರದಾಯವನ್ನು ಕಾಪಾಡುವುದಕ್ಕಾಗಿಯೂ, ಮೊದಲು ತ್ರಿಮೂರ್ತಿ ಗಳಲ್ಲಿ ಪ್ರಧಾನನಾದ ಶಿವನ ಉತ್ಕರ್ಷವನ್ನು ವಿವರಿಸುವ ಈ ಲಿಂಗಮಹಾ ಪುರಾಣದ ರಚನೆಯ ಪ್ರಾರಂಭದಲ್ಲಿ ಮೊದಲು ಪರಶಿವ ತತ್ವ ನಮಸ್ಕಾರ ರೂಪವಾದ ಮಂಗಳವನ್ನು ಮಾಡುತ್ತಾರೆ.

## ಲಿಂಗಮಹಾಪುರಾಣದ ಪೂರ್ವಾರ್ಧದಲ್ಲಿ ಮೊದಲನೆಯ ಅಧ್ಯಾಯವು

೧. ರುದ್ರನೆಂದರೆ ತನ್ನಲ್ಲಿ ಭಕ್ತಿಹೀನರಿಗೆ ಕ್ಲೇಶಕರನಾದುದರಿಂದ ಅಂಥಾ ದುಷ್ಟರನ್ನು ಶಿಕ್ಷಿಸಿ ಒಳ್ಳೆಯದಾರಿಗೆ ಬರುವಂತೆ ಮಾಡುವವನೆಂದು ಅರ್ಥವು. ಭಕ್ತರ ಪಾಪವನ್ನು ಪರಿಹರಿಸುವುದರಿಂದ ಶಿವನಿಗೆ 'ಹರಿ' ಎಂದೂ ಹೆಸರು ಅನ್ವರ್ಥವಾಗಿದೆ. ಜಗತ್ತನ್ನು ವಿಸ್ತರಿಸುವ 'ಅಸಾವಾದಿತ್ಯೋಬ್ರಹ್ಮ' ಎಂಬಂತೆ ಬ್ರಹ್ಮರೂಪನಾದ ಸೂರ್ಯರೂಪನೂ ಆದುದರಿಂದಲೂ, ವೇದದಲ್ಲಿ ಪ್ರತಿಪಾದ್ಯನಾಗಿರುವುದರಿಂದಲೂ ಶಿವನು ಬ್ರಹ್ಮರೂಪನು. ಹೀಗೆ ಪರಶಿವನು ತ್ರಿಮೂರ್ತಿ ಸ್ವರೂಪನೂ, ಈ ಪ್ರಪಂಚಗಳ ಸೃಷ್ಟಿಸ್ಥಿತಿಸಂಹಾರಗಳನ್ನು ನೆರವೇರಿಸುವವನೂ, ಆಗಿರುತ್ತಾನೆ. ಪ್ರಧಾನವೆಂದರೆ ಪ್ರಪಂಚವು ಇದರಲ್ಲಿ ಚೆನ್ನಾಗಿ ಇಡಲ್ಪಟ್ಟಿದೆ, ಎಂದು ಅರ್ಥವು. ಅದರಿಂದ ಪ್ರಪಂಚಕ್ಕೆ ಕಾರಣವಾದ ಮೂಲಪ್ರಕೃತಿ ಎಂದು ಭಾವವು. ಪುರುಷಃ ಎಂದರೆ ಶರೀರಗಳಲ್ಲಿ ಮಲಗಿರುವವನು' ಅಥವಾ ಅನುಭವಕ್ಕೆ ಗೋಚರನಾಗವವನು. "ನವದ್ವಾರೇಪುರೇದೇಹೀ" ಭಗವದ್ಗೀತಾ ೫. ೧೩. ಎಂಬಲ್ಲಿ ಈ ನಮ್ಮ ಶರೀರಗಳನ್ನು ಒಂಬತ್ತು ಬಾಗಿಲುಗಳುಳ್ಳ ಪಟ್ಟಣಗಳೆಂದು ವರ್ಣಿಸಿರುತ್ತಾರೆ. ಅಲ್ಲದೆ,

**ಪ್ರಕರ್ಷೇ ಣೈವ ನಿಹಿತಂ ಜಗದ್ಯಸ್ಮಿನ್ನನಂತಕಂ।**
**ಪ್ರಧಾನಂ ಹಿ ಶಿವಾ ದೇವೀ ಪ್ರಕೃತಿ ಸ್ಸಾನಿಗದ್ಯತೇ॥**
**ಪೂರ್ಷು ದೇಹೇಷು ಯು ಶ್ಶೇತೇ ಪುರುಷಃ ಪಂಚವಿಂಶಕಃ।**
**ಜೀವೋ ಗಜಾನನೋ ಜ್ಞೇಯೋ ಗಣೇಶಸ್ತು ಸ್ಮೃತೋ ಯತಃ॥**

ಎಂದು ಹೇಳಿದೆ, ಶಿವಪಂಚಾಯತನ ಪೂಜೆಯಲ್ಲಿ ನಾಲ್ಕನೆಯದು ಗಣೇಶಮೂರ್ತಿಯು. ಐದನೆಯದು ದೇವಿಯು. ಹೀಗೆ ಪ್ರಧಾನಪುರುಷರಿಗೂ ಆಶ್ರಯನೂ ಜನಕನೂ ಆಗಿ ಅಧಿಪತಿಯಾದವನು ಸದಾಶಿವನು. ಪರಮ ಎಂದರೆ ಶ್ರೇಷ್ಠನಾದ, ದೇಶಕಾಲಗಳಿಂದ ಅಪರಿಚ್ಛೇದ್ಯನಾಗಿ ಎಂದರೆ ಅವುಗಳ ಅಳತೆಗೆ ಸಿಕ್ಕದೆ ಮೀರಿ ಇರುವ, ಆತ್ಮಾ ಎಂದರೆ ಯಾವಾಗಲೂ ಎಚ್ಚರ ಕನಸು ನಿದ್ರೆಗಳೆಂಬ ಎಲ್ಲ ಅವಸ್ಥೆಗಳಲ್ಲೂ ವ್ಯಾಪಿಸಿ ಸಾಕ್ಷಿಯಾಗಿರುವಂತೆ ಎಲ್ಲರಿಂದಲೂ ತಿಳಿಯಲ್ಪಡುತ್ತಲಿರುವವನು, ಎಂದು ಅರ್ಥವು. ಇಂತಹ ಪರಮಾತ್ಮ ಸ್ವರೂಪನಾಗಿರುವ ಸದಾಶಿವನಿಗೆ ನಮಸ್ಕಾರವು.

ನಾರದೋಽಭ್ಯರ್ಚ್ಯ ಶ್ರೈಲೇಶೇ ಶಂಕರಂ ಸಂಗಮೇಶ್ವರೇ ।
ಹಿರಣ್ಯಗರ್ಭೇ ಸ್ವರ್ಲೀನೇ ಹ್ಯವಿಮುಕ್ತೇ ಮಹಾಲಯೇ ॥ ೨ ॥
ರೌದ್ರೇ ಗೋಪ್ರೇಕ್ಷಕೇ ಚೈವ ಶ್ರೇಷ್ಠೇ ಪಾಶುಪತೇ ತಥಾ ।
ವಿಘ್ನೇಶ್ವರೇ ಚ ಕೇದಾರೇ ತಥಾ ಗೋಮಾಯುಕೇಶ್ವರೇ ॥ ೩ ॥
ಹಿರಣ್ಯಗರ್ಭೇ ಚಂದ್ರೇಶೇ ಈಶಾನ್ಯೇ ಚ ತ್ರಿವಿಷ್ಟಪೇ ।
ಶುಕ್ರೇಶ್ವರೇ ಯಥಾ ನ್ಯಾಯಂ ನೈಮಿಷಂ ಪ್ರಯಯೌ ಮುನಿಃ ॥
ನೈಮಿಷೇಯಾಸ್ತದಾ ದೃಷ್ಟ್ವಾ ನಾರದಂ ಹೃಷ್ಟಮಾನಸಾಃ ।
ಸಮಭ್ಯರ್ಚ್ಯಾಸನಂ ತಸ್ಯ ತದ್ಯೋಗ್ಯಂ ಸಮಕಲ್ಪಯನ್ ॥ ೫ ॥
ಸೋಽಪಿ ಹೃಷ್ಟೋ ಮುನಿವರೈಃ ದತ್ತಂ ಭೇಜೇ ತದಾಸನಂ ।
ಸಂಪೂಜ್ಯಮಾನೋ ಮುನಿಭಿಃ ಸುಖಾಸೀನೋ ವರಾಸನೇ ॥ ೬ ॥

---

೨–೪. ಜನರ ಅಜ್ಞಾನವನ್ನು ತನ್ನ ಉಪದೇಶದಿಂದ ನಿವಾರಿಸಿ ತಿಳಿವಳಿಕೆಯನ್ನು ಕೊಡುವ ನಾರದಮಹರ್ಷಿಯು ಲೋಕದ ಯೋಗಕ್ಷೇಮಗಳನ್ನು ಕಾಪಾಡುವ ಶಿವನನ್ನು ಶ್ರೈಲೇಶ ಮುಂತಾದ ಪವಿತ್ರಕ್ಷೇತ್ರಗಳಲ್ಲಿ ಪೂಜಿಸಿ ಕಡೆಗೆ ನೈಮಿಷಾರಣ್ಯಕ್ಷೇತ್ರಕ್ಕೆ ಬಂದನು. ಅವನು ಶಿವಾರ್ಚನೆಯನ್ನು ನೆರವೇರಿಸಿದಕ್ಷೇತ್ರಗಳು ಯಾವುವೆಂದರೆ, ಶ್ರೈಲೇಶ, ಸಂಗಮೇಶ್ವರ, ಹಿರಣ್ಯಗರ್ಭ, ಸ್ವರ್ಲೀನ, ಅವಿಮುಕ್ತ, ಮಹಾಲಯ, ರೌದ್ರ, ಗೋಪ್ರೇಕ್ಷಕ, ಪಾಶುಪತ, ವಿಘ್ನೇಶ್ವರ, ಕೇದಾರ, ಗೋಮಾಯುಕೇಶ್ವರ, ಹಿರಣ್ಯಗರ್ಭ, ಚಂದ್ರೇಶ, ತ್ರಿವಿಷ್ಟಪ, ಶುಕ್ರೇಶ್ವರ, ಇವೇ ಮುಂತಾದ ಉತ್ತಮವಾದ ಪವಿತ್ರಕ್ಷೇತ್ರಗಳಲ್ಲಿ ಶಿವನನ್ನು ನಾರದನು ಪೂಜಿಸಿದನು.

೫. ಆಗ ಆ ನೈಮಿಷಕ್ಷೇತ್ರದಲ್ಲಿ ವಾಸವಾಗಿದ್ದ ಋಷಿಜನರು. ಆ ನಾರದನನ್ನು ನೋಡಿ ಸಂತೋಷಗೊಂಡ ಮನಸ್ಸುಳ್ಳವರಾಗಿ ಆ ಮಹರ್ಷಿಗೆ ತಕ್ಕ ಆಸನ ಮುಂತಾದ ಉಪಚಾರಗಳನ್ನು ಸಮರ್ಪಿಸಿ ಗೌರವಿಸಿದರು.

೬. ಆ ನಾರದಮಹರ್ಷಿಯೂ ಆ ಋಷಿಶ್ರೇಷ್ಠರಿಂದ ಮಾಡಲ್ಪಟ್ಟ ಉಪಚಾರಗಳನ್ನು ಅಂಗೀಕರಿಸಿ ಸಂತುಷ್ಟನಾಗಿ ಆಸನದಲ್ಲಿ ಸುಖವಾಗಿ ಕುಳಿತುಕೊಂಡನು.

**ಚಕ್ರೇ ಕಥಾಂ ವಿಚಿತ್ರಾರ್ಥಾಂ ಲಿಂಗಮಾಹಾತ್ಮ್ಯ ಸಂಶ್ರಿತಾಂ।**
**ಏತಸ್ಮಿನ್ನೇವ ಕಾಲೇ ತು ಸೂತಃ ಪೌರಾಣಿಕಃ ಸ್ವಯಂ ॥ ೭ ॥**
**ಜಗಾಮ ನೈಮಿಷಂ ಧೀಮಾನ್ ಪ್ರಣಾಮಾರ್ಥಂ ತಪಸ್ವಿನಾಂ।**
**ತಸ್ಮೈ ಸಾಮ ಚ ಪೂಜಾಂ ಚ ಯಥಾವಚ್ಚಕ್ರಿರೇ ತದಾ ॥ ೮ ॥**
**ನೈಮಿಷೇಯಾಸ್ತು ಶಿಷ್ಯಾಯ ಕೃಷ್ಣದ್ವೈಪಾಯನಸ್ಯ ತು।**
**ಅಥ ತೇಷಾಂ ಪುರಾಣಸ್ಯ ಶುಶ್ರೂಷಾ ಸಮುಪದ್ಯತ ॥ ೯ ॥**
**ದೃಷ್ಟ್ವಾ ತಮತಿ ವಿಶ್ವಸ್ತಂ ವಿದ್ವಾಂಸಂ ರೋಮಹರ್ಷಣಂ।**
**ಅಪೃಚ್ಛಂಶ್ಚ ತತ ಸ್ಸೂತ ಮೃಷಿಂ ಸರ್ವೇ ತಪೋಧನಾಃ ॥೧೦॥**
**ಪುರಾಣಸಂಹಿತಾಂ ಪುಣ್ಯಾಂ ಲಿಂಗ ಮಾಹಾತ್ಮ್ಯಸಂಯುತಾಂ।**

---

೭. ನಾರದನು ಹಾಗೆ ಸುಖಾಸೀನನಾಗಿ ಆ ಋಷಿಗಳೊಡನೆ ತಾನು ಮಾಡಿದ ಯಾತ್ರೆಯಲ್ಲಿ ಸೇವಿಸಿದ ಕ್ಷೇತ್ರಗಳಲ್ಲಿರುವ ಶಿವಲಿಂಗಗಳ ಮಹಿಮೆಯನ್ನು ಅವಲಂಬಿಸಿರುವ ನಾನಾಬಗೆಯ ಆಶ್ಚರ್ಯಕರಗಳಾದ ವಿಷಯಗಳನ್ನೊಳಗೊಂಡಿರುವ ಪುರಾಣಕಥೆಗಳನ್ನು ಹೇಳುತ್ತಿದ್ದನು ಆ ಸಮಯದಲ್ಲಿಯೇ ಪುರಾಣಗಳಲ್ಲಿ ಪಂಡಿತನಾದ ಸೂತನೂ ಆ ಋಷಿಶ್ರೇಷ್ಠರಿಗೆ ತನ್ನ ಗೌರವವನ್ನು ಸಲ್ಲಿಸಲು ಆ ನೈಮಿಷಕ್ಷೇತ್ರಕ್ಕೆ ತಾನಾಗಿಯೇ ಬಂದನು.

೮. ಬುದ್ಧಿವಂತನಾದ ಆ ಸೂತನಿಗೆ ಆ ಋಷಿಗಳ ಒಳ್ಳೆಯ ಉಪಚಾರದ ಮಾತುಗಳನ್ನು ಹೇಳಿ ಸ್ವಾಗತಿಸಿ ಸತ್ಕಾರಗಳನ್ನು ಯಥೋಚಿತವಾಗಿ ನೆರವೇರಿಸಿದರು.

೯. ಆ ನೈಮಿಷಾರಣ್ಯಕ್ಷೇತ್ರವಾಸಿಗಳಾದ ಋಷಿಗಳು ಕೃಷ್ಣದ್ವೈಪಾಯನನಾದ ವ್ಯಾಸನ ಶಿಷ್ಯನಾದ ಆ ಸೂತಮಹರ್ಷಿಗೆ ಹಾಗೆ ಅತಿಥಿಸತ್ಕಾರವನ್ನು ಮಾಡಿದ ಮೇಲೆ ಆ ಋಷಿಗಳಿಗೆ ಪುರಾಣಕಥೆಗಳನ್ನು ಕೇಳಬೇಕೆಂಬ ಇಚ್ಛೆಯು ಉಂಟಾಯಿತು.

೧೦. ರೋಮಹರ್ಷಣನೆಂದರೆ ಒಳ್ಳೆಯ ನೀತಿಗಳಿಂದಲೂ ಶ್ರೇಷ್ಠವಾದ ತತ್ವಗಳಿಂದಲೂ ಕೂಡಿರುವ ಬಗೆಬಗೆಯ ಪುರಾಣಕಥೆಗಳನ್ನು ವಿವರಿಸಿ ಕೇಳುವವರಿಗೆ ಆಶ್ಚರ್ಯ ಸಂತೋಷಗಳಿಂದ ರೋಮಾಂಚವಾಗುವಂತೆ ಹೇಳಬಲ್ಲವನು, ಎಂದು ಅರ್ಥವು. ಇಂತಹ ಸೂತಪುರಾಣಿಕನು ಉಪಚಾರದಿಂದ ಸಂತುಷ್ಟನಾಗಿರುವುದನ್ನು ಕಂಡು

**ನೈಮಿಷೇಯಾ ಊಚುಃ**

**ತ್ವಯಾ ಸೂತ ಮಹಾಬುದ್ಧೇ ಕೃಷ್ಣದ್ವೈಪಾಯನೋ ಮುನಿಃ ॥**
**ಉಪಾಸಿತಃ ಪುರಾಣಾರ್ಥಂ ಲಬ್ಧಾ ತಸ್ಮಾಚ್ಚ ಸಂಹಿತಾ ।**
**ತಸ್ಮಾದ್ಭವಂತಂ ಪೃಚ್ಛಾಮಃ ಸೂತ ಪೌರಾಣಿಕೋತ್ತಮ ॥೧೨॥**
**ಪುರಾಣಸಂಹಿತಾಂ ದಿವ್ಯಾಂ ಲಿಂಗಮಾಹಾತ್ಮ್ಯ ಸಂಯುತಾಂ ।**
**ನಾರದೋಽ ಪ್ಯಸ್ಯ ದೇವಸ್ಯ ರುದ್ರಸ್ಯ ಪರಮಾತ್ಮನಃ ॥೧೩॥**

---

ಆ ಋಷಿಗಳೆಲ್ಲರೂ ಲಿಂಗದ ಮಹಿಮೆಗಳ ವರ್ಣನೆ ವಿವರಗಳಿಂದ ಕೂಡಿರುವ ಪುಣ್ಯಕರವಾದ ವೇದಗಳಂತೆ ಪವಿತ್ರವಾದ ಪುರಾಣ ಸಂಹಿತೆಯನ್ನು ತಮಗೆ ತಿಳಿಯುವಂತೆ ಹೇಳಬೇಕೆಂದು ಕೇಳಿದರು. ಈ ರೋಮಹರ್ಷಣ ಎಂಬ ಮತ್ತು ಕೃಷ್ಣದ್ವೈಪಾಯನ ಎಂಬ ಪದದ ಅರ್ಥವನ್ನು ದೇವೀ ಭಾಗವತ ವಿಷ್ಣು ಪುರಾಣ ವಿಷ್ಣು ಭಾಗವತಗಳಲ್ಲಿಯೂ ವಿವರಿಸಲಾಗಿದೆ.

೧೧–೧೨. ನೈಮಿಷಾರಣ್ಯಕ್ಷೇತ್ರಕ್ಕೆ ನೈಮಿಷವೆಂದು ಹೆಸರು ಬರಲು ಕಾರಣವಾದ ಕಥೆಯು ದೇವೀಭಾಗವತ ಸ್ಕಂಧ ೧. ಅಧ್ಯಾಯ ೨. ಶ್ಲೋಕ ೨೮–೩೨. ಗಳಲ್ಲಿ ವಿವರಿಸಿದೆ. ಈ ಅಂಶವನ್ನು ಕೂರ್ಮ ಮತ್ತು ವರಾಹಪುರಾಣಗಳಲ್ಲೂ ವಿವರಿಸಲಾಗಿದೆ. ನೈಮಿಷಾರಣ್ಯಕ್ಷೇತ್ರದಲ್ಲಿ ವಾಸವಾಗಿದ್ದ ಋಷಿಗಳು ಆ ಸೂತನನ್ನು ಕುರಿತು ಹೀಗೆ ಹೇಳಿದರು. ಓ ಸೂತ ಮಹರ್ಷಿಯೇ, ನೀನು ತುಂಬಾ ತಿಳಿವಳಿಕೆಯುಳ್ಳವನು. ದ್ವೀಪದಲ್ಲಿ ಹುಟ್ಟಿದ, ಕೃಷ್ಣನೆಂದು ಪ್ರಸಿದ್ಧನಾಗಿರುವ, ವ್ಯಾಸಮಹರ್ಷಿಯನ್ನು ಆಶ್ರಯಿಸಿ ನೀನು ವೇದ ಸಂಹಿತೆಯಂತೆ ಪವಿತ್ರವೂ ನೀತಿ, ತತ್ವ, ಗಳನ್ನು ತಿಳಿಯಹೇಳುವುದೂ ಆಗಿರುವ ಪುರಾಣಸಂಹಿತೆಯನ್ನು ಆ ವ್ಯಾಸನಿಂದ ತಿಳಿದುಕೊಂಡಿರುತ್ತೀಯೆ. ಪುರಾಣಗಳನ್ನು ತಿಳಿಯ ಹೇಳುವುದರಲ್ಲಿ ತುಂಬ ಗಟ್ಟಿಗನಾದ ಪೌರಾಣಿಕರಲ್ಲಿ ಶ್ರೇಷ್ಠನಾದ ಸೂತನೇ, ಆ ಕಾರಣದಿಂದ ನಾವು ನಿನ್ನನ್ನು ಹೀಗೆ ಕೇಳಿಕೊಳ್ಳುತ್ತೇವೆ. ಏನೆಂದರೆ:—ಕೃಷ್ಣದ್ವೈಪಾಯನನು ವ್ಯಾಸಮಹರ್ಷಿ ಎಂಬ ಕಥೆಯನ್ನು ದೇವೀಭಾಗವತಸ್ಕಂಧ ೨. ಅಧ್ಯಾಯ ೨.ರಲ್ಲಿ ವಿವರಿಸಿದೆ.

೧೩–೧೪. ಓ ಸೂತಮಹರ್ಷಿಯೇ, ಬ್ರಹ್ಮನ ಮಾನಸಪುತ್ರನಾದ ಈ ನಾರದಮಹರ್ಷಿಯೂ ಶಿವಕ್ಷೇತ್ರಗಳನ್ನು ಪಡೆದು, ಶಿವಲಿಂಗಗಳನ್ನು

ಕ್ಷೇತ್ರಾಣ್ಯಾಸಾದ್ಯ ಚಾಭ್ಯರ್ಚ್ಯ ಲಿಂಗಾನಿ ಮುನಿಪುಂಗವಃ।
ಇಹ ಸನ್ನಿಹಿತ ಶ್ರ್ರೀಮಾ ನಾರದೋ ಬ್ರಹ್ಮಣ ಸ್ಸುತಃ ॥೧೪॥
ಭವಭಕ್ತೋ ಭವಾಂಶ್ಚೈವ ವಯಂ ವೈ ನಾರದಸ್ತಥಾ।
ಅಸ್ಯಾಗ್ರತೋ ಮುನೇಃ ಪುಣ್ಯಂ ಪುರಾಣಂ ವಕ್ತುಮರ್ಹಸಿ ॥೧೫॥
ಸಫಲಂ ಸಾಧಿತಂ ಸರ್ವಂ ಭವತಾ ವಿದಿತಂ ಭವೇತ್।
ಏವಮುಕ್ತಸ್ಸಹೃಷ್ಟಾತ್ಮಾ ಸೂತಃ ಪೌರಾಣಿಕೋತ್ತಮಃ ॥೧೬॥
ಅಭಿವಾದ್ಯಾಗ್ರತೋ ಧೀಮಾ ನ್ನಾರದಂ ಬ್ರಹ್ಮಣಸ್ಸುತಂ।
ನೈಮಿಷೇಯಾಂ ಶ್ಚ ಪುಣ್ಯಾತ್ಮಾ ಪುರಾಣಂ ವ್ಯಾಜಹಾರ ಸಃ ॥೧೭॥

ಸೂತ ಉವಾಚ

ನಮಸ್ಕೃತ್ಯ ಮಹಾದೇವಂ ಬ್ರಹ್ಮಾಣಂ ಚ ಜನಾರ್ದನಂ।
ಮುನೀಶ್ವರಂ ತಥಾ ವ್ಯಾಸಂ ವಕ್ತುಂ ಲಿಂಗಂ ಸ್ಮರಾಮ್ಯಹಂ ॥೧೮॥

---

ಪೂಜಿಸಿ, ಪರಮಾತ್ಮಸ್ವರೂಪನಾದ ರುದ್ರದೇವನ ಮಹಿಮಾ ವಿಶೇಷಗಳ ವರ್ಣನೆಯಿಂದ ಕೂಡಿದ ಪುರಾಣಸಂಹಿತೆಯನ್ನು ಪಡೆದು ಇಲ್ಲಿಗೆ ದಯ ಮಾಡಿ ಬಂದಿರುವನು.

೧೫. ಓ ಸೂತಮಹರ್ಷಿಯೇ, ನೀನೂ ನಾವೂ ಮತ್ತು ಈ ನಾರದಮುನಿಯೂ ಈಶ್ವರನ ಭಕ್ತರಾಗಿರುವೆವು. ಆದುದರಿಂದ ಈ ನಾರದಮುನಿಯ ಎದುರಿನಲ್ಲಿಯೇ ಪುಣ್ಯಕರವಾದ ಲಿಂಗಮಹಾ ಪುರಾಣವನ್ನು ನಮಗೆ ತಿಳಿಯ ಹೇಳು.

೧೬–೧೭. ಅದರಿಂದ ನೀನು ಸಂಪಾದಿಸಿರುವ ಪುರಾಣಗಳ ತಿಳಿವಳಿಕೆಯು ಈ ಎಲ್ಲರಿಗೂ ದೊರೆಯುವಂತಾಗಿ ಸಫಲವಾಗುವುದು. ಈ ಪ್ರಕಾರ ವಾಗಿ ಕೇಳಲ್ಪಟ್ಟ ಪುರಾಣಿಕರಲ್ಲಿ ಶ್ರೇಷ್ಠನಾದ ಸೂತಮಹರ್ಷಿಯು ಸಂತೋಷಪಟ್ಟ ಮನಸ್ಸುಳ್ಳವನಾದನು. ಮತ್ತು ಧರ್ಮಶಾಸ್ತ್ರಮರ್ಯಾದೆ ಗಳನ್ನು ತಿಳಿದವನಾದುದರಿಂದ, ಬ್ರಹ್ಮನ ಮಗನಾದ ಅನೂಚಾನ ಪುತ್ರ ನಾಗಿ ಪೂಜ್ಯನಾದ ಆ ನಾರದನನ್ನು ಮೊದಲು ನಮಸ್ಕರಿಸಿ, ಅವನ ಆಶೀರ್ವಾದ ಅನುಜ್ಞೆಗಳನ್ನು ಪಡೆದು, ಪುಣ್ಯಶಾಲಿಯಾದ ಆ ಸೂತನು ನೈಮಿಷಾರಣ್ಯಕ್ಷೇತ್ರವಾಸಿಗಳಾದ ಆ ಶೌನಕಾದಿಋಷಿಗಳನ್ನು ಕುರಿತು ಲಿಂಗಮಹಾಪುರಾಣವನ್ನು ಹೀಗೆ ತಿಳಿಯ ಹೇಳಿದನು.

೧೮. ಸೂತಮಹರ್ಷಿಯು ಪುರಾಣಪ್ರವಚನದ ಪ್ರಾರಂಭದಲ್ಲಿ ಶಿಷ್ಟರ ಸಂಪ್ರದಾಯವನ್ನು ಅನುಸರಿಸಿ ಮಂಗಳವನ್ನು ನಿರ್ವಿಘ್ನಪರಿಸ

**ಶಬ್ದಬ್ರಹ್ಮತನುಂ ಸಾಕ್ಷಾತ್ ಶಬ್ದಬ್ರಹ್ಮಪ್ರಕಾಶಕಂ ।**
**ವರ್ಣಾವಯವ ಮವ್ಯಕ್ತ ಲಕ್ಷಣಂ ಬಹುಧಾ ಸ್ಥಿತಂ ॥೧೯॥**
**ಅಕಾರೋಕಾರಮಕಾರಂ ಸ್ಥೂಲಂ ಸೂಕ್ಷ್ಮಂ ಪರಾತ್ಪರಂ ।**
**ಓಂಕಾರರೂಪ ಮೃಗ್ವಕ್ತ್ರಂ ಸಾಮಜಿಹ್ವಾಸಮನ್ವಿತಂ ॥೨೦॥**
**ಯಜುರ್ವೇದ ಮಹಾಗ್ರೀವ ಮಥರ್ವ ಹೃದಯಂ ವಿಭುಂ ।**
**ಪ್ರಧಾನಪುರುಷಾತೀತಂ ಪ್ರಳಯೋತ್ಪತ್ತಿವರ್ಜಿತಂ ॥೨೧॥**

---

ಮಾಪ್ತಿಗೋಸ್ಕರ ಹೀಗೆ ಆಚರಿಸುತ್ತಾನೆ. ಬ್ರಹ್ಮವಿಷ್ಣು ಮಹೇಶ್ವರರೆಂಬ ತ್ರಿಮೂರ್ತಿಗಳಿಗೆ ಭಕ್ತಿಯಿಂದ ನಮಸ್ಕಾರವನ್ನು ಮಾಡಿ ಋಷಿಗಳಲ್ಲಿ ಶ್ರೇಷ್ಠನಾದ ವ್ಯಾಸಮುನಿಯನ್ನು ಕೃತಜ್ಞತೆಯಿಂದ ಗೌರವಿಸಿ ಲಿಂಗ ಮಹಾಪುರಾಣವನ್ನು ಹೇಳಲು ಮಹಾದೇವನ ಪ್ರತೀಕವಾದ ಲಿಂಗ ವನ್ನೂ ಪುರಾಣಾರ್ಥವನ್ನೂ ಧ್ಯಾನಮಾಡುತ್ತೇನೆ.

೧೯. ವ್ಯಾಕರಣಶಾಸ್ತ್ರದಲ್ಲಿ ಹೇಳಿರುವಂತೆ ಸ್ಫೋಟವೆಂಬ ಶಬ್ದ ರೂಪವಾದ ಬ್ರಹ್ಮವೇ ಶರೀರವಾಗಿ ಉಳ್ಳ, ಶ್ರುತಿಗೋಚರವಾಗುವ ಶಬ್ದ ರೂಪವಾದ ಬ್ರಹ್ಮಸ್ವರೂಪವನ್ನು ಪ್ರಕಾಶಪಡಿಸುತ್ತಿರುವ, ಅಕಾರಾದಿ ವರ್ಣಮಾಲೆಯಲ್ಲಿರುವ ವರ್ಣಗಳನ್ನೇ ಅವಯವಗಳಾಗಿಹೊಂದಿರುವ, ಅನೇಕರೂಪಗಳಲ್ಲಿ ಕಾಣಿಸಿಕೊಳ್ಳುತ್ತಿದ್ದರೂ, ಅದರವಾಸ್ತವಸ್ವರೂಪ ವನ್ನು ಗೊತ್ತುಮಾಡಲಾಗದೆ ಇರುವ ಅರ್ಥಪ್ರಕಾಶಕವಾದ ಶಬ್ದತತ್ತ್ವ ವನ್ನು ಧ್ಯಾನಿಸುತ್ತೇನೆ. ಈ ವಿಷಯದ ಹೆಚ್ಚು ವಿವರಗಳನ್ನು ಪಂಚೋಪ ನಿಷತ್ತಿನ ಪುಟ ೧೨–೧೬ ಗಳಲ್ಲಿ ನೋಡಬಹುದು.

೨೦–೨೧. ಅಕಾರ ಉಕಾರ ಮಕಾರ ರೂಪವಾದ, ಸ್ಥೂಲವಾದ, ಇಂದ್ರಿಯಾಗೋಚರವಾದ ರೂಪವುಳ್ಳ, ಕಾರಣರೂಪವಾದ, ಅತೀಂದ್ರಿ ಯರೂಪವಾದ, ಎಲ್ಲಕ್ಕೂ ಶ್ರೇಷ್ಠವಾದ ಮಾಂಡೂಕ್ಯೋಪನಿಷತ್ತಿನಲ್ಲಿ ವಿವರಿಸಿರುವ ರೀತಿಯಲ್ಲಿ ಓಂಕಾರದಿಂದ ತಿಳಿಯಲ್ಪಡುವ ಸ್ವರೂಪವುಳ್ಳ ತತ್ತ್ವವನ್ನು ಧ್ಯಾನಿಸುತ್ತೇನೆ. ಈ ತತ್ತ್ವಕ್ಕೆ ಋಗ್ವೇದವೇ ಮುಖದಂತೆ ತಿಳಿಸುವ ಸಾಧನವು. ಸಾಮವೇದವು ವಿವರಿಸುವ ನಾಲಿಗೆಯು. ಯಜುರ್ವೇದವೇ ಕಂಠವು. ಎಂದರೆ ದ್ವಾರಭೂತವಾದ ಸಾಧನವಾಗಿದೆ. ಅಥರ್ವಣ ವೇದವೇ ಹೃದಯವು. ಎಂದರೆ ಶಕ್ತಿ, ಸಿದ್ಧಿ, ಆನಂದಗಳಿಗೆ ಸ್ಥಾನವಾಗಿದೆ. ಎಂದುಭಾವವು. ಇವುಗಳಿಂದ ಪ್ರತಿಪಾದ್ಯವಾಗಿ ಕೂಡಿ

**ತಮಸಾ ಕಾಲರುದ್ರಾಖ್ಯಂ ರಜಸಾ ಕನಕಾಂಡಜಂ ।**
**ಸತ್ತ್ವೇನ ಸರ್ವಗಂ ವಿಷ್ಣುಂ ನಿರ್ಗುಣತ್ವೇ ಮಹೇಶ್ವರಂ ॥೨೨॥**
**ಪ್ರಧಾನಾವಯವಂ ಪ್ರಾಪ್ಯ ಸಪ್ತಧಾಽಧಿಷ್ಠಿತಂ ಕ್ರಮಾತ್ ।**
**ಪುನಷ್ಷೋಡಶಧಾ ಚೈವ ಷಡ್ವಿಂಶಕ ಮಜೋದ್ಭವಂ ॥೨೩॥**

---

ರುವ ಸರ್ವವ್ಯಾಪಿಯಾದ ತತ್ತ್ವವನ್ನು ಧ್ಯಾನಿಸುತ್ತೇನೆ. ಸಾಂಖ್ಯ ಶಾಸ್ತ್ರದಲ್ಲಿ ಹೇಳಿರುವ ಪ್ರಧಾನ ಅಥವಾ ಪ್ರಕೃತಿ, ಮತ್ತು ಪುರುಷ ಅಥವಾ ಜೀವ ಎಂಬ ತತ್ವಗಳನ್ನೂ ಮೀರಿರುವ, ಜಗತ್ತಿನ ಸೃಷ್ಟಿ ಸ್ಥಿತಿ ನಾಶಗಳ ಸಂಪರ್ಕವಿಲ್ಲದಿರುವ, ತತ್ವವನ್ನು ಧ್ಯಾನಿಸುತ್ತೇನೆ.

೨೨. ತ್ರಿಗುಣಗಳಲ್ಲಿ ಒಂದಾದ ತಮೋಗುಣ ಪ್ರಧಾನವಾದ ಉಪಾಧಿಯಿಂದ ಕಾಲರುದ್ರನೆಂದು ಪ್ರಸಿದ್ಧವಾಗಿ ಜಗತ್ತಿನ ಪ್ರಳಯ ದಿಂದ ವ್ಯವಹಾರದ ಉಪಸಂಹಾರ ರೂಪವಾದ ಕಾರ್ಯವನ್ನು ನೆರವೇರಿಸುವ, ರಜೋಗುಣ ಪ್ರಧಾನವಾದ ಉಪಾಧಿ ಅಥವಾ ಸಾಧನದಿಂದ ಕೂಡಿ ಬ್ರಹ್ಮರೂಪದಿಂದ ಆವಿರ್ಭವಿಸುವ, ಸತ್ವಗುಣಪ್ರಧಾನವಾದ ಉಪಾಧಿ ಯಿಂದ ಸರ್ವವ್ಯಾಪಿಯಾಗಿರುವ ವಿಷ್ಣುಸ್ವರೂಪವಾದ, ಈ ಮೂರುಗುಣ ಗಳೂ ಸಾಮ್ಯಾವಸ್ಥೆಯಲ್ಲಿರಲು ಪರಿಣಾಮವಿಲ್ಲದೆ ಇರುವ ಸ್ಥಿತಿಯಲ್ಲಿ ಮಾಯೆಯು ಅಥವಾ ಉಪಾಧಿಯು ಉನ್ಮುಖವಾಗಿರದೆ ಅಂತರ್ಮುಖವಾಗಿ ಲೀನವಾಗಿರಲು ನಿರ್ಗುಣಸ್ವರೂಪದಿಂದಿರುವ ಪರಮಾತ್ಮನೆಂದು ಪ್ರಸಿದ್ಧ ವಾದ ಸ್ವರೂಪಕ್ಕೆ ನಮಸ್ಕರಿಸುತ್ತೇನೆ.

೨೩. ಪ್ರಧಾನವೆಂಬ ಅವಯವದ ಎಂದರೆ ಅವ್ಯಕ್ತತತ್ವದ ಕಾರಣ ಸ್ವರೂಪವನ್ನು ವ್ಯಾಪಿಸಿ ಅದರಿಂದ ಏಳು ಪ್ರಕಾರವಾಗಿ ಎಂದರೆ ಮಹತ್ತತ್ವ, ಅಹಂಕಾರತತ್ವ, ಪಂಚಭೂತ ತನ್ಮಾತ್ರಗಳೆಂಬ ಏಳುರೂಪ ದಲ್ಲಿ ಪರಿಣಮಿಸಿರುವಂತೆ ತೋರುತ್ತಿರುವ, ಆಮೇಲೆ ಐದು ಜ್ಞಾನೇಂದ್ರಿಯಗಳು, ಪಂಚಪ್ರಾಣಗಳು, ಐದು ಕರ್ಮೇಂದ್ರಿಯಗಳು, ಮನಸ್ಸು, ಎಂಬ ಹದಿನಾರು ರೂಪದಲ್ಲಿ ಪರಿಣಮಿಸಿರುವಂತೆ ಕಾಣ ಬರುತ್ತಿರುವ, ಹೀಗೆ ಇಪ್ಪತ್ತುನಾಲ್ಕು ಬಗೆಯಾಗಿರುವ, ಮೂಲಪ್ರಕೃ ತಿಯೂ, ಪುರುಷನೆಂಬ ಜೀವನೂ, ಸೇರಿ ಈ ಇಪ್ಪತ್ತೈದು ತತ್ವಗಳ ಜೊತೆಗೆ

**ಸರ್ಗಪ್ರತಿಷ್ಠಾಸಂಹಾರ ಲೀಲಾರ್ಥಂ ಲಿಂಗರೂಪಿಣಂ ।**
**ಪ್ರಣಮ್ಯೈಚ ಯಥಾನ್ಯಾಯಂ ವಕ್ಷ್ಯೇ ಲಿಂಗೋದ್ಭವಂ ಶುಭಂ ॥**

**ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಾರ್ಧೆ ಪ್ರಥಮೋಽಧ್ಯಾಯಃ**

---

ಪರಮಾತ್ಮನು ಇಪ್ಪತ್ತಾರನೆಯ ತತ್ವವಾಗುವುದರಿಂದ, ಈ ಇಪ್ಪತ್ತಾರು ಬಗೆಯಾಗಿರುವ ಪದಾರ್ಥಗಳೂ ಮಾಯೆಯಿಂದ ಅಥವಾ ಸೃಷ್ಟ್ಯು ನ್ಮುಖವಾದ ಬ್ರಹ್ಮತತ್ವದಿಂದ ಉಂಟಾಗಿ ತೋರುವುದರಿಂದ, ಆ ಬ್ರಹ್ಮ ತತ್ವವನ್ನು ಧ್ಯಾನಿಸುತ್ತೇನೆ.

೨೪. ಈ ಪ್ರಕಾರವಾಗಿ, ಈ ಪ್ರಪಂಚಗಳ ಸೃಷ್ಟಿ, ಸ್ಥಿತಿ, ಪ್ರಳಯ ಗಳನ್ನು ನೆರವೇರಿಸುತ್ತಿರುವಿಕೆಯೆಂಬ ವಿನೋದಾರ್ಥವಾಗಿ ಎಂದರೆ ಆಯಾಸವಿಲ್ಲದೆ, ಪರಾಧೀನತೆ ಇಲ್ಲದೆ, ಲೀಲೆಯಿಂದ ಈ ಇಪ್ಪತ್ತಾರು ಲಿಂಗಗಳ ರೂಪಿನಿಂದ ಕಾಣಬರುತ್ತಿರುವ, ಅರ್ಚಾರೂಪವಾದ ಲಿಂಗ ಮುಂತಾದ ಪ್ರತೀಕಗಳಲ್ಲೂ ವಿಶೇಷವಾಗಿ ಉಪಾಸಕರಿಗೆ ಅಭಿವ್ಯಕ್ತ ನಾಗುವ, ಪರಶಿವತತ್ವವನ್ನು ಧರ್ಮಶಾಸ್ತ್ರೋಕ್ತವಾದ ಉಪಾಸನಾಕ್ರಮು ವನ್ನು ಅನುಸರಿಸಿ ನಮಸ್ಕಾರವನ್ನು ಮಾಡಿ, ಈ ಮಂಗಳಕರವಾದ ಲಿಂಗ ರೂಪವು ಹೇಗೆ ಉಂಟಾಯಿತು? ಎಂಬ ವಿಷಯುವನ್ನು ವಿವರಿಸಿ ತಿಳಿಯ ಹೇಳುವೆನು, ಎಂದು ಸೂತಮಹರ್ಷಿಯು ಸಂಕಲ್ಪಿಸಿ ಹೇಳುವುದಕ್ಕೆ ಮೊದಲು ಮಾಡಿದನು.

ಇಲ್ಲಿಗೆ ಲಿಂಗಮಹಾಪುರಾಣದಲ್ಲಿ ಪೂರ್ವಾರ್ಧದಲ್ಲಿ
ಪ್ರತಿಪಾದ್ಯವಾದ ವಿಷಯನಿರೂಪಣೆ ಎಂಬ
ಮೊದಲನೆಯ ಅಧ್ಯಾಯವು
ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಾರ್ಧೇ ದ್ವಿತೀಯೋಽಧ್ಯಾಯಃ
### ಅನುಕ್ರಮಣಿಕಾವರ್ಣನಂ

**ಸೂತ ಉವಾಚ**

**ಈಶಾನಕಲ್ಪ ವೃತ್ತಾಂತ ಮಧಿಕೃತ್ಯ ಮಹಾತ್ಮನಾ ।**
**ಬ್ರಹ್ಮಣಾ ಕಲ್ಪಿತಂ ಪೂರ್ವಂ ಪುರಾಣಂ ಲೈಂಗ ಮುತ್ತಮಂ ॥ ೧ ॥**
**ಗ್ರಂಥಕೋಟಿಪ್ರಮಾಣಂ ತು ಶತಕೋಟಿಪ್ರವಿಸ್ತರೇ ।**
**ಚತುರ್ಲಕ್ಷೇಣ ಸಂಕ್ಷಿಪ್ತೇ ವ್ಯಾಸೈಃ ಸರ್ವಾಂತರೇಷು ವೈ ॥ ೨ ॥**
**ವ್ಯಸ್ತೇಽಷ್ಟಾದಶಧಾ ಚೈವ ಬ್ರಹ್ಮಾದ್ಯೌ ದ್ವಾಪರಾದಿಷು ।**
**ಲಿಂಗಮೇಕಾದಶಂ ಪ್ರೋಕ್ತಂ ಮಯಾ ವ್ಯಾಸಾತ್ ಶ್ರುತಂಚತತ್ ॥**

---

ಲಿಂಗಮಹಾಪುರಾಣದ ಪೂರ್ವಾರ್ಧದಲ್ಲಿ ಎರಡನೆಯ ಅಧ್ಯಾಯವು

೧. ಈ ಎರಡನೆಯ ಅಧ್ಯಾಯದಲ್ಲಿ, ಈ ಪುರಾಣದಲ್ಲಿ ಹೇಳಿರುವ ಎಲ್ಲ ವಿಷಯಗಳನ್ನೂ ಕ್ರಮವಾಗಿ ಹೇಳಿದೆ. ಹೇಗೆಂದರೆ ಸೂತನು ಶೌನಕಾದಿ ಋಷಿಗಳಿಗೆ ಪುಣ್ಯಕರವಾದ ಲಿಂಗ ಪ್ರಾಪ್ತಿ ಪ್ರಕಾರವನ್ನು ಸಂಕ್ಷೇಪವಾಗಿ ಹೇಳುತ್ತಾ, ಈಶಾನಕಲ್ಪದಲ್ಲಿನ ವೃತ್ತಾಂತವನ್ನು ಹಿನ್ನೆಲೆಯ ಆಧಾರವಾಗಿಟ್ಟುಕೊಂಡು, ಮಹಾಜ್ಞಾನ ಸಂಪನ್ನನಾದ ಬ್ರಹ್ಮನು, ಮೊದಲು ಉತ್ತಮವಾದ ಲಿಂಗಮಹಾಪುರಾಣವನ್ನು ರಚಿಸಿದ್ದುದನ್ನು ಹೀಗೆ ತಿಳಿಯಹೇಳಿದನು.

೨. ನೂರುಕೋಟಿ ಶ್ಲೋಕಗಳಿಂದ ಕೂಡಿ ವಿಸ್ತಾರವಾಗಿದ್ದ ಪುರಾಣಗಳಲ್ಲಿ ಈ ಲಿಂಗಮಹಾಪುರಾಣವು ಒಂದುಕೋಟಿ ಶ್ಲೋಕಗಳಿಂದ ಕೂಡಿದ್ದಿತು. ಸಮಸ್ತಮನ್ವಂತರಗಳಲ್ಲಿಯೂ ವ್ಯಾಸರೆಂಬುವರು ಬ್ರಹ್ಮನು ರಚಿಸಿದ್ದ ನೂರುಕೋಟಿ ಶ್ಲೋಕಗಳಿಂದ ಕೂಡಿದ್ದ ಪುರಾಣಗಳ ಸಾರವನ್ನು ನಾಲ್ಕುಲಕ್ಷ ಶ್ಲೋಕಗಳಲ್ಲಿ ಸಂಗ್ರಹಿಸಿ ಸಂಕ್ಷೇಪವಾಗಿ ಹೇಳಿರುವರು.

೩. ಬ್ರಾಹ್ಮಪುರಾಣವೇ ಮೊದಲಾಗಿ ಹದಿನೆಂಟು ಮಹಾಪುರಾಣಗಳನ್ನು ದ್ವಾಪರಾದಿ ಯುಗಗಳಲ್ಲಿ ವ್ಯಾಸರೆಂಬುವರು ವಿಭಾಗ ಮಾಡಲಾಗಿ,

**ಅಸ್ಯೈಕಾದಶಸಾಹಸ್ರೇ ಗ್ರಂಥಮಾನಮಿಹ ದ್ವಿಜಾಃ।**
**ತಸ್ಮಾತ್ಸಂಕ್ಷೇಪತೋ ವಕ್ಷ್ಯೇ ನ ಶ್ರುತಂ ವಿಸ್ತರೇಣ ಯತ್ ॥ ೪ ॥**
**ಚತುರ್ಲಕ್ಷೇಣ ಸಂಕ್ಷಿಪ್ತೇ ಕೃಷ್ಣದ್ವೈಪಾಯನೇನ ತು ।**
**ಅತ್ರೈಕಾದಶಸಾಹಸ್ರೈಃ ಕಥಿತೋ ಲಿಂಗಸಂಭವಃ ॥ ೫ ॥**
**ಸರ್ಗಃ ಪ್ರಾಧಾನಿಕಃ ಪಶ್ಚಾತ್ ಪ್ರಾಕೃತೋ ವೈಕೃತಾನಿ ಚ ।**
**ಅಂಡಸ್ಯಾಸ್ಯ ಚ ಸಂಭೂತಿ ರಂಡಸ್ಯಾವರಣಾಷ್ಟಕಂ ॥ ೬ ॥**

---

ಈ ಲಿಂಗಪುರಾಣವು ಹನ್ನೊಂದನೆಯದಾಗಿರುವುದು. ವ್ಯಾಸರಿಂದಲೇ ಈ ಪುರಾಣವನ್ನು ನಾನು ಕೇಳಿರುವೆನು. (ಪುರಾಣಕ್ರಮವನ್ನು ಇದೇ ಲಿಂಗಪುರಾಣದ ೩೯ನೆಯ ಅಧ್ಯಾಯದಲ್ಲಿ ಹೇಳಿದೆ. ಮತ್ತು ಸ್ಕಾಂದ ಮಹಾಪುರಾಣದ ಪ್ರಭಾಸ ಖಂಡದಲ್ಲಿನ ಎರಡನೆಯ ಅಧ್ಯಾಯದಲ್ಲೂ ಹೇಳಿದೆ.)

೪. ವ್ಯಾಸರು ಸಂಕ್ಷೇಪವಾಗಿ ಹೇಳಿದ ಹದಿನೆಂಟು ಮಹಾಪುರಾಣಗಳ ನಾಲ್ಕು ಲಕ್ಷಶ್ಲೋಕಗಳಲ್ಲಿ ಈ ಲಿಂಗಪುರಾಣವು ಹನ್ನೊಂದು ಸಾವಿರಶ್ಲೋಕಗಳಿಂದ ಕೂಡಿರುವುದು. ಎಲೈ ಋಷಿಗಳೇ, ನಾನು ಈ ಲಿಂಗ ಪುರಾಣವನ್ನು ವಿಸ್ತಾರವಾಗಿ ಕೇಳಲಿಲ್ಲ. ಆದುದರಿಂದ ಸಂಕ್ಷೇಪವಾಗಿ ನಾನು ಕೇಳಿದಂತೆಯೇ ಹೇಳುವೆನು.

೫. ಪ್ರತಿಯೊಂದು ದ್ವಾಪರಯುಗದಲ್ಲಿಯೂ ವ್ಯಾಸರೆಂಬುವರು ಅವತರಿಸಿ ವೇದಗಳನ್ನೂ ಪುರಾಣಗಳನ್ನೂ ವಿಭಾಗಮಾಡುತ್ತಿರುವುದರಿಂದ ಈ ವೈವಸ್ವತ ಮನ್ವಂತರದಲ್ಲಿಯೂ ಕೃಷ್ಣ ದ್ವೈಪಾಯನನೆಂಬ ವ್ಯಾಸರು ನಾಲ್ಕುಲಕ್ಷ ಶ್ಲೋಕಗಳಲ್ಲಿ ಹದಿನೆಂಟು ಮಹಾಪುರಾಣಗಳನ್ನು ಸಂಕ್ಷೇಪಿಸಿ ಇದರಲ್ಲಿ ಈ ಲಿಂಗೋತ್ಪತ್ತಿಯ ಕಥೆಯನ್ನು ಒಳಗೊಂಡಿರುವ ಈ ಪುರಾಣವನ್ನು ಹನ್ನೊಂದು ಸಾವಿರ ಶ್ಲೋಕಗಳಲ್ಲಿ ಹೇಳಿರುವರು.

೬. ಈ ಲಿಂಗಮಹಾಪುರಾಣದಲ್ಲಿ ಮೊದಲು ಮುಖ್ಯ ಸೃಷ್ಟಿಯೂ, ಬಳಿಕ ಪ್ರಕೃತಿ ವಿಕೃತಿ ಸೃಷ್ಟಿಗಳೂ, ಹೀಗೆ ಈ ಬ್ರಂಹ್ಮಾಡದ ಉತ್ಪತ್ತಿಯೂ ಮತ್ತು ಬ್ರಹ್ಮಾಂಡದ ಅಷ್ಟಾವರಣಗಳೂ,

ಅಂಡೋದ್ಭವತ್ವಂ ಶರ್ವಸ್ಯ ರಜೋ ಗುಣಸಮಾಶ್ರಯಾತ್ ।
ವಿಷ್ಣುತ್ವಂ ಕಾಲರುದ್ರತ್ವಂ ಶಯನಂ ಚಾಪ್ಸು ತಸ್ಯಚ ॥ ೭ ॥
ಪ್ರಜಾಪತೀನಾಂ ಸರ್ಗಶ್ಚ ಪೃಥಿವ್ಯುದ್ಧರಣಂ ತಥಾ ।
ಬ್ರಹ್ಮಣಶ್ಚ ದಿವಾರಾತ್ರ ಮಾಯುಷೋ ಗಣನಂ ಪುನಃ ॥ ೮ ॥
ಸವನಂ ಬ್ರಹ್ಮಣಶ್ಚೈವ ಯುಗಕಲ್ಪಶ್ಚ ತಸ್ಯ ತು ।
ದಿವ್ಯಂ ಚ ಮಾನುಷಂ ವರ್ಷ ಮಾರ್ಷಂ ವೈ ಧ್ರೌವ್ಯಮೇವಚ ॥ ೯ ॥
ಪಿತ್ರ್ಯಂ ಪಿತೃ ಣಾಂ ಸಂಭೂತಿ ರ್ಧರ್ಮಾಶ್ಚಾ ಶ್ರಮಿಣಾಂ ತಥಾ ।
ಅವೃದ್ಧಿರ್ಜಗತೋ ಭೂಯೋ ದೇವ್ಯಾ ಶ್ಶಕ್ತ್ಯುದ್ಭವಸ್ತಥಾ ॥೧೦॥
ಸ್ತ್ರೀಪುಂಭಾವೋ ವಿರಿಂಚಸ್ಯ ಸರ್ಗೋ ಮಿಥುನಸಂಭವಃ ।
ಆಖ್ಯಾಷ್ಟಕಂ ಹಿ ರುದ್ರಸ್ಯ ಕಥಿತಂ ರೋದನಾಂತರೇ ॥೧೧॥

---

೭. ರಜೋಗುಣದ ಸಂಬಂಧದಿಂದ ಅಂಡದಲ್ಲಿ ಶಿವನಿಗೆ ಉತ್ಪತ್ತಿಯೂ, ವಿಷ್ಣುಸ್ವರೂಪವೂ, ಕಾಲರುದ್ರಸ್ವರೂಪವೂ, ಅವನಿಗೆ ನೀರಿನಲ್ಲಿ ಮಲಗುವಿಕೆಯೂ,

೮. ಪ್ರಜಾಪತಿಗಳ ಸೃಷ್ಟಿಯೂ, ಭೂಮಿಯ ಉದ್ಧಾರವೂ, ಕಾಲ ಪರಿಮಾಣ ವಿಭಾಗಗಳು ಎಂದರೆ ಬ್ರಹ್ಮನಿಗೆ ಹಗಲು ಮತ್ತು ರಾತ್ರಿಗಳ ಮತ್ತು ಅವನ ಒಟ್ಟು ಆಯುಸ್ಸಿನ ಲೆಕ್ಕವೂ,

೯-೧೦. ಬ್ರಹ್ಮನ ವರ್ಷವೂ ಯುಗಕಲ್ಪಗಳೂ ದಿವ್ಯ ಮಾನುಷ ಆರ್ಷ ಧ್ರೌವ್ಯ ಪಿತ್ರ್ಯ ವರ್ಷಗಳೆಂಬ ಕಾಲಭಾಗಗಳ ಪರಿಮಾಣಗಳೂ, ಪಿತೃದೇವತೆಗಳ ಉತ್ಪತ್ತಿಯೂ, ಧರ್ಮ ಮತ್ತು ಆಶ್ರಮಗಳ ವರ್ಣನೆಯೂ, ಸೃಷ್ಟಿಸಿದ ಜಗತ್ತು ವಿಸ್ತಾರವಾಗದಿರುವಿಕೆಯೂ, ಶಿವನಿಂದ ಶಕ್ತಿರೂಪವಾಗಿ ದೇವಿಯ ಉಂಟಾಗುವಿಕೆಯೂ,

೧೧. ಬ್ರಹ್ಮನಿಗೆ ಸ್ವಾಯಂಭುವ ಮನುಶತ ರೂಪಾದೇವಿಯ ಸ್ವರೂಪದಿಂದ ಉತ್ಪತ್ತಿಯೂ, ಬಳಿಕ ಮಿಥುನಸೃಷ್ಟಿಯೂ, ರೋದನ ಮಾಡಿದುದರಿಂದ ರುದ್ರನೆಂದು ಹೆಸರುಬಂದುದೂ, ಮತ್ತು ಅವನಿಗೆ ಎಂಟು ಹೆಸರಾದುದೂ, ಹೇಳಲ್ಪಟ್ಟಿರುವುದು.

ಬ್ರಹ್ಮವಿಷ್ಣುವಿವಾದಶ್ಚ ಪುನರ್ಲಿಂಗಸ್ಯ ಸಂಭವಃ ।
ಶಿಲಾದಸ್ಯ ತಪಶ್ಚೈವ ವೃತ್ರಾರೇ ರ್ದರ್ಶನಂ ತಥಾ ॥೧೨॥

ಪ್ರಾರ್ಥನಾಽಯೋನಿಜಸ್ಯಾಥ ದುರ್ಲಭತ್ವಂ ಸುತಸ್ಯ ತು ।
ಶಿಲಾದ ಶಕ್ರಸಂವಾದಃ ಪದ್ಮಯೋನಿತ್ವಮೇವ ಚ ॥೧೩॥

ಭವಸ್ಯ ದರ್ಶನಂ ಚೈವ ಶಿಷ್ಯೇಷ್ವಾಚಾರ್ಯಶಿಷ್ಯಯೋಃ ।
ವ್ಯಾಸಾವತಾರಾಶ್ಚ ತಥಾ ಕಲ್ಪ ಮನ್ವಂತರಾಣಿ ಚ ॥೧೪॥

ಕಲ್ಪತ್ವಂ ಚೈವ ಕಲ್ಪಾನಾ ಮಾಖ್ಯಾ ಭೇದೇಷ್ವನುಕ್ರಮಾತ್ ।
ಕಲ್ಪೇಷು ಕಲ್ಪೇ ವಾರಾಹೇ ವಾರಾಹತ್ವಂ ಹರೇಸ್ತಥಾ ॥೧೫॥

ಮೇಘವಾಹನಕಲ್ಪಸ್ಯ ವೃತ್ತಾಂತಂ ರುದ್ರಗೌರವಂ ।
ಪುನರ್ಲಿಂಗೋದ್ಭವಶ್ಚೈವ ಋಷಿಮಧ್ಯೇ ಪಿನಾಕಿನಃ ॥೧೬॥

---

೧೨. ಬ್ರಹ್ಮ ವಿಷ್ಣುಗಳ ಹೋರಾಟವೂ, ಲಿಂಗೋತ್ಪತ್ತಿಯೂ, ಶಿಲಾದಮುನಿಯ ತಪಸ್ಸೂ, ಹಾಗೆಯೇ ದೇವೇಂದ್ರನ ದರ್ಶನವೂ,

೧೩. ಅನಂತರದಲ್ಲಿ ಶಿಲಾದನು ಅಯೋನಿಜನಾದ ಸುತನನ್ನು ಯಾಚಿಸುವುದೂ, ಅಯೋನಿಜಪುತ್ರನ ದುರ್ಲಭತ್ವವೂ, ಶಿಲಾದ ಮತ್ತು ದೇವೇಂದ್ರನ ಸಂವಾದವೂ, ಬ್ರಹ್ಮನು ಕಮಲದಲ್ಲಿ ಹುಟ್ಟುವಿಕೆಯೂ, ಈ ಪುರಾಣದಲ್ಲಿ ವರ್ಣಿತವಾಗಿವೆ.

೧೪. ಆಮೇಲೆ ಕಲಿಯುಗದಲ್ಲಿ ಆಚಾರ್ಯನಿಗೂ ಶಿಷ್ಯನಿಗೂ ಶಿವನ ದರ್ಶನವೂ, ವ್ಯಾಸನ ಅವತಾರಗಳೂ, ಕಲ್ಪಗಳೂ, ಮನ್ವಂತರಗಳೂ, ಹೇಳಲ್ಪಟ್ಟಿವೆ.

೧೫. ಕಲ್ಪಗಳಿಗೆ ಕ್ರಮವಾಗಿ ಬೇರೆ ಬೇರೆ ಹೆಸರು ಬಂದ ರೀತಿಯೂ, ವಾರಾಹಕಲ್ಪದಲ್ಲಿ ಹರಿಯು ವರಾಹಾವತಾರ ಮಾಡಿದುದೂ,

೧೬. ಅಲ್ಲದೆ ಮೇಘವಾಹನನ ಕಲ್ಪದ ಚರಿತ್ರೆಯೂ, ರುದ್ರನ ದೊಡ್ಡತನವೂ, ಋಷಿಗಳ ನಡುವೆ ಮತ್ತೆ ಲಿಂಗೋದ್ಭವವಾಗುವಿಕೆಯೂ,

ಲಿಂಗಸ್ಯಾರಾಧನಂ ಸ್ನಾನ ವಿಧಾನಂ ಶೌಚಲಕ್ಷಣಂ।
ವಾರಾಣಸ್ಯಾಶ್ಚ ಮಾಹಾತ್ಮ್ಯಂ ಕ್ಷೇತ್ರಮಾಹಾತ್ಮ್ಯವರ್ಣನಂ ॥೧೭॥
ಭುವಿರುದ್ರಾಲಯಾನಾಂ ತು ಸಂಖ್ಯಾ ವಿಷ್ಣೋರ್ಗೃಹಸ್ಯ ಚ।
ಅಂತರಿಕ್ಷೇ ತಥಾಣ್ಡೇಸ್ಮಿನ್ ದೇವಾಯತನವರ್ಣನಂ ॥೧೮॥
ದಕ್ಷಸ್ಯಪತನಂ ಭೂಮೌ ಪುನಸ್ಸ್ವಾರೋಚಿಷೇಽಂತರೇ।
ದಕ್ಷ ಶಾಪಶ್ಚ ದಕ್ಷಸ್ಯ ಶಾಪಮೋಕ್ಷಸ್ತಥೈವಚ ॥೧೯॥
ಕೈಲಾಸವರ್ಣನಂ ಚೈವ ಯೋಗಃ ಪಾಶುಪತಸ್ತಥಾ।
ಚತುರ್ಯುಗಪ್ರಮಾಣಂ ಚ ಯುಗ ಧರ್ಮಸ್ಸುವಿಸ್ತರಃ ॥೨೦॥
ಸಂಧ್ಯಾಂಶಕಪ್ರಮಾಣಂ ಚ ಸಂಧ್ಯಾವೃತ್ತಂ ಭವಸ್ಯ ಚ।
ಸ್ಮಶಾನನಿಲಯ ಶ್ಚೈವ ಚಂದ್ರರೇಖಾಸಮುದ್ಭವಃ ॥೨೧॥
ಉದ್ವಾಹ ಶ್ಯಂಕರಸ್ಯಾಥ ಪುತ್ರೋತ್ಪಾದನಮೇವ ಚ।
ಮೈಥುನಾತಿಪ್ರಸಂಗೇನ ವಿನಾಶೋ ಜಗತಾಂ ಭಯಂ ॥೨೨॥

---

೧೭–೧೮. ಮತ್ತು ಲಿಂಗ ಪೂಜೆಯ ಕ್ರಮವೂ, ಸ್ನಾನದ ವಿಧಿಯೂ, ಶುಚಿತ್ವದ ಲಕ್ಷಣವೂ, ಕಾಶಿಯ ಮಹಿಮೆಯೂ ಕ್ಷೇತ್ರಗಳ ಮಹಿಮೆಯೂ, ಭೂಮಿಯಲ್ಲಿ ಶಿವಾಲಯಗಳ ಸಂಖ್ಯೆಯೂ, ವಿಷ್ಣುದೇವಾಲಯಗಳ ಸಂಖ್ಯೆಯೂ, ಅಂತರಕ್ಷದಲ್ಲಿಯೂ ಮತ್ತು ಬ್ರಹ್ಮಾಂಡದಲ್ಲಿಯೂ ಇರುವ ದೇವಸ್ಥಾನಗಳ ವರ್ಣನೆಯೂ, ಹೇಳಲ್ಪಟ್ಟಿರುವುದು.

೧೯–೨೦. ದಕ್ಷನು ಭೂಮಿಗೆ ಬೀಳುವುದೂ, ಸ್ವಾರೋಚಿಷಮನ್ವಂತರದಲ್ಲಿ ದಕ್ಷನಿಗೆ ಶಾಪ ಬರುವಿಕೆಯೂ, ಆ ಶಾಪದ ಬಿಡುಗಡೆಯಾಗುವುದೂ, ಕೈಲಾಸದ ವರ್ಣನೆಯೂ, ಪಾಶುಪತವ್ರತನಿಯಮವೂ, ನಾಲ್ಕು ಯುಗಗಳ ಪರಿಮಾಣವೂ, ವಿಸ್ತಾರವಾದ ಯುಗಧರ್ಮಗಳೂ, ಇವನ್ನು ಹೇಳಿದೆ.

೨೧–೨೨. ಚತುರ್ಯುಗಗಳ ಸಂಧಿಕಾಲಪ್ರಮಾಣವೂ, ಶಿವನ ಸಂಧ್ಯಾಕಾಲದ ಯೋಗಾನಂದ ರೂಪವಾದ ನರ್ತನವೂ, ಸ್ಮಶಾನವಾಸವೂ, ಚಂದ್ರಕಲೆಯ ಉತ್ಪತ್ತಿಯೂ, ಶಂಕರನ ವಿವಾಹವೂ, ಗಜಾನನನ ಉತ್ಪತ್ತಿಯೂ, ಶಿವನ ವಿಶೇಷವಾದ ಕಾಮುಕ್ರೀಡೆಯಿಂದ ರಸೋಲ್ಲಾಸ ರೂಪವಾದ ವೃತ್ತಿನಾಶವೂ, ಲೋಕದ ಭಯವೂ, ಹೇಳಲ್ಪಟ್ಟಿರುವುದು.

ಶಾಪ ಸ್ಸತ್ಯಾ ಕೃತೋ ದೇವಾನ್ಪುರಾ ವಿಷ್ಣುಂ ಚ ಪಾಲಿತಂ ।
ಶುಕ್ರೋತ್ಸರ್ಗಸ್ತು ರುದ್ರಸ್ಯ ಗಾಂಗೇಯೋದ್ಭವ ಏವಚ ॥೨೩॥
ಗ್ರಹಣಾದಿಷು ಕಾಲೇಷು ಸ್ನಾಪ್ಯಲಿಂಗಂ ಫಲಂ ತಥಾ ।
ಕ್ಷ್ಣಬ್ದಧೀಚ ವಿವಾದಶ್ಚ ದಧೀಚೋಪೇಂದ್ರಯೋಸ್ತಥಾ ॥೨೪॥
ಉತ್ಪತ್ತಿರ್ನಂದಿನಾಮ್ನಾತು ದೇವದೇವಸ್ಯ ಶೂಲಿನಃ ।
ಪತಿವ್ರತಾಯಾಶ್ಚಾಖ್ಯಾನಂ ಪಶುಪಾಶವಿಚಾರಣಾ ॥೨೫॥
ಪ್ರವೃತ್ತಿ ಲಕ್ಷಣಂ ಜ್ಞಾನಂ ನಿವೃತ್ತ್ಯಧಿಕೃತಾತಥಾ ।
ವಸಿಷ್ಠತನಯೋತ್ಪತ್ತಿ ರ್ವಾಸಿಷ್ಠಾನಾಂ ಮಹಾತ್ಮನಾಂ ॥೨೬॥
ಮುನೀನಾಂ ವಂಶವಿಸ್ತಾರೋ ರಾಜ್ಞಾಂ ಶಕ್ತೇರ್ವಿನಾಶನಂ ।
ದೌರಾತ್ಮ್ಯಂ ಕೌಶಿಕಸ್ಯಾಥ ಸುರಭೇ ರ್ಬಂಧನಂ ತಥಾ ॥೨೭॥

---

೨೩. ಸತಿಯು ದೇಹತ್ಯಾಗ ಸಮಯದಲ್ಲಿ ಕೊಟ್ಟ ಶಾಪವೂ, ತ್ರಿಪುರಾಸುರನನ್ನು ಕೊಂದು ದೇವತೆಗಳನ್ನೂ ವಿಷ್ಣುವನ್ನೂ ಕಾಪಾಡಿದುದೂ, ಅಗ್ನಿಯಲ್ಲಿ ಶಿವನ ವೀರ್ಯತ್ಯಾಗವೂ, ಗಂಗೆಯಲ್ಲಿ ಷಣ್ಮುಖನ ಉತ್ಪತ್ತಿಯೂ, ಇವನ್ನು ವಿವರಿಸಿದೆ.

೨೪-೨೫. ಗ್ರಹಣಾದಿಕಾಲಗಳಲ್ಲಿ ಲಿಂಗಾಭಿಷೇಕ ಮಾಡಿದಫಲವೂ, ದಧೀಚ ಮತ್ತು ಉಪೇಂದ್ರರ ಬುದ್ಧಿಭ್ರಂಶ ಮತ್ತೂ ವಿವಾದಗಳೂ, ನಂದಿಯ ಉತ್ಪತ್ತಿಯೂ, ಪತಿವ್ರತೆಯ ಚರಿತ್ರೆಯೂ, ಪಶುಪಾಶಗಳ ವಿಚಾರವೂ,

೨೬. ಪ್ರವೃತ್ತಿ ನಿವೃತ್ತಿ ರೂಪವಾದ ಧರ್ಮದ ಜ್ಞಾನಸ್ವರೂಪವೂ, ವಸಿಷ್ಠನಿಗೆ ವಂಶಾಭಿವೃದ್ಧಿಯಾದ ಬಗೆಯೂ, ವಿಶ್ವಾಮಿತ್ರನು ಪ್ರೇರಿಸಿದ ರಾಕ್ಷಸನಿಂದ ವಸಿಷ್ಠ ಪುತ್ರರ ನಾಶವು ತಪ್ಪಿದಬಗೆಯೂ, ಇವನ್ನು ಹೇಳಿದೆ.

೨೭-೨೮. ವಸಿಷ್ಠ ಗೋತ್ರದಲ್ಲಿ ಹುಟ್ಟಿದ ಮುನಿಗಳ ವಂಶ ವಿಸ್ತಾರವೂ, ರಾಜರವಂಶ ವಿಸ್ತಾರವೂ, ವಿಶ್ವಾಮಿತ್ರನ ಕೆಟ್ಟತನದಿಂದ ಸುರಭಿಯ ಬಂಧನವೂ, ವಸಿಷ್ಠಪುತ್ರನಾದ ಶಕ್ತಿಋಷಿಯ ನಾಶವೂ,

ಸುತಶೋಕೋ ವಸಿಷ್ಠಸ್ಯ ಅರುಂಧತ್ಯಾಃ ಪ್ರಲಾಪನಂ ।
ಸ್ನುಷಾಯಾಃ ಪ್ರೇಷಣಂ ಚೈವ ಗರ್ಭಸ್ಥಸ್ಯ ವಚಸ್ತಥಾ ॥೨೮॥
ಪರಾಶರಸ್ಯಾವತಾರೋ ವ್ಯಾಸಸ್ಯ ಚ ಶುಕಸ್ಯ ಚ ।
ವಿನಾಶೋ ರಾಕ್ಷಸಾನಾಂ ಚ ಕೃತೋ ವೈ ಶಕ್ತಿಸೂನುನಾ ॥೨೯॥
ದೇವತಾಪರಮಾರ್ಥಂ ತು ವಿಜ್ಞಾನಂ ಚ ಪ್ರಸಾದತಃ ।
ಪುರಾಣಕರಣಂ ಚೈವ ಪುಲಸ್ತ್ಯ ಸ್ಯಾಜ್ಞಯಾ ಗುರೋಃ ॥೩೦॥
ಭುವನಾನಾಂ ಪ್ರಮಾಣಂಚ ಗ್ರಹಾಣಾಂ ಜ್ಯೋತಿಷಾಂ ಗತಿಃ ।
ಜೀವಚ್ಛ್ರಾದ್ಧ ವಿಧಾನಂಚ ಶ್ರಾದ್ಧಾರ್ಹಾಃ ಶ್ರಾದ್ಧಮೇವಚ ॥೩೧॥
ನಾಂದೀಶ್ರಾದ್ಧ ವಿಧಾನಂ ಚ ತಥಾಽಧ್ಯಯನ ಲಕ್ಷಣಂ ।
ಪಂಚಯಜ್ಞ ಪ್ರಭಾವಶ್ಚ ಪಂಚಯಜ್ಞ ವಿಧಿಸ್ತಥಾ ॥೩೨॥

---

ವಸಿಷ್ಠನ ಪುತ್ರ ಶೋಕವೂ, ಅರುಂಧತಿಯ ದುಃಖವೂ, ಆಕೆಯ ಸೊಸೆಯನ್ನು ಕಳುಹಿಸುವುದೂ, ಸೊಸೆಯ ಗರ್ಭದಲ್ಲಿರುವ ಶಿಶುವಿನ ಮಾತೂ ಇವು ವರ್ಣಿತವಾಗಿವೆ.

೨೯. ಪರಾಶರ ವ್ಯಾಸ ಶುಕ ಇವರ ಅವತಾರವೂ ಶಕ್ತಿಪುತ್ರನಾದ ಪರಾಶರನು ರಾಕ್ಷಸರನ್ನು ನಾಶಮಾಡಿದುದೂ,

೩೦. ದೇವತೆಗಳ ತತ್ತ್ವಸ್ವರೂಪವೂ ದೇವತಾನುಗ್ರಹದಿಂದ ವಿಜ್ಞಾನ ಪ್ರಾಪ್ತಿಯೂ ಪುಲಸ್ತ್ಯಬ್ರಹ್ಮನ ಅಪ್ಪಣೆಯಿಂದ ವ್ಯಾಸನು ಈ ಪುರಾಣಗಳನ್ನು ರಚಿಸುವುದೂ,

೩೧–೩೨. ಲೋಕಗಳ ಅಳತೆಯೂ, ಗ್ರಹಗಳ ಮತ್ತೂ ತೇಜೋಮಂಡಲಗಳ ಚಲನೆಯೂ, ಬದುಕಿರುವವನಿಗೆ ಶ್ರಾದ್ಧಮಾಡುವ ಬಗೆಯೂ, ಶ್ರಾದ್ಧಕ್ಕೆ ಯೋಗ್ಯರಾದವರೂ, ಶ್ರಾದ್ಧಸ್ವರೂಪವೂ, ನಾಂದೀಶ್ರಾದ್ಧವನ್ನು ಮಾಡುವಕ್ರಮವೂ, ವೇದಾಧ್ಯಯನವನ್ನು ಮಾಡುವರೀತಿಯೂ, ಪಂಚಮಹಾಯಜ್ಞಗಳ ಮಹಿಮೆಯೂ, ಅವುಗಳನ್ನು ಮಾಡುವ ಬಗೆಯೂ, ಇಲ್ಲಿ ವರ್ಣಿತವಾಗಿವೆ.

ರಜಸ್ವಲಾನಾಂ ವೃತ್ತಿಶ್ಚ ವೃತ್ತ್ಯಾ ಪುತ್ರ ವಿಶಿಷ್ಟತಾ ।
ಮೈಥುನಸ್ಯ ವಿಧಿಶ್ಚೈವ ಪ್ರತಿವರ್ಣ ಮನುಕ್ರಮಾತ್ ॥೩೩॥
ಭೋಜ್ಯಾ ಭೋಜ್ಯ ವಿಧಾನಂಚ ಸರ್ವೇಷಾಮೇವ ವರ್ಣಿನಾಂ ।
ಪ್ರಾಯಶ್ಚಿತ್ತ ಮಶೇಷಸ್ಯ ಪ್ರತ್ಯೇಕಂ ಚೈವ ವಿಸ್ತರಾತ್ ॥೩೪॥
ನರಕಾಣಾಂ ಸ್ವರೂಪಂಚ ದಂಡಃ ಕರ್ಮಾನು ರೂಪತಃ ।
ಸ್ವರ್ಗಿನಾರಕಿಣಾಂ ಪುಂಸಾಂ ಚಿಹ್ನಂ ಜನ್ಮಾಂತರೇಷು ಚ ॥೩೫॥
ನಾನಾವಿಧಾನಿ ದಾನಾನಿ ಪ್ರೇತರಾಜಪುರಂ ತಥಾ ।
ಕಲ್ಪಂ ಪಂಚಾಕ್ಷರಸ್ಯಾಥ ರುದ್ರಮಾಹಾತ್ಮ್ಯ ಮೇವಚ ॥೩೬॥
ವೃತ್ರೇಂದ್ರಯೋ ರ್ಮಹಾಯುದ್ಧಂ ವಿಶ್ವರೂಪ ವಿಮರ್ದನಂ ।
ಶ್ವೇತಸ್ಯ ಮೃತ್ಯೋಸ್ಸಂವಾದಃ ಶ್ವೇತಾರ್ಥೇ ಕಾಲನಾಶನಂ ॥೩೭॥

---

೩೩–೩೪. ಪುತ್ರರಿಲ್ಲದ ಮತ್ತು ಪುತ್ರವತಿಯರಾದ ಸ್ತ್ರೀಯರು ಋತುಮತಿಯರಾದರೆ ಅನುಸರಿಸಬೇಕಾದ ಆಚರಣೆಯೂ, ಬ್ರಾಹ್ಮಣಾದಿ ನಾಲ್ಕುವರ್ಣದವರೂ ಸ್ತ್ರೀ ಸಂಗಮಾಡಬೇಕಾದಾಗ ಅನುಸರಿಸಬೇಕಾದ ನಿಯಮವೂ, ಸಮಸ್ತ ವರ್ಣದವರಿಗೂ ಭೋಜನಾಭೋಜನ ರೂಪ ವಿಧಿಯೂ, ಸಕಲ ಪಾಪಗಳಿಗೂ ಪ್ರಾಯಶ್ಚಿತ್ತವೂ, ಇವನ್ನೂ ಬೇರೆಬೇರೆ ಯಾಗಿ ವಿಸ್ತಾರವಾಗಿ ವಿವರಿಸಿರುವುದು.

೩೫–೩೬. ನರಕಗಳ ಸ್ವರೂಪವೂ, ಕರ್ಮಾನುಸಾರವಾಗಿ ಪಾಪಕ್ಕೆ ದಂಡನೆಯೂ, ಜನ್ಮವನ್ನೆತ್ತಿದ ಮನುಷ್ಯನು ಹಿಂದೆ ಸ್ವರ್ಗವನ್ನು ಅನು ಭವಿಸಿದುದಕ್ಕೂ ನರಕವನ್ನು ಅನುಭವಿಸಿದುದಕ್ಕೂ ಇರುವ ಗುರುತು ಗಳು, ಬಗೆಬಗೆಯ ದಾನಗಳೂ, ಪ್ರೇತರಾಜನಾದ ಯಮನ ಪಟ್ಟಣದ ವರ್ಣನೆಯೂ, ಪಂಚಾಕ್ಷರೀ ಮಂತ್ರದ ವಿಧಿಯೂ, ರುದ್ರನ ಮಹಿಮೆಯೂ ಇವನ್ನೂ ಹೇಳಿರುವುದು.

೩೭–೩೮. ವೃತ್ರಾಸುರ ದೇವೇಂದ್ರರ ಯುದ್ಧವೂ, ವಿಶ್ವರೂಪ ನೆಂಬುವನ ನಾಶವೂ, ಶ್ವೇತರಾಜನ ಮತ್ತು ಮೃತ್ಯುದೇವತೆಯ ಸಂವಾ ದವೂ, ಶ್ವೇತರಾಜನಿಗಾಗಿ ಶಿವನು ಯಮನನ್ನು ನಾಶಪಡಿಸುವುದೂ, ದೇವ

ದೇವದಾರುವನೇ ಶಂಭೋಃ ಪ್ರವೇಶ ಶ್ಯಂಕರಸ್ಯ ತು ।
ಸುದರ್ಶನಸ್ಯ ಚಾ ಖ್ಯಾನಂ ಕ್ರಮುಸಸ್ನ್ಯಾಸ ಲಕ್ಷಣಂ ॥೩೮॥
ಶ್ರದ್ಧಾಸಾಧ್ಯೋಽಥ ರುದ್ರಸ್ತು ಕಥಿತಂ ಬ್ರಹ್ಮಣಾ ತದಾ ।
ಮಧುನಾ ಕೈಟಭೇ ನೈವ ಪುರಾಹೃತ ಗತೇರ್ವಿಭೋಃ ॥೩೯॥
ಬ್ರಹ್ಮಣಃ ಪರಮಂ ಜ್ಞಾನ ಮಾದಾತುಂ ಮೀನತಾ ಹರೇಃ ।
ಸರ್ವಾವಸ್ಥಾಸು ವಿಷ್ಣೋಶ್ಚ ಜನನಂ ಲೀಲಯೈವ ತು ॥೪೦॥
ರುದ್ರ ಪ್ರಸಾದಾ ದ್ವಿಷ್ಣೋಶ್ಚ ಜಿಷ್ಣೋಶ್ಚೈವ ತು ಸಂಭವಃ ।
ಮಂಥಾನ ಧಾರಣಾರ್ಥಾಯ ಹರೇಃ ಕೂರ್ಮತ್ವ ಮೇವ ಚ ॥೪೧॥
ಸಂಕರ್ಷಣಸ್ಯ ಚೋತ್ಪತ್ತಿಃ ಕೌಶಿಕ್ಯಾಶ್ಚ ಪುನರ್ಭವಃ ।
ಯದೂನಾಂ ಚೈವ ಸಂಭೂತಿ ರ್ಯಾದವತ್ವಂ ಹರೇ ಸ್ಸ್ವಯಂ॥೪೨॥
ಭೋಜರಾಜಸ್ಯ ದೌರಾತ್ಮ್ಯಂ ಮಾತುಲಸ್ಯ ಹರೇ ರ್ವಿಭೋಃ ।
ಬಾಲಭಾವೇ ಹರೇಃ ಕ್ರೀಡಾ ಪುತ್ರಾರ್ಥಂ ಶಂಕರಾರ್ಚನಂ ॥೪೩॥

---

ದಾರು ವನದಲ್ಲಿ ಶಿವನ ವಿಹಾರವೂ, ಸುದರ್ಶನನೆಂಬವನ ಕಥೆಯೂ, ಕ್ರಮುಸಂನ್ಯಾಸ ವಿಧಿಯೂ, ಇವು ವಿಸ್ತಾರವಾಗಿರುವುವು.

೩೯–೪೦. ಮಧುಕೈಟಭರೆಂಬ ರಾಕ್ಷಸರಿಂದ ಬ್ರಹ್ಮನ ಜ್ಞಾನವು ನಾಶವಾಗಲು ಶಿವನಲ್ಲಿ'ನಂಬಿಕೆಯಿಂದ ಜ್ಞಾನಪ್ರಾಪ್ತಿಯಾಗುವುದೆಂದು ಬ್ರಹ್ಮನು ಹೇಳಿದುದೂ, ಬ್ರಹ್ಮನಿಗೆ ಜ್ಞಾನ ಸಾಧನವಾದವೇದವನ್ನು ತಂದುಕೊಡಲು ಹರಿಯು ಮತ್ಸ್ಯಾವತಾರ ಮಾಡಿದುದೂ, ಎಲ್ಲ ಸಂದರ್ಭ ಗಳಲ್ಲಿಯೂ ಹರಿಯು ತನ್ನಿಚ್ಛೆಯಿಂದಲೇ ಅವತಾರ ಮಾಡುವಿಕೆಯೂ, ಇವೆಲ್ಲವೂ, ಹೇಳಲ್ಪಟ್ಟಿರುವುದು.

೪೧–೪೩. ರುದ್ರನ ಅನುಗ್ರಹದಿಂದ ಕೃಷ್ಣನ ಮತ್ತು ಪ್ರದ್ಯುಮ್ನನ ಉತ್ಪತ್ತಿಯೂ, ಕ್ಷೀರ ಸಮುದ್ರ ಮಥನದಲ್ಲಿ ಕಡೆಗೋಲಾದ ಮಂದರಪರ್ವತವನ್ನು ಧರಿಸುವುದಕ್ಕಾಗಿ ಹರಿಯು ಕೂರ್ಮಾವತಾರ ಮಾಡಿದುದೂ,ಬಲರಾಮನ ಉತ್ಪತ್ತಿಯೂ, ಚಂಡಿಯ ಉತ್ಪತ್ತಿಯೂ, ಯದುಗಳ ಉತ್ಪತ್ತಿಯೂ, ಕೃಷ್ಣನಿಗೆ ಯದುವಂಶದ ಸಂಬಂಧವೂ ಕೃಷ್ಣನ ಸೋದರಮಾವನಾದ ಕಂಸನ ದುಷ್ಟತನವೂ, ಕೃಷ್ಣನ ಬಾಲ ಕ್ರೀಡೆಯೂ, ಪುತ್ರ ಪ್ರಾಪ್ತಿಗಾಗಿ ಶಂಕರನ ಪೂಜೆಯೂ, ವಿಸ್ತಾರವಾಗಿ ಹೇಳಲ್ಪಟ್ಟಿರುವುದು.

**ನಾರಸ್ಯ ಚ ತಥೋತ್ಪತ್ತಿಃ ಕಪಾಲೇ ವೈಷ್ಣವಾದ್ಧರಾತ್ ।**
**ಭೂಭಾರ ನಿಗ್ರಹಾರ್ಥೇ ತು ರುದ್ರಸ್ಯಾರಾಧನಂ ಹರೇಃ ॥೪೪॥**

**ವೈನ್ಯೇನ ಪೃಥುನಾ ಭೂಮೇಃ ಪುರಾ ದೋಹ ಪ್ರವರ್ತನಂ ।**
**ದೇವಾಸುರೇ ಪುರಾ ಲಬ್ಧೋ ಭೃಗುಶಾಪಶ್ಚ ವಿಷ್ಣುನಾ ॥೪೫॥**

**ಕೃಷ್ಣತ್ವೇ ದ್ವಾರಕಾಯಾಂ ತು ನಿಲಯೋ ಮಾಧವಸ್ಯ ತು ।**
**ಲಬ್ಧೋ ಹಿತಾಯ ಶಾಪಸ್ತು ದುರ್ವಾಸಸ್ಯಾನನಾದ್ಧರೇಃ ॥೪೬॥**

**ವೃಷ್ಣ್ಯಂಧಕ ವಿನಾಶಾಯ ಶಾಪಃ ಪಿಂಡಾರವಾಸಿನಾಂ ।**
**ಏರಕಸ್ಯ ತಥೋತ್ಪತ್ತಿ ಸ್ತೋಮರಸ್ಯೋ ದ್ಭವಸ್ತಥಾ ॥೪೭॥**

**ಏರಕಾಲಾಭತೋಽ ನ್ಯೋನ್ಯಂ ವಿವಾದೇ ವೃಷ್ಣಿವಿಗ್ರಹಃ**
**ಲೀಲಯಾ ಚೈವ ಕೃಷ್ಣೇನ ಸ್ವಕುಲಸ್ಯ ಚ ಸಂಹೃತಿಃ ॥೪೮॥**

---

೪೪. ಸಪ್ತಕಪಾಲ ಪುರೋಡಾಶವನ್ನು ಹೋಮಮಾಡಿದುದರಿಂದ ವಿಷ್ಣುರೂಪನಾದ ರುದ್ರನು ನೀರನ್ನುಂಟುಮಾಡಿದನು. ಭಾರತದಲ್ಲಿ ಅನುಶಾಸನಪರ್ವದಲ್ಲಿ ''ಮಹಾದೇವಸ್ಯ ರೋಷಾಚ್ಚ ಆಪೋನಷ್ಟಾಃ ಪುರಾಽಭವನ್। ತಾಶ್ಚಸಪ್ತಕ ಪಾಲೇನ ದೇವೈರನ್ಯಾಃ ಪ್ರವರ್ತಿತಾಃ। ತತಃ ಪಾನೀಯ ಮಭವತ್ಪ್ರಸನ್ನೇ ತ್ರ್ಯಂಬಕೇಭುವಿ॥'' ಎಂದು ಹೇಳಿದೆ. ಭೂಭಾರವನ್ನು ನಾಶಮಾಡುವುದಕ್ಕಾಗಿ ಕೃಷ್ಣನು ಶಿವನ ಪೂಜೆಯನ್ನು ಮಾಡಿದುದೂ, ಈ ವಿಷಯಗಳನ್ನೂ ವಿವರಿಸಲಾಗಿದೆ.

೪೫–೪೬. ವೇನರಾಜನ ಮಗನಾದ ಪೃಥು ಚಕ್ರವರ್ತಿಯ ಭೂಮಿಯನ್ನು ಗೋವನ್ನಾಗಿ ಮಾಡಿ ಹಾಲನ್ನು ಕರೆದುದೂ, ದೇವಾಸುರ ಯುದ್ಧದಲ್ಲಿ ಭೃಗುಋಷಿಯ ಪತ್ನಿಯು ರಾಕ್ಷಸರನ್ನು ಕಾಪಾಡುತ್ತಲು ವಿಷ್ಣುವು ಆಕೆಯನ್ನು ಕೊಂದುದೂ, ಭೃಗುವು ವಿಷ್ಣುವಿಗೆ ಶಾಪವನ್ನು ಕೊಟ್ಟುದೂ, ಕೃಷ್ಣಾವತಾರದಲ್ಲಿ ದ್ವಾರಕೆಯಲ್ಲಿ ವಾಸಮಾಡುವಿಕೆಯೂ, ದುರ್ವಾಸಮುನಿಯ ಶಾಪವನ್ನು ಲೋಕಹಿತಕ್ಕಾಗಿ ಹರಿಯು ಸ್ವೀಕರಿಸಿದುದೂ, ಇವನ್ನೂ ಇಲ್ಲಿ ಹೇಳಲಾಗಿದೆ.

೪೭–೪೮. ವೃಷ್ಣಿಗಳು ಅಂಧಕರು ಎಂಬ ಯಾದವರ ಗುಂಪಿನ ನಾಶಕ್ಕೋಸ್ಕರ ಪಿಂಡಾರವೆಂಬ ದ್ವಾರಕಾ ಪಟ್ಟಣದ ಒಂದು ಭಾಗದಲ್ಲಿ ವಾಸಮಾಡುತ್ತಿದ್ದ ಯಾದವರಿಗೆ ಶಾಪ ಪ್ರಾಪ್ತಿಯೂ, ಏರಕ ತೋಮರ

ಏರಕಾಸ್ತ್ರ ಬಲೇನೈವ ಗಮನಂ ಸ್ವೇಚ್ಛಯೈವತು ।
ಬ್ರಹ್ಮಣಶ್ಚೈವ ಮೋಕ್ಷಸ್ಯ ವಿಜ್ಞಾನಂ ತು ಸುವಿಸ್ತರಂ ॥೪೯॥
ಪುರಾಽಂಧಕಾಗ್ನಿ ದಕ್ಷಾಣಾಂ ಶಕ್ರೇಭ ಮೃಗ ರೂಪಿಣಾಂ ।
ಮದನಸ್ಯಾದಿ ದೇವಸ್ಯ ಬ್ರಹ್ಮಣಶ್ಚಾ ಮುರಾರಿಣಾಂ ॥೫೦॥
ಹಲಾಹಲಸ್ಯ ದೈತ್ಯಸ್ಯ ಕೃತಾವಜ್ಞಾ ಪಿನಾಕಿನಾ ।
ಜಾಲಂಧರ ವಧಶ್ಚೈವ ಸುದರ್ಶನ ಸಮುದ್ಭವಃ ॥೫೧॥
ವಿಷ್ಣೋರ್ವರಾಯುಧಾವಾಪ್ತಿ ಸ್ತಥಾ ರುದ್ರಸ್ಯ ಚೇಷ್ಟಿತಂ ।
ತಥಾಽನ್ಯಾನಿ ಚ ರುದ್ರಸ್ಯ ಚರಿತಾನಿ ಸಹಸ್ರಶಃ ॥೫೨॥
ಹರೇಃ ಪಿತಾಮಹಸ್ಯಾಥ ಶಕ್ರಸ್ಯ ಚ ಮಹಾತ್ಮನಃ ।
ಪ್ರಭಾವಾನುಭವಶ್ಚೈವ ಶಿವಲೋಕಸ್ಯ ವರ್ಣನಂ ॥೫೩॥
ಭೂಮೌ ರುದ್ರಸ್ಯ ಲೋಕಂ ಚ ಪಾತಾಲೇ ಹಾಟಕೇಶ್ವರಂ ।
ತಪಸಾಂ ಲಕ್ಷಣಂ ಚೈವ ದ್ವಿಜಾನಾಂ ವೈಭವಂ ತಥಾ ॥೫೪॥

---

ಗಳ ಉತ್ಪತ್ತಿಯೂ, ಏರಕ ಪ್ರಾಪ್ತಿಯಿಂದ ವೃಷ್ಣಿಗಳಲ್ಲಿ ಕಲಹವೂ, ಲೀಲೆಯಿಂದ ಕೃಷ್ಣನು ತನ್ನ ಯದುವಂಶವನ್ನು ಉಪಸಂಹರಿಸುವುದೂ, ಇವನ್ನು ಹೇಳಿರುವುದು.

೪೯. ಏರಕವೆಂಬ ಅಸ್ತ್ರದ ಬಲದಿಂದ ಸ್ವೇಚ್ಛಾಗಮನ ಶಕ್ತಿಯೂ ಬ್ರಹ್ಮನಿಗೆ ಮೋಕ್ಷ ಸಂಬಂಧವಾದ ಜ್ಞಾನಪಾಪ್ತಿಯ ವಿಸ್ತಾರವೂ, ಇವೆಲ್ಲವೂ ವರ್ಣಿತವಾಗಿರುವುದು.

೫೦-೫೨. ಹಿಂದೆ ಅಂಧಕ ಅಗ್ನಿದಕ್ಷ ಇವರು ಕ್ರಮವಾಗಿ ಇಂದ್ರ, ಆನೆ, ಮೃಗ ರೂಪಗಳನ್ನು ಪಡೆದ ಕಥೆಯೂ, ಮನ್ಮಥ ಬ್ರಹ್ಮರಾಕ್ಷಸರು ಇವರ ಚರಿತ್ರೆಯೂ, ಹಲಾಹಲನೆಂಬ ದೈತ್ಯನ ತಿರಸ್ಕಾರವೂ, ಜಲಂಧರನ ವಧೆಯೂ, ಚಕ್ರಾಯುಧದ ಉತ್ಪತ್ತಿಯೂ, ವಿಷ್ಣುವಿಗೆ ಅದರ ಪ್ರಾಪ್ತಿಯೂ, ರುದ್ರನ ಕಾರ್ಯಗಳೂ, ಇನ್ನೂ ಅನೇಕವಾದ ರುದ್ರನ ಚರಿತ್ರೆಗಳೂ, ಇವನ್ನು ಈ ಪುರಾಣದಲ್ಲಿ ಹೇಳಿರುವುದು.

೫೩-೫೪. ಹರಿ, ಬ್ರಹ್ಮ, ದೇವೇಂದ್ರ, ಇವರ ಮಹಿಮೆಗಳೂ, ಶಿವಲೋಕದ ವರ್ಣನೆಯೂ, ಭೂಮಿಯಲ್ಲಿ ರುದ್ರಲೋಕವೂ, ಪಾತಾಳ

**ಆಧಿಕ್ಯಂ ಸರ್ವ ಮೂರ್ತೀನಾಂ ಲಿಂಗಮೂರ್ತೇರ್ವಿಶೇಷತಃ ।**
**ಲಿಂಗೇಽಸ್ಮಿನ್ನಾನು ಪೂರ್ವ್ಯೇಣ ವಿಸ್ತರೇಣಾ ಸುಕೀರ್ತ್ಯತೇ ॥೫೫॥**

**ಏತತ್ ಜ್ಞಾತ್ವಾ ಪುರಾಣಸ್ಯ ಸಂಕ್ಷೇಪಂ ಕೀರ್ತಯೇತ್ತು ಯಃ ।**
**ಸರ್ವಪಾಪ ವಿನಿರ್ಮುಕ್ತೋ ಬ್ರಹ್ಮಲೋಕಂ ಸ ಗಚ್ಛತಿ ॥೫೬॥**

**ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಾರ್ಧೇ ಅನುಕ್ರಮಣಿಕಾವರ್ಣನಂ ನಾಮ ದ್ವಿತೀಯೋಽಧ್ಯಾಯಃ**

---

ದಲ್ಲಿ ಹಾಟಕೇಶ್ವರನೆಂಬ ಲಿಂಗದ ವಿಚಾರವೂ, ತಪಸ್ಸಿನ ಲಕ್ಷಣವೂ, ದ್ವಿಜರ ಮಹಿಮೆಯೂ, ಇವನ್ನೂ ಇಲ್ಲಿ ವಿಸ್ತಾರವಾಗಿ ಹೇಳಿರುವುದು.

೫೫. ಸಮಸ್ತ ಮೂರ್ತಿಗಳಿಗಿಂತಲೂ ಲಿಂಗಮೂರ್ತಿಯು ಹೆಚ್ಚಿನದೆಂಬ ವಿಷಯವೂ ಈ ಲಿಂಗಮಹಾಪುರಾಣದಲ್ಲಿ ಕ್ರಮವಾಗಿ ವಿಸ್ತಾರವಾಗಿ ವರ್ಣಿತವಾಗಿರುವುದು.

೫೬. ಇದನ್ನೆಲ್ಲವನ್ನೂ ತಿಳಿದು ಈ ಪುರಾಣದ ಕಥಾ ಸಂಕ್ಷೇಪವನ್ನು ಯಾರು ಹೇಳುವರೋ ಅವರು ಸಮಸ್ತ ಪಾಪಗಳನ್ನೂ ಕಳೆದುಕೊಂಡು ಬ್ರಹ್ಮಲೋಕಕ್ಕೆ ಹೋಗುವರು.

ಇಲ್ಲಿಗೆ ಲಿಂಗಮಹಾಪುರಾಣದಲ್ಲಿ ಪೂರ್ವಾರ್ಧದಲ್ಲಿ
ವಿವರಿಸಿರುವ ವಿಷಯಗಳ ಅನುಕ್ರಮಣಿಕೆಯ
ವರ್ಣನೆಯೆಂಬ ಎರಡನೆಯ ಅಧ್ಯಾಯವು
ಮುಗಿದುದು.

## ಅಥ ಶ್ರೀಲಿಂಗಮಹಾಪುರಾಣೇ ಪೂರ್ವಾರ್ಧೇ ತೃತೀಯೋಽಧ್ಯಾಯಃ

॥ ಸೂತ ಉವಾಚ ॥

**ಅಲಿಂಗೋ ಲಿಂಗಮೂಲಂ ತು ಅವ್ಯಕ್ತಂ ಲಿಂಗಮುಚ್ಯತೇ ।**
**ಅಲಿಂಗ ಶ್ಶಿವ ಇತ್ಯುಕ್ತೋ ಲಿಂಗಂ ಶೈವಮಿತಿ ಸ್ಮೃತಂ ॥ ೧ ॥**
**ಪ್ರಧಾನಂ ಪ್ರಕೃತಿಶ್ಚೇತಿ ಯದಾಹು ರ್ಲಿಂಗ ಮುತ್ತಮಂ ।**
**ಗಂಧವರ್ಣ ರಸೈರ್ಹೀನಂ ಶಬ್ದಸ್ಪರ್ಶಾದಿ ವರ್ಜಿತಂ ॥ ೨ ॥**

---

ಲಿಂಗಮಹಾಪುರಾಣದ ಪೂರ್ವಾರ್ಧದಲ್ಲಿ ಮೂರನೆಯ ಅಧ್ಯಾಯವು

(ಈ ಮೂರನೆಯ ಅಧ್ಯಾಯದಲ್ಲಿ ಸಾಂಬಶಿವನಿಂದ ಬ್ರಹ್ಮಾಂಡ ರೂಪಲಿಂಗದ ಉತ್ಪತ್ತಿ ಸ್ಥಿತಿ ಸಂಹಾರಗಳು ಉಂಟಾಗುವುದೆಂದು ಸಂಕ್ಷೇಪವಾಗಿ ಹೇಳಲ್ಪಡುವುದು.)

೧. ಸೂತನು ಹೇಳಿದನು:—ನಿರ್ಗುಣನಾದ ಪರಮೇಶ್ವರನೇ ಸಮಸ್ತಕ್ಕೂ ಕಾರಣನು. ಪ್ರಕೃತಿಯನ್ನು ಲಿಂಗವೆಂದು ಕರೆಯುವರು. ಅಲಿಂಗ ಎಂದರೆ ಚಿಹ್ನೆ, ಗುರುತು, ವಿಶೇಷಧರ್ಮ, ಅಥವಾ ಲಕ್ಷಣ ಗಳಿಲ್ಲದ ನಿರ್ಗುಣ ಸ್ವರೂಪನೇ ಶಿವನು. ಆದುದರಿಂದಲೇ 'ಅಶಬ್ದ ಮಸ್ಪರ್ಶ ಮರೂಪ ಮವ್ಯಯಂ ತಥಾಽರಸಂ ನಿತ್ಯ ಮಗಂಧ ವಚ್ಚಯತ್' ಕಠ. ಉ ೩. ೧೫. ಎಂದು ಹೇಳಿದೆ. ಲಿಂಗವೆಂದರೆ ಸಗುಣವಾದ ಸಮಸ್ತ ಪ್ರಪಂಚವೂ ಉತ್ಪತ್ತಿಯಾದುದೆಂದು ಪ್ರಸಿದ್ಧವಾಗಿರುವುದು. ಆದುದ ರಿಂದಲೇ ವೇದದಲ್ಲಿ, "ಅರೂಪಮರಸಂ" ಇತ್ಯಾದಿಯಾಗಿ ಕಠೋಪನಿ ಷತ್ತಿನಲ್ಲಿ ೩. ೧೫. ಪರಮೇಶ್ವರನ ಸ್ವರೂಪವನ್ನು ಹೇಳಿರುವುದು. ಮಹಿಮ್ನ ಸ್ತೋತ್ರದಲ್ಲಿಯೂ, "ಅತೀತಃ ಪಂಥಾನಂ ತವ ಚ ಮಹಿಮಾ ವಾಙ್ಮನಸಯೋಃ ಅತದ್ವ್ಯಾವೃತ್ತ್ಯಾಽಯಂ ಚಕಿತ ಮಭಿಧತ್ತೇ ಶ್ರುತಿ ರಪಿ" ಎಂದು ಹೇಳಿರುವುದು.

೨. ಲಿಂಗವನ್ನು ಪ್ರಧಾನವೆಂದೂ ಪ್ರಕೃತಿ ಎಂದೂ ಕರೆಯುವರು. ವಾಸನೆ ಬಣ್ಣ ರುಚಿ ಇವುಗಳಿಲ್ಲದೆ ಶಬ್ದಸ್ಪರ್ಶ ಮುಂತಾದ ಗುಣಗಳಿಲ್ಲದೆ ನಾಶ ರಹಿತವಾದ ಶಾಶ್ವತವಾದ ನಿರ್ಗುಣ ಸ್ವರೂಪವೇ ಶಿವನ ತಟಸ್ಥ ಲಕ್ಷಣವು.

ಅಗುಣಂ ಧ್ರುವ ಮಕ್ಷಯ್ಯಂ ಅಲಿಂಗಂ ಶಿವ ಲಕ್ಷಣಂ।
ಗಂಧವರ್ಣ ರಸೈ ರ್ಯುಕ್ತಂ ಶಬ್ದ ಸ್ಪರ್ಶಾದಿ ಲಕ್ಷಣಂ ॥ ೩ ॥
ಜಗದ್ಯೋನಿಂ ಮಹಾಭೂತಂ ಸ್ಥೂಲಂ ಸೂಕ್ಷ್ಮಂ ದ್ವಿಜೋತ್ತಮಾಃ।
ವಿಗ್ರಹೋ ಜಗತಾಂ ಲಿಂಗಮಲಿಂಗಾದಭವತ್ಸ್ವಯಂ ॥ ೪ ॥
ಸಪ್ತಧಾ ಚಾ ಷ್ಟಧಾ ಚೈವ ತಥೈಕಾಶಧಾ ಪುನಃ।
ಲಿಂಗಾನ್ಯಲಿಂಗಸ್ಯ ತಥಾ ಮಾಯಯಾ ವಿತತಾನಿ ತು ॥ ೫ ॥
ತೇಭ್ಯಃ ಪ್ರಧಾನದೇವಾನಾಂ ತ್ರಯಮಾಸೀಚ್ಛಿವಾತ್ಮಕಂ।
ಏತಸ್ಮಾತ್ತ್ರಿಷ್ವಭೂದ್ವಿಶ್ವಮೇಕೇನ ಪರಿರಕ್ಷಿತಂ ॥ ೬ ॥
ಏಕೇನೈವ ಹೃತಂ ವಿಶ್ವಂ ವ್ಯಾಪ್ತಂ ತ್ವೇವಂ ಶಿವೇನ ತು।
ಅಲಿಂಗಂ ಚೈವ ಲಿಂಗಂ ಚ ಲಿಂಗಾಲಿಂಗಾನಿ ಮೂರ್ತಯಃ ॥ ೭ ॥

---

೩-೫. ವಾಸನೆ ಬಣ್ಣ ರುಚಿ ಇವುಗಳಿಂದ ಕೂಡಿದ ಶಬ್ದಸ್ಪರ್ಶ ಮುಂತಾದ ಲಕ್ಷಣಗಳುಳ್ಳ ಪ್ರಪಂಚಕ್ಕೆ ಕಾರಣವಾದ ಪಂಚಮಹಾ ಭೂತಗಳ ಸ್ಥೂಲಸೂಕ್ಷ್ಮ ರೂಪಗಳೇ ಜಗತ್ತಿಗೆ ಗುರುತಾಗಿರುವುದು. ಇವುಗಳೆಲ್ಲವೂ ನಿರ್ಗುಣವಾದ ಆ ಶಿವತತ್ವದಿಂದಲೇ ಉಂಟಾಗಿರುವುದು. ನಿರ್ಗುಣನಾದ ಶಿವನ ಮಾಯಾಶಕ್ತಿಯಿಂದ ಇಪ್ಪತ್ತಾರು ತತ್ವಗಳಿಂದ ಕೂಡಿ ಪ್ರಪಂಚವು ವಿಸ್ತಾರವಾಗಿರುವುದು.

೬. ಆ ಮಾಯೆಯಿಂದ ವಿಸ್ತಾರವಾದ ಇಪ್ಪತ್ತಾರು ತತ್ವಗಳಿಂದ ಕೂಡಿ ಶಿವಸ್ವರೂಪರಾದ ಮೂರುದೇವತೆಗಳು ಹುಟ್ಟಿದರು. ಈ ಮೂವ ರಲ್ಲಿ ಒಬ್ಬನಿಂದ ಪ್ರಪಂಚವು ಉತ್ಪತ್ತಿಯಾಯಿತು. ಅವನೇ ಬ್ರಹ್ಮನು ಒಬ್ಬನು ಪ್ರಪಂಚವನ್ನು ರಕ್ಷಿಸಿದನು. ಅವನೇ ವಿಷ್ಣುವು. ಮತ್ತೊ ಬ್ಬನು ಪ್ರಪಂಚವನ್ನು ಸಂಹರಿಸಿದನು. ಅವನೇರುದ್ರನು. ಈ ಮೂವ ರಿಗೂ ಕಾರ್ಯಭೇದದಿಂದ ಬೇರೆಬೇರೆ ಹೆಸರುಗಳು. ಇವು ವಾಸ್ತವ ವಾದುವಲ್ಲ. ಈ ಮೂವರೂ ಶಿವಸ್ವರೂಪರೇ. ಹರಿವಂಶದಲ್ಲಿ "ಯೋ ವೈ ವಿಷ್ಣುಸ್ಸ ವೈ ರುದ್ರೋ ಯೋ ರುದ್ರಸ್ಸಪಿತಾಮಹಃ। ಏಕಾ ಮೂರ್ತಿ ಸ್ತ್ರಯೋ ದೇವಾ ರುದ್ರವಿಷ್ಣುಪಿತಾಮಹಾಃ" ಎಂದು ಹೇಳಿದೆ.

೭-೮. ನಿರ್ಗುಣ ಸಗುಣಗಳೆರಡೂ ಕೂಡಿ ಪ್ರಪಂಚದಲ್ಲಿರುವ ಸಕಲಪದಾರ್ಥಗಳೂ ಲಿಂಗಾಲಿಂಗಾತ್ಮಕವಾಗಿರುವುವು. ಆ ಕಾರಣ

ಯಥಾವತ್ಕಥಿತಾಶ್ಚೈವ ತಸ್ಮಾದ್ಬ್ರಹ್ಮ ಸ್ವಯಂ ಜಗತ್ ।
ಅಲಿಂಗೀ ಭಗವಾನ್ ಬೀಜೀ ಸ ಏವ ಪರಮೇಶ್ವರಃ ॥ ೮ ॥

ಬೀಜಂ ಯೋನಿಶ್ಚ ನಿರ್ಬೀಜಂ ನಿರ್ಬೀಜೋ ಬೀಜಮುಚ್ಯತೇ ।
ಬೀಜಯೋನಿಪ್ರಧಾನಾನಾಮಾತ್ಮಾಖ್ಯಾ ವರ್ತತೇ ತ್ವಿಹ ॥ ೯ ॥

ಪರಮಾತ್ಮಾ ಮುನಿರ್ಬ್ರಹ್ಮಾ ನಿತ್ಯಬುದ್ಧಸ್ವಭಾವತಃ ।
ವಿಶುದ್ಧೋಽಯಂ ತಥಾ ರುದ್ರಃ ಪುರಾಣೇ ಶಿವ ಉಚ್ಯತೇ ॥೧೦॥

ಶಿವೇನ ದೃಷ್ಟ್ವಾ ಪ್ರಕೃತಿಃ ಶೈವೀ ಸಮಭವದ್ದ್ವಿಜಾಃ ।
ಸರ್ಗಾದೌ ಸಾ ಗುಣೈರ್ಯುಕ್ತಾ ಪುರಾಽವ್ಯಕ್ತಾ ಸ್ವಭಾವತಃ ॥೧೧॥

---

ದಿಂದಲೇ ಜಗತ್ತು ಪರಬ್ರಹ್ಮಸ್ವರೂಪವಾದುದೆಂದು ಹೇಳಿರುವುದು. ನಿರ್ಗುಣನಾದ ಪರಮೇಶ್ವರನೇ ಮಹಾಮಹಿಮನಾಗಿ ಸಕಲಪ್ರಪಂಚಕ್ಕೂ ಕಾರಣನಾಗಿರುವನು.

೯. ಬೀಜಂ–ಬ್ರಹ್ಮಾ, ಯೋನಿಃ ವಿಷ್ಣುಃ, ನಿರ್ಬೀಜಃ–ರುದ್ರಃ ಬೀಜವು ಯಾರಿಂದ ಉಂಟಾಯಿತೋ ಅವನು ಅಥವಾ ನಿರ್ಬೀಜಂ ಎಂದರೆ ಕಾರಣ ಶೂನ್ಯನಾದವನು ಎಂದು ಅರ್ಥವು. ಬೀಜವೆಂದರೆ ಜಗತ್ತಿಗೆ ಕಾರಣವೆಂದರ್ಥವು. ನಿರ್ಬೀಜನಾದ ಶಿವನೇ ಜೀವನೆಂದು ಹೇಳಲ್ಪಡುವುದು. ಬೀಜಯೋನಿಪ್ರಧಾನರಾದ ಬ್ರಹ್ಮವಿಷ್ಣುರುದ್ರರಿಗೆ ಇಲ್ಲಿ ವಿಶ್ವ ತೈಜಸ ಪ್ರಾಜ್ಞರೆಂದು ಆತ್ಮನ ಹೆಸರೇ ಬಂದಿರುವುದು. ಜೀವನೂ ಜಾಗ್ರತ್ ಸ್ವಪ್ನ ಸುಷುಪ್ತಿ ಇವುಗಳಿಗೆ ಅಭಿಮಾನಿಯಾಗಿ ವಿಶ್ವತೈಜಸ ಪ್ರಾಜ್ಞ ಎಂಬ ಹೆಸರನ್ನು ಹೊಂದುವನು.

೧೦. ಈ ನಿರ್ಗುಣಸ್ವರೂಪನಾದ ರುದ್ರನು ನಿತ್ಯನೂ ಜ್ಞಾನ್ನ ಸ್ವರೂಪನೂ ಆದುದರಿಂದ ಪುರಾಣಗಳಲ್ಲಿ ಪರಮಾತ್ಮನೆಂದರೆ ತುರೀಯನೆಂದು ಹೇಳಲ್ಪಡುತ್ತದೆ. ವೇದದಲ್ಲಿ ''ಶಿವಮದ್ವೈತಂತುರೀಯಂ (ಚತುರ್ಥಂ) ಮನ್ಯಂತೆ'' ಮಾಂಡೂಕ್ಯ. ಉ.೨. ಎಂದು ಹೇಳಿರುವುದು.

೧೧. ಎಲೈ ಮುನಿಗಳೇ ಕೇಳಿರಿ. ನಿರ್ಗುಣನಾದ ಶಿವನು ಸೃಷ್ಟಿಗೆ ಪೂರ್ವದಲ್ಲಿ ತನ್ನದೇ ಆದ ಪ್ರಕೃತಿಯನ್ನು ನೋಡಲು, ಆ ಅವನ ದರ್ಶನ ಶಕ್ತಿಯಿಂದ ಪ್ರಕೃತಿಯು ಸತ್ವರಜಸ್ತಮೋಗುಣಗಳಿಂದ ಕೂಡಿ ವ್ಯಕ್ತವಾಗುವುದು.

ಅವ್ಯಕ್ತಾದಿ ವಿಶೇಷಾನ್ತಂ ವಿಶ್ವಂ ತಸ್ಯಾಃ ಸಮುಚ್ಛ್ರಿತಂ ।
ವಿಶ್ವಧಾತ್ರೀ ತ್ವಜಾಽಖ್ಯಾ ಚ ಶೈವೀ ಸಾ ಪ್ರಕೃತಿಸ್ಸ್ಮೃತಾ ॥೧೨॥
ತಾಮಜಾಂ ಲೋಹಿತಾಂ ಶುಕ್ಲಾಂ ಕೃಷ್ಣಾಮೇಕಾಂ ಬಹುಪ್ರಜಾಂ।
ಜನಿತ್ರೀಮನುಶೇತೇ ಸ್ಮ ಜುಷಮಾಣಸ್ಸ್ವರೂಪಿಣೀಂ ॥೧೩॥
ತಾಮೇವಾಜಾಮಜೋಽನ್ಯಸ್ತು ಭುಕ್ತಭೋಗಾಂ ಜಹಾತಿ ಚ ।
ಅಜಾ ಜನಿತ್ರೀ ಜಗತಾಂ ಸಾಽಜೇನ ಸಮಧಿಷ್ಠಿತಾ ॥೧೪॥
ಪ್ರಾದುರ್ಬಭೂವ ಸ ಮಹಾನ್ ಪುರುಷಾಧಿಷ್ಠಿತಸ್ಯ ಚ ।
ಅಜಾಽಜ್ಞಯಾ ಪ್ರಧಾನಸ್ಯ ಸರ್ಗಕಾಲೇ ಗುಣೈಸ್ತ್ರಿಭಿಃ ॥೧೫॥
ಸಿಸೃಕ್ಷಯಾ ಚೋದ್ಯಮಾನಃ ಪ್ರವಿಶ್ಯಾವ್ಯಕ್ತಮವ್ಯಯಂ ।
ವ್ಯಕ್ತಸೃಷ್ಟಿಂ ವಿಕುರುತೇ ಚಾತ್ಮನಾಽಧಿಷ್ಠಿತೋ ಮಹಾನ್ ॥೧೬॥

---

೧೨. ಅವ್ಯಕ್ತವೆಂಬ ಮಹತ್ತತ್ವ ಮೊದಲುಗೊಂಡು ಸ್ಥೂಲ ಪ್ರಪಂಚಾಂತವಾಗಿ ಸಮಸ್ತವೂ ಆ ಪ್ರಕೃತಿಯಿಂದಲೇ ಪ್ರಕಟವಾಗಿರುವುದು. ಶಿವಸಂಬಂಧವಾದ ಪ್ರಕೃತಿಯು ಪ್ರಪಂಚಕ್ಕೆಲ್ಲಕ್ಕೂ ತಾಯಿಯಾಗಿ ಅಜಾ ಎಂಬ ಹೆಸರನ್ನು ಪಡೆದಿರುವಳು.

೧೩–೧೪. ತಾಮಜಾಂ ಎಂಬ ಈ ಎರಡು ಶ್ಲೋಕಗಳಿಂದ "ಅಜಾಮೇಕಾಂ" ಮಹಾನಾ. ಉ. ೮. ೪. ಎಂಬ ಶ್ರುತಿಯನ್ನು ಅನುವಾದ ಮಾಡಿ ಪ್ರಕೃತಿಶಕ್ತಿಯನ್ನು ವಿವರಿಸುವರು. ಲೋಹಿತಾಂ ಶುಕ್ಲಾಂ ಕೃಷ್ಣಾಂ ಎಂದರೆ ರಜಸ್ಸು ಸತ್ವತಮೋಗುಣಗಳ ಸ್ವರೂಪಳಾಗಿ ಅನೇಕ ಬಗೆಯಾದ ಪ್ರಜೆಗಳನ್ನು ಗುಣವೈಷಮ್ಯಾನುರೂಪವಾಗಿ ಸೃಷ್ಟಿಸುವ ಆ ಪ್ರಕೃತಿಯನ್ನು ಬದ್ಧ ಜೀವನು ಪ್ರೀತಿಯಿಂದ ಸೇವಿಸುತ್ತಾ ಅನುರಿಸುವನು. ವಿರಕ್ತಜೀವನು ಆ ಪ್ರಕೃತಿಯ ರಸಾಸ್ವಾದನೆಯನ್ನು ಮಾಡಿ ಬಿಟ್ಟುಬಿಡುವನು. ಪರಮೇಶ್ವರನ ದರ್ಶನ ಶಕ್ತಿಯಿಂದ ಕೂಡಿದ ಪ್ರಕೃತಿಯು ಅನೇಕ ಬ್ರಹ್ಮಾಂಡಗಳನ್ನು ಸೃಷ್ಟಿಸುವ ಶಕ್ತಿಯನ್ನು ಪಡೆದಿರುವಳು.

೧೫. ಪುರುಷನಾದ ಪರಮೇಶ್ವರನ ಈಕ್ಷಣ ಶಕ್ತಿಯಿಂದ ಕೂಡಿ ಸೃಷ್ಟಿಸಮಯದಲ್ಲಿ ಸತ್ವರಜಸ್ತಮೋಗುಣಗಳಿಂದ ಕೂಡಿದ ಪ್ರಕೃತಿಯ ದೆಸೆಯಿಂದ ಈಶ್ವರೇಚ್ಛೆಯಿಂದ ಮಹತ್ತತ್ವವುಹುಟ್ಟಿತು.

೧೬. " ಸೋಕಾಮಯತ ಬಹುಸ್ಯಾಂ ಪ್ರಜಾಯೆಯೇತಿ " ತೈ. ಉ. ೨. ೬. ಎಂಬ ಶ್ರುತಿಯಂತೆ ಸೃಷ್ಟಿಸಬೇಕೆಂಬ ಸಂಕಲ್ಪದಿಂದ ಕೂಡಿದ

**ಮಹತಸ್ತು ತಥಾ ವೃತ್ತಿಃ ಸಂಕಲ್ಪಾಧ್ಯವಸಾಯಿಕಾ ।**
**ಮಹತ ಸ್ತ್ರಿ ಗುಣಸ್ತಸ್ಮಾದಹಂಕಾರೋ ರಜೋಽಧಿಕಃ ॥೧೭॥**

**ತೇನೈವ ಚಾವೃತ ಸ್ಸಮ್ಯಗಹಂಕಾರಸ್ತಮೋಽಧಿಕಃ ।**
**ಮಹತೋ ಭೂತತನ್ಮಾತ್ರಂ ಸರ್ಗಕೃದ್ವೈ ಬಭೂವ ಚ ॥೧೮॥**

**ಅಹಂಕಾರಾಚ್ಛಬ್ದಮಾತ್ರಂ ತಸ್ಮಾದಾಕಾಶಮವ್ಯಯಂ ।**
**ಸ ಶಬ್ದಮಾವೃಣೋತ್ಸಶ್ಚಾದಾಕಾಶಂ ಶಬ್ದಕಾರಣಂ ॥೧೯॥**

**ತನ್ಮಾತ್ರಾದ್ಭೂತಸರ್ಗಶ್ಚ ದ್ವಿಜಾಸ್ತ್ವೇವಂ ಪ್ರಕೀರ್ತಿತಃ ।**
**ಸ್ಪರ್ಶಮಾತ್ರಂ ತಥಾಕಾಶ ಸ್ತಸ್ಮಾದ್ವಾಯುರ್ಮಹಾಮುನೇ ॥೨೦॥**

**ತಸ್ಮಾಚ್ಚ ರೂಪಮಾತ್ರಂ ತು ತತೋಽಗ್ನಿಶ್ಚ ರಸಸ್ತತಃ ।**
**ರಸಾದಾಪಃ ಶುಭಾಸ್ತಾಭ್ಯೋ ಗಂಧಮಾತ್ರಂ ಧರಾ ತತಃ ॥೨೧॥**

---

ಪರಮಾತ್ಮನು ಪ್ರಕೃತಿಯನ್ನು ಪ್ರವೇಶಿಸಿ ವ್ಯಕ್ತಸೃಷ್ಟಿಯನ್ನು ಮಾಡುವನು. ಆ ಪರಮಾತ್ಮನೇ ಈ ಮಹತ್ತತ್ವಕ್ಕೆ, ಆಶ್ರಯನಾಗಿರುವನು.

೧೭. ಮಹತ್ತತ್ವದಿಂದ ಸಂಕಲ್ಪ ಅಧ್ಯವಸಾಯ ಎಂಬ ವೃತ್ತಿಗಳುಳ್ಳ ಸಾತ್ವಿಕಾಹಂಕಾರವೂ ಉಂಟಾಯಿತು.

೧೮. ಆ ರಜೋಗುಣದಿಂದಲೇ ಆವರಿಸಲ್ಪಟ್ಟ ತಾಮಸಾಹಂಕಾರವೂ ಉಂಟಾಯಿತು. ಆ ಮಹತ್ತತ್ವದಿಂದ ಹುಟ್ಟಿದ ಅಹಂಕಾರತತ್ವದಿಂದ ಸೃಷ್ಟಿಗೆ ಅನುಕೂಲವಾದ ಪಂಚತನ್ಮಾತ್ರಗಳು ಉಂಟಾದುವು.

೧೯. ಅಹಂಕಾರತತ್ವದಿಂದ ಶಬ್ದತನ್ಮಾತ್ರವಾದ ಆಕಾಶದ ಉತ್ಪತ್ತಿಯಾಯಿತು. ಕಾರಣವಾದ ಶಬ್ದತನ್ಮಾತ್ರವು ಕಾರ್ಯವಾದ ಆಕಾಶದಲ್ಲಿ ವ್ಯಾಪಿಸಿಕೊಂಡಿತು. "ಕಾರಣಗುಣಾಃ ಕಾರ್ಯೇ ಸಂಕ್ರಾಮಂತಿ" ಎಂಬ ನ್ಯಾಯದಿಂದ ಎಲ್ಲೆಡೆಯಲ್ಲಿಯೂ ಕಾರ್ಯದಲ್ಲಿ ಕಾರಣದ ಗುಣವು ವ್ಯಕ್ತವಾಗುತ್ತಿರುವುದು.

೨೦–೨೧. ಎಲೈ ಋಷಿಗಳೇ, ಕೇಳಿರಿ. ಪಂಚತನ್ಮಾತ್ರಗಳಿಂದ ಪಂಚಭೂತಗಳ ಉತ್ಪತ್ತಿಯಾಗುವುದು. ಆ ಕ್ರಮವೆಂತೆಂದರೆ ಶಬ್ದತನ್ಮಾತ್ರದಿಂದ ಆಕಾಶವೂ ಆಮೇಲೆ ಆಕಾಶದಿಂದ ಸ್ಪರ್ಶತನ್ಮಾತ್ರವೂ ಅದರಿಂದ ವಾಯುವೂ ಬಳಿಕ ರೂಪತನ್ಮಾತ್ರವೂ ಅದರಿಂದ ಅಗ್ನಿಯೂ ತರುವಾಯ ರಸತನ್ಮಾತ್ರವೂ ಅದರಿಂದ ನೀರೂ ಆಮೇಲೆ ಗಂಧತನ್ಮಾತ್ರವೂ ಅದರಿಂದ ಭೂಮಿಯೂ ಉತ್ಪನ್ನವಾಯಿತು.

ಆವೃಣೋದ್ಧಿ ತಥಾಽಽಕಾಶಂ ಸ್ಪರ್ಶಮಾತ್ರಂ ದ್ವಿಜೋತ್ತಮಾಃ ।
ಆವೃಣೋದ್ರೂಪಮಾತ್ರಂ ತು ವಾಯುರ್ವಾತಿ ಕ್ರಿಯಾತ್ಮಕಃ ॥

ಆವೃಣೋದ್ರಸಮಾತ್ರಂ ವೈ ದೇವಸ್ಸಾಕ್ಷಾದ್ವಿಭಾವಸುಃ ।
ಆವೃಣ್ವಾನಾ ಗಂಧಮಾತ್ರ ಮಾಪ ಸ್ಸರ್ವ ರಸಾತ್ಮಿಕಾಃ ॥೨೩॥

ಕ್ಷ್ಮಾ ಸಾ ಪಂಚಗುಣಾ ತಸ್ಮಾದೇಕೋನಾ ರಸಸಂಭವಾಃ ।
ತ್ರಿಗುಣೋ ಭಗವಾನ್ವಹ್ನಿಃ ದ್ವಿಗುಣಸ್ಸ್ಪರ್ಶಸಂಭವಃ ॥೨೪॥

ಅವಕಾಶಸ್ತತೋ ದೇವ ಏಕಮಾತ್ರಸ್ತು ನಿಷ್ಕಲಃ ।
ತನ್ಮಾತ್ರಾದ್ಭೂತಸರ್ಗಶ್ಚ ವಿಜ್ಞೇಯಶ್ಚ ಪರಸ್ಪರಂ ॥೨೫॥

ವೈಕಾರಿಕಸ್ಸಾಕ್ಷಿಕೋ ವೈ ಯುಗಪತ್ಸಂಪ್ರವರ್ತತೇ ।
ಸರ್ಗಸ್ತಥಾಽಪ್ಯಹಂಕಾರಾದೇವಮತ್ರ ಪ್ರಕೀರ್ತಿತಃ ॥೨೬॥

---

೨೨-೨೩. ಎಲೈ ಬ್ರಾಹ್ಮಣಶ್ರೇಷ್ಠರೇ, ಸ್ಪರ್ಶತನ್ಮಾತ್ರದಲ್ಲಿ ಆಕಾಶವೂ ರೂಪತನ್ಮಾತ್ರದಲ್ಲಿ ವಾಯುವೂ ರಸತನ್ಮಾತ್ರದಲ್ಲಿ ಅಗ್ನಿಯೂ ಗಂಧತನ್ಮಾತ್ರದಲ್ಲಿ ನೀರೂ ವ್ಯಾಪಿಸಿರುವುದು.

೨೪. ಆದುದರಿಂದ ಭೂಮಿಯು ಐದು ಗುಣಗಳಿಂದ ಕೂಡಿರುವುದು. ನೀರು ಗಂಧ ಗುಣವಿಲ್ಲದುದಾಗಿ ನಾಲ್ಕು ಗುಣದಿಂದಲೂ, ಅಗ್ನಿಯು ಶಬ್ದಸ್ಪರ್ಶರೂಪವೆಂಬ ಮೂರು ಗುಣಗಳಿಂದಲೂ, ವಾಯುವು ಶಬ್ದಸ್ಪರ್ಶವೆಂಬ ಎರಡು ಗುಣಗಳಿಂದಲೂ ಕೂಡಿರುವುವು.

೨೫. ಆಕಾಶವು ಶಬ್ದ ಗುಣ ಒಂದರಿಂದಲೇ ಕೂಡಿರುವುದು. ಹೀಗೆ ಪಂಚತನ್ಮಾತ್ರಗಳಿಂದ ಪಂಚಭೂತಗಳು ಸೃಷ್ಟಿಯಾಯಿತೆಂದು ತಿಳಿಯಬೇಕು.

೨೬. ರಾಜಸತಾಮಸ ಸೃಷ್ಟಿಗಳೂ ಸಾತ್ವಿಕಸೃಷ್ಟಿಯೂ ಅಹಂಕಾರ ತತ್ವದಿಂದಲೇ ಏಕ ಕಾಲದಲ್ಲಿ ಉಂಟಾಗುವುದೆಂದು ಈ ಲಿಂಗಪುರಾಣದಲ್ಲಿ ಹೇಳಿರುವುದು.

ಪಂಚ ಬುದ್ಧೀನ್ದ್ರಿಯಾಣ್ಯಸ್ಯ ಪಂಚ ಕರ್ಮೇನ್ದ್ರಿಯಾಣಿ ತು ।
ಶಬ್ದಾದೀನಾಮವಾಪ್ತ್ಯರ್ಥಂ ಮನಶ್ಚೈವೋಭಯಾತ್ಮಕಂ ॥೨೭॥

ಮಹದಾದಿ ವಿಶೇಷಾಂತಾ ಹ್ಯಂಡಮುತ್ಪಾದಯಂತಿ ಚ ।
ಜಲಬುದ್ಬುದವತ್ತಸ್ಮಾದವತೀರ್ಣಃ ಪಿತಾಮಹಃ ॥೨೮॥

ಸ ಏವ ಭಗವಾನ್ ರುದ್ರೋ ವಿಷ್ಣುರ್ವಿಶ್ವಗತಃ ಪ್ರಭುಃ ।
ತಸ್ಮಿನ್ನಂಡೇ ತ್ವಿಮೇ ಲೋಕಾಃ ಅನ್ತರ್ವಿಶ್ವಮಿದಂ ಜಗತ್ ॥೨೯॥

ಅಂಡಂ ದಶಗುಣೇನೈವ ವಾರಿಣಾ ಪ್ರಾಪ್ಯ ತಂ ಬಹಿಃ ।
ಆಪೋ ದಶಗುಣೇನೈವ ತದ್ಬಾಹ್ಯೇ ತೇಜಸಾಽವೃತಾಃ ॥೩೦॥

ತೇಜೋ ದಶಗುಣೇನೈವ ಬಾಹ್ಯತೋ ವಾಯುನಾಽವೃತಂ ।
ವಾಯುರ್ದಶಗುಣೇನೈವ ಬಾಹ್ಯತೋ ನಭಸಾಽವೃತಃ ॥೩೧॥

---

೨೭. ಈ ಜೀವನಿಗೆ ಶಬ್ದಾದಿಗುಣಗಳ ಜ್ಞಾನಪ್ರಾಪ್ತಿಗೋಸ್ಕರವಾಗಿ ಐದು ಜ್ಞಾನೇಂದ್ರಿಯಗಳೂ, ಮಾತನಾಡುವುದು ಮುಂತಾದ ಕೆಲಸಕ್ಕೋಸ್ಕರವಾಗಿ ಐದು ಕರ್ಮೇಂದ್ರಿಯಗಳೂ, ಜ್ಞಾನಕರ್ಮೇಂದ್ರಿಯಗಳೆರಡರಬಟ್ಟಿನಿಂದ ಉಳ್ಳ ಮನಸ್ಸೂ, ಸುಖದುಃಖಾನುಭವಗಳಿಗೆ ಸಾಧನಗಳಾಗಿ ಎರಡರಸ್ವಭಾವವೂ ಶರೀರದಲ್ಲಿ ಕಲ್ಪಿತವಾಗಿರುವುವು.

೨೮–೨೯. ಮಹತ್ತತ್ವ ಮೊದಲುಗೊಂಡು ಸ್ಥೂಲ ಪಂಚಭೂತಗಳವರೆಗೂ ಇರುವ ತತ್ವಗಳೆಲ್ಲವೂ ಕೂಡಿ ನೀರಿನಗುಳ್ಳೆಯಂತಿರುವ ಅಂಡವನ್ನು ಹುಟ್ಟಿಸುವುದು. ಆ ಅಂಡದ ದೆಸೆಯಿಂದ ಹಿರಣ್ಯಗರ್ಭ ಬ್ರಹ್ಮನು ಹುಟ್ಟುವನು. ಇವನೇ ಕಾರ್ಯಾರ್ಥವಾಗಿ ಅಂದರೆ ಸೃಷ್ಟಿ ಸ್ಥಿತಿ ಸಂಹಾರಕ್ಕಾಗಿ ಬ್ರಹ್ಮ ವಿಷ್ಣು ರುದ್ರರೆಂಬ ರೂಪಾಂತರಗಳನ್ನು ಪಡೆಯುವನು ಆ ಅಂಡದೊಳಗೇ ಸಮಸ್ತ ಲೋಕಗಳಿಂದ ಕೂಡಿದ ಜಗತ್ತು ಇರುವುದು.

೩೦–೩೧. ಅಂಡದ ಹೊರಗೆ ಆ ಅಂಡದ ಹತ್ತರಷ್ಟು ನೀರು ಅದನ್ನು ಸುತ್ತಿಕೊಂಡಿರುವುದು. ನೀರಿನ ಹತ್ತರಷ್ಟು ತೇಜಸ್ಸು ಆ ನೀರನ್ನೂ, ತೇಜಸ್ಸಿನ ಹತ್ತರಷ್ಟು ವಾಯುವು ಆ ತೇಜಸ್ಸನ್ನೂ, ವಾಯುವಿನ ಹತ್ತರಷ್ಟು ಆಕಾಶವು ಆ ವಾಯುವನ್ನೂ, ಆ ಆಕಾಶವನ್ನು ಅಹಂಕಾರತ

**ಆಕಾಶೇನಾವೃತೋ ವಾಯುರಹಂಕಾರೇಣ ಶಬ್ದಜಃ ।**
**ಮಹತಾ ಶಬ್ದಹೇತುರ್ವೈ ಪ್ರಧಾನೇನಾವೃತಸ್ಸ್ವಯಂ ॥೩೨॥**

**ಸಪ್ತಾಂಡಾವರಣಾನ್ಯಾಹುಃ ತಸ್ಯಾತ್ಮಾ ಕಮಲಾಸನಃ ।**
**ಕೋಟಿಕೋಟಿಯುತಾನ್ಯತ್ರ ಚಾಂಡಾನಿ ಕಥಿತಾನಿ ತು ॥೩೩॥**

**ತತ್ರ ತತ್ರ ಚತುರ್ವಕ್ತ್ರಾ ಬ್ರಹ್ಮಾಣೋ ಹರಯೋ ಭವಾಃ ।**
**ಸೃಷ್ಟಾಃ ಪ್ರಧಾನೇನ ತದಾ ಲಬ್ಧ್ವಾ ಶಂಭೋಸ್ತು ಸನ್ನಿಧಿಂ ॥೩೪॥**

**ಲಯಶ್ಚೈವ ತಥಾಽನ್ಯೋಽನ್ಯ ಮಾದ್ಯಂತಮಿತಿ ಕೀರ್ತಿತಂ ।**
**ಸರ್ಗಸ್ಯ ಪ್ರತಿಸರ್ಗಸ್ಯ ಸ್ಥಿತೇಃ ಕರ್ತಾ ಮಹೇಶ್ವರಃ ॥೩೫॥**

**ಸರ್ಗೇ ಚ ರಜಸಾ ಯುಕ್ತಃ ಸತ್ವಸ್ಥಃ ಪ್ರತಿಪಾಲನೇ ।**
**ಪ್ರತಿಸರ್ಗೇ ತಮೋದ್ರಿಕ್ತಃ ಸ ಏವ ತ್ರಿವಿಧಃ ಕ್ರಮಾತ್ ॥೩೬॥**

---

ತ್ವವೂ, ಅಹಂಕಾರವನ್ನು ಮಹತ್ತತ್ವವೂ, ಆ ಮಹತ್ತತ್ವವನ್ನು ಪ್ರಕೃತಿಯೂ, ಆವರಿಸಿಕೊಂಡಿರುವುದು.

೩೩. ಹೀಗೆ ಉತ್ಪತ್ತಿಯಾದ ಅಂಡಕ್ಕೆ ಕ್ರಮವಾಗಿ ನೀರು, ತೇಜಸ್ಸು, ವಾಯು, ಆಕಾಶ, ಅಹಂಕಾರ, ಮಹತ್ತತ್ವ ಪ್ರಕೃತಿ ಎಂಬ ಏಳು ಆವರಣಗಳಿರುವುವು. ಆ ಅಂಡಕ್ಕೆ ಹಿರಣ್ಯಗರ್ಭ ಬ್ರಹ್ಮನೇ ಜೀವನು. ಈ ಸಮಷ್ಟಿಬ್ರಹ್ಮಾಂಡಕ್ಕೆ ಅಂಡಗಳು ಎಂದರೆ ವ್ಯಷ್ಟಿ ಬ್ರಹ್ಮಾಂಡಗಳು ಲೆಕ್ಕವಿಲ್ಲದಷ್ಟು ಇರುವುವು.

೩೪. ಪ್ರತಿಯೊಂದು ವ್ಯಷ್ಟಿಬ್ರಹ್ಮಾಂಡದಲ್ಲಿಯೂ ಚತುರ್ಮುಖ ಬ್ರಹ್ಮರೂ ಹರಿಗಳೂ ರುದ್ರರೂ ಇರುವರು. ಇವರನ್ನು ಪ್ರಕೃತಿ ಎಂಬ ಶಕ್ತಿದೇವಿಯು ಪರಮಾತ್ಮನ ಸಾನ್ನಿಧ್ಯದಿಂದ ಬಲವನ್ನು ಪಡೆದು ಸೃಷಿಸುವಳು.

೩೫–೩೬. ಲಯವಾಗಬೇಕಾದರೂ ಕ್ರಮವಾಗಿ, ಅಂಡ, ನೀರು, ತೇಜಸ್ಸು, ವಾಯು, ಆಕಾಶ, ಅಹಂಕಾರ, ಮಹತ್ತತ್ವ, ಈ ಒಂದರಲ್ಲೊಂದು ಲಯವಾಗುತ್ತ ಕೊನೆಗೆ ಪ್ರಕೃತಿಯಲ್ಲಿ ಎಲ್ಲವೂ ಲಯವಾಗುವುದು. ಸೃಷ್ಟಿ, ಸ್ಥಿತಿ, ನಾಶಗಳನ್ನು ಮಹೇಶ್ವರನೇ ಮಾಡುವನು. ಸೃಷ್ಟಿಸುವಾಗ ರಜೋಗುಣದಿಂದಲೂ, ಪಾಲಿಸುವಾಗ ಸತ್ವಗುಣದಿಂದಲೂ, ಲಯಮಾಡುವಾಗ ತಮೋಗುಣದಿಂದಲೂ ವಿಶೇಷವಾಗಿ ಕೂಡಿರುವನು.

ಆದಿಕರ್ತಾ ಚ ಭೂತಾನಾಂ ಸಂಹರ್ತಾ ಪರಿಪಾಲಕಃ ।
ತಸ್ಮಾನ್ಮಹೇಶ್ವರೋ ದೇವೋ ಬ್ರಹ್ಮಣೋಽಧಿಪತಿಶ್ಶಿವಃ ॥೩೭॥
ಸದಾಶಿವೋ ಭವೋ ವಿಷ್ಣುಃ ಬ್ರಹ್ಮಾ ಸರ್ವಾತ್ಮಕೋ ಯತಃ ।
ಏತದಂಡೇ ತಥಾ ಲೋಕಾ ಇಮೇ ಕರ್ತಾ ಪಿತಾಮಹಃ ॥೩೮॥
ಪ್ರಾಕೃತಃ ಕಥಿತಸ್ತ್ವೇಷ ಪುರುಷಾಧಿಷ್ಠಿತೋ ಮಯಾ ।
ಸರ್ಗಶ್ಚಾಬುದ್ಧಿಪೂರ್ವಸ್ತು ದ್ವಿಜಾಃ ಪ್ರಾಥಮಿಕಃ ಶುಭಃ ॥೩೯॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಾರ್ಧೇ ಪ್ರಾಕೃತಪ್ರಾಥಮಿಕ
ಸರ್ಗಕಥನಂ ನಾಮ ತೃತೀಯೋಽಧ್ಯಾಯಃ

---

೩೭. ಆ ದೇವನಾದ ಮಹೇಶ್ವರನು ಒಬ್ಬನೇ ಸೃಷ್ಟಿಸುವವನೂ ಪಾಲಿಸುವವನೂ ಸಂಹರಿಸುವವನೂ ಆದುದರಿಂದ ಆ ಶಿವನೇ ಬ್ರಹ್ಮನಿಗೂ ಕೂಡ ಅಧಿಪತಿಯಾದನು.

೩೮. ರುದ್ರ, ವಿಷ್ಣು, ಬ್ರಹ್ಮ, ಈ ಮೂವರೂ ಸರ್ವಾತ್ಮಸ್ವರೂಪನಾದ ಸದಾಶಿವನಅಂಶರೇ ಆದುದರಿಂದ ಈ ಬ್ರಹ್ಮಾಂಡದಲ್ಲಿರುವ ಈ ಲೋಕಗಳನ್ನೂ ಬ್ರಹ್ಮನೇ ಸೃಷ್ಟಿ ಮಾಡಿರುವನು.

೩೯. ಎಲೈ ಮುನಿಗಳೇ, ಈಶ್ವರ ನಿರ್ಮಿತವಾದ ಮಂಗಳಕರವಾದ ಮೊದಲನೆಯದಾದ ಪುರುಷಾಶ್ರಿತವಾದ ಪ್ರಕೃತಿ ಸೃಷ್ಟಿಯನ್ನು ನಾನು ಈರೀತಿಯಲ್ಲಿ ನಿಮಗೆ ಹೇಳಿರುವೆನು. ಪಂಚದಶಿಯಲ್ಲಿ ಕೂಟಸ್ಥದೀಪದಲ್ಲಿ "ಈಕ್ಷಣಾದಿ ಪ್ರವೇಶಾಂತಾ ಸೃಷ್ಟಿರೀಶಕೃತಾ ಭವೇತ್" ಎಂಬದಾಗಿ ಸೃಷ್ಟಿಯು ಈಶ್ವರ ನಿರ್ಮಿತವಾದುದೆಂದು ಹೇಳಿರುವುದು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಾರ್ಧದಲ್ಲಿ
ಪ್ರಕೃತಿ ಸಂಬಂಧವಾದ ಮೊದಲನೆಯ ಸೃಷ್ಟಿಯನ್ನು
ವಿವರಿಸುವ ಮೂರನೆಯ ಅಧ್ಯಾಯವು
ಮುಗಿದುದು.

## ಅಥ ಶ್ರೀಲಿಂಗಮಹಾಪುರಾಣೇ ಪೂರ್ವಾರ್ಧೇ

### ಚತುರ್ಥೋಽಧ್ಯಾಯಃ

**ಸೂತ ಉವಾಚ**

**ಅಥ ಪ್ರಾಥಮಿಕಸ್ಯೇಹ ಯಃ ಕಾಲಃ ತದಹಸ್ಸ್ಮೃತಃ ।**
**ಸರ್ಗಸ್ಯ ತಾದೃಶೀ ರಾತ್ರಿಃ ಪ್ರಾಕೃತಸ್ಯ ಸಮಾಸತಃ ॥ ೧ ॥**

**ದಿವಾ ಸೃಷ್ಟಿಂ ವಿಕುರುತೇ ರಜನ್ಯಾಂ ಪ್ರಲಯಂ ವಿಭುಃ ।**
**ಔಪಚಾರಿಕ ಮಸ್ಯೈತದಹೋರಾತ್ರಂ ನ ವಿದ್ಯತೇ ॥ ೨ ॥**

**ದಿವಾ ವಿಕೃತಯಸ್ಸರ್ವೇ ವಿಕಾರಾ ವಿಶ್ವದೇವತಾಃ ।**
**ಪ್ರಜಾನಾಂ ಪತಯಸ್ಸರ್ವೇ ತಿಷ್ಠಂತ್ಯನ್ಯೇ ಮಹರ್ಷಯಃ ॥ ೩ ॥**

---

ಲಿಂಗಮಹಾಪುರಾಣದ ಪೂರ್ವಾರ್ಧದಲ್ಲಿ ನಾಲ್ಕನೆಯ ಅಧ್ಯಾಯವು

(ಈ ಅಧ್ಯಾಯದಲ್ಲಿ ಕಾಲಮಾನವನ್ನು ವಿಸ್ತಾರವಾ ಹೇಳಿ ಅನೇಕ ಬ್ರಹ್ಮಾಂಡಗಳ ಉತ್ಪತ್ತಿಯನ್ನೂ ಬ್ರಹ್ಮನ ಸೃಷ್ಟಿಕಾರ್ಯವನ್ನೂ ಹೇಳಿರುವುದು.)

೧. ಪ್ರಕೃತಿಶಕ್ತಿಯಿಂದುಂಟಾದ ಸಮಷ್ಟಿಹಿರಣ್ಯಗರ್ಭನ ಅಂಶವಾದ ವ್ಯಷ್ಟಿರೂಪನಾದ ಚತುರ್ಮುಖಬ್ರಹ್ಮನು ಸೃಷ್ಟಿಮಾಡುತ್ತಿರುವ ಕಾಲವನ್ನು ಹಗಲೆಂದೂ, ಆಸೃಷ್ಟಿಕಾಲದಷ್ಟೇ ಅಳತೆಯಿಂದ ಕೂಡಿದ ಕಾಲವನ್ನು ರಾತ್ರಿ ಎಂದೂ ಸಂಗ್ರಹವಾಗಿ ಹೇಳಿರುವುದು.

೨. ಚತುರ್ಮುಖಬ್ರಹ್ಮನು ಹಗಲು ಸೃಷ್ಟಿಕಾರ್ಯವನ್ನು ಮಾಡುವನು. ರಾತ್ರಿಯಲ್ಲಿ ಪ್ರಳಯಕಾರ್ಯವನ್ನು ಮಾಡುವನು. ಬ್ರಹ್ಮನಿಗೆ ಹಗಲು ರಾತ್ರಿಗಳು ಕಲ್ಪಿತವಾದುವು. ನಮ್ಮಂತೆ ಸೂರ್ಯೋದಯಾಸ್ತರೂಪವಾದ ಕಾರ್ಯ, ವಿಶ್ರಾಂತಿ, ಜ್ಞಾನ, ಅಜ್ಞಾನ, ಎಚ್ಚರ, ನಿದ್ರೆ, ರೂಪವಾದ ಹಗಲು ರಾತ್ರಿಗಳು ಅವನಿಗಿಲ್ಲ, ಇವು ಸ್ವಾಭಾವಿಕವಾಗಿ ನಡೆಯುತ್ತಲೇ ಇರುತ್ತವೆ. ಎಂದು ಭಾವವು.

೩. ಆ ಬ್ರಹ್ಮನ ಹಗಲಿನಲ್ಲಿ ಎಂದರೆ ಸೃಷ್ಟಿಕಾಲದಲ್ಲಿ ಸಮಸ್ತ ಪ್ರಕೃತಿವಿಕಾರಗಳೂ ವಿಶ್ವದೇವತೆಗಳೂ ಪ್ರಜಾಪತಿಗಳೂ ಇತರ ಮಹರ್ಷಿಗಳೂ ಇವರೆಲ್ಲರೂ ಇರುವರು.

ರಾತ್ರೌ ಸರ್ವೇ ಪ್ರಲೀಯಂತೇ ನಿಶಾಂತೇ ಸಂಭವಂತಿ ಚ।
ಅಹಸ್ತು ತಸ್ಯ ವೈ ಕಲ್ಪೋ ರಾತ್ರಿಸ್ತಾದೃಗ್ವಿಧಾ ಸ್ಮೃತಾ ॥ ೪ ॥
ಚತುರ್ಯುಗ ಸಹಸ್ರಾಂತೇ ಮನವಸ್ತು ಚತುರ್ದಶ।
ಚತ್ವಾರಿ ತು ಸಹಸ್ರಾಣಿ ವತ್ಸರಾಣಾಂ ಕೃತಂ ದ್ವಿಜಾಃ ॥ ೫ ॥
ತಾವಚ್ಛತೀ ಚ ವೈ ಸಂಧ್ಯಾ ಸಂಧ್ಯಾಂಶಶ್ಚ ಕೃತಸ್ಯ ತು।
ತ್ರಿಶತೀ ದ್ವಿಶತೀ ಸಂಧ್ಯಾ ತಥಾ ಚೈಕಶತೀ ಕ್ರಮಾತ್ ॥ ೬ ॥
ಅಂಶಕಃ ಷಟ್‌ಶತಂ ತಸ್ಮಾತ್ಕೃತ ಸಂಧ್ಯಾಂಶಕಂ ವಿನಾ।
ತ್ರಿದ್ವ್ಯೇಕಸಾಹಸ್ರಮಿತೌ ವಿನಾ ಸಂಧ್ಯಾಂಶಕೇನ ತು ॥ ೭ ॥
ತ್ರೇತಾ ದ್ವಾಪರತಿಷ್ಯಾಣಾಂ ಕೃತಸ್ಯ ಕಥಯಾಮಿ ವಃ।
ನಿಮೇಷ ಪಂಚದಶಕಾ ಕಾಷ್ಠಾ ಸ್ವಸ್ಥಸ್ಯ ಸುವ್ರತಾಃ ॥ ೮ ॥

---

೪. ರಾತ್ರಿಯಲ್ಲಿ ಅಂದರೆ ಸೃಷ್ಟಿಮಾಡದೆ ಇರುವಾಗ ಎಲ್ಲವೂ ಪ್ರಕೃತಿಯಲ್ಲಿ ಲಯವಾಗಿರುವುದು. ರಾತ್ರಿಯ ಕೊನೆಯಲ್ಲಿ ಮತ್ತೆ ಉತ್ಪತ್ತಿಯಾಗುವುದು. ಆ ಬ್ರಹ್ಮನ ಹಗಲಿನ ಕಾಲ ಪ್ರಮಾಣವನ್ನು ಕಲ್ಪವೆಂದು ಕರೆಯುವರು. ರಾತ್ರಿಯ ಕಾಲ ಪ್ರಮಾಣಕ್ಕೂ ಅದೇ ಹೆಸರು ಇರುವುದು.

೫. ನಾಲ್ಕು ಯುಗಗಳೂ ಸಾವಿರಸಾರಿಯಾದರೆ ಅದೇ ಬ್ರಹ್ಮನ ಹಗಲು. ಆ ಕಾಲದಲ್ಲಿ ಹದಿನಾಲ್ಕು ಜನ ಮನುಗಳ ಅಧಿಕಾರವು ಮುಗಿಯುವುದು. ಕೃತಯುಗವು ನಾಲ್ಕುಸಾವಿರ ವರ್ಷಗಳ ಪ್ರಮಾಣ ಉಳ್ಳದ್ದು.

೬–೭. ಕೃತಯುಗಕ್ಕೆ ಸಂಧಿಕಾಲವು ನಾಲ್ಕು ನೂರುವರ್ಷಗಳು. ತ್ರೇತಾ ದ್ವಾಪರ ಕಲಿಯುಗಗಳ ಪ್ರಮಾಣವು ಸಂಧ್ಯಾಂಶವಿಲ್ಲದೆ ಕ್ರಮವಾಗಿಮೂರು, ಎರಡು, ಒಂದು, ಸಾವಿರ ವರ್ಷಗಳು. ಸಂಧಿಕಾಲಗಳು ಕ್ರಮವಾಗಿ ಮುನ್ನೂರು ಇನ್ನೂರು ನೂರು ವರ್ಷಗಳು.

೮–೯. ಓ ಮುನಿಗಳೇ, ಆರೋಗ್ಯವಾಗಿರುವ ಮನುಷ್ಯನು ಕಣ್ಣು ಶಿಪ್ಪೆಯನ್ನು ಹದಿನೈದು ಬಾರಿ ಚಲಿಸುವ ಕಾಲಕ್ಕೆ 'ಕಾಷ್ಠಾ' ಎಂಬ ಹೆಸರು ಬರುವುದು. ಮೂವತ್ತುಕಾಷ್ಠಗಳಾದರೆ ಒಂದು 'ಕಲೆ' ಯಾಗುವುದು. ಮೂವತ್ತು ಕಲೆಗಳಿಗೆ ಒಂದು 'ಮುಹೂರ್ತ' ವೆಂದು

ಮರ್ತ್ಯಸ್ಯ ಚಾಕ್ಷ್ಣೋಸ್ತಸ್ಯಾಶ್ಚ ತತ ಸ್ತ್ರಿಂಶತಿಕಾ ಕಲಾ ।
ಕಲಾತ್ರಿಂಶತಿಕೋ ವಿಪ್ರಾ ಮುಹೂರ್ತ ಇತಿ ಕಲ್ಪಿತಃ ॥ ೯ ॥

ಮುಹೂರ್ತ ಪಂಚದಶಿಕಾ ರಜನೀ ತಾದೃಶಂ ತ್ವಹಃ ।
ಪಿತ್ರ್ಯೇ ರಾತ್ರ್ಯಹನೀ ಮಾಸಃ ಪ್ರವಿಭಾಗಸ್ತಯೋಃ ಪುನಃ ॥೧೦॥
ಕೃಷ್ಣಪಕ್ಷಸ್ತ್ವಹಸ್ತೇಷಾಂ ಶುಕ್ಲಃ ಸ್ವಪ್ನಾಯ ಶರ್ವರೀ ।
ತ್ರಿಂಶದ್ಯೇ ಮಾನುಷಾ ಮಾಸಾಃ ಪಿತ್ರ್ಯೋ ಮಾಸಸ್ತು ಸ ಸ್ಮೃತಃ॥
ಶತಾನಿ ತ್ರೀಣಿ ಮಾಸಾನಾಂ ಷಷ್ಟ್ಯಾ ಚಾಪ್ಯಧಿಕಾನಿ ವೈ ।
ಪಿತ್ರ್ಯಸ್ಸಂವತ್ಸರೋ ಹ್ಯೇಷ ಮಾನುಷೇಣ ವಿಭಾವ್ಯತೇ ॥೧೨॥
ಮಾನುಷೇಣೈವ ಮಾನೇನ ವರ್ಷಾಣಾಂ ಯಚ್ಛತಂ ಭವೇತ್ ।
ಪಿತ್ರ್ಯಾಣಾಂ ತ್ರೀಣಿ ವರ್ಷಾಣಿ ಸಂಖ್ಯಾತಾನೀಹ ತಾನಿ ವೈ ॥೧೩॥
ದಶ ವೈ ದ್ವ್ಯಧಿಕಾ ಮಾಸಾಃ ಪಿತೃಸಂಖ್ಯೇಹ ಸಂಸ್ಮೃತಾ ।
ಲೌಕಿಕೇ ನೈವ ಮಾನೇನ ಅಬ್ದೋ ಯೋ ಮಾನುಷಸ್ಸ್ಮೃತಃ ॥೧೪॥

---

ಹೆಸರಿರುವುದು. ಹದಿನೈದು ಮುಹೂರ್ತಗಳಿಗೆ ಒಂದು ರಾತ್ರಿಯೂ, ಅಷ್ಟೇಪ್ರಮಾಣದ ಕಾಲಕ್ಕೆ ಒಂದು ಹಗಲೂ ಆಗುವುದು.

೧೦–೧೧. ಮನುಷ್ಯನ ಒಂದು ತಿಂಗಳು ಪಿತೃಗಳಿಗೆ ಒಂದು ದಿನವಾಗುವುದು. ಪಿತೃಗಳಿಗೆ ಮಾನವರ ಕೃಷ್ಣಪಕ್ಷವೇ ಹಗಲು, ಶುಕ್ಲಪಕ್ಷವೇ ರಾತ್ರಿಯು. ಮನುಷ್ಯರ ಮೂವತ್ತು ತಿಂಗಳುಗಳಿಗೆ ಪಿತೃಗಳ ಒಂದು ತಿಂಗಳಾಗುವುದು.

೧೨. ಮನುಷ್ಯನ ಮುನ್ನೂರರವತ್ತು ತಿಂಗಳುಗಳಿಗೆ ಪಿತೃಗಳ ಒಂದು ವರ್ಷವಾಗುವುದು.

೧೩. ಮನುಷ್ಯರ ಕಾಲಮಾನದಿಂದ ಒಂದುನೂರು ವರ್ಷವಾದರೆ ಪಿತೃಗಳಿಗೆ ಮೂರುವರ್ಷಗಳಾಗುವುವು. ಎಂದು ಕಾಲದ ಅಳತೆಯ ಲೆಕ್ಕವನ್ನು ಮಾಡಲಾಗುತ್ತದೆ.

೧೪–೧೫. ಮನುಷ್ಯರ ಕಾಲಮಾನದಿಂದ ಹನ್ನೆರಡು ತಿಂಗಳುಗಳಾದರೆ ಅಥವಾ ಒಂದು ವರ್ಷವಾದರೆ ಅದು ದೇವತೆಗಳಿಗೆ ಒಂದು ದಿನವೆಂದು ಈ ಲಿಂಗಪುರಾಣದಲ್ಲಿ ಹೇಳಿರುವುದು. ಹಾಗೆಯೇ ದೇವಮಾನ

ಏತದ್ದಿವ್ಯ ಮಹೋರಾತ್ರ ಮಿತಿ ಲೈಂಗೇತ್ರ ಪಠ್ಯತೇ ।
ದಿವ್ಯೇ ರಾತ್ರ್ಯಹನೀ ವರ್ಷಂ ಪ್ರವಿಭಾಗಸ್ತಯೋಃ ಪುನಃ ॥೧೫॥
ಅಹಸ್ತತ್ರೋದಗಯನಂ ರಾತ್ರಿಸ್ಸ್ಯಾದ್ದಕ್ಷಿಣಾಯನಮ್ ।
ಏತೇ ರಾತ್ರ್ಯಹನೀ ದಿವ್ಯೇ ಪ್ರಸಂಖ್ಯಾತೇ ವಿಶೇಷತಃ ॥೧೬॥

ತ್ರಿಂಶದ್ಯಾನಿ ತು ವರ್ಷಾಣಿ ದಿವ್ಯೋ ಮಾಸಸ್ತು ಸ ಸ್ಮೃತಃ ।
ಮಾನುಷಂ ತು ಶತಂ ವಿಪ್ರಾ ದಿವ್ಯ ಮಾಸಾ ಸ್ತ್ರಯಸ್ತು ತೇ ॥೧೭॥

ದಶ ಚೈವ ತಥಾಽಹಾನಿ ದಿವ್ಯೋ ಹ್ಯೇಷ ವಿಧಿಃ ಸ್ಮೃತಃ ।
ತ್ರೀಣಿ ವರ್ಷ ಶತಾನ್ಯೇವ ಷಷ್ಟಿ ವರ್ಷಾಣಿ ಯಾನಿ ತು ॥೧೮॥

ದಿವ್ಯಸ್ಸಂವತ್ಸರೋ ಹ್ಯೇಷಃ ಮಾನುಷೇಣ ಪ್ರಕೀರ್ತಿತಃ ।
ತ್ರೀಣಿ ವರ್ಷಸಹಸ್ರಾಣಿ ಮಾನುಷಾಣಿ ಪ್ರಮಾಣತಃ ॥೧೯॥

ತ್ರಿಂಶದನ್ಯಾನಿ ವರ್ಷಾಣಿ ಮತಸ್ಸಪ್ತರ್ಷಿವತ್ಸರಃ ।
ನವ ಯಾನಿ ಸಹಸ್ರಾಣಿ ವರ್ಷಾಣಾಂ ಮಾನುಷಾಣಿ ತು ॥೨೦॥
ಅನ್ಯಾನಿ ನವತಿ ಶ್ಚೈವ ಧ್ರೌವ್ಯಃ ಸಂವತ್ಸರಸ್ತು ಸಃ ।

---

ದಲ್ಲಿ ಹಗಲು, ರಾತ್ರಿ, ತಿಂಗಳು, ವರ್ಷ, ಮುಂತಾದ ಕಾಲವಿಭಾಗವನ್ನು ಎಣಿಸಲಾಗಿದೆ.

೧೬-೧೭. ದೇವತೆಗಳಿಗೆ ಮಾನವ ಮಾನದ ಉತ್ತರಾಯಣವು ಒಂದು ಹಗಲು, ಹಾಗೆಯೇ ದಕ್ಷಿಣಾಯನವು ಒಂದು ರಾತ್ರಿಯು. ಮನುಷ್ಯರ ಮೂವತ್ತು ವರ್ಷಗಳಾದರೆ ದೇವತೆಗಳಿಗೆ ಒಂದು ತಿಂಗಳು. ಮನುಷ್ಯರ ಒಂದು ನೂರುವರ್ಷಗಳಿಗೆ ದೇವತೆಗಳ ಮೂರುತಿಂಗಳು ಹತ್ತು ದಿನಗಳಾಗುವುವು.

೧೮. ಮನುಷ್ಯರ ಕಾಲಮಾನದಿಂದ ಮುನ್ನೂರರವತ್ತು ವರ್ಷಗಳಾದರೆ ಅದು ದೇವತೆಗಳಿಗೆ ಒಂದು ವರ್ಷವಾಗುವುದು.

೧೯. ಮನುಷ್ಯರ ಕಾಲಮಾನದ ಮೂರು ಸಾವಿರದ ಮೂವತ್ತು ವರ್ಷಗಳಿಗೆ ಒಂದು ಸಪ್ತರ್ಷಿ ವರ್ಷವಾಗುವುದು.

೨೦. ಹೀಗೆಯೇ ಒಂಬತ್ತು ಸಾವಿರದ ತೊಂಬತ್ತು ವರ್ಷಗಳಿಗೆ ಒಂದು ಧ್ರುವ ಸಂವತ್ಸರವಾಗುವುದು.

ಷಟ್ತ್ರಿಂಶತ್ತು ಸಹಸ್ರಾಣಿ ವರ್ಷಾಣಾಂ ಮಾನುಷಾಣಿ ತು ॥೨೧॥
ವರ್ಷಾಣಾಂ ತಚ್ಛತಂ ಜ್ಞೇಯಂ ದಿವ್ಯೋ ಹ್ಯೇಷ ವಿಧಿಃ ಸ್ಮೃತಃ ।
ತ್ರೀಣ್ಯೇವ ನಿಯುತಾ ನ್ಯಾಹುಃ ವರ್ಷಾಣಾಂ ಮಾನುಷಾಣಿ ತು॥೨೨॥
ಷಷ್ಟಿಶ್ಚೈವ ಸಹಸ್ರಾಣಿ ಸಂಖ್ಯಾತಾನಿ ತು ಸಂಖ್ಯಯಾ ।
ದಿವ್ಯವರ್ಷ ಸಹಸ್ರಂ ತು ಪ್ರಾಹುಸ್ಸಂಖ್ಯಾವಿದೋ ಜನಾಃ ॥೨೩॥
ದಿವ್ಯೇನೈವ ಪ್ರಮಾಣೇನ ಯುಗಸಂಖ್ಯಾ ಪ್ರಕಲ್ಪನಂ ।
ಪೂರ್ವಂ ಕೃತಯುಗಂ ನಾಮ ತತಸ್ತ್ರೇತಾ ವಿಧೀಯತೇ ॥೨೪॥
ದ್ವಾಪರಶ್ಚ ಕಲಿಶ್ಚೈವ ಯುಗಾನ್ಯೇತಾನಿ ಸುವ್ರತಾಃ ।
ಅಥ ಸಂವತ್ಸರಾ ದೃಷ್ಟಾ ಮಾನುಷೇಣ ಪ್ರಮಾಣತಃ ॥೨೫॥
ಕೃತಸ್ಯಾದ್ಯಸ್ಯ ವಿಪ್ರೇಂದ್ರಾ ದಿವ್ಯಮಾನೇನ ಕೀರ್ತಿತಂ ।
ಸಹಸ್ರಾಣಾಂ ಶತಾನ್ಯಾಸಂಶ್ಚತುರ್ದಶ ಚ ಸಂಖ್ಯಯಾ ॥೨೬॥
ಚತ್ವಾರಿಂಶತ್ಸಹಸ್ರಾಣಿ ತಥಾಽನ್ಯಾನಿ ಕೃತಂ ಯುಗಂ ।

---

೨೧. ಮೂವತ್ತಾರುಸಾವಿರ ಮಾನುಷ ವರ್ಷಗಳಿಗೆ ಒಂದು ನೂರು ದೇವ ವರ್ಷಗಳಾಗುವುವು. ಎಂದು ಜ್ಯೋತಿಷ ಶಾಸ್ತ್ರದಲ್ಲಿ ಪರಿಗಣನೆಯನ್ನು ಮಾಡಲಾಗಿದೆ.

೨೨–೨೩. ಮೂರು ಲಕ್ಷದ ಅರವತ್ತುಸಾವಿರ ಮಾನುಷ ವರ್ಷಗಳಿಗೆ ಒಂದು ಸಾವಿರ ದಿವ್ಯವರ್ಷಗಳಾಗುವುವೆಂದು ಲೆಕ್ಕವನ್ನು ಬಲ್ಲ ಗಣಿತಶಾಸ್ತ್ರ ಪಂಡಿತರು ಹೇಳುವರು.

೨೪. ನಿಯಮಗಳನ್ನು ಪಾಲಿಸುವ ಋಷಿಗಳೇ, ಹಿಂದೆ ಹೇಳಿದ ಕೃತ, ತ್ರೇತಾ, ದ್ವಾಪರ, ಕಲಿ, ಎಂಬ ಮಾನವ ಮಾನದ ಯುಗಗಳು ದೇವಮಾನದಲ್ಲಿ ಕ್ರಮವಾಗಿ ನಾಲ್ಕು, ಮೂರು, ಎರಡು, ಒಂದು, ಸಾವಿರ ವರ್ಷಗಳಾಗಿರುವುವು.

೨೫–೨೬ ಇಲ್ಲಿಂದ ಮುಂದೆ ಮಾನುಷ ವರ್ಷ ಪ್ರಮಾಣದಿಂದ ಯುಗಗಳ ವರ್ಷಗಳನ್ನು ಹೇಳಲಾಗುವುದು. ಮೊದಲನೆಯದಾದ ಕೃತ ಯುಗಕ್ಕೆ ಹದಿನಾಲ್ಕುಲಕ್ಷ ನಲವತ್ತುಸಾವಿರ ಮಾನುಷವರ್ಷಗಳು. ೧೪,೪೦,೦೦೦.

ತಥಾ ದಶಸಹಸ್ರಾಣಾಂ ವರ್ಷಾಣಾಂ ಶತಸಂಖ್ಯಯಾ ॥೨೭॥
ಅಶೀತಿಶ್ಚ ಸಹಸ್ರಾಣಿ ಕಾಲಸ್ತ್ರೇತಾಯುಗಸ್ಯ ಚ ।
ಸಪ್ತೈವ ನಿಯುತಾನ್ಯಾಹುಃ ವರ್ಷಾಣಾಂ ಮಾನುಷಾಣಿ ತು ॥೨೮॥
ವಿಂಶತಿಶ್ಚ ಸಹಸ್ರಾಣಿ ಕಾಲಸ್ತು ದ್ವಾಪರಸ್ಯ ಚ ।
ತಥಾ ಶತಸಹಸ್ರಾಣಿ ವರ್ಷಾಣಾಂ ತ್ರೀಣಿ ಸಂಖ್ಯಯಾ ॥೨೯॥
ಷಷ್ಟಿಶ್ಚೈವ ಸಹಸ್ರಾಣಿ ಕಾಲಃ ಕಲಿಯುಗಸ್ಯ ತು ।
ಏವಂ ಚತುರ್ಯುಗಃ ಕಾಲಃ ಋತೇ ಸಂಧ್ಯಾಂಶಕಾತ್ಸ್ಮೃತಃ ॥೩೦॥
ನಿಯುತಾನ್ಯೇವ ಷಟ್ತ್ರಿಂಶನ್ನಿರಂಶಾನಿ ತು ತಾನಿ ವೈ ।
ಚತ್ವಾರಿಂಶತ್ತಥಾ ತ್ರೀಣಿ ನಿಯುತಾನೀಹ ಸಂಖ್ಯಯಾ ॥೩೧॥
ವಿಂಶತಿಶ್ಚ ಸಹಸ್ರಾಣಿ ಸಂಧ್ಯಾಂಶಶ್ಚ ಚತುರ್ಯುಗಃ ।
ಏವಂ ಚತುರ್ಯುಗಾಖ್ಯಾನಾಂ ಸಾಧಿಕಾ ಹ್ಯೇಕಸಪ್ತತಿಃ ॥೩೨॥
ಕೃತತ್ರೇತಾದಿಯುಕ್ತಾನಾಂ ಮನೋರಂತರಮುಚ್ಯತೇ ।
ಮನ್ವಂತರಸ್ಯ ಸಂಖ್ಯಾ ಚ ವರ್ಷಾಗ್ರೇಣ ಪ್ರಕೀರ್ತಿತಾ ॥೩೩॥

---

೨೭–೨೮. ತ್ರೇತಾಯುಗಕ್ಕೆ ಹತ್ತುಲಕ್ಷದ ಎಂಬತ್ತುಸಾವಿರ ಮಾನುಷ ವರ್ಷಗಳು ೧೦,೮೦,೦೦೦. ದ್ವಾಪರಯುಗಕ್ಕೆ ಏಳುಲಕ್ಷದ ಇಪ್ಪತ್ತುಸಾವಿರ ವರ್ಷಗಳು ೭,೨೦,೦೦೦.

೨೯–೩೦. ಕಲಿಯುಗಕ್ಕೆ ಮೂರುಲಕ್ಷದ ಅರವತ್ತುಸಾವಿರ ವರ್ಷಗಳು. ೩,೬೦,೦೦೦. ಈ ರೀತಿಯಲ್ಲಿ ಸಂಧಿಕಾಲವನ್ನು ಬಿಟ್ಟು ಚತುರ್ಯುಗ ಪ್ರಮಾಣವು ಮೂವತ್ತಾರು ಲಕ್ಷವರ್ಷಗಳು.

೩೧. ಸಂಧಿಕಾಲವೂ ಸೇರಿದರೆ ನಾಲ್ಕುಯುಗಗಳಿಗೂ ನಲವತ್ತು ಮೂರುಲಕ್ಷದ ಇಪ್ಪತ್ತುಸಾವಿರ ಮಾನುಷ ವರ್ಷಗಳಾಗುವುವು. ೪೩,೨೦,೦೦೦.

೩೨–೩೩. ಈ ರೀತಿಯಲ್ಲಿ ಕೃತ ತ್ರೇತಾದಿ ಚತುರ್ಯುಗಗಳು ಸ್ವಲ್ಪ ಹೆಚ್ಚಾಗಿ ಎಪ್ಪತ್ತೊಂದು ಚತುರ್ಯುಗಗಳಾದರೆ ಒಂದು ಮನ್ವಂತರ ಕಾಲವಾಗುವುದು. ಮನ್ವಂತರಕ್ಕೆ ಇಷ್ಟೇ ವರ್ಷಗಳೆಂದು ಮುಂದೆ ಹೇಳಿರುವುದು.

ತ್ರಿಂಶತ್ಕೋಟ್ಯಸ್ತು ವರ್ಷಾಣಾಂ ಮಾನುಷೇಣ ದ್ವಿಜೋತ್ತಮಾಃ ।
ಸಪ್ತಷಷ್ಟಿಸ್ತಥಾಽನ್ಯಾನಿ ನಿಯುತಾನ್ಯಧಿಕಾನಿ ತು ॥೩೪॥

ವಿಂಶತಿಶ್ಚ ಸಹಸ್ರಾಣಿ ಕಾಲೋಽಯಮಧಿಕಂ ವಿನಾ ।
ಮನ್ವಂತರಸ್ಯ ಸಂಖ್ಯೈಷಾ ಲೈಂಗೇಽಸ್ಮಿನ್ಕೀರ್ತಿತಾ ದ್ವಿಜಾಃ ॥೩೫॥

ಚತುರ್ಯುಗಸ್ಯ ಚ ತಥಾ ವರ್ಷಸಂಖ್ಯಾ ಪ್ರಕೀರ್ತಿತಾ ।
ಚತುರ್ಯುಗಸಹಸ್ರಂ ವೈ ಕಲ್ಪಶ್ಚೈಕೋ ದ್ವಿಜೋತ್ತಮಾಃ ॥೩೬॥

ನಿಶಾಂತೇ ಸೃಜತೇ ಲೋಕಾನ್ನಶ್ಯಂತೇ ನಿಶಿ ಜಂತವಃ ।
ತತ್ರ ವೈಮಾನಿಕಾನಾಂ ತು ಅಷ್ಟಾವಿಂಶತಿಕೋಟಯಃ ॥೩೭॥

ಮನ್ವಂತರೇಷು ವೈ ಸಂಖ್ಯಾ ಸಾಂತರೇಷು ಯಥಾತಥಾ ।
ತ್ರೀಣಿ ಕೋಟಿಶತಾನ್ಯಾಸನ್ಕೋಟ್ಯೋ ದ್ವಿನವತಿಸ್ತಥಾ ॥೩೮॥

---

೩೪–೩೫. ಮಾನುಷವರ್ಷ ಪ್ರಮಾಣದಲ್ಲಿ ಮೂವತ್ತು ಕೋಟಿ ಅರವತ್ತೇಳುಲಕ್ಷದ ಇಪ್ಪತ್ತುಸಾವಿರ ವರ್ಷಗಳು ಒಂದು ಮನ್ವಂತರಕ್ಕೆ ಆಗುವುವು. ಇದರಲ್ಲಿ ಒಂದು ಮನ್ವಂತರಕ್ಕೆ ಬರುವ ಹೆಚ್ಚು ಭಾಗವು ಸೇರಿಲ್ಲ. ಈ ಲಿಂಗಪುರಾಣದಲ್ಲಿ ಈ ರೀತಿಯಲ್ಲಿ ಹೇಳಿರುವುದು. ಜ್ಯೋತಿಶ್ಶಾಸ್ತ್ರದಲ್ಲಿ ಮೊದಲಿನಲ್ಲಿಯೂ ಕಡೆಯಲ್ಲಿಯೂ ಯುಗ ಸಂಧಿಕಾಲಗಳನ್ನು ಸೇರಿಸಿದರೆ ಚತುರ್ಯುಗಗಳ ಪ್ರಮಾಣವು ನಲವತ್ತುಮೂರುಲಕ್ಷದ ಇಪ್ಪತ್ತುಸಾವಿರ ವರ್ಷಗಳಾಗುವುವು. ಎಂದು ಎಣಿಕೆಯನ್ನು ಮಾಡಿ ಗೊತ್ತುಪಡಿಸಿದೆ.

೩೬. ಹೀಗೆ ಚತುರ್ಯುಗಗಳಿಗೆ ವರ್ಷಸಂಖ್ಯೆಯನ್ನು ಹೇಳಿಯಾಯಿತು. ಇಂತಹ ಚತುರ್ಯುಗಗಳು ಒಂದು ಸಾವಿರವಾದರೆ ಒಂದು ಕಲ್ಪವಾಗುವುದು.

೩೭–೩೮. ಬ್ರಹ್ಮನು ಒಂದುಸಾವಿರ ಚತುರ್ಯುಗಗಳ ರಾತ್ರಿಯು ಕಳೆಯುತ್ತಲು ಸೃಷ್ಟಿಯನ್ನು ಮಾಡುವನು. ರಾತ್ರಿಯಲ್ಲಿ ಪ್ರಾಣಿಗಳೆಲ್ಲವೂ ಲಯವಾಗುವುವು. ದೇವತೆಗಳ ಇಪ್ಪತ್ತೆಂಟು ಕೋಟಿ ವರ್ಷಗಳಿಗೆ ಒಂದು ಮನ್ವಂತರವಾಗುವುದು. ಒಂದು ಕಲ್ಪಕ್ಕೆ ಅಂದರೆ ಹದಿನಾಲ್ಕು ಮನ್ವಂತರಗಳಿಗೆ ಮುನ್ನೂರ ತೊಂಬತ್ತೆರಡು ಕೋಟಿ ದೇವಮಾನದ ವರ್ಷಗಳಾಗುವುವು.

ಕಲ್ಪೇऽತೀತೇ ತು ವೈ ವಿಪ್ರಾಃ ಸಹಸ್ರಾಣಾಂ ತು ಸಪ್ತತಿಃ ।
ಪುನಸ್ತಥಾऽಷ್ಟಸಾಹಸ್ರಂ ಸರ್ವತ್ರೈವ ಸಮಾಸತಃ ॥೩೯॥
ಕಲ್ಪಾವಸಾನಿಕಾಂಸ್ತ್ಯಕ್ತ್ವಾ ಪ್ರಲಯೇ ಸಮುಪಸ್ಥಿತೇ ।
ಮಹರ್ಲೋಕಾತ್ಪ್ರಯಾಂತ್ಯೇತೇ ಜನಲೋಕಂ ಜನಾಸ್ತತಃ ॥೪೦॥

ಕೋಟೀನಾಂ ದ್ವೇ ಸಹಸ್ರೇ ತು ಅಷ್ಟೌ ಕೋಟಿಶತಾನಿ ತು ।
ದ್ವಿಷಷ್ಟಿಶ್ಚ ತಥಾ ಕೋಟ್ಯೋ ನಿಯುತಾನಿ ಚ ಸಪ್ತತಿಃ ॥೪೧॥
ಕಲ್ಪಾರ್ಧಸಂಖ್ಯಾ ದಿವ್ಯಾ ವೈ ಕಲ್ಪಮೇವಂ ತು ಕಲ್ಪಯೇತ್ ।
ಕಲ್ಪಾನಾಂ ವೈ ಸಹಸ್ರಂ ತು ವರ್ಷಮೇಕಮಜಸ್ಯ ತು ॥೪೨॥

ವರ್ಷಾಣಾಮಷ್ಟಸಾಹಸ್ರಂ ಬ್ರಾಹ್ಮಂ ವೈ ಬ್ರಹ್ಮಣೋ ಯುಗಂ ।
ಸವನಂ ಯುಗಸಾಹಸ್ರಂ ಸರ್ವದೇವೋದ್ಭವಸ್ಯ ತು ॥೪೩॥

ಸವನಾನಾಂ ಸಹಸ್ರಂ ತು ತ್ರಿವಿಧಂ ತ್ರಿಗುಣಂ ತಥಾ ।
ಬ್ರಹ್ಮಣಸ್ತು ತಥಾ ಪ್ರೋಕ್ತಃ ಕಾಲಃ ಕಾಲಾತ್ಮನಃ ಪ್ರಭೋಃ ॥೪೪॥

---

೩೯–೪೦. ಒಂದು ಕಲ್ಪವು ಕಳೆಯುತ್ತಿರಲಾಗಿ ಆ ಕಲ್ಪದಕೊನೆಯಲ್ಲಿ ಪ್ರಳಯವು ಉಂಟಾಗುತ್ತಿರಲು, ಸಮಸ್ತ ಜೀವರುಗಳೂ ಭೂಮಿಯೇ ಮೊದಲಾದ ಮೂರು ಲೋಕಗಳನ್ನೂ ಮಹರ್ಲೋಕವನ್ನೂ ಬಿಟ್ಟು ಜನಲೋಕಕ್ಕೆ ಹೋಗುವರು. ವಿಷ್ಣುಪುರಾಣದಲ್ಲಿ "ತದಾ ಹಿ ದಹ್ಯತೇ ಸರ್ವಂ ತ್ರೈಲೋಕ್ಯಂ ಭೂರ್ಭುವಾದಿಕಂ ॥ ಜನಂ ಪ್ರಯಾಂತಿ ತಾಪಾರ್ತಾ ಮಹರ್ಲೋಕನಿವಾಸಿನಃ" ಎಂದು ಹೇಳಿರುವುದು.

೪೧. ಅರ್ಧಕಲ್ಪಕ್ಕೆ ಎರಡು ಸಾವಿರದ ಎಂಟುನೂರ ಅರವತ್ತೆರಡು ಕೋಟಿ ಎಪ್ಪತ್ತು ಲಕ್ಷ ದೇವಮಾನ ವರ್ಷಗಳೆಂದು ಒಂದು ಲೆಕ್ಕವಿರುವುದು. ಈ ಲೆಕ್ಕದಂತೆ ಒಂದು ಕಲ್ಪಕ್ಕೆ ಆಗುವ ವರ್ಷಗಳನ್ನು ಗೊತ್ತು ಮಾಡಬಹುದು.

೪೨–೪೩. ಸಾವಿರಕಲ್ಪಗಳಾದರೆ ಬ್ರಹ್ಮನಿಗೆ ಒಂದು ವರ್ಷವಾಗುವುದು. ಎಂಟುಸಾವಿರ ವರ್ಷಗಳಿಗೆ ಒಂದು ಬ್ರಹ್ಮಯುಗವು. ಬ್ರಹ್ಮನ ಸಾವಿರ ಯುಗಗಳಿಗೆ ವಿಷ್ಣುವಿಗೆ ಸವನವೆಂಬ ಒಂದು ದಿನವಾಗುವುದು.

೪೪. ವಿಷ್ಣುವಿನ ಸವನವೆಂಬ ಸಾವಿರ ದಿನಗಳ ಮೂರರ ಮೂರರಷ್ಟು ಎಂದರೆ ಒಂಬತ್ತು ಸಾವಿರ ದಿನಗಳಿಗೆ ರುದ್ರನಿಗೆ ಒಂದು ದಿನವಾಗು

ಭವೋದ್ಭವಸ್ತಪಶ್ಚೈವ ಭವ್ಯೋ ರಂಭಃ ಕ್ರತುಃ ಪುನಃ ।
ಋತುರ್ವಹ್ನಿರ್ಹವ್ಯವಾಹಃ ಸಾವಿತ್ರಶ್ಶುದ್ಧ ಏವ ಚ ॥೪೫॥
ಉಶಿಕಃ ಕುಶಿಕಶ್ಚೈವ ಗಾಂಧಾರೋ ಮುನಿಸತ್ತಮಾಃ ।
ಋಷಭಶ್ಚ ತಥಾ ಷಡ್ಜೋ ಮಜ್ಜಾಲೀಯಶ್ಚ ಮಧ್ಯಮಃ ॥೪೬॥
ವೈರಾಜೋ ವೈ ನಿಷಾದಶ್ಚ ಮುಖ್ಯೋ ವೈ ಮೇಘವಾಹನಃ ।
ಪಂಚಮಶ್ಚಿತ್ರಕಶ್ಚೈವ ಆಕೂತಿರ್ಜ್ಞಾನ ಏವ ಚ ॥೪೭॥
ಮನಸ್ಸುದರ್ಶೋ ಬೃಂಹಶ್ಚ ತಥಾ ವೈ ಶ್ವೇತಲೋಹಿತಃ ।
ರಕ್ತಶ್ಚ ಪೀತವಾಸಾಶ್ಚ ಅಸಿತಃ ಸರ್ವರೂಪಕಃ ॥೪೮॥
ಏವಂ ಕಲ್ಪಾಸ್ತು ಸಂಖ್ಯಾತಾ ಬ್ರಹ್ಮಣೋಽವ್ಯಕ್ತಜನ್ಮನಃ ।
ಕೋಟಿಕೋಟಿಸಹಸ್ರಾಣಿ ಕಲ್ಪಾನಾಂ ಮುನಿಸತ್ತಮಾಃ ॥೪೯॥
ಗತಾನಿ ತಾವಚ್ಛೇಷಾಣಿ ಅಹರ್ನಿಶ್ಯಾನಿ ವೈ ಪುನಃ ।
ಪರಾಂತೇ ವೈ ವಿಕಾರಾಣಿ ವಿಕಾರಂ ಯಾತಿ ವಿಶ್ವತಃ ॥೫೦॥

---

ವುದು. ಅಥವಾ 'ಕಾಲಃ' ಎಂದರೆ ನಿಮೇಷರೂಪವಾದ ಕಾಲವೆಂದು ಹೇಳಬಹುದು.

೪೫–೪೮. ಭವೋದ್ಭವ, ತಪ, ಭವ್ಯ, ರಂಭ, ಕ್ರತು, ಋತು, ವಹ್ನಿ, ಹವ್ಯವಾಹ, ಸಾವಿತ್ರ, ಶುದ್ಧ, ಉಶಿಕ, ಕುಶಿಕ, ಗಾಂಧಾರ, ಋಷಭ, ಷಡ್ಜ, ಮಜ್ಜಾಲೀಯ, ಮಧ್ಯಮ, ವೈರಾಜ, ನಿಷಾದ, ಮುಖ್ಯ, ಮೇಘವಾಹನ, ಪಂಚಮ, ಚಿತ್ರಕ, ಆಕೂತಿ, ಜ್ಞಾನ, ಮನ, ಸುದರ್ಶ, ಬೃಂಹ, ಶ್ವೇತಲೋಹಿತ, ರಕ್ತ, ಪೀತವಾಸ, ಅಸಿತ, ಸರ್ವರೂಪಕ, ಎಂಬ ಕಲ್ಪಗಳು ಪ್ರಕೃತಿಯಿಂದ ಉತ್ಪನ್ನನಾದ ಬ್ರಹ್ಮನ ಎಂದರೆ ರುದ್ರನ ಒಂದು ದಿನದಲ್ಲಿ ಕಳೆದು ಹೋಗುವುವು.

೪೯–೫೦. ಮುನಿಗಳೇ ಕೇಳಿರಿ! ಅನೇಕ ಕೋಟಿ ಕಲ್ಪಗಳು ಕಳೆದು ಹೋದುವು. ಇನ್ನೂ ಹಗಲು ರಾತ್ರಿಗಳು ಮುಂದೆ ಎಷ್ಟೋ ಬರುವುವು. ಆದರೆ ಪರಾಂತವೆಂದರೆ ಮಹಾಪ್ರಳಯದಲ್ಲಿ ಸೃಷ್ಟಿಸಿದ ಈ ಪ್ರಪಂಚವೆಲ್ಲವೂ ನಾಶವನ್ನು ಹೊಂದುವಕಾಲವು.

**ವಿಕಾರಸ್ಯ ಶಿವಸ್ಯಾಜ್ಞಾ ವಶೇನೈವ ತು ಸಂಹೃತಿಃ ।**
**ಸಂಹೃತೇ ತು ವಿಕಾರೇ ಚ ಪ್ರಧಾನೇ ಚಾತ್ಮನಿ ಸ್ಥಿರೇ ॥೫೧॥**
**ಸಾಧರ್ಮ್ಯೇಣಾ ವತಿಷ್ಠೇತೇ ಪ್ರಧಾನ ಪುರುಷಾವುಭೌ ।**
**ಗುಣಾನಾಂ ಚೈವ ವೈಷಮ್ಯೇ ವಿಪ್ರಾ ಸ್ಸೃಷ್ಟಿರಿತಿ ಸ್ಮೃತಾ ॥೫೨॥**
**ಸಾಮ್ಯೇ ಲಯೋ ಗುಣಾನಾಂ ತು ತಯೋರ್ಹೇ ತು ರ್ಮಹೇಶ್ವರಃ ।**
**ಲೀಲಯಾ ದೇವದೇವೇನ ಸರ್ಗಾಸ್ತ್ವೀದೃಗ್ವಿಧಾಃ ಕೃತಾಃ ॥೫೩॥**
**ಅಸಂಖ್ಯಾತಾಶ್ಚ ಸಂಕ್ಷೇಪಾತ್ಪ್ರಧಾನಾದನ್ಯ ಧಿಷ್ಠಿತಾತ್ ।**
**ಅಸಂಖ್ಯಾತಾಶ್ಚ ಕಲ್ಪಾಖ್ಯಾ ಹ್ಯಸಂ ಖ್ಯಾಕಾಃ ಪಿತಾಮಹಾಃ ॥೫೪॥**
**ಹರಯಶ್ಚಾ ಪ್ಯಸಂಖ್ಯಾತಾಸ್ತ್ವೇಕ ಏವ ಮಹೇಶ್ವರಃ ।**
**ಪ್ರಧಾನಾದಿ ಪ್ರವೃತ್ತಾನಿ ಲೀಲಯಾ ಪ್ರಾಕೃತಾನಿ ತು ॥೫೫॥**
**ಗುಣಾತ್ಮಿಕಾ ಚ ತದ್ವೃತ್ತಿಸ್ತಸ್ಯದೇವಸ್ಯ ವೈ ತ್ರಿಧಾ ।**

---

೫೧. ಸೃಷ್ಟಿಸಿದ ಪ್ರಪಂಚಕ್ಕೆ ಶಿವನ ಅಪ್ಪಣೆಯಿಂದಲೇ ಸಂಹಾರವು ಉಂಟಾಗುವುದು. ಪ್ರಪಂಚವು ನಾಶವಾಗುತ್ತಲು ಪ್ರಕೃತಿಯು ಆತ್ಮನಲ್ಲಿ ಅಡಗಿಹೋಗುವುದು. ಆಗ ಪ್ರಕೃತಿ ಪುರುಷರಿಬ್ಬರೂ ಒಂದೇ ರೂಪದಿಂದಿರುವರು.

೫೨. ಎಲೈ ಋಷಿಗಳೇ, ಸತ್ವರಜಸ್ತಮೋಗುಣಗಳ ವಿಷಮಾವಸ್ಥೆಯಲ್ಲಿಯೇ ಸೃಷ್ಟಿಕಾರ್ಯವು ನಡೆಯುವುದು. ಆ ಗುಣಗಳ ಸಾಮ್ಯಾವಸ್ಥೆಯೇ ಲಯವೆನಿಸುವುದು. ಈ ಸೃಷ್ಟಿಲಯಗಳಿಗೆ ಕಾರಣನು ಮಹೇಶ್ವರನು.

೫೩–೫೪. ದೇವತೆಗಳಿಗೆಲ್ಲರಿಗೂ ದೇವನಾದ ಮಹೇಶ್ವರನು ಲೀಲೆಯಿಂದ ಈ ಸೃಷ್ಟಿಯನ್ನು ಪ್ರಕೃತಿಯನ್ನು ಅನುಸರಿಸಿಮಾಡಿರುವನು. ಲೆಕ್ಕವಿಲ್ಲದಷ್ಟು ಕಲ್ಪಗಳೂ ಲೆಕ್ಕವಿಲ್ಲದಷ್ಟು ಬ್ರಹ್ಮರುಗಳೂ, ಹಾಗೆಯೇ ಅನೇಕ ವಿಷ್ಣುಗಳೂ, ಆಗಿಹೋದರು. ಮಹೇಶ್ವರನು ಮಾತ್ರ ಒಬ್ಬನೇ ಇರುವನು.

೫೫. ಆ ಮಹೇಶ್ವರನ ಲೀಲೆಯಿಂದಲೇ ಪ್ರಕೃತಿಶಕ್ತಿಯು ತ್ರಿಗುಣಾತ್ಮಕವಾಗಿ ಕಾರ್ಯ ಪ್ರವೃತ್ತವಾಗುವುದು. ಗುಣಗಳಿದ್ದರೆ ಪ್ರಕೃತಿ ಇರುವುದು. ಇಲ್ಲದಿದ್ದರೆ ಇಲ್ಲ.

**ಅಪ್ರಾಕೃತಸ್ಯ ತಸ್ಯಾದಿರ್ಮಧ್ಯಾನ್ತ್ನಾಸ್ತಿ ಚಾತ್ಮನಃ ॥೫೬॥**
**ಪಿತಾಮಹಸ್ಯಾಥ ಪರಃ ಪರಾರ್ಧದ್ವಯ ಸಂಮಿತಃ ।**
**ದಿವಾಸೃಷ್ಟಂ ತು ಯತ್ಸರ್ವಂ ನಿಶಿ ನಶ್ಯತಿ ಚಾಸ್ಯ ತತ್ ॥೫೭॥**
**ಭೂರ್ಭುವ ಸ್ಸ್ವರ್ಮಹಸ್ತತ್ರ ನಶ್ಯತೇ ಚೋರ್ಧ್ವತೋ ನ ಚ ।**
**ರಾತ್ರೌ ಚೈಕಾರ್ಣವೇ ಬ್ರಹ್ಮಾನಷ್ಟೇ ಸ್ಥಾವರ ಜಂಗಮೇ ॥೫೮॥**
**ಸುಷ್ವಾಪಾಂಭಸಿ ಯಸ್ತಸ್ಮಾನ್ನಾರಾಯಣ ಇತಿ ಸ್ಮೃತಃ ।**
**ಶರ್ವರ್ಯಂತೇ ಪ್ರಬುದ್ಧೋ ವೈ ದೃಷ್ಟ್ವಾ ಶೂನ್ಯಂ ಚರಾಚರಂ ॥**
**ಸ್ರಷ್ಟುಂ ತದಾ ಮತಿಂ ಚಕ್ರೇ ಬ್ರಹ್ಮಾ ಬ್ರಹ್ಮವಿದಾಂ ವರಃ ।**

---

೫೬. ಪ್ರಕೃತಿ ಸಂಬಂಧವಿಲ್ಲದ ಆತ್ಮನಿಗೆ ಆದಿಯೂ ಮಧ್ಯವೂ ಅಂತ್ಯವೂ ಇರುವುದಿಲ್ಲ ಎಂದರೆ ಆತ್ಮನು ಸರ್ವವ್ಯಾಪಿಯಾಗಿ ಅಖಂಡ ವಾಗಿರುವನು.

೫೭. ಪರಾರ್ಧದ್ವಯ ಕಾಲದವರೆಗೆ ಜೀವಿಸಿರುವ ಬಹ್ಮನು ಹಗಲಿನಲ್ಲಿ ಸೃಷ್ಟಿಮಾಡಿದುವುಗಳೆಲ್ಲವೂ ಅವನ ರಾತ್ರಿಯಲ್ಲಿ ನಾಶವನ್ನು ಹೊಂದಿರುವುವು.

೫೮. ಬ್ರಹ್ಮನ ರಾತ್ರಿಯಲ್ಲಿ, ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹರ್ಲೋಕ, ಎಂಬ ನಾಲ್ಕು ಲೋಕಗಳು ನಾಶಹೊಂದುವುವು. ಇವುಗಳಿಗಿಂತ ಮೇಲಿನ ಲೋಕಗಳು ನಾಶಹೊಂದುವುದಿಲ್ಲ. ಅವನ ರಾತ್ರಿಯಲ್ಲಿ ಚರಾಚರ ಪ್ರಾಣಿಗಳೆಲ್ಲ ನಾಶವಾಗಿ ನೀರಿನಲ್ಲಿ ಮುಳುಗಿರಲು, ಆ ದೊಡ್ಡ ಸಮುದ್ರದಲ್ಲಿರುವ ನೀರಿನಲ್ಲಿ ಬ್ರಹ್ಮನು ಮಲಗಿ ನಿದ್ರಿಸುವನು. ಆದುದರಿಂದಲೇ ಅವನಿಗೆ ನಾರಾಯಣನೆಂದು ಹೆಸರು ಬಂದಿರುವುದು. ವಿಷ್ಣುಪುರಾಣದಲ್ಲಿ.

**ಇಮಂ ಚೋದಾಹರಂ ತ್ಯತ್ರ ಶ್ಲೋಕಂ ನಾರಾಯಣಂ ಪ್ರತಿ ।**
**ಬ್ರಹ್ಮಸ್ವರೂಪಿಣಂ ದೇವಂ ಜಗತಃ ಪ್ರಭವಾಪ್ಯಯಂ ॥**
**ಆಪೋ ನಾರಾ ಇತಿ ಪ್ರೋಕ್ತಾ ಆಪೋ ವೈ ನರ ಸೂನವಃ ।**
**ಅಯನಂ ತಸ್ಯ ತಾಃ ಪೂರ್ವಂ ತೇನ ನಾರಾಯಣ ಸ್ಸ್ಮೃತಃ ॥**

ಎಂದು ಹೇಳಿರುವುದು.

೫೯. ಬ್ರಹ್ಮಜ್ಞಾನಿಗಳಲ್ಲಿ ಶ್ರೇಷ್ಠನಾದ ಬ್ರಹ್ಮನು ತನ್ನ ರಾತ್ರಿ ಪ್ರಮಾಣವು ಕಳೆದ ಮೇಲೆ ಯೋಗನಿದ್ರೆಯಿಂದ ಎಚ್ಚರಗೊಂಡು ಚರಾ

ಉದಕೈರಾಪ್ಲುತಾಂ ಕ್ಷ್ಮಾಂ ತಾಂ ಸಮಾದಾಯ ಸನಾತನಃ ॥೬೦॥
ಪೂರ್ವವತ್ಸ್ಥಾಪಯಾಮಾಸ ವಾರಾಹಂ ರೂಪ ಮಾಸ್ಥಿತಃ ।
ನದೀನದ ಸಮುದ್ರಾಂಶ್ಚ ಪೂರ್ವ ವಚ್ಚಾಕರೋತ್ಪ್ರಭುಃ ॥೬೧॥
ಕೃತ್ವಾ ಧರಾಂ ಪ್ರಯತ್ನೇನ ನಿಮ್ನೋನ್ನತಿ ವಿವರ್ಜಿತಾಂ ।
ಧರಾಯಾಂ ಸೋಽಚಿನೋತ್ಸರ್ವಾನ್ಗಿರೀನ್ದಗ್ಧಾನ್ಪುರಾಽಗ್ನಿನಾ ॥
ಭೂರಾದ್ಯಾಂಶ್ಚತುರೋ ಲೋಕಾನ್ಕಲ್ಪಯಾಮಾಸ ಪೂರ್ವವತ್ ।
ಸೃಷ್ಟಿಂ ಚ ಭಗವಾಂಶ್ಚಕ್ರೇ ತದಾಸ್ರಷ್ಟಾ ಪುನರ್ಮತಿಂ ॥೬೩॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಸೃಷ್ಟಿಪ್ರಾರಂಭ
ವರ್ಣನಂ ನಾಮ ಚತುರ್ಥೋಽಧ್ಯಾಯಃ

---

ಚರಪ್ರಪಂಚವು ಇಲ್ಲದಿರುವುದನ್ನು ಕಂಡು ಸೃಷ್ಟಿಮಾಡಬೇಕೆಂದು ಮನಸ್ಸು ಮಾಡಿದನು.

೬೦. ಆ ಬ್ರಹ್ಮನು ವರಾಹಾವತಾರವನ್ನು ಮಾಡಿ ನೀರಿನಲ್ಲಿ ಮುಳುಗಿದ್ದ ಭೂಮಿಯನ್ನು ತೆಗೆದುಕೊಂಡು ಬಂದು ಮೊದಲಿನಂತೆ ಅದರ ಸ್ಥಳದಲ್ಲಿ ಸ್ಥಾಪಿಸಿದನು.

೬೧–೬೨. ಆ ಬ್ರಹ್ಮನು ಹಿಂದೆ ಪ್ರಳಯದಲ್ಲಿ ಬೆಂಕಿಯಿಂದ ಸುಟ್ಟು ಹೋದ ಭೂಮಿಯನ್ನು ಪ್ರಯತ್ನ ಪೂರ್ವಕವಾಗಿ ಹಳ್ಳತಿಟ್ಟುಗಳಿಲ್ಲದಂತೆ ಮಾಡಿ ಅಲ್ಲಲ್ಲಿ ಸಮಸ್ತಪರ್ವತಗಳನ್ನೂ ಇಟ್ಟು ಹಿಂದಿನಂತೆಯೇ ನದಿಗಳು ನದಗಳು ಸಮುದ್ರಗಳು ಮುಂತಾದುವುಗಳಿರುವಂತೆ ಮಾಡಿದನು.

೬೩. ಆ ಮಹಾಮಹಿಮನಾದ ಬ್ರಹ್ಮನು ಪುನಃ ಸೃಷ್ಟಿಮಾಡುವ ಆಲೋಚನೆಯನ್ನು ಮಾಡಿ ಹಿಂದಿನಂತೆ ಭೂಲೋಕ, ಭುವರ್ಲೋಕ, ಸುವರ್ಲೋಕ, ಮಹರ್ಲೋಕ ಎಂಬ ನಾಲ್ಕು ಲೋಕಗಳನ್ನು ಸೃಷ್ಟಿಸಿದನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಾರ್ಧದಲ್ಲಿ
ಸೃಷ್ಟಿಯು ಪ್ರಾರಂಭವಾದ ರೀತಿಯನ್ನು
ವರ್ಣಿಸಿದ ನಾಲ್ಕನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀಲಿಂಗಮಹಾಪುರಾಣೇ ಪೂರ್ವಾರ್ಧೇ ಪಂಚಮೋಽಧ್ಯಾಯಃ

**॥ ಸೂತ ಉವಾಚ ॥**

**ಯದಾ ಸ್ರಷ್ಟುಂ ಮತಿಂ ಚಕ್ರೇ ಮೋಹಶ್ಚಾಸೀನ್ಮಹಾತ್ಮನಃ ।**
**ದ್ವಿಜಾಶ್ಚಾ(ಶ್ಚ) ಬುದ್ಧಿಪೂರ್ವಂ ತು ಬ್ರಹ್ಮಣೋಽವ್ಯಕ್ತಜನ್ಮನಃ ॥೧॥**
**ತಮೋ ಮೋಹೋ ಮಹಾಮೋಹಸ್ತಾಮಿಸ್ರಶ್ಚಾಂಧ ಸಂಜ್ಞಿತಃ ।**
**ಅವಿದ್ಯಾ ಪಂಚಧಾ ಹ್ಯೇಷಾ ಪ್ರಾದುರ್ಭೂತಾ ಸ್ವಯಂಭುವಃ ॥೨॥**

---

### ಲಿಂಗಮಹಾಪುರಾಣದ ಪೂರ್ವಾರ್ಧದಲ್ಲಿ ಐದನೆಯ ಅಧ್ಯಾಯವು

(ಈ ಅಧ್ಯಾಯಲ್ಲಿ ಬ್ರಹ್ಮನು ತಾನೇ ಸಾಕ್ಷಾತ್ತಾಗಿ ಮಾಡಿದ ಮುಖ್ಯಸೃಷ್ಟಿಯೂ, ಅವಿದ್ಯಾದಿಗಳೂ, ಅನುಸೃಷ್ಟಿಯೂ, ಋಷಿಗಳೂ, ದೇವತೆಗಳೂ, ಸನಕ ಸನಂದನಾದಿ ಮಾನಸಪುತ್ರರೂ, ಈ ಮುಂತಾದ ವಿಷಯಗಳನ್ನು ಹೇಳಲಾಗುವುದು.

೧. ಸೂತನು ಹೇಳಿದನು: ಎಲೈ ಋಷಿಗಳೇ ಕೇಳಿರಿ. ಮಹಾತ್ಮನಾದ ಆ ಬ್ರಹ್ಮನು ಯಾವಾಗ ಸೃಷ್ಟಿಮಾಡಬೇಕೆಂದು ಆಲೋಚಿಸಿದನೋ ಆಗಲೇ ಅವನಿಂದ ಮೊದಲು ಸಾವಧಾನವಾಗಿಲ್ಲದಿರುವಿಕೆಯಿಂದ ಅಜ್ಞಾನದ ಆವಿರ್ಭಾವ ವುಂಟಾಯಿತು. ಏಕೆಂದರೆ ದೇಹಗಳನ್ನು ಸೃಷ್ಟಿಸಿದರೂ ಅವಿದ್ಯೆಯಿಲ್ಲದಿದ್ದರೆ ಆ ದೇಹಗಳಲ್ಲಿ ಜೀವರಿಗೆ ನಾನು, ನನ್ನದು, ಕರ್ತೃತ್ವ ಭೋಕ್ತೃತ್ವ ಮುಂತಾದ ಅಜ್ಞಾನಮೂಲಕವಾದ ಅಭಿಮಾನವು ಉಂಟಾಗುವುದಿಲ್ಲವು. ಆದರಿಂದ ಸಂಸಾರ ವ್ಯವಹಾರವು ಮುಂದಕ್ಕೆ ಸಾಗದೆಂದು ಯೋಚಿಸಿ, ಮೊದಲು ಅವಿದ್ಯೆಯ ಉತ್ಪತ್ತಿಗೆ ಕಾರಣವನ್ನು ತಿಳಿಸಲಾಗಿದೆ.

೨. ಆ ಬ್ರಹ್ಮನಿಂದ ತಮಸ್, ಮೋಹ, ಮಹಾಮೋಹ, ತಾಮಿಸ್ರ, ಅಂಧತಾಮಿಸ್ರ ಎಂಬ ಐದು ಬಗೆಯಾದ ಅವಿದ್ಯೆಯು ಉಂಟಾಯಿತು. ತಮಸ್ಸೆಂಬುದು ಆತ್ಮವಲ್ಲದ ದೇಹಾದಿಗಳಲ್ಲಿ ಆತ್ಮಾಭಿಮಾನವು. ಮೋಹವೆಂಬುದು ದೇಹಸಂಬಂಧಿಗಳಾದ ಮಕ್ಕಳು, ಹೆಂಡಿತಿ ಮುಂತಾದವರಲ್ಲಿ ನನ್ನವರೆಂಬ ಅಭಿಮಾನದ ಪ್ರೀತಿವಿಶೇಷವು. ಮಹಾಮೋಹ

**ಅವಿದ್ಯಯಾ ಮುನೇರ್ಗ್ರಸ್ತಃ ಸರ್ಗೋ ಮುಖ್ಯ ಇತಿ ಸ್ಮೃತಃ ।**
**ಅಸಾಧಕ ಇತಿ ಸ್ಮೃತ್ವಾ ಸರ್ಗೋ ಮುಖ್ಯಃ ಪ್ರಜಾಪತಿಃ ॥ ೩ ॥**
**ಅಭ್ಯಮನ್ಯತ ಸೋಽನ್ಯಂ ವೈ ನಗಾ ಮುಖ್ಯೋದ್ಭವಾಃ ಸ್ಮೃತಾಃ।**
**ತ್ರಿಧಾ ಕಂಠೋ ಮುನೇಸ್ತಸ್ಯ ಧ್ಯಾಯತೋ ವೈ ಹ್ಯವರ್ತತ ॥ ೪ ॥**
**ಪ್ರಥಮಂ ತಸ್ಯ ವೈ ಜಜ್ಞೇ ತಿರ್ಯಕ್ಸ್ರೋತೋ ಮಹಾತ್ಮನಃ ।**
**ಊರ್ಧ್ವಸ್ರೋತಃ ಪರಸ್ತಸ್ಯ ಸಾತ್ವಿಕಃ ಸ ಇತಿ ಸ್ಮೃತಃ ॥ ೫ ॥**
**ಅರ್ವಾಕ್ಸ್ರೋತೋಽನುಗ್ರಹಶ್ಚ ತಥಾ ಭೂತಾದಿಕಾಃ ಪುನಃ ।**

---

ವೆಂಬುದು ಶಬ್ದ ಸ್ಪರ್ಶ ರೂಪ ರಸ ಗಂಧಾದಿ ಮನೋಹರವಾದ ವಿಷಯ ಗಳಲ್ಲಿರುವ ಅಪೇಕ್ಷೆಯು. ತಾಮಿಸ್ರವೆಂಬುದು ವಿಷಯ ಲಾಭಕ್ಕೆ ಅಡ್ಡಿಯುಂಟಾದರೆ ಉಂಟಾಗುವ ಕೋಪಕ್ಕೆ ಹೆಸರು. ಅಂಧತಾಮಿಸ್ರ ವೆಂಬುದು ಇವೆಲ್ಲವನ್ನೂ ತನ್ನದು ಎಂದು ತಿಳಿದುಕೊಂಡುಇರುವ, ಸಕಲ ವನ್ನೂ ಕಾಪಾಡಬೇಕೆಂದು ಇರುವ, ಬಲವಾದ ಅಪೇಕ್ಷೆಯು. ಈ ಐದನ್ನೂ ವಿಪರ್ಯಯಭೇದಗಳೆಂದು "ಅವಿದ್ಯಾಽಸ್ಮಿತಾರಾಗದ್ವೇಷಾಭಿ ನಿವೇಶಾಃ ಪಂಚಕ್ಲೇಶಾಃ" ಎಂಬು ಪತಂಜಲಿ ಋಷಿಗಳು ಯೋಗ ಸೂತ್ರದಲ್ಲಿ ಹೇಳಿ ರುವರು.

೩. ಮುನಿಯ ಅಂದರೆ ಬ್ರಹ್ಮನ ಈ ಮೊದಲನೆಯ ಸೃಷ್ಟಿಯು ಅವಿದ್ಯೆಯಿಂದ ವ್ಯಾಪಿಸಿದುದೆಂದೂ ಇದು ಮುಖ್ಯವಾದುದಲ್ಲವೆಂದೂ, ಬ್ರಹ್ಮನು ಈ ಸೃಷ್ಟಿಯು ಪ್ರಯೋಜನಕರವಾದುದಲ್ಲವೆಂದೂ, ಬೇರೆ ವಿಧವಾದ ಪದಾರ್ಥಗಳ ಸೃಷ್ಟಿಯನ್ನು ಮಾಡಬೇಕೆಂದು ತಿಳಿದು ಸಂಕಲ್ಪಿಸಿಕೊಂಡನು. ಆದುದರಿಂದ ಆಮೇಲೆ ವೃಕ್ಷಗಳು ಮೊದಲು ಹುಟ್ಟಿದುವು.

೪–೫. ಧ್ಯಾನಮಾಡುತ್ತಿದ್ದ ಆ ಬ್ರಹ್ಮನ ಕಂಠಧ್ವನಿಯು ತಮ ಸ್ಸತ್ವರಜೋಗುಣ ರೂಪವಾಗಿ ಉಂಟಾಯಿತು. ಮೊದಲು ಅವನ ಧ್ವನಿಯು ತಮೋಗುಣದಿಂದ ತಿರ್ಯಗ್ಗತಿ ಮಧ್ಯಗತಿ ರೂಪವಾಗಿ ಪಶುವೇ ಮುಂತಾದವುಗಳರೂಪವಾಯಿತು. ಊರ್ಧ್ವತಾರಗತಿಯಿಂದ ಸಾತ್ವಿಕಧ್ವನಿಯು ಅಂತರಿಕ್ಷದಲ್ಲಿರುವ ದೇವಾದಿಗಳ ರೂಪವಾಯಿತು. ಅಧೋ (ಮಂದ್ರ) ಗತಿಯಿಂದ ರಾಜಸಧ್ವನಿಯು ಈಶ್ವರಾನುಗ್ರಹ

**ಬ್ರಹ್ಮಣೋ ಮಹತಸ್ಸಾತ್ವದ್ಯೋ ದ್ವಿತೀಯೋ ಭೌತಿಕಸ್ತಥಾ ॥ ೬ ॥**
**ಸರ್ಗಸ್ತೃತೀಯಶ್ಚೈಂದ್ರಿಯಸ್ತುರೀಯೋ ಮುಖ್ಯ ಉಚ್ಯತೇ ।**
**ತಿರ್ಯಗ್ಯೋನ್ಯಃ ಪಂಚಮಸ್ತು ಷಷ್ಠೋ ದೈವಿಕ ಉಚ್ಯತೇ ॥ ೭ ॥**
**ಸಪ್ತಮೋ ಮಾನುಷೋ ವಿಪ್ರಾ ಅಷ್ಟಮೋಽನುಗ್ರಹಸ್ಸ್ಮೃತಃ ।**
**ನವಮಶ್ಚೈವ ಕೌಮಾರಃ ಪ್ರಾಕೃತಾ ವೈಕೃತಾಸ್ತ್ವಿಮೇ ॥ ೮ ॥**
**ಪುರಸ್ತಾ ದಸೃಜದ್ದೇವ ಸ್ಸನಂದಂ ಸನಕಂ ತಥಾ ।**
**ಸನಾತನಂ ಮುನಿಶ್ರೇಷ್ಠಾ ನೈಷ್ಕರ್ಮ್ಯೇಣ ಗತಾಃ ಪರಂ ॥ ೯ ॥**

---

ರೂಪವಾಗಿ ಮನುಷ್ಯ ರೂಪವಾಯಿತು. ಮುಂದೆ ಈ ಪುರಾಣದ ೭೦ನೆಯ ಅಧ್ಯಾಯದಲ್ಲಿ, ೧೫೭ ಶ್ಲೋಕದಿಂದ

"ಪಂಚಮೋಽನು ಗ್ರಹಸ್ಸರ್ಗ ಶ್ಚತುರ್ಧಾ ತು ವ್ಯವಸ್ಥಿತಃ ।
ವಿಪರ್ಯಯೇಣ ಶಕ್ತ್ಯಾ ಚ ಸಿದ್ಧ್ಯಾ ತುಷ್ಟ್ಯಾ ತಥೈವ ಚ ॥
ಸ್ಥಾವರೇಷು ವಿಪರ್ಯಾಸ ಸ್ತಿರ್ಯಗ್ಯೋನಿಷು ಶಕ್ತಿತಃ ।
ಸಿದ್ಧ್ಯಾತ್ಮಾನೋ ಮನುಷ್ಯಾಸ್ತು ಋಷಿದೇವೇಷು ಕೃತ್ಸ್ನಶಃ ॥
ಎಂದು ಸೃಷ್ಟಿಕ್ರಮದ ಹೆಚ್ಚು ವಿವರಗಳನ್ನು ಹೇಳಿರುವುದು.

೬–೮. ಹಿಂದೆ ಹೇಳಿದ ಸೃಷ್ಟಿಕ್ರಮವನ್ನು ಮತ್ತೆ ಬೇರೊಂದು ರೀತಿಯಿಂದ ಹೇಳಲಾಗುವುದು. ಬ್ರಹ್ಮನ ದೆಸೆಯಿಂದ ಮಹತ್ತತ್ವದ ಸೃಷ್ಟಿಯು ಮೊದಲನೆಯದು, ಭೂತತನ್ಮಾತ್ರಗಳ ಸೃಷ್ಟಿಯು ಎರಡನೆಯದು. ಇಂದ್ರಿಯಗಳ ಸೃಷ್ಟಿಯು ಮೂರನೆಯದು. ನಾಲ್ಕನೆಯದು ವೃಕ್ಷಾದಿಗಳ ಮುಖ್ಯ ಸೃಷ್ಟಿಯು. ಐದನೆಯದು ಪಶ್ವಾದಿಗಳು. ಆರನೆಯದು ದೇವಾದಿಗಳ ಸೃಷ್ಟಿಯು. ಏಳನೆಯದು ಮನುಷ್ಯ ಸೃಷ್ಟಿಯು. ಎಂಟನೆಯದು ಅನುಗ್ರಹಸೃಷ್ಟಿಯು. ಒಂಬತ್ತನೆಯದು ಕೌಮಾರಸೃಷ್ಟಿಯು. ಇವೆಲ್ಲವೂ ಪ್ರಕೃತಿ ಸಂಬಂಧವಾದ ವಿಕಾರಗಳು.

೯. ಬ್ರಹ್ಮನು ಮನುಷ್ಯಸೃಷ್ಟಿಯ ಪ್ರಾರಂಭದಲ್ಲಿ ಸನಕ ಸನಂದ ಸನಾತನರೆಂಬುವರನ್ನು ಸೃಷ್ಟಿಸಿದನು. ಅವರು ಜ್ಞಾನಿಗಳಾದುದರಿಂದ ಸನ್ಯಾಸಿಗಳಾಗಿ ಮೋಕ್ಷವನ್ನು ಹೊಂದಿದರು.

ಮರೀಚಿಭೃಗ್ವಂಗಿರಸಃ ಪುಲಸ್ತ್ಯಂ ಪುಲಹಂ ಕ್ರತುಂ ।
ದಕ್ಷಮತ್ರಿಂ ವಸಿಷ್ಠಂ ಚ ಸೋಽಸೃಜದ್ಯೋಗವಿದ್ಯಯಾ ॥೧೦॥
ನವೈತೇ ಬ್ರಹ್ಮಣಃ ಪುತ್ರಾ ಬ್ರಹ್ಮಜ್ಞಾ ಬ್ರಾಹ್ಮಣೋತ್ತಮಾಃ ।
ಬ್ರಹ್ಮವಾದಿನ ಏವೈತೇ ಬ್ರಹ್ಮಣಸ್ಸದೃಶಾಸ್ಸ್ಮೃತಾಃ ॥೧೧॥
ಸಂಕಲ್ಪಶ್ಚೈವ ಧರ್ಮಶ್ಚ ಹ್ಯಧರ್ಮೋ ಧರ್ಮಸನ್ನಿಧಿಃ ।
ದ್ವಾದಶೈವ ಪ್ರಜಾಸ್ತ್ವೇತಾ ಬ್ರಹ್ಮಣೋಽವ್ಯಕ್ತಜನ್ಮನಃ ॥೧೨॥
ಋಭುಂ ಸನತ್ಕುಮಾರಂ ಚ ಸಸರ್ಜಾದೌ ಸನಾತನಃ ।
ತಾವೂರ್ಧ್ವರೇತಸೌ ದಿವ್ಯೌ ಚಾಗ್ರಜೌ ಬ್ರಹ್ಮವಾದಿನೌ ॥೧೩॥
ಕುಮಾರೌ ಬ್ರಹ್ಮಣಸ್ತುಲ್ಯೌ ಸರ್ವಜ್ಞೌ ಸರ್ವಭಾವಿನೌ ।

---

೧೦–೧೧. ಆಮೇಲೆ ಆ ಬ್ರಹ್ಮನು ಯೋಗವಿದ್ಯೆಯಿಂದಲೇ ಮರೀಚಿ, ಭೃಗು, ಅಂಗಿರಸ್ಸು, ಪುಲಸ್ತ್ಯ, ಪುಲಹ, ಕ್ರತು, ದಕ್ಷ, ಅತ್ರಿ, ವಸಿಷ್ಠ ಎಂಬುವರನ್ನು ಸೃಷ್ಟಿಸಿದನು. ಈ ಒಂಬತ್ತು ಜನರೂ ಬ್ರಹ್ಮಮಾನಸ ಪುತ್ರರು. ಇವರು ಬ್ರಾಹ್ಮಣೋತ್ತಮರೂ, ಬ್ರಹ್ಮ ಜ್ಞಾನಿಗಳೂ, ಬ್ರಹ್ಮಸ್ವರೂಪವನ್ನು ಇತರರಿಗೆ ಬೋಧಿಸುವವರೂ ತಂದೆಯಾದ ಬ್ರಹ್ಮನಿಗೆ ಸಮಾನರೂ ಆಗಿದ್ದರು.

೧೨. ಸಂಕಲ್ಪ, ಧರ್ಮ, ಅಧರ್ಮ, ಎಂಬ ಮೂವರು ಸೇರಿ ಒಟ್ಟು ಹನ್ನೆರಡು ಜನರು ಪ್ರಕೃತಿಯಿಂದ ಹುಟ್ಟಿದ ಬ್ರಹ್ಮನಿಗೆ ಮಕ್ಕಳಾದರು. ಧರ್ಮನೆಲ್ಲಿರುವನೋ ಅಲ್ಲಿಯೇ ಅಧರ್ಮನಿರುವನು ಎಂದರೆ ಇಬ್ಬರೂ ಜೀವನನ್ನು ಆಶ್ರಯಿಸಿರುವರೆಂದು ತಾತ್ಪರ್ಯವು.

೧೩. ಬ್ರಹ್ಮನು ಮೊದಲು ಋಭು, ಸನತ್ಕುಮಾರ, ಎಂಬಿಬ್ಬರನ್ನು ಸೃಷ್ಟಿಸಿದನು. ಅವರಿಬ್ಬರೂ ಬ್ರಹ್ಮಮಾನಸ ಪುತ್ರರಿಗೆಲ್ಲರಿಗಿಂತಲೂ ದೊಡ್ಡವರು. ಬ್ರಹ್ಮಚರ್ಯ ಧರ್ಮದಿಂದ ಯಾವಾಗಲೂ ಕೌಮಾರಾವಸ್ಥೆಯಲ್ಲಿದ್ದುಕೊಂಡು ಜ್ಞಾನಸ್ವರೂಪರಾಗಿ ಬ್ರಹ್ಮಜ್ಞಾನವನ್ನು ಸಕಲರಿಗೂ ಬೋಧಿಸುತ್ತಾ ಎಲ್ಲವನ್ನೂ ತಿಳಿದವರಾಗಿ ಬ್ರಹ್ಮನಿಗೆ ಸಮಾನರಾಗಿರುವರು.

**ವಕ್ಷ್ಯೇಭಾರ್ಯಾಕುಲಂ ತೇಷಾಂ ಮುನಿನಾಮಗ್ರಜನ್ಮನಾಂ ॥೧೪॥**
**ಸಮಾಸತೋ ಮುನಿಶ್ರೇಷ್ಠಾಃ ಪ್ರಜಾಸಂಭೂತಿರೇವ ಚ ।**
**ಶತರೂಪಾಂ ತು ವೈ ರಾಜ್ಞೀಂ ವಿರಾಜಮಸೃಜತ್ಪ್ರಭುಃ ॥೧೫॥**
**ಸ್ವಾಯಂಭುವಾತ್ತು ವೈ ರಾಜ್ಞೀ ಶತರೂಪಾ ತ್ವಯೋನಿಜಾ ।**
**ಲೇಭೇ ಪುತ್ರದ್ವಯಂ ಪುಣ್ಯಾ ತಥಾ ಕನ್ಯಾದ್ವಯಂ ಚ ಸಾ ॥೧೬॥**
**ಉತ್ತಾನಪಾದೋ ಹ್ಯವರೋ ಧೀಮಾನ್ ಜ್ಯೇಷ್ಠಃ ಪ್ರಿಯವ್ರತಃ ।**
**ಜ್ಯೇಷ್ಠಾ ವರಿಷ್ಠಾ ತ್ವಾಕೂತಿಃ ಪ್ರಸೂತಿಶ್ಚಾನುಜಾ ಸ್ಮೃತಾ ॥೧೭॥**
**ಉಪಯೇಮೇ ತದಾಕೂತಿಂ ರುಚಿರ್ನಾಮ ಪ್ರಜಾಪತಿಃ ।**
**ಪ್ರಸೂತಿಂ ಭಗವಾನ್ದಕ್ಷೋ ಲೋಕಧಾತ್ರೀಂ ಚ ಯೋಗಿನೀಂ ॥೧೮॥**
**ದಕ್ಷಿಣಾಸಹಿತಂ ಯಜ್ಞಮಾಕೂತಿಸ್ಸುಷುವೇ ತಥಾ ।**
**ದಕ್ಷಿಣಾ ಜನಯಾಮಾಸ ದಿವ್ಯಾ ದ್ವಾದಶ ಪುತ್ರಿಕಾಃ ॥೧೯॥**

---

೧೪. ಎಲೈ ಮುನಿಶ್ರೇಷ್ಠರೇ ಕೇಳಿರಿ. ಮೊದಲು ಹುಟ್ಟಿದ ಬ್ರಹ್ಮ ಮಾನಸ ಪುತ್ರರ ಪತ್ನಿಯರನ್ನೂ, ಅವರ ಮಕ್ಕಳುಗಳನ್ನೂ ಸಂಗ್ರಹವಾಗಿ ಹೇಳುವೆನು.

೧೫–೧೬. ಬ್ರಹ್ಮನು ಪ್ರಪಂಚದ ಬೆಳವಳಿಕೆಗಾಗಿ ಮಿಥುನ ಸೃಷ್ಟಿಯನ್ನು ಪ್ರಾರಂಭಿಸಿ ಸ್ವಾಯಂಭುವಮನುವನ್ನೂ, ಶತರೂಪಾದೇವಿಯನ್ನೂ ಸೃಷ್ಟಿಸಿದನು. ಇವರಿಬ್ಬರೂ ಅಯೋನಿಜರು. ಸ್ವಾಯಂಭುವ ಮನುವಿನಿಂದ ಶತರೂಪಾದೇವಿಯು ಇಬ್ಬರು ಗಂಡುಮಕ್ಕಳನ್ನೂ ಇಬ್ಬರು ಹೆಣ್ಣುಮಕ್ಕಳನ್ನೂ ಪಡೆದಳು.

೧೭. ಆ ಮಕ್ಕಳಲ್ಲಿ ಪ್ರಿಯವ್ರತನು ದೊಡ್ಡವನು. ಉತ್ತಾನಪಾದನು ಕಿರಿಯವನು. ಕನ್ಯೆಯರಲ್ಲಿ ಆಕೂತಿಯು ಹಿರಿಯಳು. ಪ್ರಸೂತಿಯು ಕಿರಿಯವಳು.

೧೮. ರುಚಿ, ಎಂಬ ಪ್ರಜಾಪತಿಯು ಆಕೂತಿಯನ್ನೂ, ಮಹಾಮಹಿಮನಾದ ದಕ್ಷನು, ಲೋಕಕ್ಕೆ ತಾಯಿಯೂ ಯೋಗಿನಿಯೂ ಆದ ಪ್ರಸೂತಿಯನ್ನೂ ವಿವಾಹ ಮಾಡಿಕೊಂಡರು.

೧೯. ಆಕೂತಿಯು ದಕ್ಷಿಣಾದೇವಿಯಿಂದ ಕೂಡಿದ ಯಜ್ಞನನ್ನು ಹೆತ್ತಳು. ದಕ್ಷಿಣಾದೇವಿಯು ಶ್ರೇಷ್ಠರಾದ ಹನ್ನೆರಡು ಜನ ಹೆಣ್ಣು ಮಕ್ಕಳನ್ನು ಹೆತ್ತಳು.

ಪ್ರಸೂತಿಸ್ಸುಷುವೇ ದಕ್ಷಾಚ್ಚತುರ್ವಿಂಶತಿ ಕನ್ಯಕಾಃ ।
ಶ್ರದ್ಧಾಂ ಲಕ್ಷ್ಮೀಂ ಧೃತಿಂ ಪುಷ್ಟಿಂ ತುಷ್ಟಿಂ ಮೇಧಾಂ ಕ್ರಿಯಾಂ ತಥಾ ॥

ಬುದ್ಧಿಂ ಲಜ್ಜಾಂ ವಪುಶ್ಶಾಂತಿಂ ಸಿದ್ಧಿಂ ಕೀರ್ತಿಂ ಮಹಾತಪಾಃ ।
ಖ್ಯಾತಿಂ ಶಾಂತಿಂ ಚ ಸಂಭೂತಿಂ ಸ್ಮೃತಿಂ ಪ್ರೀತಿಂ ಕ್ಷಮಾಂ ತಥಾ ॥೨೧॥

ಸನ್ನತಿಂ ಚಾನಸೂಯಾಂ ಚ ಊರ್ಜಾಂ ಸ್ವಾಹಾಂ ಸುರಾರಣಿಂ ।
ಸ್ವಧಾಂ ಚೈವ ಮಹಾಭಾಗಾಂ ಪ್ರದದೌ ಚ ಯಥಾಕ್ರಮಂ ॥೨೨॥

ಶ್ರದ್ಧಾದ್ಯಾಶ್ಚೈವ ಕೀರ್ತ್ಯಂತಾ ಸ್ತ್ರಯೋದಶ ಸುದಾರಿಕಾಃ ।
ಧರ್ಮಂ ಪ್ರಜಾಪತಿಂ ಜಗ್ಮುಃ ಪತಿಂ ಪರಮದುರ್ಲಭಾಃ ॥೨೩॥

ಉಪಯೇಮೇ ಭೃಗುರ್ಧೀರ್ಮಾ ಖ್ಯಾತಿಂ ತಾಂ ಭಾರ್ಗವೋಽರಣಿಂ ।
ಸಂಭೂತಿಂ ಚ ಮರೀಚಿಸ್ತು ಸ್ಮೃತಿಂ ಚೈವಾಂಗಿರಾ ಮುನಿಃ ॥೨೪॥

ಪ್ರೀತಿಂ ಪುಲಸ್ತ್ಯಃ ಪುಣ್ಯಾತ್ಮಾ ಕ್ಷಮಾಂ ತಾಂ ಪುಲಹೋ ಮುನಿಃ ।
ಕ್ರತುಶ್ಚ ಸಂತತಿಂ ಧೀಮಾನ್ ಅತ್ರಿಸ್ತಾಂ ಚಾನಸೂಯಕಾಂ ॥೨೫॥

---

೨೦–೨೨. ಪ್ರಸೂತಿದೇವಿಯು ದಕ್ಷನಿಂದ ಇಪ್ಪತ್ತುನಾಲ್ಕು ಜನ, ಕನ್ಯೆಯರನ್ನು ಪಡೆದಳು—ಶ್ರದ್ಧಾ, ಲಕ್ಷ್ಮೀ, ಧೃತಿ, ಪುಷ್ಟಿ, ತುಷ್ಟಿ, ಮೇಧಾ, ಕ್ರಿಯಾ, ಬುದ್ಧಿ, ಲಜ್ಜಾ, ವಪು, ಶಾಂತಿ, ಸಿದ್ಧಿ, ಕೀರ್ತಿ, ಖ್ಯಾತಿ ಶಾಂತಿ, ಸಂಭೂತಿ, ಸ್ಮೃತಿ, ಪ್ರೀತಿ, ಕ್ಷಮಾ, ಸನ್ನತಿ, ಅನಸೂಯಾ, ಊರ್ಜಾ, ಸ್ವಾಹಾ, ಸ್ವಧಾ, ಈ ಇಪ್ಪತ್ತುನಾಲ್ಕುಜನ ಕನ್ಯೆಯರನ್ನೂ ದಕ್ಷನು ಕ್ರಮವಾಗಿ ವಿವಾಹ ಮಾಡಿಕೊಟ್ಟನು.

೨೩. ಹೊಂದಲಸಾಧ್ಯರಾದ ಶ್ರದ್ಧಾ ಎಂಬ ಕನ್ಯೆಯಿಂದ ಮೊದಲಾಗಿ ಕೀರ್ತಿ ಎಂಬ ಕೊನೆಯ ಕನ್ಯೆಯವರೆಗೂ ಹದಿಮೂರುಜನ ಸುಪುತ್ರಿಯರು ಧರ್ಮನೆಂಬ ಪ್ರಜಾಪತಿಯನ್ನು ಪತಿಯನ್ನಾಗಿ ಹೊಂದಿದರು.

೨೪–೨೫. ಭೃಗುವು ಖ್ಯಾತಿಯನ್ನೂ ಶುಕ್ರನು ಶಾಂತಿ (ಅರಣಿ) ಯನ್ನೂ, ಮರೀಚಿಯು ಸಂಭೂತಿಯನ್ನೂ, ಅಂಗಿರನೆಂಬ ಮುನಿಯು ಸ್ಮೃತಿಯನ್ನೂ, ಪುಲಸ್ತ್ಯನು ಪ್ರೀತಿಯನ್ನೂ, ಪುಲಹನು ಕ್ಷಮೆಯನ್ನೂ, ಕ್ರತುವು ಸನ್ನತಿಯನ್ನೂ ಅತ್ರಿಯು ಅನಸೂಯೆಯನ್ನೂ ಮಹಾ ಮಹಿ

**ಊರ್ಜಾಂ ವಸಿಷ್ಠೋ ಭಗವಾನ್ಮರಿಷ್ಠೋ ವಾರಿಜೇಕ್ಷಣಾಂ ।**
**ವಿಭಾವಸು ಸ್ತಥಾ ಸ್ವಾಹಾಂ ಸ್ವಧಾಂ ವೈ ಪಿತರಸ್ತಥಾ ॥೨೬॥**

**ಪುತ್ರೀಕೃತಾ ಸತೀ ಯಾ ಸಾ ಮಾನಸೀ ಶಿವಸಂಭವಾ ।**
**ದಕ್ಷೇಣ ಜಗತಾಂ ಧಾತ್ರೀ ರುದ್ರಮೇವಾಸ್ಥಿತಾ ಪತಿಂ ॥೨೭॥**

**ಅರ್ಧನಾರೀಶ್ವರಂ ದೃಷ್ಟ್ವಾ ಸರ್ಗಾದೌ ಕನಕಾಂಡಜಃ ।**
**ವಿಭಜಸ್ವೇತಿ ಚಾಹಾದೌ ಯದಾ ಜಾತಾ ತದಾಽಭವತ್ ॥೨೮॥**

**ತಸ್ಯಾಶ್ಚೈವಾಂಶಜಾಃ ಸರ್ವಾಃ ಸ್ತ್ರಿಯಸ್ತ್ರಿಭುವನೇ ತಥಾ ।**
**ಏಕಾದಶವಿಧಾ ರುದ್ರಾಃ ತಸ್ಯ ಚಾಂಶೋದ್ಭವಾಸ್ತಥಾ ॥೨೯॥**

**ಸ್ತ್ರೀಲಿಂಗಮಖಿಲಂ ಸಾ ವೈ ಪುಲ್ಲಿಂಗಂ ನೀಲಲೋಹಿತಃ ।**
**ತಂ ದೃಷ್ಟ್ವಾ ಭಗವಾನ್ ಬ್ರಹ್ಮಾ ದಕ್ಷಮಾಲೋಕ್ಯ ಸುವ್ರತಾಂ ॥**

**ಭಜಸ್ವ ಧಾತ್ರೀಂ ಜಗತಾಂ ಮಮಾಪಿ ಚ ತವಾಪಿ ಚ ।**
**ಪುನ್ನಾಮ್ನೋ ನರಕಾತ್ತ್ರಾತಿ ಇತಿ ಪುತ್ರೇ ತ್ವಿಹೋಕ್ತಿತಃ ॥೩೦॥**

---

ಮನಾದ ವಸಿಷ್ಠನು ಊರ್ಜೆಯನ್ನೂ ಅಗ್ನಿಯು ಸ್ವಾಹಾದೇವಿಯನ್ನೂ ಪಿತೃದೇವತೆಗಳು ಸ್ವಧಾದೇವಿಯನ್ನೂ ವಿವಾಹವಾಡಿ ಕೊಂಡರು.

೨೭. ಶಿವನ ಅಂಶದಿಂದ ಹುಟ್ಟಿದ ಮಾನಸ ಪುತ್ರಿಯಾದ ಲೋಕಕ್ಕೆ ತಾಯಿಯಾದ ಸತೀದೇವಿಯು ದಕ್ಷನಮಗಳಾದಳು. ಆ ಸತೀದೇವಿಯು ರುದ್ರನನ್ನೇ ಪತಿಯನ್ನಾಗಿ ವರಿಸಿದಳು.

೨೮. ಸೃಷ್ಟಿಯ ಮೊದಲಿನಲ್ಲಿ ಹಿರಣ್ಯಗರ್ಭಬ್ರಹ್ಮನು ಅರ್ಧನಾರೀಶ್ವರನನ್ನು ನೋಡಿ ಸ್ತ್ರೀಪುರುಷದೇಹಗಳನ್ನು ವಿಭಾಗಮಾಡು ಎಂದು ಹೇಳಿದನು. ಆ ಸಮಯದಲ್ಲಿ ಈ ಸತೀದೇವಿಯು ಹುಟ್ಟಿದಳು. ಮೂರು ಲೋಕದಲ್ಲಿರುವ ಎಲ್ಲಾ ಸ್ತ್ರೀಯರೂ ಆ ಸತೀದೇವಿಯ ಅಂಶದಿಂದಲೇ ಹುಟ್ಟಿದವರು.

೨೯. ಏಕಾದಶರುದ್ರರೂ ಆ ಅರ್ಧನಾರೀಶ್ವರನ ಅಂಶದಿಂದ ಹುಟ್ಟಿದವರು. ಪ್ರಪಂಚದಲ್ಲಿರುವ ಸ್ತ್ರೀಯರೆಲ್ಲರೂ ಸತೀದೇವಿಯ ಅಂಶದವರು. ಪುರುಷರೆಲ್ಲರೂ ಈಶ್ವರನ ಅಂಶದವರು.

೩೦–೩೧. ಆ ಮಹಾಮಹಿಮಶಾಲಿಯಾದ ಹಿರಣ್ಯಗರ್ಭಬ್ರಹ್ಮನು **ಆ ಅರ್ಧನಾರೀಶ್ವರನಿಂದ ಬೇರೆಯಾದ ಸತೀದೇವಿಯುನ್ನು ನೋಡಿ ದಕ್ಷ**

ಪ್ರಶಸ್ತಾ ತವ ಕಾಂತೇಯಂ ಸ್ಯಾತ್ಪುತ್ರೀ ವಿಶ್ವಮಾತೃಕಾ ।
ತಸ್ಮಾತ್ಪುತ್ರೀ ಸತೀ ನಾಮ್ನಾ ತವೈಷಾ ಚ ಭವಿಷ್ಯತಿ ॥೩೨॥
ಏವಮುಕ್ತಸ್ತದಾ ದಕ್ಷೋ ನಿಯೋಗಾದ್ಬ್ರಹ್ಮಣೋ ಮುನಿಃ ।
ಲಬ್ಧ್ವಾ ಪುತ್ರೀಂ ದದೌ ಸಾಕ್ಷಾತ್ಸತೀಂ ರುದ್ರಾಯ ಸಾದರಂ ॥೩೩॥
ಧರ್ಮಸ್ಯ ಪತ್ನ್ಯಃ ಶ್ರದ್ಧಾದ್ಯಾಃ ಕೀರ್ತಿತಾ ವೈ ತ್ರಯೋದಶ ।
ತಾಸು ಧರ್ಮ ಪ್ರಜಾಂ ವಕ್ಷ್ಯೇ ಯಥಾಕ್ರಮ ಮನುತ್ತಮಂ ॥೩೪॥
ಕಾಮೋ ದರ್ಪೋಽಥ ನಿಯಮಃ ಸಂತೋಷೋ ಲೋಭ ಏವ ಚ ।
ಶ್ರುತಸ್ತು ದಂಡಸ್ಸಮಯೋ ಬೋಧಶ್ಚೈವ ಮಹಾದ್ಯುತಿಃ ॥೩೫॥
ಅಪ್ರಮಾದಶ್ಚ ವಿನಯೋ ವ್ಯವಸಾಯೋ ದ್ವಿಜೋತ್ತಮಾಃ ।
ಕ್ಷೇಮಂ ಸುಖಂ ಯಶಶ್ಚೈವ ಧರ್ಮಪುತ್ರಾಶ್ಚ ತಾಸು ವೈ ॥೩೬॥

---

ನ್ನು ಕುರಿತು ಎಲೈ ದಕ್ಷನೇ, ನನಗೂ ನಿನಗೂ ಲೋಕಕ್ಕೂ ತಾಯಿಯಾದ ಈ ದೇವಿಯನ್ನು ಸೇವಿಸು.

೩೨. ಪುನ್ನಾಮಕವಾದ ನರಕದ ದೆಸೆಯಿಂದ ಕಾಪಾಡುವುದರಿಂದ ಪುತ್ರನೆಂದು ಹೇಳುವ ವೇದವಾಕ್ಯದಿಂದ ಶ್ರೇಷ್ಠಳೂ ಸುಂದರಿಯೂ ಲೋಕಕ್ಕೆ ತಾಯಿಯೂ ಆದ ಈ ದೇವಿಯು 'ಸತೀದೇವೀ' ಎಂಬ ಹೆಸರಿನಿಂದ ನಿನ್ನ ಮಗಳಾಗುವಳು.

೩೩. ಹೀಗೆ ಹೇಳುತ್ತಲು ದಕ್ಷನು ಬ್ರಹ್ಮನ ಅಪ್ಪಣೆಯಿಂದ ಸತೀದೇವಿಯನ್ನು ಮಗಳಾಗಿ ಪಡೆದು ಆ ದೇವಿಯನ್ನು ರುದ್ರನಿಗೆ ಪ್ರೀತಿಯಿಂದ ವಿವಾಹ ಮಾಡಿಕೊಟ್ಟನು. ಇಲ್ಲಿ ವಿವಾಹಾದಿ ಲೀಲೆಯ ವರ್ಣನೆಯು ರುದ್ರನಿಗೇ ಹೊರತು ಪರಮಶಿವನಿಗಲ್ಲ.

೩೪–೩೬. ಧರ್ಮನಿಗೆ ಶ್ರದ್ಧಾ ಮುಂತಾದ ಪದಿಮೂರು ಜನ ಪತ್ನಿಯರೆಂದು ಹೇಳಿತಷ್ಟೆ! ಅವರಲ್ಲಿ ಧರ್ಮನಿಗೆ ಆದ ಮಕ್ಕಳನ್ನು ಕ್ರಮವಾಗಿ ಹೇಳುವೆನು.

ಕಾಮ, ದರ್ಪ, ನಿಯಮ, ಸಂತೋಷ, ಲೋಭ, ಶ್ರುತ, ದಂಡ. ಸಮಯ, ಬೋಧ, ಅಪ್ರಮಾದ, ವಿನಯ, ವ್ಯವಸಾಯ, ಕ್ಷೇಮ, ಸುಖ, ಯಶ, ಇವರೇ ಧರ್ಮನ ಮಕ್ಕಳು.

ಧರ್ಮಸ್ಯ ವೈ ಕ್ರಿಯಾಯಾಂ ತು ದಂಡಸ್ಸಮಯ ಏವ ಚ ।
ಅಪ್ರಮಾದಸ್ತಥಾ ಬೋಧೋ ಬುದ್ಧೇರ್ಧರ್ಮಸ್ಯ ತೌ ಸುತೌ ॥೩೭॥
ತಸ್ಮಾತ್ಪಂಚದಶೈವೇತೇ ತಾಸು ಧರ್ಮಾತ್ಮಜಾಸ್ತ್ವಿಹ ।
ಭೃಗುಪತ್ನೀ ಚ ಸುಷುವೇ ಖ್ಯಾತಿರ್ವಿಷ್ಣೋಃ ಪ್ರಿಯಾಂ ಶ್ರಿಯಂ ॥
ಧಾತಾರಂ ಚ ವಿಧಾತಾರಂ ಮೇರೋರ್ಜಾಮಾತರೌ ಸುತೌ ।
ಪ್ರಭೂತಿರ್ನಾಮ ಯಾ ಪತ್ನೀ ಮರೀಚೇಃ ಸುಷುವೇ ಸುತೌ ॥೩೯॥
ಪೂರ್ಣಮಾಸಂ ತು ಮಾರೀಚಂ ತತಃ ಕನ್ಯಾ ಚತುಷ್ಟಯಂ ।
ತುಷ್ಟಿರ್ಜ್ಯೇಷ್ಠಾ ಚ ವೈ ದೃಷ್ಟಿಃ ತೃಷಿಶ್ಚಾಪಚಿತಿಸ್ತಥಾ ॥೪೦॥
ಕ್ಷಮಾ ಚ ಸುಷುವೇ ಪುತ್ರಾನ್ಪುತ್ರೀಂ ಚ ಪುಲಹಾಚ್ಛುಭಾಂ ।
ಕರ್ದಮಂ ಚ ವರೀಯಾಂಸಂ ಸಹಿಷ್ಣುಂ ಮುನಿಸತ್ತಮಾಃ ॥೪೧॥
ತಥಾ ಕನಕಪೀತಾಂಸಂ ಪೀವರೀಂ ಪೃಥಿವೀಸಮಾಂ ।

---

೩೭. ಧರ್ಮನಿಗೆ ಕ್ರಿಯೆ ಎಂಬ ಪತ್ನಿಯಲ್ಲಿ ದಂಡ, ಸಮಯ, ಎಂಬಿಬ್ಬರೂ, ಬುದ್ಧಿ ಎಂಬ ಪತ್ನಿಯಲ್ಲಿ ಅಪ್ರಮಾದ, ಬೋಧ, ಎಂಬಿಬ್ಬರೂ ಮಕ್ಕಳಾದರು. ಮಿಕ್ಕ ಪತ್ನಿಯರಿಗೆ ಕ್ರಮವಾಗಿ ಒಬ್ಬೊಬ್ಬರೇ ಮಕ್ಕಳು ಆದರು. ಆದುದರಿಂದ ಧರ್ಮನಿಗೆ ಹದಿನೈದು ಜನ ಮಕ್ಕಳಾದರು.

೩೮. ಭೃಗುಪತ್ನಿಯಾದ ಖ್ಯಾತಿಯು ವಿಷ್ಣುವಿನ ಪ್ರೀತಿಪಾತ್ರಳಾದ ಲಕ್ಷ್ಮಿಯನ್ನು ಹೆತ್ತಳು. ಮತ್ತು ಮೇರುವಿನ ಅಳಿಯಂದಿರಾದ, ಧಾತೃ, ವಿಧಾತೃ, ಎಂಬ ಮಕ್ಕಳನ್ನೂ ಪಡೆದಳು.

೩೯-೪೦. ಮರೀಚ ಋಷಿಯ ಪತ್ನಿಯಾದ ಪ್ರಭೂತಿಯು, ಪೂರ್ಣಮಾಸ, ಮಾರೀಚ, ಎಂಬಿಬ್ಬರು ಮಕ್ಕಳನ್ನೂ ತುಷ್ಟಿ, ದೃಷ್ಟಿ, ತೃಷಿ, ಅಪಚಿತಿ, ಎಂಬ ನಾಲ್ವರು ಕನ್ಯೆಯರನ್ನೂ ಹೆತ್ತಳು.

೪೧. ಪುಲಹನ ಪತ್ನಿಯಾದ ಕ್ಷಮೆಯು ಕರ್ದಮ, ಸಹಿಷ್ಣು, ಕನಕ, ಪೀತಾಂಸ, ಎಂಬ ಮಕ್ಕಳನ್ನೂ, ಭೂಮಿಗೆ ಸಮಾನಳಾದ ಪೀವರೀ ಎಂಬ ಕನ್ಯೆಯನ್ನೂ ಹೆತ್ತಳು.

ಪ್ರೀತ್ಯಾಂ ಪುಲಸ್ತ್ಯಶ್ಚ ತಥಾ ಜನಯಾಮಾಸ ವೈ ಸುತಾನ್ ॥೪೨॥
ದತ್ತೋ್ರೇರ್ಣಂ ವೇದಬಾಹುಂ ಚ ಪುತ್ರೀಂ ಚಾನ್ಯಾಂ ದೃಷದ್ವತೀಂ ।
ಪುತ್ರಾಣಾಂ ಷಷ್ಟಿಸಾಹಸ್ರಂ ಸನ್ನತಿಸ್ಸುಷುವೇ ಶುಭಾ ॥೪೩॥
ಕ್ರತೋಸ್ತು ಭಾರ್ಯಾ ಸರ್ವೇ ತೇ ವಾಲಖಿಲ್ಯಾ ಇತಿ ಶ್ರುತಾಃ ।
ಸಿನೀವಾಲೀಂ ಕುಹೂಂ ಚೈವ ರಾಕಾಂ ಚಾನುಮತಿಂ ತಥಾ ॥೪೪॥
ಸ್ಮೃತಿಶ್ಚ ಸುಷುವೇ ಪತ್ನೀ ಮುನೇಶ್ಚಾಂಗಿರಸಸ್ತಥಾ ।
ಲಬ್ಧಾನುಭಾವಮಗ್ನಿಂ ಚ ಕೀರ್ತಿಮಂತಂ ಚ ಸುವ್ರತಾ ॥೪೫॥
ಅತ್ರೇರ್ಭಾರ್ಯಾಽನಸೂಯಾಂ ವೈ ಸುಷುವೇ ಷಟ್ಪ್ರಜಾಸ್ತುಯಾಃ
ತಾಸ್ವೇಕಾ ಕನ್ಯಕಾ ನಾಮ್ನಾ ಶ್ರುತಿಸ್ಸಾ ಸೂನುಪಂಚಕಂ ॥೪೬॥
ಸತ್ಯನೇತ್ರೋ ಮುನಿರ್ಭವ್ಯೋ ಮೂರ್ತಿರಾಪಶ್ಶನೈಶ್ಚರಃ ।
ಸೋಮಶ್ಚ ವೈ ಶ್ರುತಿಷ್ಷಷ್ಠೀ ಪಂಚಾತ್ರೇಯಾಸ್ತು ಸೂನವಃ ॥೪೭॥

---

೪೨. ಪುಲಸ್ತ್ಯನು ಪ್ರೀತಿಯೆಂಬ ತನ್ನ ಪತ್ನಿಯಲ್ಲಿ ದತ್ತೋ್ರೇರ್ಣ, ವೇದಬಾಹು, ದೃಷದ್ವತೀ ಎಂಬ ಮಕ್ಕಳನ್ನು ಪಡೆದನು.

೪೩. ಕ್ರತುವಿನ ಪತ್ನಿಯಾದ ಮಂಗಳಕರಳಾದ ಸನ್ನತಿ ಎಂಬವಳು ಅರವತ್ತು ಸಾವಿರ ಮಕ್ಕಳನ್ನು ಹೆತ್ತಳು. ಅವರೆಲ್ಲರೂ ವಾಲಖಿಲ್ಯರೆಂದು ಹೆಸರು ಹೊಂದಿದರು.

೪೪–೪೫. ಅಂಗಿರಸ್ಸೆಂಬ ಮುನಿಯ ಪತ್ನಿಯಾದ ಸ್ಮೃತಿಯೆಂಬವಳು ಸಿನೀವಾಲೀ, ಕುಹೂ, ರಾಕಾ, ಅನುಮತಿ, ಎಂಬ ಕನ್ಯೆಯರನ್ನೂ ಮಹಾಮಹಿಮನಾದ ಅಗ್ನಿಯನ್ನೂ ಕೀರ್ತಿಮಂತನೆಂಬ ಮಗನನ್ನೂ ಹೆತ್ತಳು.

೪೬–೪೭. ಅತ್ರಿಯ ಪತ್ನಿಯಾದ ಅನಸೂಯಾದೇವಿಯು ಸತ್ಯನೇತ್ರ, ಭವ್ಯ, ಆಪ, ಶನೈಶ್ಚರ, ಸೋಮ, ಎಂಬ ಐವರು ಪುತ್ರರನ್ನೂ ಶ್ರುತಿ ಎಂಬ ಕನ್ಯೆಯನ್ನೂ ಹೆತ್ತಳು. ಅನಸೂಯೆಗೆ ಒಟ್ಟು ಆರುಜನ ಮಕ್ಕಳು.

**ಊರ್ಜಾ ವಸಿಷ್ಠಾದ್ವೈ ಲೇಭೇ ಸುತಾಂ ಶ್ಚ ಸುತವತ್ಸಲಾ ।**
**ಜ್ಯಾಯಸೀ ಪುಂಡರೀಕಾಕ್ಷಾನ್ವಾಸಿಷ್ಠಾನ್ವರಲೋಚನಾ ॥೪೮॥**

**ರಜಸ್ಸುಹೋತ್ರೋ ಬಾಹುಶ್ಚ ಸವನಶ್ಚಾನಘಸ್ತಥಾ ।**
**ಸುತಪಾಶ್ಶುಕ್ರ ಇತ್ಯೇತೇ ಮುನೇ ರ್ವೈ ಸಪ್ತಸೂನವಃ ॥೪೯॥**

**ಯಶ್ಚಾಭಿಮಾನೀ ಭಗವಾನ್ಭವಾತ್ಮಾ ।**
**ಪೈತಾಮಹೋ ವಹ್ನಿರಸುಃ ಪ್ರಜಾನಾಂ ॥**
**ಸ್ವಾಹಾ ಚ ತಸ್ಮಾತ್ಸುಷುವೇ ಸುತಾನಾಂ ।**
**ತ್ರಯಂ ತ್ರಯಾಣಾಂ ಜಗತಾಂ ಹಿತಾಯ ॥೫೦॥**

**ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಾರ್ಧೇ ಪ್ರಜಾಸೃಷ್ಟಿವರ್ಣನಂ ನಾಮ ಪಂಚಮೋಽಧ್ಯಾಯಃ**

---

೪೮–೪೯. ಸುಂದರಿಯೂ ಮಕ್ಕಳಲ್ಲಿ ಪ್ರೀತಿಯುಳ್ಳವಳೂ ಆದ ವಸಿಷ್ಠನ ಪತ್ನಿಯಾದ ಊರ್ಜಾದೇವಿಯು ರಜ, ಸುಹೋತ್ರ, ಬಾಹು, ಸವನ, ಅನಘ, ಸುತಪ, ಶುಕ್ರ, ಎಂಬ ಏಳುಜನ ಮಕ್ಕಳನ್ನು ಪಡೆದಳು.

೫೦. ಮಹಾಮಹಿಮನೂ ರುದ್ರರೂಪನೂ ಬ್ರಹ್ಮಪುತ್ರನೂ ಪ್ರಜೆಗಳಿಗೆ ಪ್ರಾಣಸ್ವರೂಪನೂ ಆದ ಸಕಲ ದೇಹಾಭಿಮಾನಿಯಾದ ಅಗ್ನಿಯೂ ಸ್ವಾಹಾದೇವಿಯೂ ಮೂರು ಲೋಕಕ್ಕೂ ಹಿತವನ್ನುಂಟುಮಾಡುವುದಕ್ಕಾಗಿ ಮೂವರು ಮಕ್ಕಳನ್ನು ಪಡೆದರು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಾರ್ಧದಲ್ಲಿ
ಪ್ರಜಾಸೃಷ್ಟಿವರ್ಣನೆ ಎಂಬ ಐದನೆಯ ಅಧ್ಯಾಯವು
ಮುಗಿದುದು.

## ಅಥ ಶ್ರೀಲಿಂಗಮಹಾಪುರಾಣೇ ಪೂರ್ವಾರ್ಧೇ ಷಷ್ಠೋಽಧ್ಯಾಯಃ

### ಸೂತ ಉವಾಚ

**ಪವಮಾನಃ ಪಾವಕಶ್ಚ ಶುಚಿರಗ್ನಿಶ್ಚ ತೇ ಸ್ಮೃತಾಃ ।**
**ನಿರ್ಮಥ್ಯಃ ಪವಮಾನಸ್ತು ವೈದ್ಯುತಃ ಪಾವಕಃ ಸ್ಮೃತಃ ॥ ೧ ॥**
**ಶುಚಿಸೌರಸ್ತು ವಿಜ್ಞೇಯಃ ಸ್ವಾಹಾಪುತ್ರಾಸ್ತ್ರಯಸ್ತು ತೇ ।**
**ಪುತ್ರೈಃ ಪೌತ್ರೈಸ್ತ್ವಿಹೈತೇಷಾಂ ಸಂಖ್ಯಾ ಸಂಕ್ಷೇಪತಃ ಸ್ಮೃತಾ॥ ೨ ॥**
**ವಿಸೃಜ್ಯ ಸಪ್ತಕಂ ಚಾದೌ ಚತ್ವಾರಿಂಶನ್ನವೈವ ಚ ।**
**ಇತ್ಯೇತೇ ವಹ್ನಯಃ ಪ್ರೋಕ್ತಾಃ ಪ್ರಣೀಯಂತೇಽಧ್ವರೇಷು ಚ॥ ೩ ॥**

---

### ಲಿಂಗಮಹಾಪುರಾಣದ ಪೂರ್ವಾರ್ಧದಲ್ಲಿ ಆರನೆಯ ಅಧ್ಯಾಯವು

(ಈ ಆರನೆಯ ಅಧ್ಯಾಯದಲ್ಲಿ ಅಗ್ನಿಪಿತೃ ರುದ್ರ ಇವರುಗಳಿಂದುಂಟಾದ ಆಶ್ಚರ್ಯ ಕರಗಳಾದ ಸೃಷ್ಟಿಯನ್ನು ವರ್ಣಿಸಲಾಗುವುದು.)

೧. ಅಗ್ನಿದೇವನಿಗೆ ಸ್ವಾಹಾದೇವಿಯಲ್ಲಿ ಪವಮಾನ, ಪಾವಕ, ಶುಚಿ, ಎಂಬ ಮೂವರು ಮಕ್ಕಳಾದರು. ಅರಣಿ ಮುಂತಾದುವುಗಳ ಸಂಘರ್ಷಣದಿಂದ ಹುಟ್ಟಿದ ಅಗ್ನಿಗೆ ಪವಮಾನನೆಂದೂ, ವಿದ್ಯುತ್ತಿನಿಂದ ಹುಟ್ಟಿದ ಅಗ್ನಿಗೆ ಪಾವಕನೆಂದೂ, ಸೂರ್ಯಸಂಬಂಧಿಯಾದ ಅಗ್ನಿಗೆ ಶುಚಿಯೆಂದೂ, ಹೆಸರು ಬಂದಿರುವುದು. ಈ ಮೂವರೂ ಸ್ವಾಹಾದೇವಿಯ ಪುತ್ರರು.

೨–೩. ಮಕ್ಕಳು ಮೊಮ್ಮಕ್ಕಳುಗಳಿಂದ ಕೂಡಿ ಏಳುನೂರ ನಲವತ್ತೊಂಬತ್ತು ಅಗ್ನಿಗಳೆಂದು ಹೇಳಿ ಮೊದಲನೆಯದಾದ ಏಳೆಂಬ ಸಂಖ್ಯೆಯನ್ನು ಬಿಟ್ಟು ನಲವತ್ತೊಂಬತ್ತೇ ಅಗ್ನಿಗಳೆಂದು ಯಜ್ಞಗಳಲ್ಲಿ ಅವರ ಹೆಸರುಗಳನ್ನು ಗ್ರಹಣಮಾಡಿರುವರು. ಇದೇ ಪುರಾಣದ ಉತ್ತರ ಭಾಗದಲ್ಲಿ, "ಭೇದಾ ಏಕೋನಪಂಚಾಶದ್ವೇದ ವಿದ್ಭಿರುದಾಹೃತಾಃ" ಎಂದು ಹೇಳಿರುವರು.

**

**ಸರ್ವೇ ತಪಸ್ವಿನಸ್ತ್ವೇತೇ ಸರ್ವೇ ವ್ರತಭೃತಸ್ಸ್ಮೃತಾಃ।**
**ಪ್ರಜಾನಾಂ ಪತಯಸ್ಸರ್ವೇ ಸರ್ವೇ ರುದ್ರಾತ್ಮಕಾಃ ಸ್ಮೃತಾಃ॥ ೪ ॥**
**ಅಯಜ್ವಾನಶ್ಚ ಯಜ್ವಾನಃ ಪಿತರಃ ಪ್ರೀತಿಮಾನಸಾಃ।**
**ಅಗ್ನಿಷ್ವಾತ್ತಾಶ್ಚ ಯಜ್ವಾನಃ ಶೇಷಾ ಬರ್ಹಿಷದಃ ಸ್ಮೃತಾಃ ॥ ೫ ॥**
**ಮೇನಾಂ ತು ಮಾನಸೀಂ ತೇಷಾಂ ಜನಯಾಮಾಸ ವೈ ಸ್ವಧಾ।**
**ಅಗ್ನಿಷ್ವಾತ್ತಾತ್ಮಜಾ ಮೇನಾ ಮಾನಸೀ ಲೋಕವಿಶ್ರುತಾ ॥ ೬ ॥**
**ಅಸೂತ ಮೇನಾ ಮೈನಾಕಂ ಕ್ರೌಂಚಂ ತಸ್ಯಾನುಜಾಮುಮಾಂ।**
**ಗಂಗಾಂ ಹೈಮವತೀಂ ಜಜ್ಞೇ ಭವಾಂಗಾ ಶ್ಲೇಷ ಪಾವನೀಂ॥ ೭ ॥**
**ಧರಣೀಂ ಜನಯಾಮಾಸ ಮಾನಸೀಂ ಯಜ್ಞಯಾಜಿನೀಂ।**
**ಸ್ವಧಾ ಸಾ ಮೇರುರಾಜಸ್ಯ ಪತ್ನೀ ಪದ್ಮಸಮಾನನಾ ॥ ೮ ॥**

---

೪. ಈ ಅಗ್ನಿವಂಶದವರೆಲ್ಲರೂ ರುದ್ರನ ಅಂಶ ಸಂಭೂತರು, ತಪಸ್ವಿಗಳು, ವ್ರತನಿಯಮಗಳನ್ನು ಧರಿಸಿದವರು, ಎಲ್ಲರೂ ಪ್ರಜಾಪತಿಗಳಾಗಿರುವರು.

೫. ಪ್ರೀತಿಯಿಂದಕೂಡಿದ ಮನಸ್ಸುಳ್ಳವರು ಪಿತೃಗಳು. ಇವರಲ್ಲಿ ಯಾಗಮಾಡಿದವರು, ಯಾಗಮಾಡದವರು ಎಂದು ಎರಡು ಗುಂಪುಗಳು. ಯಾಗಮಾಡಿದವರಿಗೆ ಅಗ್ನಿಷ್ವಾತ್ತರೆಂದೂ ಮಿಕ್ಕವರು ಬರ್ಹಿಷದರೆಂದೂ ಹೆಸರನ್ನು ಹೊಂದಿರುವರು.

೬. ಅಗ್ನಿಷ್ವಾತ್ತ ಎಂಬ ಪಿತೃದೇವತೆಗಳ ಮನಸ್ಸಿನ ಸಂಕಲ್ಪದಿಂದ ಸ್ವಧಾದೇವಿಯು ಮೇನಾ ಎಂಬ ಕನ್ಯೆಯನ್ನು ಪ್ರಸವಿಸಿದಳು. ಈ ಮೇನೆಯು ಹಿಮವಂತನ ಪತ್ನಿಯಾಗಿ ಪ್ರಸಿದ್ಧಳಾಗಿರುವಳು.

೭. ಮೇನೆಯು ಮೈನಾಕ, ಕ್ರೌಂಚ, ಉಮಾ, ಎಂಬ ಮಕ್ಕಳನ್ನು ಹೆತ್ತಳು. ಶಿವನ ತಲೆಯ ಸಂಬಂಧದಿಂದ ಸಕಲವನ್ನೂ ಪರಿಶುದ್ಧಿ ಮಾಡುವ ಶಕ್ತಿಯುಳ್ಳ ಹಿಮವಂತನ ಪುತ್ರಿಯಾದ ಗಂಗೆಯನ್ನೂ ಪಡೆದಳು.

೮. ಮೇರುರಾಜನ ಪತ್ನಿಯಾದ ಸ್ವಧಾದೇವಿಯು ಭೂಮಿಯೆಂಬ ಮಾನಸ ಪುತ್ರಿಯನ್ನು ಹೆತ್ತಳು. ಆ ಭೂಮಿದೇವಿಯು ಸಕಲರಿಗೂ ಯಜ್ಞವನ್ನು ಮಾಡಿಸತಕ್ಕವಳಾದಳು.

ಪಿತರೋಽಮೃತಪಾಃ ಪ್ರೋಕ್ತಾಸ್ತೇಷಾಂ ಚೈವೇಹ ವಿಸ್ತರಃ ।
ಋಷೀಣಾಂ ಚ ಕುಲಂ ಸರ್ವಂ ಶೃಣುಧ್ವಂ ತತ್ಸವಿಸ್ತರಂ ॥ ೯ ॥

ವದಾಮಿ ಪೃಥಗಧ್ಯಾಯಸಂಸ್ಥಿತಂ ವ ಸ್ತದೂರ್ಧ್ವತಃ ।
ದಾಕ್ಷಾಯಣೀ ಸತೀ ಯಾಽಸೌ ಪಾರ್ಶ್ವಂ ರುದ್ರಸ್ಯ ಪಾರ್ವತೀ ॥

ಪಶ್ಚಾದ್ದಕ್ಷಂ ವಿನಿಂದ್ಯೈಷಾ ಪತಿಂ ಲೇಭೇ ಭವಂ ತಥಾ ॥
ತಾಂ ಧ್ಯಾತ್ವಾ ವ್ಯಸೃಜದ್ರುದ್ರಾನನೇಕಾನ್ನೀಲಲೋಹಿತಃ ॥೧೧॥

ಆತ್ಮನಸ್ತು ಸಮಾನ್ಸರ್ವಾನ್ ಸರ್ವ ಲೋಕನಮಸ್ಕೃತಾನ್ ।
ಯಾಚಿತೋ ಮುನಿಶಾರ್ದೂಲಾ ಬ್ರಹ್ಮಣಾ ಪ್ರಹಸನ್ ಕ್ಷಣಾತ್ ॥

ತೈಸ್ತು ಸಂಛಾದಿತಂ ಸರ್ವಂ ಚತುರ್ದಶವಿಧಂ ಜಗತ್ ।
ತಾನ್ದೃಷ್ಟ್ವಾ ವಿವಿಧಾನ್ರುದ್ರಾನ್ನಿರ್ಮಲಾನ್ನೀಲಲೋಹಿತಾನ್ ॥೧೩॥
ಜರಾಮರಣ ನಿರ್ಮುಕ್ತಾನ್ಪ್ರಾಹ ರುದ್ರಾನ್ ಪಿತಾಮಹಃ ।

---

೯. ಎಲೈ ಋಷಿಗಳೇ ಕೇಳಿರಿ : ಪಿತೃದೇವತೆಗಳಲ್ಲಿ ಅಮೃ ಪರೆಂಬ ಒಂದು ಗುಂಪಿರುವುದು. ಅವರ ವಿಷಯಗಳನ್ನು ಸಮಸ್ತ ಋಷಿಗಳವಂಶ ವಿಸ್ತಾರವನ್ನೂ ಮುಂದೆ ಬೇರೆ ಅಧ್ಯಾಯದಲ್ಲಿರುವುದನ್ನು ನಿಮಗೆ ವಿಸ್ತಾರವಾಗಿ ಹೇಳುವೆನು.

೧೦-೧೨. ದಾಕ್ಷಾಯಣಿಯಾದ ಸತೀದೇವಿಯು ದಕ್ಷನ ಯಜ್ಞದಲ್ಲಿ ದಕ್ಷನನ್ನು ನಿಂದಿಸಿ ಶರೀರತ್ಯಾಗಮಾಡಿ, ಪಾರ್ವತಿಯಾಗಿ ಹುಟ್ಟಿ, ಶಿವನನ್ನೇ ಪತಿಯಾಗಿಪಡೆದು, ಆ ರುದ್ರನ ಪಾರ್ಶ್ವದಲ್ಲಿಯೇ ಇದ್ದಳು. ಆ ನೀಲಲೋಹಿತನಾದ ಶಿವನು ಆ ಪಾರ್ವತಿಯನ್ನೇ ಧ್ಯಾನಿಸುತ್ತಾ ಇರಲು ಬ್ರಹ್ಮನ ಪ್ರಾರ್ಥನೆಯಿಂದ ನಗುತ್ತಾ ಒಂದು ಕ್ಷಣದೊಳಗಾಗಿ ತನಗೆ ಸಮಾನರಾದ ಸಮಸ್ತಲೋಕ ಪೂಜ್ಯರಾದ ಅನೇಕಜನ ರುದ್ರರನ್ನು ಸೃಷ್ಟಿಸಿದನು.

೧೩. ಹದಿನಾಲ್ಕುಲೋಕಗಳೂ ಆ ರುದ್ರರಿಂದ ತುಂಬಿಹೋಯಿತು. ಪರಿಶುದ್ಧರೂ ಮುಪ್ಪು ಸಾವಿಲ್ಲದವರೂ ನೀಲಲೋಹಿತರೂ ಆದ ಅನೇಕ ಬಗೆಯ ರುದ್ರರನ್ನು ನೋಡಿ ಬ್ರಹ್ಮನು ಅವರನ್ನುಕುರಿತು ಹೇಳಿದನು.

**ನಮೋಽಸ್ತು ವೋ ಮಹಾದೇವಾ ಸ್ತ್ರಿನೇತ್ರಾ ನೀಲಲೋಹಿತಾಃ॥೧೪॥**
**ಸರ್ವಜ್ಞಾಸ್ಸರ್ವಗಾ ಧೀರ್ಘಾ ಹ್ರಸ್ವಾ ವಾಮನಕಾಶ್ಶುಭಾಃ ।**
**ಹಿರಣ್ಯಕೇಶಾ ದೃಷ್ಟಿಘ್ನಾ ನಿತ್ಯಾ ಬುದ್ಧಾಶ್ಚ ನಿರ್ಮಲಾಃ ॥೧೫॥**
**ನಿರ್ದ್ವಂದ್ವಾ ವೀತರಾಗಾಶ್ಚ ವಿಶ್ವಾತ್ಮಾನೋ ಭವಾತ್ಮಜಾಃ ।**
**ಏವಂ ಸ್ತುತ್ವಾ ತದಾ ರುದ್ರಾನ್ರುದ್ರಂ ಚಾಹ ಭವಂ ಶಿವಂ ।**
**ಪ್ರದಕ್ಷಿಣೀಕೃತ್ಯ ತದಾ ಭಗವಾನ್ ಕನಕಾಂಡಜಃ ॥೧೬॥**
**ನಮೋಽಸ್ತುತೇ ಮಹಾದೇವ ಪ್ರಜಾ ನಾರ್ಹಸಿ ಶಂಕರ ।**
**ಮೃತ್ಯುಹೀನಾ ವಿಭೋ ಸ್ರಷ್ಟುಂ ಮೃತ್ಯುಯುಕ್ತಾಃ ಸೃಜ ಪ್ರಭೋ ॥**
**ತತಸ್ತಮಾಹ ಭಗವಾನ್ನ ಹಿ ಮೇ ತಾದೃಶೀ ಸ್ಥಿತಿಃ ।**
**ಸ ತ್ವಂ ಸೃಜ ಯಥಾಕಾಮಂ ಮೃತ್ಯುಯುಕ್ತಾಃ ಪ್ರಜಾಃ ಪ್ರಭೋ ॥**

---

೧೪-೧೬. ಮಹಾದೇವನ ಅಂಶದವರಾಗಿಯೂ ಮೂರುಕಣ್ಣುಳ್ಳವರಾಗಿಯೂ ನೀಲ ಮತ್ತು ಕೆಂಪು ವರ್ಣದಿಂದ ಕೂಡಿದವರಾಗಿಯೂ ಎಲ್ಲವನ್ನೂ ತಿಳಿದವರಾಗಿ ಸರ್ವವ್ಯಾಪಿಗಳಾಗಿ ದೀರ್ಘಹ್ರಸ್ವ ವಾಮನ ಮುಂತಾದ ಬಗೆಬಗೆಯ ಆಕಾರವುಳ್ಳವರಾಗಿಯೂ ಮಂಗಳಸ್ವರೂಪರಾಗಿ ಚಿನ್ನದ ಬಣ್ಣದ ಕೂದಲುಗಳುಳ್ಳವರಾಗಿ, ನೋಟದಿಂದ ಸಮಸ್ತವನ್ನೂ ನಾಶಪಡಿಸತಕ್ಕ ಶಕ್ತಿವುಳ್ಳವರಾಗಿ, ಶಾಶ್ವತರೂ, ಜ್ಞಾನಿಗಳೂ ಪರಿಶುದ್ಧರೂ ಸುಖ ದುಃಖಾದಿ ದ್ವಂದ್ವವಿಲ್ಲದವರೂ ವೈರಾಗ್ಯವುಳ್ಳವರೂ ಪ್ರಪಂಚಸ್ವರೂಪರೂ ಪರಶಿವನಪುತ್ರರೂ ಆದನಿಮಗೆ ನಮಸ್ಕಾರವು ಎಂದು ಸ್ತೋತ್ರಮಾಡಿ ಮಹಾಮಹಿಮನಾದ ಹಿರಣ್ಯಗರ್ಭಬ್ರಹ್ಮನು ಅವರಿಗೆಲ್ಲರಿಗೂ ಪ್ರದಕ್ಷಿಣೆಯನ್ನುಮಾಡಿ ಇವರ ಉತ್ಪತ್ತಿಗೆ ಕಾರಣನೂ ಮಂಗಳಸ್ವರೂಪನೂ ಆದ ರುದ್ರನನ್ನು ಕುರಿತು ಹೇಳಿದನು.

೧೭. ಸುಖಕರನಾದ ಓ ಮಹಾದೇವನೇ, ನಿನಗೆ ನಮಸ್ಕಾರ ಮಾಡುವೆನು. ಮರಣವಿಲ್ಲದ ಪ್ರಜೆಗಳನ್ನು ಸೃಷ್ಟಿಸಬೇಡ. ಮರಣ ಧರ್ಮದಿಂದ ಕೂಡಿದ ಪ್ರಜೆಗಳನ್ನು ಸೃಷ್ಟಿಸು.

೧೮. ಆಮೇಲೆ ಆ ಬ್ರಹ್ಮನನ್ನು ಕುರಿತು ಮಹಾದೇವನು ಹೇಳಿದನು. ನನಗೆ ಮೃತ್ಯುಸಹಿತರಾದ ಪ್ರಜೆಗಳನ್ನು ಸೃಷ್ಟಿಮಾಡುವ ಸ್ಥಿತಿಯು ಇರುವುದಿಲ್ಲ. ಅಂತಹವರನ್ನು ನೀನೇ ನಿನಗೆ ಇಷ್ಟಬಂದಂತೆ ಸೃಷ್ಟಿಮಾಡು.

ಲಬ್ಧ್ವಾ ಸಸರ್ಜ ಸಕಲಂ ಶಂಕರಾಚ್ಚತುರಾನನಃ ।
ಜರಾಮರಣಸಂಯುಕ್ತಂ ಜಗದೇತಚ್ಚರಾಚರಂ ॥೧೯॥
ಶಂಕರೋಽಪಿ ತದಾರುದ್ರೈರ್ನಿರ್ವೃತಾತ್ಮಾ ಹ್ಯಧಿಷ್ಠಿತಃ ।
ಸ್ಥಾಣುತ್ವಂ ತಸ್ಯ ವೈ ವಿಪ್ರಾಃ ಶಂಕರಸ್ಯ ಮಹಾತ್ಮನಃ ॥೨೦॥
ನಿಷ್ಕಲಸ್ಯಾತ್ಮನಶ್ಶಂಭೋಃ ಸ್ವೇಚ್ಛಾಧೃತ ಶರೀರಿಣಃ ।
ಶಂ ರುದ್ರಸ್ಸರ್ವಭೂತಾನಾಂ ಕರೋತಿ ಘೃಣಯಾ ಯುತಃ ॥೨೧॥
ಶಂಕರಶ್ಚಾಪ್ರಯತ್ನೇನ ತದಾತ್ಮಾ ಯೋಗವಿದ್ಯಯಾ ।
ವೈರಾಗ್ಯಸ್ಥಂ ವಿರಕ್ತಸ್ಯ ವಿಮುಕ್ತಿರ್ಯಚ್ಚ ಮುಚ್ಯತೇ ॥೨೨॥
ಅಣೋಸ್ತು ವಿಷಯತ್ಯಾಗಃ ಸಂಸಾರಭಯತಃ ಕ್ರಮಾತ್ ।
ವೈರಾಗ್ಯಾಜ್ಜಾಯತೇ ಪುಂಸೋ ವಿರಾಗೋ ದರ್ಶನಾಂತರೇ ॥೨೩॥

---

೧೯. ಚತುರ್ಮುಖ ಬ್ರಹ್ಮನು ಶಂಕರನಿಂದ ಆಜ್ಞೆಯನ್ನು ಪಡೆದು ಮುಪ್ಪು ಮತ್ತು ಮರಣಗಳಿಂದ ಕೂಡಿದ ಈ ಸಕಲ ಚರಾಚರ ಪ್ರಪಂಚ ವನ್ನು ಸೃಷ್ಟಿಮಾಡಿದನು.

೨೦–೨೨. ಬ್ರಾಹ್ಮಣರೇ ಕೇಳಿರಿ. ಆಗ ಶಂಕರನು ತಾನು ಸೃಷಿ ಮಾಡಿದ ರುದ್ರರೊಡನೆ ತೃಪ್ತಿ ವೈರಾಗ್ಯದಿಂದ ಇದ್ದನು. ಆದುದರಿಂದಲೇ (ಚಲಿಸದಿದ್ದುದರಿಂದಲೇ) ಮಹಾತ್ಮನೂ ನಿರಾಕಾರನೂ ತನ್ನ ಇಚ್ಛೆ ಯಿಂದ ಶರೀರವನ್ನು ಧರಿಸುವವನೂ ಆದ ಶಿವನಿಗೆ ಸ್ಥಾಣುವೆಂದು ಹೆಸರು ಬಂದಿರುವುದು. ಯೋಗವಿದ್ಯೆಯಿಂದ ಜೀವರ ಮನಸ್ಸು ಯಾವಾಗ ವೈರಾಗ್ಯವನ್ನು ಹೊಂದುವುದೋ ಆಗ ರುದ್ರನು ದಯೆಯಿಂದ ಸಮಸ್ತ ಪ್ರಾಣಿಗಳಿಗೂ ಯಾವ ಪ್ರಯತ್ನವೂ ಇಲ್ಲದೆ ಸುಖವನ್ನುಂಟುಮಾಡುವನು. ಆ ಕಾರಣದಿಂದ ಅವನಿಗೆ ಶಂಕರನೆಂದು ಹೆಸರಾಗಿರುವುದು. ವೈರಾಗ್ಯ ವುಳ್ಳ ಮನುಷ್ಯನಿಗೆ ಉಂಟಾಗುವ ಸಂಸಾರದ ಬಿಡುಗಡೆಯನ್ನೇ ಸುಖ ವೆಂದು ಕರೆಯುವರು.

೨೩. ಮನುಷ್ಯನಿಗೆ ಅಲ್ಪವಾದ ಈ ವಿಷಯ ಸುಖಗಳನ್ನು ಬಿಡ ಬೇಕೆಂಬ ಮನಸ್ಸು ಸಂಸಾರದಲ್ಲಿ ಉಂಟಾಗುವ ದುಃಖರೂಪವಾದ ಭಯದಿಂದ ಉಂಟಾಗಿ, ವೈರಾಗ್ಯವು ಉತ್ಪತ್ತಿಯಾಗುವುದು. ಆಗಾಗ್ಯೆ ಆ ದುಃಖಗಳನ್ನು ನೋಡುತ್ತಿರುವುದರಿಂದ ಕ್ರಮವಾಗಿ ವಿರಕ್ತಿ ಎಂಬ

**ವಿಮುಖ್ಯೋ ವಿಗುಣಃತ್ಯಾಗೋ ವಿಜ್ಞಾನಸ್ಯಾ ವಿಚಾರತಃ।**
**ತಸ್ಯ ಚಾಸ್ಯ ಚ ಸಂಧಾನಂ ಪ್ರಸಾದಾತ್ಪರಮೇಷ್ಠಿನಃ ॥೨೪॥**

---

ಚಿತ್ತವೃತ್ತಿಯು ದೃಢಪಡುವುದು. ಹೀಗೆ ದೃಢವಾದ ವಿರಕ್ತಿಯಿಂದ ವಿಷಯತ್ಯಾಗವಾದರೆ ಚಿತ್ತಶುದ್ಧಿಯು ಮೂಲಕವಾಗಿ ಸಂಸಾರ ಸಂಬಂಧವಾದ ದುಃಖದ ಬಿಡುಗಡೆಯಾಗುವುದು. ಶ್ರುತಿಯಲ್ಲಿ "ನ ಕರ್ಮಣಾ ನ ಪ್ರಜಯಾ ಧನೇನ ತ್ಯಾಗೇನೈಕೇ ಅಮೃತತ್ವ ಮಾನಶುಃ" ಎಂದು ವೈರಾಗ್ಯಕ್ಕೆ ಪ್ರಾಧಾನ್ಯವನ್ನು ಹೇಳಿರುವುದು.

೨೪. ಸಂಸಾರನಿವರ್ತಕವಾದ ಆತ್ಮಾನಾತ್ಮ ವಿವೇಕರೂಪವಾದ ವಿಜ್ಞಾನಕ್ಕಿಂತಲೂ, ಅದಿಲ್ಲದ ತ್ಯಾಗವೆಂಬ ವೈರಾಗ್ಯವು ಗುಣದಲ್ಲಿ ಕಡಿಮೆಯಾದುದರಿಂದ ಇದು ಅಷ್ಟು ಮುಖ್ಯವಲ್ಲವೆಂದು ದೊಡ್ಡವರು ಹೇಳುವರು. ಆತ್ಮಾನಾತ್ಮವಿವೇಕಕ್ಕೂ ವೈರಾಗ್ಯಕ್ಕೂ ಸಹಭಾವವು ಶಿವನ ಅನುಗ್ರಹದಿಂದಲೇ ಉಂಟಾಗುವುದು. ನಾರಾಯಣೋಪನಿಷತ್ತಿನಲ್ಲಿ "ವೇದಾಂತವಿಜ್ಞಾನ ಸುನಿಶ್ಚಿತಾರ್ಥಾಃ ಸನ್ಯಾಸಯೋಗಾದ್ಯತಯಶ್ಶುದ್ಧಸತ್ವಾಃ। ತೇ ಬ್ರಹ್ಮಲೋಕೇ ತು ಪರಾಂತಕಾಲೇ ಪರಾಮೃತಾತ್ಪರಿಮುಚ್ಯಂತಿ ಸರ್ವೇ" ॥ ಎಂದು ಹೇಳಿರುವುದು. ಇಲ್ಲಿ ಸನ್ಯಾಸ ಎಂದರೆ ತ್ಯಾಗಕ್ಕೆ ಮತ್ತು ಜ್ಞಾನಕ್ಕೆ ಮೋಕ್ಷಸಾಧನತ್ವವನ್ನು ಹೇಳಿದೆ. ಬೇರೆ ಉಪನಿಷತ್ತುಗಳಲ್ಲಿ "ತರತಿ ಶೋಕ ಮಾತ್ಮವಿತ್" "ಜ್ಞಾನಾದೇವತು ಕೈವಲ್ಯಂ ಪ್ರಾಪ್ಯತೇ ಯೇನ ಮುಚ್ಯತೇ," ಎಂದು ಜ್ಞಾನಕ್ಕೆ ಮೋಕ್ಷಹೇತುತ್ವವನ್ನು ಹೇಳಿದೆ. ವೇದಾಂತ ವಿಜ್ಞಾನವೆಂದರೆ ಉಪನಿಷದ್ವಾಕ್ಯಗಳಿಂದ ಉಂಟಾಗುವ ಜೀವಬ್ರಹ್ಮೈಕ್ಯದ ವಿಷಯವಾದ ತಿಳಿವಳಿಕೆಯು. ಈ ತಿಳಿವಳಿಕೆಯು ಯಾರಿಗೆ ಉಂಟಾಗುವುದೋ ಅವರಿಗೆ ಅವಿದ್ಯಾನಿವೃತ್ತಿದ್ವಾರಾ ಮೋಕ್ಷವುಂಟಾಗುವುದು. ತ್ಯಾಗದಿಂದಲಾದರೋ ವಿಷಯಭೋಗ ನಿವೃತ್ತಿಯಿಂದ ಚಿತ್ತಶುದ್ಧಿಯುಂಟಾಗಿ ಸತ್ಕರ್ಮದಿಂದ ಬ್ರಹ್ಮಲೋಕ ಪ್ರಾಪ್ತಿಯಾಗಿ ಬ್ರಹ್ಮನೊಡನೆ ಮುಕ್ತಿಯಾಗಬೇಕಾಗುವುದು. ಒಟ್ಟಿನಲ್ಲಿ ಅಜ್ಞಾನಿಗಳಿಗೆ ಪ್ರಳಯದಲ್ಲಿಯೂ ಮುಕ್ತಿಇಲ್ಲ. ಜ್ಞಾನಿಗಳಿಗಾದರೋ ದೇಹಪಾತವಾದ ಮೇಲೆ ಮುಕ್ತಿ ಯುಂಟಾಗುವುದು. ಅನಾತ್ಮಸ್ವರೂಪವಾದ ದೇಹಾದಿಗಳಲ್ಲಿ ಅಭಿಮಾನವನ್ನು ಬಿಡುವುದೇ ಮುಕ್ತಿಯು.

ಧರ್ಮೋ ಜ್ಞಾನಂ ಚ ವೈರಾಗ್ಯ ಮೈಶ್ವರ್ಯಂ ಶಂಕರಾದಿಹ ।
ಸ ಏವ ಶಂಕರಸ್ಸಾಕ್ಷಾತ್ಪಿನಾಕೀ ನೀಲಲೋಹಿತಃ ॥೨೫॥
ಯೇ ಶಂಕರಾಶ್ರಿತಾಸ್ಸರ್ವೇ ಮುಚ್ಯಂತೇ ತೇ ನ ಸಂಶಯಃ ।
ನ ಗಚ್ಛಂತ್ಯೇವ ನರಕಂ ಪಾಪಿಷ್ಠಾ ಅಪಿ ದಾರುಣಂ ॥೨೬॥
ಆಶ್ರಿತಾಶ್ಶಂಕರಂ ತಸ್ಮಾತ್ಪ್ರಾಪ್ನುವಂತಿ ಚ ಶಾಶ್ವತಂ ।

ಋಷಯ ಊಚುಃ

ಮಾಯಾಂತಾಶ್ಚೈವ ಘೋರಾದ್ಯಾ ಹ್ಯಷ್ಟಾವಿಂಶತಿ ರೇವ ಚ ॥೨೭॥
ಕೋಟಯೋ ನರಕಾಣಾಂ ತು ಪಚ್ಯಂತೇ ತಾಸು ಪಾಪಿನಃ ।
ಅನಾಶ್ರಿತಾಶ್ಶಿವಂ ರುದ್ರಂ ಶಂಕರಂ ನೀಲಲೋಹಿತಂ ॥೨೮॥

---

೨೫. ಜೀವರಿಗೆ ಧರ್ಮವೂ ಜ್ಞಾನವೂ ವೈರಾಗ್ಯವೂ ಐಶ್ವರ್ಯವೂ ಶಂಕರನಿಂದಲೇ ಉಂಟಾಗುವುದು. ನಿರತಿಶಯ ಸುಖವನ್ನುಂಟು ಮಾಡುವ ನಿರಾಕಾರನಾದ ಪರಮಾತ್ಮನನ್ನೇ ಶಂಕರನೆಂದು ಹೇಳುವರು. ಅವನೇ ಪಿನಾಕವೆಂಬ ಧನುಸ್ಸನ್ನು ಹಿಡಿದು ಕುತ್ತಿಗೆಯಲ್ಲಿ ನೀಲಿಯ ಬಣ್ಣವೂ ಮಿಕ್ಕ ಅವಯವಗಳಲ್ಲಿ ಕೆಂಪುಬಣ್ಣವೂ ಉಳ್ಳವನಾಗಿ ಸಾಕಾರ ನಾಗಿರುವನು.

೨೬. ಯಾರು ಶಿವನ ಭಕ್ತರಾಗಿರುವರೋ ಅವರು ಪಾಪಕಾರ್ಯ ಮಾಡಿದವರಾದರೂ ಭಯಂಕರವಾದ ನರಕಕ್ಕೆ ಹೋಗುವುದಿಲ್ಲ. ಅವನ ನ್ನಾಶ್ರಯಿಸಿದವರೆಲ್ಲರೂ ಮುಕ್ತರಾಗುವುದರಲ್ಲಿ ಸಂದೇಹವಿಲ್ಲ.

ಆದುದರಿಂದ ಸುಖವನ್ನುಂಟುಮಾಡುವ ಶಿವನನ್ನು ಭಕ್ತಿಯಿಂದ ಪೂಜಿಸಿದವರು ಶಾಶ್ವತವಾದ ಮೋಕ್ಷವನ್ನು ಪಡೆಯುವರು.

೨೭–೨೮. ಋಷಿಗಳು ಹೇಳಿದರು. ತಮ, ಮೋಹ, ಮಹಾ ಮೋಹ, ತಾಮಿಸ್ರ, ಅಂಧತಾಮಿಸ್ರ, ಎಂಬ ಐದು ಬಗೆಯ ಅವಿದ್ಯೆಯೇ ಮೂಲವಾಗಿ ಉಳ್ಳ, ಅಹಂಕಾರವೇ ಕಾರಣವಾದ, ಇಪ್ಪತ್ತೆಂಟು ಕೋಟಿ ನರಕಗಳಿರುವುವು ಮಂಗಳಕರನೂ ಪಾಪಿಗಳ ವಿಷಯದಲ್ಲಿ ಕ್ರೂರನೂ, ಸತ್ಕರ್ಮಿಗಳಿಗೆ ಸುಖವನ್ನುಂಟುಮಾಡುವವನೂ, ನೀಲಲೋಹಿತನೂ,

**ಆಶ್ರಯಂ ಸರ್ವಭೂತಾನಾಮವ್ಯಯಂ ಜಗತಾಂ ಪತಿಂ ।**
**ಪುರುಷಂ ಪರಮಾತ್ಮಾನಂ ಪುರುಹೂತಂ ಪುರುಷ್ಟುತಂ ॥೨೯॥**
**ತಮಸಾ ಕಾಲರುದ್ರಾಖ್ಯಂ ರಜಸಾ ಕನಕಾಂಡಜಂ ।**
**ಸತ್ವೇನ ಸರ್ವಗಂ ವಿಷ್ಣುಂ ನಿರ್ಗುಣತ್ವೇ ಮಹೇಶ್ವರಂ ॥೩೦॥**
**ಕೇನ ಗಚ್ಛಂತಿ ನರಕಂ ನರಾಃ ಕೇನ ಮಹಾಮತೇ ।**
**ಕರ್ಮಣಾಃ ಕರ್ಮಣಾ ವಾಽಪಿ ಶ್ರೋತುಂ ಕೌತೂಹಲಂ ಹಿ ನಃ ॥**

**ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಾರ್ಧೇ ಷಷ್ಠೋಽಧ್ಯಾಯಃ**

---

೨೯–೩೦. ಸಮಸ್ತಭೂತಗಳಿಗೂ ಆಶ್ರಯನೂ ನಾಶರಹಿತನೂ ಲೋಕಗಳಿಗೆಲ್ಲಕ್ಕೂ ಒಡೆಯನೂ ಪರಮಾತ್ಮನೂ ಶ್ರೇಷ್ಠಪುರುಷನೂ ಯಾಗಗಳಲ್ಲಿ ಕರೆಯಲ್ಪಟ್ಟು ಸ್ತೋತ್ರಮಾಡಿಸಿಕೊಳ್ಳತಕ್ಕವನೂ, ತಮೋಗುಣದಿಂದ ಕಾಲರುದ್ರನೆಂಬ ಹೆಸರನ್ನು ಹೊಂದಿದವನೂ, ರಜೋಗುಣಾಧಿಕ್ಯದಿಂದ ಹಿರಣ್ಯಗರ್ಭಬ್ರಹ್ಮನೆಂದುಹೆಸರುಪಡೆದವನೂ ಸತ್ವಗುಣಾಧಿಕ್ಯದಿಂದ ಸರ್ವವ್ಯಾಪಿಯಾದ ವಿಷ್ಣುವೆಂಬ ಹೆಸರನ್ನು ಪಡೆದವನೂ, ನಿರ್ಗುಣನಾಗಿರುವುದರಿಂದ ಮಹೇಶ್ವರನೆಂಬ ಹೆಸರನ್ನು ಪಡೆದವನೂ, ಆದ ಆ ದೇವನನ್ನು ಆಶ್ರಯಿಸದೆ ಇರುವವರು ಪಾಪಿಗಳಾಗಿ ಆ ನರಕಗಳಲ್ಲಿ ದುಃಖವನ್ನನುಭವಿಸುವರು.

೩೧. ಮಹಾಬುದ್ಧಿಶಾಲಿಯಾದ ಸೂತನೇ, ಮನುಷ್ಯರು ಯಾವುದರಿಂದ ನರಕಕ್ಕೆ ಹೋಗುವುದಿಲ್ಲ? ಕರ್ಮದಿಂದಲೇ? ಅಥವಾ ಅಕರ್ಮದಿಂದಲೇ? ಇದನ್ನು ಕೇಳಬೇಕೆಂದು ನಮಗೆ ಅತ್ಯಾಸಕ್ತಿಯು ಇರುವುದು.

ಇಲ್ಲಿಗೆ ಲಿಂಗಮಹಾಪುರಾಣದಲ್ಲಿ ಪೂರ್ವಾರ್ಧದಲ್ಲಿ
ಆರನೆಯ ಅಧ್ಯಾಯವು
ಮುಗಿದುದು.

## ಅಥ ಶ್ರೀಲಿಂಗಮಹಾಪುರಾಣೇ ಪೂರ್ವಾರ್ಧೇ ಸಪ್ತಮೋಽಧ್ಯಾಯಃ

**॥ ಸೂತ ಉವಾಚ ॥**

**ರಹಸ್ಯಂ ವಃ ಪ್ರವಕ್ಷ್ಯಾಮಿ ಭವಸ್ಯಾಮಿತತೇಜಸಃ ।**
**ಪ್ರಭಾವಂ ಶಂಕರಸ್ಯಾದ್ಯಂ ಸಂಕ್ಷೇಪಾತ್ಸರ್ವದರ್ಶಿನಃ ॥ ೧ ॥**

**ಯೋಗಿನ ಸ್ಸರ್ವತತ್ವಜ್ಞಾಃ ಪರಂ ವೈರಾಗ್ಯಮಾಶ್ರಿತಾಃ ।**
**ಪ್ರಾಣಾಯಾಮಾದಿಭಿಶ್ಚಾಷ್ಟಸಾಧನೈ ಸ್ಸಹಚಾರಿಣಃ ॥ ೨ ॥**

**ಕರುಣಾದಿಗುಣೋಪೇತಾಃ ಕೃತ್ವಾಽಪಿ ವಿವಿಧಾನಿ ತೇ ।**
**ಕರ್ಮಾಣಿ ನರಕಂ ಸ್ವರ್ಗಂ ಗಚ್ಛಂತ್ಯೇವ ಸ್ವಕರ್ಮಣಾ ॥ ೩ ॥**

---

ಲಿಂಗಮಹಾಪುರಾಣದ ಪೂರ್ವಾರ್ಧದಲ್ಲಿ ಏಳನೆಯ ಅಧ್ಯಾಯವು

( ಈ ಏಳನೆಯ ಅಧ್ಯಾಯದಲ್ಲಿ ಶಿವನ ಅನುಗ್ರಹದಿಂದಲೇ ಮೋಕ್ಷ ವುಂಟಾಗುವುದೆಂದೂ ವ್ಯಾಸರೂ ಮನುಗಳೂ ಯೋಗಾಚಾರ್ಯರೂ ಅವರ ಶಿಷ್ಯರು ಇವರ ವೃತ್ತಾಂತಗಳೂ ಹೇಳಲ್ಪಡುವುವು )

೧. ಸೂತನು ಹೇಳಿದನು : ಸರ್ವ ಶಾಸ್ತ್ರಗಳನ್ನೂ ತಿಳಿದಿರುವ ಋಷಿಗಳೇ, ಕೇಳಿರಿ. ನರಕದುಃಖ ನಿವೃತ್ತಿಯು ಜನನಮರಣ ರೂಪ ವಾದ ಸಂಸಾರದ ಬಿಡುಗಡೆಯಿಂದಲೇ ಉಂಟಾಗುವುದು. ಆ ಬಿಡಗಡೆಯು ಜ್ಞಾನದಿಂದ ಉಂಟಾಗುವುದು. ಇದಕ್ಕೆ “ ಜ್ಞಾನಾದೇವ ತು ಕೈವಲ್ಯಂ” ಎಂಬ ಶ್ರುತಿಯೇ ಪ್ರಮಾಣವು. ಆ ಜ್ಞಾನವು ಮುಖ್ಯವಾದ ವೇದೋಕ್ತವಾದ ಕರ್ಮಾಚರಣೆಯಿಂದಲೂ, ಅಕರ್ಮ ರೂಪವಾದ ಫಲ ಸನ್ಯಾಸದಿಂದಲೂ ಉಂಟಾಗುವುದು. ಇವುಗಳೆಲ್ಲವೂ ಶಿವನ ಅನು ಗ್ರಹವಿಲ್ಲದೆ ಉಂಟಾಗುವುದಿಲ್ಲ. ಆದುದರಿಂದ ಇವುಗಳಿಗೆಲ್ಲಕ್ಕೂ ಕಾರಣ ವಾದ ಅಸಮಾನವಾದ ತೇಜಸ್ಸೂ ಮಹಾಮಹಿಮೆಯೂ ಉಳ್ಳ ಶಿವನ ಪ್ರಸಾದದ ಮಹಿಮೆಯ ಸ್ವರೂಪದ ಗುಟ್ಟನ್ನು ನಿಮಗೆ ಈಗ ಸಂಗ್ರಹ ವಾಗಿ ಹೇಳುವೆನು.

೨–೩. ಪ್ರಾಣಾಯಾಮವೇ ಮುಂತಾದ ಎಂಟು ಸಾಧನಗಳ ಆಚರಣೆಯಿಂದ ಕೂಡಿದ ಯೋಗಿಗಳೂ, ಸಕಲತತ್ವಗಳನ್ನೂ ಬಲ್ಲ

ಪ್ರಸಾದಾಜ್ಜಾಯತೇ ಜ್ಞಾನಂ ಜ್ಞಾನಾದ್ಯೋಗಃ ಪ್ರವರ್ತತೇ ।
ಯೋಗೇನ ಜಾಯತೇ ಮುಕ್ತಿಃ ಪ್ರಸಾದಾದಖಿಲಂ ತತಃ ॥ ೪॥

ಪ್ರಸಾದಾದ್ಯದಿ ವಿಜ್ಞಾನಂ ಸ್ವರೂಪಂ ವಕ್ತುಮರ್ಹಸಿ ।
ದಿವ್ಯಂ ಮಾಹೇಶ್ವರಂ ಚೈವ ಯೋಗಂ ಯೋಗವಿದಾಂ ವರ ॥ ೫ ॥

ಕಥಂ ಕರೋತಿ ಭಗವಾನ್ ಚಿಂತಯಾ ರಹಿತಶ್ಶಿವಃ ।
ಪ್ರಸಾದಂ ಯೋಗಮಾರ್ಗೇಣ ಕಸ್ಮಿನ್ಕಾಲೇ ನೃಣಾಂ ವಿಭುಃ ॥ ೬ ॥

॥ ರೋಮಹರ್ಷಣ ಉವಾಚ ॥

ದೇವಾನಾಂ ಚ ಋಷೀಣಾಂ ಚ ಪಿತೃಣಾಂ ಸನ್ನಿಧೌ ಪುರಾ ।
ಶೈಲಾದಿನಾ ತು ಕಥಿತಂ ಶೃಣ್ವಂತು ಬ್ರಹ್ಮಸೂನವೇ ॥ ೭ ॥

---

ಸಾಂಖ್ಯರೂ, ಉತ್ತಮವಾದ ವೈರಾಗ್ಯವನ್ನು ಹೊಂದಿದವರೂ, ದಯಾ ಮುಂತಾದ ಆತ್ಮ ಗುಣಗಳಿಂದ ಕೂಡಿದವರೂ, ಇವರೆಲ್ಲರೂ ಅನೇಕ ಬಗೆಯಾದ ಕರ್ಮಗಳನ್ನು ಮಾಡಿ ತಾವುಮಾಡಿದ ಕರ್ಮಗಳಿಗೆ ಫಲವಾದ ಸ್ವರ್ಗವನ್ನೂ ನರಕವನ್ನೂ ಹೊಂದುವರು.

೪. ಶಿವನ ಅನುಗ್ರಹದಿಂದ ಜ್ಞಾನವುಂಟಾಗುತ್ತದೆ. ಜ್ಞಾನದಿಂದ ಯೋಗಾಭ್ಯಾಸದಲ್ಲಿ ಮನಸ್ಸುನಿಲ್ಲುತ್ತದೆ. ಆಯೋಗಾಭ್ಯಾಸದಿಂದ ಮುಕ್ತಿಯುಂಟಾಗುತ್ತದೆ. ಆದುದರಿಂದ ಸಮಸ್ತ ಪ್ರಯೋಜನಗಳೂ ಶಿವನ ಅನುಗ್ರದಿಂದಲೇ ಉಂಟಾಗುವುವು.

೫. ಋಷಿಗಳು ಹೇಳಿದರು: ಯೋಗವನ್ನು ಬಲ್ಲವರಲ್ಲಿ ಶ್ರೇಷ್ಠನಾದ ಓ ಸೂತನೇ, ಶಿವನ ಅನುಗ್ರದಿಂದಲೇ ಆತ್ಮಜ್ಞಾನವು ಉಂಟಾಗವುದಾಗಿದ್ದರೆ ಆ ಅತ್ಯುತ್ತಮವಾದ ಮಹೇಶ್ವರನ ಪ್ರಸಾದದ ಸ್ವರೂಪವನ್ನೂ ಯೋಗದ ಲಕ್ಷಣವನ್ನೂ ನಮಗೆ ವಿಸ್ತರಿಸಿ ಹೇಳಬೇಕು.

೬. ಮಹಾತ್ಮನೂ ಸರ್ವವ್ಯಾಪಿಯೂ ಯಾವಸಂಕಲ್ಪವೂ ಇಲ್ಲದವನೂ ಆದ ಶಿವನು ಯೋಗಮಾರ್ಗದಿಂದ ಯಾವಾಗ? ಹೇಗೆ? ಮನುಷ್ಯರಿಗೆ ಅನುಗ್ರಹವನ್ನು ಮಾಡುವನು?

೭. ಋಷಿಗಳಿಗೆ ಪುರಾಣದ ಕಥೆಗಳನ್ನು ಹೇಳಿ ಅವರೆಲ್ಲರಿಗೂ ರೋಮಾಂಚವಾಗುವಷ್ಟು ಸಂತೋಷಪಡಿಸತಕ್ಕವನಾದ ಸೂತನು ಹೀಗೆ ಹೇಳಿದನು. ಹಿಂದೆ ದೇವತೆಗಳು, ಪಿತೃಗಳು, ಋಷಿಗಳು, ಇವರ

ವ್ಯಾಸಾವತಾರಾಣಿ ತಥಾ ದ್ವಾಪರಾಂತೇ ಚ ಸುವ್ರತಾಃ ।
ಯೋಗಾಚಾರ್ಯಾವತಾರಾಣಿ ತಥಾ ಶಿಷ್ಯೇ ತು ಶೂಲಿನಃ ॥ ೮ ॥
ತತ್ರ ತತ್ರ ವಿಭೋಃಶ್ಶಿಷ್ಯಾಶ್ಚತ್ವಾರಃ ಶಮಭಾಜನಾಃ ।
ಪ್ರಶಿಷ್ಯಾ ಬಹವಸ್ತೇಷಾಂ ಪ್ರಸೀದತ್ಯೇವಮೀಶ್ವರಃ ॥ ೯ ॥
ಏವಂ ಕ್ರಮಾಗತಂ ಜ್ಞಾನಂ ಮುಖಾದೇವ ನೃಣಾಂ ವಿಭೋಃ ।
ವೈಶ್ಯಾಂತಂ ಬ್ರಾಹ್ಮಣಾದ್ಯಂ ಹಿ ಘೃಣಯಾ ಚಾನುರೂಪತಃ ॥೧೦॥

॥ ಋಷಯ ಊಚುಃ ॥

ದ್ವಾಪರೇ ದ್ವಾಪರೇ ವ್ಯಾಸಾಃ ಕೇ ವೈ ಕಸ್ಮಿನ್ನಂತರೇಷು ವೈ ।
ಕಲ್ಪೇಷು ಕಸ್ಮಿನ್ಕಲ್ಪೇ ನೋ ವಕ್ತುಮರ್ಹಸಿ ಚಾತ್ರ ತಾನ್ ॥೧೧॥

---

ಇದುರಿನಲ್ಲಿ ಬ್ರಹ್ಮಪುತ್ರನಾದ ಸನತ್ಕುಮಾರನಿಗೆ ಶಿಲಾದ ಮುನಿಯ ಪುತ್ರನಾದ ನಂದಿಯು ಹೇಳಿದುದನ್ನೇ ಹೇಳುವೆನು. ಕೇಳಿರಿ.

೮-೯. ಸರ್ವವ್ಯಾಪಿಯಾದ ಶಿವನು ಪ್ರತಿದ್ವಾಪರಯುಗದ ಕೊನೆಯಲ್ಲಿಯೂ ವ್ಯಾಸಾವತಾರವನ್ನೂ ಕಲಿಯುಗಗಳಲ್ಲಿ ಯೋಗಾಚಾರ್ಯರ ಅವತಾರಗಳನ್ನೂ ಮಾಡುವನು. ಆ ಎಲ್ಲ ಸಂದರ್ಭಗಳಲ್ಲೂ ಆ ಮಹಾಮಹಿಮನಾದ ಶಿವನಿಗೆ ಶಾಂತರಾದ ನಾಲ್ಕುಜನ ಶಿಷ್ಯರಿರುವರು. ಅವರ ಶಿಷ್ಯರೂ ಪ್ರಶಿಷ್ಯರೂ ಅನೇಕರಾಗುವರು. ಈ ರೀತಿಯಲ್ಲಿ ಯೋಗಮಾರ್ಗದಿಂದ ಶಿವನು ಜೀವರಿಗೆ ಅನುಗ್ರಹವನ್ನು ಮಾಡುತ್ತಿರುವನು.

೧೦. ಈ ರೀತಿಯಲ್ಲಿ ಶಿಷ್ಯಪ್ರಶಿಷ್ಯ ಕ್ರಮದಿಂದ ಆ ಶಿವನ ಮುಖದಿಂದಲೇ ಹೊರಬಿದ್ದ ಜ್ಞಾನವು ಬ್ರಾಹ್ಮಣ, ಕ್ಷತ್ರಿಯ, ವೈಶ್ಯ, ವರ್ಣದ ಜನರಿಗೆ ಆ ದೇವನ ದಯೆಯಿಂದ ಆಯಾ ವರ್ಣಾನುರೂಪವಾಗಿ ಉಪದೇಶಕ್ರಮದಲ್ಲಿ ಬಂದಿರುವುದು.

೧೧. ಋಷಿಗಳು ಹೇಳಿದರು: ಪ್ರತಿಯೊಂದು ದ್ವಾಪರಯುಗದಲ್ಲಿಯೂ ವ್ಯಾಸರು ಯಾರು? ಯಾವ ಮನ್ವಂತರದಲ್ಲಿ ಯಾವ ಕಲ್ಪದಲ್ಲಿ ಅವರು ಅವತಾರ ಮಾಡುವರು? ಅವುಗಳನ್ನು ನಮಗೆ ಹೇಳಬೇಕು.

ಶೃಣ್ವಂತು ಕಲ್ಪೇ ವಾರಾಹೇ ದ್ವಿಜಾ ವೈವಸ್ವತಾಂತರೇ ।
ವ್ಯಾಸಾಶ್ಚ ಸಾಂಪ್ರತಂ ರುದ್ರಾಂ ಸ್ತಥಾ ಸರ್ವಾಂತರೇಷು ವೈ॥೧೨॥
ವೇದಾನಾಂ ಚ ಪುರಾಣಾನಾಂ ತಥಾ ಜ್ಞಾನಪ್ರದರ್ಶಕಾನ್ ।
ಯಥಾಕ್ರಮಂ ಪ್ರವಕ್ಷ್ಯಾಮಿ ಸರ್ವಾವರ್ತೇಷು ಸಾಂಪ್ರತಂ ॥೧೩॥
ಕ್ರತು ಸ್ಸತ್ಯೋ ಭಾರ್ಗವಶ್ಚ ಅಂಗಿರಾಸ್ಸವಿತಾ ದ್ವಿಜಾಃ ।
ಮೃತ್ಯು ಶ್ಶತಕ್ರತು ರ್ಧೀಮಾನ್ವಸಿಷ್ಠೋ ಮುನಿಪುಂಗವಃ ॥೧೪॥
ಸಾರಸ್ವತಸ್ತ್ರಿಧಾಮಾ ಚ ತ್ರಿವೃತೋ ಮುನಿಪುಂಗವಃ ।
ಶತತೇಜಾಃ ಸ್ವಯಂ ಧರ್ಮೋ ನಾರಾಯಣ ಇತಿ ಶ್ರುತಃ ॥೧೫॥
ತರಕ್ಷುಶ್ಚಾರುಣಿ ರ್ಧೀಮಾಂ ಸ್ತಥಾ ದೇವಃ ಕೃತಂಜಯಃ ।
ಋತಂಜಯೋ ಭರಧ್ವಾಜೋ ಗೌತಮಃ ಕವಿಸತ್ತಮಃ ॥೧೬॥
ವಾಚಶ್ರವಾ ಮುನಿಸ್ಸಾಕ್ಷಾತ್ತಥಾ ಶುಷ್ಮಾಯಣಿ ಶ್ಶುಚಿಃ ।
ತೃಣಬಿಂದು ರ್ಮುನೀ ರುಕ್ಷಃ ಶಕ್ತಿಶ್ಶಾಕ್ತೇಯ ಉತ್ತರಃ ॥೧೭॥

---

೧೨–೧೩. ಸೂತನು ಹೇಳಿದನು: ಋಷಿಗಳೇ, ಕೇಳಿರಿ. ವರಾಹ ಕಲ್ಪದಲ್ಲಿ ವೈವಸ್ವತ ಮನ್ವಂತರದಲ್ಲಿ ಪ್ರತಿಯೊಂದು ದ್ವಾಪರಯುಗ ದಲ್ಲಿಯೂ ರುದ್ರನು ವ್ಯಾಸಾವತಾರವನ್ನು ಮಾಡಿ ಜ್ಞಾನವನ್ನು ಪ್ರಕಟ ಪಡಿಸಿ ವೇದಗಳನ್ನು ವಿಭಾಗಮಾಡಿ ಪುರಾಣಗಳನ್ನು ರಚಿಸಿರುವನು. ಆ ವ್ಯಾಸಾವತಾರದಲ್ಲಿದ್ದ ಹೆಸರುಗಳನ್ನು ಕ್ರಮವಾಗಿ ಹೇಳುವೆನು.

೧೪–೧೮. ೧. ಕ್ರತು. ೨. ಸತ್ಯ, ೩. ಭಾರ್ಗವ, ೪. ಅಂಗಿರಸ್ಸು, ೫. ಸವಿತೃ, ೬. ಮೃತ್ಯು, ೭. ಶತಕ್ರತು, ೮. ವಸಿಷ್ಠ, ೯. ಸಾರಸ್ವತ, ೧೦. ತ್ರಿಧಾಮಾ, ೧೧. ತ್ರಿವೃತ, ೧೨. ಶತತೇಜ, ೧೩. ನಾರಾಯಣ, ೧೪. ತರಕ್ಷು, ೧೫. ಅರುಣಿ, ೧೬. ದೇವ, ೧೭. ಕೃತಂಜಯ, ೧೮. ಋತಂಜಯ, ೧೯. ಭರದ್ವಾಜ, ೨೦. ಗೌತಮ, ೨೧. ವಾಚ ಶ್ರವಸ್ಸು, ೨೨. ಶುಷ್ಮಾಯಣಿ, ೨೩. ತೃಣಬಿಂದು, ೨೪. ರುಕ್ಷ, ೨೫. ಶಕ್ತಿ, ೨೬. ಶಕ್ತಿ ಪುತ್ರನಾದ ಪರಾಶರ, ೨೭. ಜಾತೂಕರ್ಣ್ಯ, ೨೮. ಕೃಷ್ಣದ್ವೈಪಾಯನ ಇವರೇ ಈ ವೈವಸ್ವತ ಮನ್ವಂತರದಲ್ಲಿ ಕಳೆದು,

ಜಾತೂಕರ್ಣ್ಯೋ ಹರಿಸ್ಸಾಕ್ಷಾತ್ಕೃಷ್ಣದ್ವೈಪಾಯನೋ ಮುನಿಃ ।
ವ್ಯಾಸಾಸ್ತ್ವೇತೇ ಚ ಶೃಣ್ವಂತು ಕಲೌ ಯೋಗೇಶ್ವರಾನ್ಕ್ರಮಾತ್ ॥
ಅಸಂಖ್ಯಾತಾ ಹಿ ಕಲ್ಪೇಷು ವಿಭೋಸ್ಸರ್ವಾಂತರೇಷು ಚ ।
ಕಲೌ ರುದ್ರಾವತಾರಾಣಾಂ ವ್ಯಾಸಾನಾಂ ಕಿಲ ಗೌರವಾತ್ ॥೧೯॥
ವೈವಸ್ವತಾಂತರೇ ಕಲ್ಪೇ ವಾರಾಹೇ ಯೇ ಚ ತಾನ್ಪುನಃ ।
ಅವತಾರಾನ್ಪ್ರವಕ್ಷ್ಯಾಮಿ ತಥಾ ಸರ್ವಾಂತರೇಷು ವೈ ॥೨೦॥

॥ ಋಷಯ ಊಚುಃ ॥

ಮನ್ವಂತರಾಣಿ ವಾರಾಹೇ ವಕ್ತುಮರ್ಹಸಿ ಸಾಂಪ್ರತಂ ।
ತಥೈವ ಚೋರ್ಧ್ವಕಲ್ಪೇಷು ಸಿದ್ಧಾನ್ವೈವಸ್ವತಾಂತರೇ ॥೨೧॥

॥ ರೋಮಹರ್ಷಣ ಉವಾಚ ॥

ಮನುಃ ಸ್ವಾಯಂಭುವ ಸ್ತ್ವಾದ್ಯ ಸ್ತತಃ ಸ್ವಾರೋಚಿಷೋ ದ್ವಿಜಾಃ ।
ಉತ್ತಮ ಸ್ತಾಮಸ ಶ್ಚೈವ ರೈವತ ಶ್ಚಾಕ್ಷುಷ ಸ್ತಥಾ ॥೨೨॥

---

ಹೋದ ೨೮ ದ್ವಾಪರಯುಗಗಳಲ್ಲಿ ವೇದವಿಭಾಗ ಕರ್ತರಾಗಿದ್ದವರು. ಕಲಿಯುಗದಲ್ಲಿ ಯೋಗೇಶ್ವರರಾಗಿದ್ದವರನ್ನು ಹೇಳುವೆನು, ಕೇಳಿ.

೧೯–೨೦. ಲೆಕ್ಕವಿಲ್ಲದಷ್ಟು ಕಲ್ಪಗಳೂ ಮನ್ವಂತರಗಳೂ ಕಳೆದು ಹೋಗಿರುವುವು. ಆ ಕಲಿಯುಗಗಳಲ್ಲಿ ರುದ್ರನು ಮಾಡಿದ ಅವತಾರಗಳನ್ನೂ ವ್ಯಾಸರ ಹೆಸರುಗಳನ್ನೂ ಹೇಳುವುದು ವಿಸ್ತಾರಕ್ಕೆ ಕಾರಣವಾದುದರಿಂದ ವರಾಹಕಲ್ಪದಲ್ಲಿ ವೈವಸ್ವತಮನ್ವಂತರದಲ್ಲಿ ರುದ್ರನು ಮಾಡಿದ ಅವತಾರಗಳನ್ನು ಹೇಳುತ್ತೇನೆ. ಇದರಂತೆಯೇ ಸಕಲಮನ್ವಂತರಗಳಲ್ಲಿಯೂ ರುದ್ರನು ಅವತಾರ ಮಾಡುವನೆಂದು ತಿಳಿದುಕೊಳ್ಳಬೇಕು.

೨೧. ಋಷಿಗಳು ಪ್ರಶ್ನೆ ಮಾಡಿದರು. ವರಾಹ ಕಲ್ಪದಲ್ಲಿ ನಡೆಯುವ ಮನ್ವಂತರಗಳನ್ನೂ ಹಾಗೆಯೇ ಮುಂದಿನ ಕಲ್ಪಗಳಲ್ಲಿನ ಮನ್ವಂತರಗಳನ್ನೂ ವೈವಸ್ವತಮನ್ವಂತರದಲ್ಲಿ ಯೋಗಸಿದ್ಧರಾದವರ ಹೆಸರುಗಳನ್ನೂ ನಮಗೆ ಹೇಳಬೇಕು.

೨೨–೨೩. ಸೂತನು ಹೇಳಿದನು: ಸ್ವಾಯಂಭುವ, ಸ್ವಾರೋಚಿಷ, ಉತ್ತಮ, ತಾಮಸ, ರೈವತ, ಚಾಕ್ಷುಷ, ವೈವಸ್ವತ, ಧರ್ಮ

ವೈವಸ್ವತಶ್ಚ ಸಾವರ್ಣಿ ರ್ಧರ್ಮಸ್ಸಾವರ್ಣಿಕಃ ಪುನಃ ।
ಪಿಶಂಗಶ್ಚ ಪಿಶಂಗಾಭಃ ಶಬಲೋ ವರ್ಣಕಸ್ತಥಾ ॥೨೩॥
ಔಕಾರಾಂತಾ ಅಕಾರಾದ್ಯಾ ಮನವಃ ಪರಿಕೀರ್ತಿತಾಃ ।
ಶ್ವೇತಃ ಪಾಂಡುಸ್ತಥಾ ರಕ್ತಸ್ತಾಮ್ರಃ ಪೀತಶ್ಚ ಕಾಪಿಲಃ ॥೨೪॥
ಕೃಷ್ಣಃ ಶ್ಯಾಮಸ್ತಥಾ ಧೂಮ್ರಃ ಸುಧೂಮ್ರಶ್ಚ ದ್ವಿಜೋತ್ತಮಾಃ ।
ಅಪಿಶಂಗಃ ಪಿಶಂಗಶ್ಚ ತ್ರಿವರ್ಣಃ ಶಬಲಸ್ತಥಾ ॥೨೫॥
ಕಾಲಂಧುರಸ್ತು ಕಥಿತಾ ವರ್ಣತೋ ಮನವ ಶ್ಶುಭಾಃ ।
ನಾಮತೋ ವರ್ಣತ ಶ್ಚೈವ ವರ್ಣತಃ ಪುನರೇವ ಚ ॥೨೬॥
ಸ್ವರಾತ್ಮಾನಃ ಸಮಾಖ್ಯಾತಾ ಶ್ಚಾಂತರೇಶಾಃ ಸಮಾಸತಃ ।
ವೈವಸ್ವತಋುಕಾರಸ್ತು ಮನುಃ ಕೃಷ್ಣ ಸ್ಸುರೇಶ್ವರಃ ॥೨೭॥
ಸಪ್ತಮಸ್ತಸ್ಯ ವಕ್ಷ್ಯಾಮಿ ಯುಗಾವರ್ತೇಷು ಯೋಗಿನಃ ।

---

ಸಾವರ್ಣಿ, ಮುಂತಾದ, ಅಕಾರಾದಿಯಾಗಿ ಔಕಾರಾಂತವಾಗಿರುವ ಅಕ್ಷರ ಗಳಂತೆ, ಹದಿನಾಲ್ಕು ಜನ ಮನುಗಳು ಪ್ರಸಿದ್ಧರಾಗಿರುವರು.

೨೪–೨೫. ಆ ಹದಿನಾಲ್ಕು ಜನಮನುಗಳೂ ಕ್ರಮವಾಗಿ ಬಣ್ಣ ದಿಂದ ಪ್ರಕಾಶವಾದ ಬಿಳಿಯಬಣ್ಣ, ಪ್ರಕಾಶವಿಲ್ಲದ ಬಿಳುಪು, ಕೆಂಪು, ತಾಮ್ರದಬಣ್ಣ, ಹಳದಿ, ಪಿಂಗಳವರ್ಣ, ಕಪ್ಪು, ಮೇಘವರ್ಣ, ಕೆಂಪು ಕಪ್ಪುಸೇರಿದ ಹೊಗೆಯಬಣ್ಣ, ವ್ಯಕ್ತವಾಗಿ ಕಾಣುವ ಕೆಂಪು ಮತ್ತು ಕಪ್ಪುಬಣ್ಣ, ಪಿಂಗಳವರ್ಣ ಮೂರು ಬಣ್ಣಗಳು ಸೇರಿದುದು. ವಿಚಿತ್ರ ವರ್ಣ, ಕಾಲಂಧುರವೆಂಬ ವಿಶೇಷ ತರದಬಣ್ಣ, ಈ ರೀತಿಯಾದ ವೈ ಬಣ್ಣವುಳ್ಳವರು.

೨೬. ಹೆಸರಿನಿಂದಲೂ ಅಕಾರಾದ್ಯಕ್ಷರ ಸಂಖ್ಯೆಯಿಂದಲೂ ಬಿಳುಪು ಮುಂತಾದ ಬಣ್ಣಗಳಿಂದಲೂ, ಮನ್ವಂತರಗಳಿಗೆ ಅಧಿಪತಿಗಳು ಹದಿ ನಾಲ್ಕು ಜನರೆಂಬುದು ಪ್ರಸಿದ್ಧವಾಗಿರುವುದು. ಅದನ್ನು ಸಂಗ್ರಹ ವಾಗಿ ಹೇಳಿವೆನು.

೨೭. ವೈವಸ್ವತನೆಂಬ ಮನುವು ಏಳನೆಯವನು. ಋಕಾರವೆಂಬ ಸ್ವರಾಕ್ಷರವು ಅವನನ್ನು ಸೂಚಿಸುವುದು. ಅವನು ಕಪ್ಪುಬಣ್ಣದವನು. ಅವನ ಅಧಿಕಾರಕಾಲದಲ್ಲಿ ಬರುವ ಕಲಿಯುಗಗಳಲ್ಲಿ ರುದ್ರನ ಯೋಗಾವ ತಾರಗಳನ್ನು ಹೇಳುವೆನು.

ಸಮತೀತೇಷು ಕಲ್ಪೇಷು ತಥಾ ಚಾನಾಗತೇಷು ವೈ ॥೨೮॥
ವಾರಾಹಸ್ಸಾಂಪ್ರತಂ ಜ್ಞೇಯಃ ಸಪ್ತಮಾಂತರತಃ ಕ್ರಮಾತ್ ।
ಯೋಗಾವತಾರಾಂಶ್ಚ ವಿಭೋಃ ಶಿಷ್ಯಾಣಾಂ ಸಂತತಿಸ್ತಥಾ ॥೨೯॥
ಸಂಪ್ರೇಕ್ಷ್ಯ ಸರ್ವಕಾಲೇಷು ತಥಾವರ್ತೇಷು ಯೋಗಿನಾಂ ।
ಆದ್ಯೇ ಶ್ವೇತಃ ಕಲೌ ರುದ್ರಃ ಸುತಾರೋ ಮದನಸ್ತಥಾ ॥೩೦॥
ಸುಹೋತ್ರಃ ಕಂಕಣ ಶ್ಚೈವ ಲೋಕಾಕ್ಷಿ ರ್ಮುನಿಸತ್ತಮಃ ।
ಜೈಗೀಷವ್ಯೋ ಮಹಾತೇಜಾ ಭಗವಾನ್ದಧಿವಾಹನಃ ॥೩೧॥
ಋಷಭ ಶ್ಚ ಮುನಿರ್ಧೀಮಾನುಗ್ರಶ್ಚಾತ್ರಿಸುಬಾಲಕಃ ।
ಗೌತಮಶ್ಚಾಥ ಭಗವಾನ್ಸರ್ವದೇವ ನಮಸ್ಕೃತಃ ॥೩೨॥
ವೇದಶೀರ್ಷಶ್ಚ ಗೋಕರ್ಣೋ ಗುಹಾವಾಸೀ ಶಿಖಂಡಭೃತ್ ।
ಜಟಾಮಾಲ್ಯಾಟ್ಟಹಾಸಶ್ಚ ದಾರುಕೋ ಲಾಂಗಲೀ ತಥಾ ॥೩೩॥

---

೨೮–೨೯. ಅನೇಕ ಕಲ್ಪಗಳು ಕಳೆದುಹೋದವು. ಮುಂದೆ ಇನ್ನೂ ಅನೇಕ ಕಲ್ಪಗಳು ಬರಬೇಕಾಗಿವೆ. ಈಗ ನಡೆಯುತ್ತಿರುವುದು ವರಾಹ ಕಲ್ಪವು. ಈ ಕಲ್ಪದಲ್ಲಿ ಏಳನೆಯ ಮನ್ವಂತರದ ಆದಿಯಿಂದ ಶಿವನು ಮಾಡಿದ ಯೋಗಾವತಾರಗಳನ್ನೂ ಶಿಷ್ಯರ ಸಂತತಿಯನ್ನೂ ತಿಳಿದು ಇದ ರಂತೆಯೇ ಯುಗಗಳು ಬಂದಂತೆಲ್ಲ ಅವತಾರಗಳೂ ಶಿಷ್ಯರೂ ಬರುವರೆಂದು ತಿಳಿಯಬೇಕು.

೩೦–೩೫. ಶ್ವೇತವರಾಹ ಕಲ್ಪದ ವೈವಸ್ವತಮನ್ವಂತರದ ಮೊದಲ ನೆಯ ಕಲಿಯುಗದಿಂದ ಕ್ರಮವಾಗಿ ಈ ೨೮ನೆಯ ಕಲಿಯುಗದವರೆಗೆ ರುದ್ರನು ಮಾಡಿದ ಯೋಗಾಚಾರ್ಯಾವತಾರಗಳ ಹೆಸರುಗಳನ್ನು ಹೇಳು ವೆನು. ೧. ಶ್ವೇತ, ೨. ಸುತಾರ, ೩. ಮದನ, ೪. ಸುಹೋತ್ರ ೫. ಕಂಕಣ (ಕಂಕ), ೬. ಲೋಕಾಕ್ಷಿ, ೭. ಜೈಗೀಷವ್ಯ, ೮. ದಧಿವಾ ಹನ, ೯. ಋಷಭ, ೧೦. ಮುನಿ, ೧೧. ಉಗ್ರ, ೧೨. ಅತ್ರಿ, ೧೩. ಸುಬಾ ಲಕ, (ವಾಲಿ) ೧೪. ಗೌತಮ, ೧೫. ವೇದಶೀರ್ಷ, ೧೬. ಗೋಕರ್ಣ, ೧೭. ಗುಹಾವಾಸಿ, ೧೮. ಶಿಖಂಡಭೃತ್, ೧೯. ಜಟಾಮಾಲಿ,

ಮಹಾಕಾಯಮುನಿಶ್ಶೂಲೀ ದಂಡೀ ಮುಂಡೀಶ್ವರಃ ಸ್ವಯಂ ।
ಸಹಿಷ್ಣುಸ್ಸೋಮಶರ್ಮಾ ಚ ಲಕುಲೀಶೋ ಜಗದ್ಗುರುಃ ॥೩೪॥
ವೈವಸ್ವತೇಽಂತರೇ ಸಮ್ಯಕ್ ಪ್ರೋಕ್ತಾ ಹಿ ಪರಮಾತ್ಮನಃ ।
ಯೋಗಾಚಾರ್ಯಾವತಾರಾ ಯೇ ಸರ್ವಾವರ್ತೇಷು ಸುವ್ರತಾಃ ॥
ವ್ಯಾಸಾಶ್ಚೈವಂ ಮುನಿಶ್ರೇಷ್ಠಾ ದ್ವಾಪರೇ ದ್ವಾಪರೇ ತ್ವಿಮೇ ।
ಯೋಗೇಶ್ವರಾಣಾಂ ಚತ್ವಾರಃ ಶಿಷ್ಯಾಃ ಪ್ರತ್ಯೇಕಮವ್ಯಯಾಃ ॥೩೬॥
ಶ್ವೇತಃ ಶ್ವೇತಶಿಖಂಡೀ ಚ ಶ್ವೇತಾಶ್ವಃ ಶ್ವೇತಲೋಹಿತಃ ।
ದುಂದುಭಿ ಶ್ಶತರೂಪಶ್ಚ ಋಚೀಕಃ ಕೇತುಮಾಂಸ್ತಥಾ ॥೩೭॥
ವಿಶೋಕಶ್ಚ ವಿಕೇಶಶ್ಚ ವಿಪಾಶಃ ಪಾಪನಾಶನಃ ।
ಸುಮುಖೋ ದುರ್ಮುಖಶ್ಚೈವ ದುರ್ದಮೋ ದುರತಿಕ್ರಮಃ॥೩೮॥

---

೨೦. ಅಟ್ಟಹಾಸ, ೨೧. ದಾರುಕ, ೨೨. ಲಾಂಗಲಿ, ೨೩. ಮಹಾಕಾಯಮುನಿ, ೨೪. ಶೂಲಿ, ೨೫. ಮುಂಡೀಶ್ವರ, ೨೬. ಸಹಿಷ್ಣು ೨೭. ಸೋಮಶರ್ಮ, ೨೮. ಲಕುಲೀಶ.

೩೬. ಪ್ರತಿದ್ವಾಪರಯುಗದಲ್ಲಿಯೂ ವ್ಯಾಸಾವತಾರವೂ ಕಲಿಯುಗದಲ್ಲಿ ಯೋಗೇಶ್ವರಾವತಾರವೂ ಶಿವನಿಗೆ ನಿಯತವಾದುದು. ವ್ಯಾಸಾವತಾರದಲ್ಲಿ ದ್ವಾಪರದಲ್ಲಿಯೂ ಯೋಗೇಶ್ವರಾವತಾರದಲ್ಲಿ ಕಲಿಯುಗದಲ್ಲಿಯೂ ಶಿವನಿಗೆ ನಾಲ್ಕು ಜನ ಶಿಷ್ಯರಿರುವರು. ಅವರ ಹೆಸರುಗಳನ್ನು ಮುಂದೆ ಹೇಳಿರುವುದು.

೩೭–೩೮. ಮುಂದೆ ಇರುವ ಸಂಖ್ಯೆಗಳು ಕ್ರಮವಾಗಿ ದ್ವಾಪರಯುಗದ ವ್ಯಾಸಾವತಾರವನ್ನು ಸೂಚಿಸುವುದು. ಒಂದೊಂದು ಸಂಖ್ಯೆಗೂ ನಾಲ್ಕು ಜನ ಶಿಷ್ಯರ ಹೆಸರುಗಳಿರುವುವು. ಇವರನ್ನು ವ್ಯಾಸರ ಶಿಷ್ಯರೆಂದು ತಿಳಿಯಬೇಕು. ೧. ಶ್ವೇತ, ಶ್ವೇತಶಿಖಂಡಿ, ಶ್ವೇತಾಶ್ವ, ಶ್ವೇತಲೋಹಿತ. ೨. ದುಂದುಭಿ, ಶತರೂಪ, ಋಚೀಕ, ಕೇತುಮಂತ ೩. ವಿಶೋಕ, ವಿಕೇಶ. ವಿಪಾಶ, ಪಾಪನಾಶನ. ೪. ಸುಮುಖ, ದುರ್ಮುಖ, ದುರ್ದಮ, ದುರತಿಕ್ರಮ.

ಸನಕಶ್ಚ ಸನಂದಶ್ಚ ಪ್ರಭುರ್ಯರ್ಶಶ್ಚ ಸನಾತನಃ ।
ಋಭು ಸ್ಸನತ್ಕುಮಾರಶ್ಚ ಸುಧಾಮಾ ವಿರಜಾಸ್ತ್ರಥಾ ॥೩೯॥
ಶಂಖಪಾದ್ವೈರಜಶ್ಚೈವ ಮೇಘಃ ಸಾರಸ್ವತಸ್ತ್ರಥಾ ।
ಸುವಾಹನೋ ಮುನಿಶ್ರೇಷ್ಠೋ ಮೇಘವಾಹೋ ಮಹಾದ್ಯುತಿಃ ॥
ಕಪಿಲ ಶ್ಚಾಸುರಿ ಶ್ಚೈವ ತಥಾ ಪಂಚಶಿಖೋ ಮುನಿಃ ।
ವಾಲ್ಕಲಶ್ಚ ಮಹಾಯೋಗೀ ಧರ್ಮಾತ್ಮಾನೋ ಮಹೌಜಸಃ ॥೪೦॥
ಪರಾಶರಶ್ಚ ಗರ್ಗಶ್ಚ ಭಾರ್ಗವಶ್ಚಾಂಗಿರಾಸ್ತ್ರಥಾ ।
ಬಲಬಂಧುರ್ನಿರಾಮಿತ್ರಃ ಕೇತುಶೃಂಗಸ್ತ್ರಪೋಧನಃ ॥೪೨॥
ಲಂಬೋದರಶ್ಚ ಲಂಬಶ್ಚ ಲಂಬಾಕ್ಷೋ ಲಂಬಕೇಶಕಃ ।
ಸರ್ವಜ್ಞಃ ಸಮಬುದ್ಧಿಶ್ಚ ಸಾಧ್ಯ ಸ್ಸರ್ವಸ್ತಥೈವಚ ॥೪೩॥
ಸುಧಾಮಾ ಕಾಶ್ಯಪ ಶ್ಚೈವ ವಾಸಿಷ್ಠೋ ವಿರಜಾಸ್ತಥಾ ।
ಅತ್ರಿರ್ದೇವಸದಶ್ಚೈವ ಶ್ರವಣೋಽಥ ಶ್ರವಿಷ್ಠಕಃ ॥೪೪॥
ಕುಣಿಶ್ಚ ಕುಣಿಬಾಹುಶ್ಚ ಕುಶರೀರಃ ಕುನೇತ್ರಕಃ ।

---

೩೯–೪೦. ೫. ಸನಕ, ಸನಂದ, ಸನಾತನ, ಸನತ್ಕುಮಾರ. ೬. ಸುಧಾಮ, ವಿರಜ, ಶಂಖಪಾತ್, ವೈರಜ. ೭. ಮೇಘ, ಸಾರಸ್ವತ, ಸುವಾಹನ, ಮೇಘವಾಹ. ೮. ಕಪಿಲ, ಆಸುರಿ, ಪಂಚಶಿಖ, ವಾಲ್ಕಲ.

೪೨. ೯. ಪರಾಶರ, ಗರ್ಗ, ಭಾರ್ಗವ, ಅಂಗಿರಸ್ಸು. ೧೦. ಬಲ, ಬಂಧು, ನಿರಾಮಿತ್ರ, ಕೇತುಶೃಂಗ.

೪೩–೪೪. ೧೧. ಲಂಬೋದರ, ಲಂಬ, ಲಂಬಾಕ್ಷ, ಲಂಬಕೇಶ, ೧೨. ಸರ್ವಜ್ಞ, ಸಮಬುದ್ಧಿ, ಸಾಧ್ಯ, ಸರ್ವ. ೧೩. ಸುಧಾಮ, ಕಾಶ್ಯಪ, ವಾಸಿಷ್ಠ, ವಿರಜ. ೧೪. ಅತ್ರಿ, ದೇವಸದ, ಶ್ರವಣ, ಶ್ರವಿಷ್ಠ. ೧೫. ಕುಣಿ, ಕುಣಿಬಾಹು, ಕುಶರೀರ, ಕುನೇತ್ರ.

ಕಶ್ಯಪೋಽಪ್ಯುಶನಾಶ್ಚೈವ ಚ್ಯವನೋಽಥ ಬೃಹಸ್ಪತಿಃ ।
ಉತಥ್ಯೋ ವಾಮದೇವಶ್ಚ ಮಹಾಯೋಗೋ ಮಹಾಬಲಃ ॥೪೫॥
ವಾಚಶ್ರವಾ ಸುಧೀಕಶ್ಚ ಶ್ಯಾವಾಶ್ವಶ್ಚ ಯತೀಶ್ವರಃ ।
ಹಿರಣ್ಯನಾಭಃ ಕೌಶಲ್ಯೋ ಲೋಗಾಕ್ಷಿಃ ಕುಥುಮಿಸ್ತಥಾ ॥೪೬॥
ಸುಮಂತು ರ್ಬರ್ಬರೀ ವಿದ್ವಾನ್ಕಬಂಧಃ ಕಶಿಕಂಧರಃ ।
ಪ್ಲಕ್ಷೋ ದಾಲ್ಭ್ಯಾಯಣಿ ಶ್ಚೈವ ಕೇತುಮಾನ್ಗೋಪನಸ್ತಥಾ ॥೪೭॥
ಭಲ್ಲಾವೀ ಮಧುಪಿಂಗಶ್ಚ ಶ್ವೇತಕೇತು ಸ್ತಪೋನಿಧಿಃ ।
ಉಶಿಕೋ ಬೃಹದಶ್ವಶ್ಚ ದೇವಲಃ ಕವಿರೇವ ಚ ॥೪೮॥
ಶಾಲಿಹೋತ್ರೋಽಗ್ನಿವೇಶಶ್ಚ ಯುವನಾಶ್ವಃ ಶರದ್ವಸುಃ ।
ಛಗಲಃ ಕುಂಡಕರ್ಣಶ್ಚ ಕುಂಭಶ್ಚೈವ ಪ್ರವಾಹಕಃ ॥೪೯॥
ಉಲೂಕೋ ವಿದ್ಯುತಶ್ಚೈವ ಮಂಡೂಕೋ ಹ್ಯಾಶ್ವಲಾಯನಃ ।
ಅಕ್ಷಪಾದಃ ಕುಮಾರಶ್ಚ ಉಲೂಕೋ ವತ್ಸಏವ ಚ ॥೫೦॥
ಕುಶಿಕಶ್ಚೈವ ಗರ್ಭಶ್ಚ ಮಿತ್ರಃ ಕೌರುಷ್ಯ ಏವ ಚ ।

---

೪೫–೪೬. ೧೬. ಕಶ್ಯಪ, ಉಶನ, ಚ್ಯವನ, ಬೃಹಸ್ಪತಿ. ೧೭. ಉತಥ್ಯ, ವಾಮದೇವ, ವಾಚಶ್ರವ, ಸುಧೀಕ. ೧೮. ಶ್ಯಾವಾಶ್ವ, ಹಿರಣ್ಯನಾಭ, ಲೋಗಾಕ್ಷಿ, ಕುಥುಮಿ.

೪೭. ೧೯, ಸುಮಂತು, ಬರ್ಬರೀ, ಕಬಂಧ, ಕಶಿಕಂಧರ. ೨೦. ಪ್ಲಕ್ಷ, ದಾಲ್ಭ್ಯಾಯಣಿ, ಕೇತುಮಂತ, ಗೋಪನ.

೪೮–೫೦. ೨೧. ಭಲ್ಲಾವಿ, ಮಧುಪಿಂಗ, ಶ್ವೇತಕೇತು, ತಪೋನಿಧಿ. ೨೨. ಉಶಿಕ, ಬೃಹದಶ್ವ, ದೇವಲ, ಕವಿ. ೨೩. ಶಾಲಿಹೋತ್ರ, ಅಗ್ನಿವೇಶ, ಯುವನಾಶ್ವ, ಶರದ್ವಸು. ೨೪. ಛಗಲ, ಕುಂಡಕರ್ಣ, ಕುಂಭ, ಪ್ರವಾಹಕ. ೨೫. ಉಲೂಕ, ವಿದ್ಯುತ, ಮಂಡೂಕ, ಆಶ್ವಲಾಯನ. ೨೬. ಅಕ್ಷಪಾದ ಕುಮಾರ, ಉಲೂಕ, ವತ್ಸ, ೨೭. ಕುಶಿಕ, ಗರ್ಭ, ಮಿತ್ರ, ಕೌರುಷ್ಯ.

ಶಿಷ್ಯಾಸ್ತ್ವೇ ತೇ ಮಹಾತ್ಮಾನ ಸ್ಸರ್ವಾವರ್ತೇಷು ಯೋಗಿನಾಂ॥೫೧॥
ವಿಮಲಾ ಬ್ರಹ್ಮಭೂಯಿಷ್ಠಾ ಜ್ಞಾನಯೋಗಪರಾಯಣಾಃ ।
ಏತೇ ಪಾಶುಪತಾ ಸ್ಸಿದ್ಧಾ ಭಸ್ಮೋದ್ಧೂಲಿತ ವಿಗ್ರಹಾಃ ॥೫೨॥
ಶಿಷ್ಯಾಃ ಪ್ರಶಿಷ್ಯಾಶ್ಚೈತೇಷಾಂ ಶತಶೋಽಥ ಸಹಸ್ರಶಃ ।
ಪ್ರಾಪ್ಯ ಪಾಶುಪತಂ ಯೋಗಂ ರುದ್ರಲೋಕಾಯ ಸಂಸ್ಥಿತಾಃ॥೫೩॥
ದೇವಾದಯಃ ಪಿಶಾಚಾಂತಾಃ ಪಶವಃ ಪರಿಕೀರ್ತಿತಾಃ ।
ತೇಷಾಂ ಪತಿತ್ವಾತ್ಸರ್ವೇಶೋ ಭವಃ ಪಶುಪತಿಃ ಸ್ಮೃತಃ ॥೫೪॥
ತೇನ ಪ್ರಣೀತೋ ರುದ್ರೇಣ ಪಶೂನಾಂ ಪತಿನಾ ದ್ವಿಜಾಃ ।
ಯೋಗಃ ಪಾಶುಪತೋ ಜ್ಞೇಯಃ ಪರಾವರವಿಭೂತಯೇ ॥೫೫॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಾರ್ಧೇ ಸಪ್ತಮೋಽಧ್ಯಾಯಃ

---

೫೧–೫೨. ಇವರೆಲ್ಲರೂ ಎಲ್ಲಾ ಯುಗಗಲ್ಲಿಯೂ ಯೋಗೀಶ್ವರಾವತಾರಮಾಡಿದ ರುದ್ರನ ಶಿಷ್ಯರು. ಇವರು ಪರಿಶುದ್ಧರು, ಬ್ರಹ್ಮಜ್ಞಾನ ವುಳ್ಳವರು, ಜ್ಞಾನಯೋಗಾಸಕ್ತರು, ಇವರೆಲ್ಲರೂ ಪಾಶುಪತವ್ರತವನ್ನು ಮಾಡುತ್ತಾ ಭಸ್ಮವನ್ನು ತಮ್ಮ ಶರೀರಕ್ಕೆ ಬಳಿದುಕೊಂಡು ಸಿದ್ಧರಾಗಿರುವರು. ಅಂದರೆ ಭಕ್ತರಿಗೆ ಇಷ್ಟಾರ್ಥಗಳನ್ನು ಕೊಡಲು ಶಕ್ತರಾಗಿರುವರು.

೫೩. ಇವರ ಶಿಷ್ಯರೂ ಪ್ರಶಿಷ್ಯರೂ ಅನೇಕರಿರುವರು. ಅವರೆಲ್ಲರೂ ಪಾಶುಪತ ವ್ರತವನ್ನಾಶ್ರಯಿಸಿ ಶಿವಲೋಕಕ್ಕೆ ಹೊರಡಲು ಸಿದ್ಧರಾಗಿರುವರು.

೫೪–೫೫. ದೇವತೆಗಳು ಮೊದಲುಮಾಡಿಕೊಂಡು ಪಿಶಾಚಿಗಳೇ ಕೊನೆಯಾಗುವವರೆಗೆ ಇರುವ ಸಕಲ ಜೀವರುಗಳೂ ಪಶುಗಳೆನಿಸಿಕೊಳ್ಳುವರು. ಇವರಿಗೆಲ್ಲರಿಗೂ ಶಿವನು ಪತಿಯಾದುದರಿಂದ ಅವನಿಗೆ ಪಶುಪತಿ ಎಂದು ಹೆಸರಿರುವುದು. ಪಶುಪತಿಯಾದ ರುದ್ರನು ನಿರ್ಮಿಸಿದ ಯೋಗಕ್ಕೆ ಪಾಶುಪತಯೋಗವೆಂದೂ ಆಯೋಗವನ್ನು ಅನುಸರಿಸಿದ ಬ್ರಹ್ಮಾದಿ ಪಿಶಾಚಾಂತವಾದ ಪರಾಪರ ಜೀವರುಗಳಿಗೆ ಐಶ್ವರ್ಯದಪ್ರಾಪ್ತಿಯಾಗುವುದೆಂದೂ ತಿಳಿಯಬೇಕು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಾರ್ಧದಲ್ಲಿ
ಏಳನೆಯ ಅಧ್ಯಾಯವು ಮುಗಿದುದು.

ಅಥ ಶ್ರೀಲಿಂಗಮಹಾಪುರಾಣೇ ಪೂರ್ವಾರ್ಧೇ ಅಷ್ಟಮೋಽಧ್ಯಾಯಃ

॥ ಸೂತ ಉವಾಚ ॥

ಸಂಕ್ಷೇಪತಃ ಪ್ರವಕ್ಷ್ಯಾಮಿ ಯೋಗಸ್ಥಾನಾನಿ ಸಾಂಪ್ರತಂ ।
ಕಲ್ಪಿತಾನಿ ಶಿವೇನೈವ ಹಿತಾಯ ಜಗತಾಂ ದ್ವಿಜಾಃ ॥ ೧ ॥

ಗಲಾದಧೋ ವಿತಸ್ತ್ಯಾ ಯನ್ನಾಭೇರುಪರಿ ಚೋತ್ತಮಂ ।
ಯೋಗಸ್ಥಾನ ಮಧೋನಾಭೇ ರಾವರ್ತಂ ಮಧ್ಯಮಂ ಭ್ರುವೋಃ ॥

ಸರ್ವಾರ್ಥಜ್ಞಾನನಿಷ್ಪತ್ತಿ ರಾತ್ಮನೋ ಯೋಗ ಉಚ್ಯತೇ ।
ಏಕಾಗ್ರತಾ ಭವೇಚ್ಚೈವ ಸರ್ವದಾ ತತ್ಪ್ರಸಾದತಃ ॥ ೩ ॥

---

ಲಿಂಗಮಹಾಪುರಾಣದ ಪೂರ್ವಾರ್ಧದಲ್ಲಿ ಎಂಟನೆಯ ಅಧ್ಯಾಯವು

(ಈ ಅಧ್ಯಾಯದಲ್ಲಿ ಯೋಗಮಾರ್ಗದಿಂದ ಶಿವನ ಪೂಜೆಯನ್ನು ಮಾಡುವ ಕ್ರಮವೂ ಅಷ್ಟಾಂಗಯೋಗಸಾಧನಕ್ರಮವೂ ಹೇಳಲ್ಪಡುವುದು)

೧. ಸೂತನು ಹೇಳಿದನು. ಎಲೈ ಬ್ರಾಹ್ಮಣರೇ, ಕೇಳಿ. ಚಿತ್ತವೃತ್ತಿಯನ್ನು ತಡೆದಿಡುವುದೇ ಯೋಗವು. ಶಿವನೇ ಕಲ್ಪಿಸಿರುವ ಆ ಚಿತ್ತವೃತ್ತಿಯನ್ನು ತಡೆದಿಡುವ ಸ್ಥಾನಗಳನ್ನು ಲೋಕದ ಹಿತಕ್ಕಾಗಿ ಈಗ ಸಂಕ್ಷೇಪವಾಗಿ ಹೇಳುವೆನು.

೨. ಕುತ್ತಿಗೆಯಿಂದ ಕೆಳಗೆ ಒಂದು ಗೇಣು ದೂರದಲ್ಲಿ ಹೊಕ್ಕುಳಿನಿಂದ ಮೇಲಕ್ಕಿರುವ ಹೃದಯವು ಚಿತ್ತವನ್ನು ನೆಲೆಗೊಳಿಸುವುದಕ್ಕೆ ಉತ್ತಮವಾದ ಪ್ರದೇಶವು. ಹೊಕ್ಕುಳಿನಿಂದ ಕೆಳಭಾಗಕ್ಕಿರುವ ಮೂಲಾಧಾರವೂ ಹುಬ್ಬುಗಳ ನಡುವೆ ಇರುವ ಆವರ್ತವೆಂಬ ತ್ರಿಕೂಟಸ್ಥಾನವೂ ಚಿತ್ತವನ್ನು ನೆಲೆಗೊಳಿಸಲು ತಕ್ಕ ಸ್ಥಲಗಳೆಂದು ತಿಳಿಯಬೇಕು.

೩. ಜೀವನಿಗೆ ಸಮಸ್ತ ವಿಷಯಕವಾದ ಜ್ಞಾನವು ಉತ್ಪತ್ತಿಯಾಗುವುದನ್ನೇ ಯೋಗವೆಂದು ಕರೆಯುವರು. ಆತ್ಮ ಪ್ರಸನ್ನತೆಯಿಂದ ಎಂದರೆ ಜೀವನಿಗೆ ಉಂಟಾಗಿರುವ ಪರಿಶುದ್ಧತೆಯಿಂದ ಯಾವಾಗಲೂ ಏಕಾಗ್ರಚಿತ್ತ(ಜ್ಞಾನ)ವು ಉಂಟಾಗುವುದು. ಜ್ಞಾನದಲ್ಲಿ ಯೋಗದಿಂದುಂಟಾದ ಜ್ಞಾನವೊಂದನ್ನು ಶಾಸ್ತ್ರಕಾರರು ಒಪ್ಪಿಕೊಂಡಿರುವರು. ಮುಕ್ತಾವಳಿಯಲ್ಲಿ "ಯೋಗಜಸ್ತು ದ್ವಿಧಾಪ್ರೋಕ್ತೋಯುಕ್ತ ಯುಂಜಾನಭೇದತಃ ।

ಪ್ರಸಾದಸ್ಯ ಸ್ವರೂಪಂ ಯತ್ಸ್ವಸಂವೇದ್ಯಂ ದ್ವಿಜೋತ್ತಮಾಃ ।
ವಕ್ತುಂ ನ ಶಕ್ಯಂ ಬ್ರಹ್ಮಾದ್ಯೈಃ ಕ್ರಮಶೋ ಜಾಯತೇ ನೃಣಾಂ ॥

ಯೋಗಶಬ್ದೇನ ನಿರ್ವಾಣಂ ಮಾಹೇಶಂ ಪದ ಮುಚ್ಯತೇ ।
ತಸ್ಯ ಹೇತುಃ ಋಷೇರ್ಜ್ಞಾನಂ ಜ್ಞಾನಂ ತಸ್ಯ ಪ್ರಸಾದತಃ ॥ ೫ ॥

ಜ್ಞಾನೇನ ನಿರ್ದಹೇತ್ಪಾಪಂ ನಿರುಧ್ಯ ವಿಷಯಾನ್ಸದಾ ।
ನಿರುದ್ಧೇಂದ್ರಿಯವೃತ್ತೇಸ್ತು ಯೋಗಸಿದ್ಧಿರ್ಭವಿಷ್ಯತಿ ॥ ೬ ॥

ಯೋಗೋ ನಿರೋಧೋ ವೃತ್ತೇಷು ಚಿತ್ತಸ್ಯ ದ್ವಿಜಸತ್ತಮಾಃ ।
ಸಾಧನಾನ್ಯಷ್ಟಧಾ ಚಾಸ್ಯ ಕಥಿತಾನೀಹ ಸಿದ್ಧಯೇ ॥ ೭ ॥

---

ಯುಕ್ತಸ್ಯ ಸರ್ವದಾಭಾನಂ ಚಿಂತಾಸಹಕೃತೋಽಪರಃ ॥" ಎಂದು ಯೋಗಯುಕ್ತನಿಗೆ ಯಾವಾಗಲೂ ಆತ್ಮಸ್ವರೂಪವು ಪ್ರಕಾಶಿಸುತ್ತಿರುವುದೆಂದು ಹೇಳಿರುವುದು.

೪. ಎಲೈ ಬ್ರಾಹ್ಮಣಶ್ರೇಷ್ಠರೇ, ಪ್ರಸಾದದ ಸ್ವರೂಪವು (ಅನುಗ್ರಹ) ಬ್ರಹ್ಮಾದಿಗಳಿಂದಲೂ ಹೇಳಲಸಾಧ್ಯವಾದುದಾಗಿರುವುದು. ಅದು ಸ್ವಸಂವೇದ್ಯವಾದುದು. ಅಂದರೆ ಮನುಷ್ಯರಿಗೆ ಕ್ರಮವಾಗಿ ತಾನಾಗಿಯೇ ಬುದ್ಧಿಗೋಚರವಾಗುವುದು.

೫. ಯೋಗಶಬ್ದದಿಂದ ನಿರ್ವಾಣವೆಂಬ ತುರೀಯವಾದ ಮಹೇಶ್ವರನ ಸ್ಥಾನವನ್ನು ಹೇಳಿರುವುದು. ಆ ಮಹೇಶ್ವರಸ್ಥಾನದ ಜ್ಞಾನಕ್ಕೆ ಕಾರಣವು ರುದ್ರನ ಜ್ಞಾನವು. ಋಷಿಶಬ್ದಕ್ಕೆ ರುದ್ರನೆಂದು ವೇದದಲ್ಲಿ ಹೇಳಿರುವುದು. ಆ ರುದ್ರನ ಅನುಗ್ರಹದಿಂದ ಸರ್ವ ವಿಷಯಕ (ಆತ್ಮ) ಜ್ಞಾನವುಂಟಾಗುವುದು.

೬. ಯಾವನು ಇಂದ್ರಿಯವೃತ್ತಿಗಳ ಕಡೆಗೆ ಹೋಗುವ ಚಿತ್ತವನ್ನು ತಡೆದು ನಿಲ್ಲಿಸುತ್ತಾನೆಯೋ ಅವನಿಗೆ ಯೋಗಸಿದ್ಧಿಯಾಗುವುದು. ಯಾವಾಗಲೂ ಇಂದ್ರಿಯವಿಷಯಗಳ ಕಡೆಗೆ ಹೋಗುವ ಚಿತ್ತವನ್ನು ನಿಲ್ಲಿಸಿದರೆ ಜ್ಞಾನವುಂಟಾಗಿ ಆ ಜ್ಞಾನದಿಂದ ಪಾಪಗಳೆಲ್ಲವೂ ನಾಶವಾಗುವುವು.

೭. ಬ್ರಾಹ್ಮಣಶ್ರೇಷ್ಠರೇ, ಚಿತ್ತವೃತ್ತಿಗಳ ನಿರೋಧವೇ ಯೋಗವು. ಈ ಯೋಗಕ್ಕೆ ಸಿದ್ಧಿಯುಂಟಾಗಬೇಕಾದರೆ ಎಂಟು ವಿಧವಾದ ಸಾಧನಗಳನ್ನು ಹೇಳಿರುವುದು.

ಯಮಸ್ತು ಪ್ರಥಮಃ ಪ್ರೋಕ್ತೋ ದ್ವಿತೀಯೋ ನಿಯಮ ಸ್ತಥಾ ।
ತೃತೀಯ ಮಾಸನಂಪ್ರೋಕ್ತಂ ಪ್ರಾಣಾಯಾಮ ಸ್ತತಃ ಪರಂ ॥ ೮ ॥

ಪ್ರತ್ಯಾಹಾರಃ ಪಂಚಮೋ ವೈ ಧಾರಣಾ ಚ ತತಃ ಪರಾ ।
ಧ್ಯಾನಂ ಸಪ್ತಮಮಿತ್ಯುಕ್ತಂ ಸಮಾಧಿ ಸ್ತ್ವಷ್ಟಮಃ ಸ್ಮೃತಃ ॥ ೯ ॥

ತಪಸ್ತು ಪರಮ ಶ್ಚೈವ ಯಮ ಇತ್ಯಭಿಧೀ ಯತೇ ।
ಅಹಿಂಸಾ ಪ್ರಥಮೋ ಹೇತು ರ್ಯಮಸ್ಯ ಯಮಿನಾಂ ವರಾಃ ॥೧೦॥

ಸತ್ಯ ಮಸ್ತೇಯ ಮಪರಂ ಬ್ರಹ್ಮಚರ್ಯಾಪರಿಗ್ರಹೌ ।
ನಿಯಮಸ್ಯಾಪಿ ವೈ ಮೂಲಂ ಯಮ ಏವ ನ ಸಂಶಯಃ ॥೧೧॥

ಆತ್ಮವತ್ಸರ್ವಭೂತಾನಾಂ ಹಿತಾಯೈವ ಪ್ರವರ್ತನಂ ।
ಅಹಿಂಸೈಷಾ ಸಮಾಖ್ಯಾತಾ ಯಾ ಚಾತ್ಮಜ್ಞಾನಸಿದ್ಧಿದಾ ॥೧೨॥

ದೃಷ್ಟಂ ಶ್ರುತಂ ಚಾನುಮಿತಂ ಸ್ವಾನುಭೂತಂ ಯಥಾರ್ಥತಃ ।
ಕಥನಂ ಸತ್ಯ ಮಿತ್ಯುಕ್ತಂ ಪರಪೀಡಾವಿವರ್ಜಿತಂ ॥೧೩॥

---

೮–೯. ೧. ಯಮ, ೨. ನಿಯಮ, ೩. ಆಸನ; ೪. ಪ್ರಾಣಾಯಾಮ, ೫. ಪ್ರತ್ಯಾಹಾರ, ೬. ಧಾರಣಾ, ೭. ಧ್ಯಾನ, ೮. ಸಮಾಧಿ, ಎಂಬಿವೇ ಆ ಎಂಟುಸಾಧನಗಳು.

೧೦. ಶ್ರೇಷ್ಠವಾದ ತಪಸ್ಸನ್ನೇ ಯಮವೆಂದು ಕರೆಯುವರು. ಅಹಿಂಸೆ, ಸತ್ಯ, ಅಸ್ತೇಯ, ಬ್ರಹ್ಮಚರ್ಯ, ಅಪರಿಗ್ರಹ, ಇವುಗಳೇ ಯಮಕ್ಕೆ ಕಾರಣಗಳು.

೧೧. ನಿಯಮವೆಂಬ ಯೋಗಾಂಗಕ್ಕೂ ಯಮವೇ ಕಾರಣವಾಗಿರುವುದು. ಈ ವಿಷಯದಲ್ಲಿ ಸಂದೇಹವಿಲ್ಲ.

೧೨. ತನ್ನಂತೆಯೇ ಸಮಸ್ತ ಪ್ರಾಣಿಗಳಿಗೂ ಹಿತವನ್ನುಂಮಾಡುವುದಕ್ಕೆ ಪ್ರಯತ್ನ ಪಡುವುದೇ ಅಹಿಂಸೆಯೆನಿಸಿಕೊಳ್ಳುವುದು. ಈ ಅಹಿಂಸೆಯೇ ಆತ್ಮಸ್ವರೂಪ ಜ್ಞಾನಸಿದ್ಧಿಯನ್ನುಂಟುಮಾಡಿ ಕೊಡುವುದು.

೧೩–೧೪. ತಾನು ನೋಡಿದುದು, ಕೇಳಿದುದು, ಅನುಮಾನ ಪ್ರಮಾಣದಿಂದ ತಿಳಿದುದು, ಅನುಭವಿಸಿದುದು, ಇವುಗಳನ್ನು ಇದ್ದುದನ್ನು ಇದ್ದಂತೆಯೇ ಇತರರಿಗೆ ಹಿಂಸೆಯುಂಟಾಗದಂತೆ ಹೇಳುವುದೇ ಸತ್ಯವೆನಿಸುವುದು. ನಾಚಿಕೆಯನ್ನೂ ಅಸಹ್ಯವನ್ನೂ ಅಮಂಗಳವನ್ನೂ

**ನಾಶ್ಲೀಲಂ ಕೀರ್ತಯೇದೇವಂ ಬ್ರಾಹ್ಮಣಾನಾಮಿತಿ ಶ್ರುತಿಃ ।**
**ಪರದೋಷಾನ್ ಪರಿಜ್ಞಾಯ ನ ವದೇದಿತಿ ಚಾಪರಂ ॥೧೪॥**

**ಅನಾದಾನಂ ಪರಸ್ವಾನಾಂ ಆಪದ್ಯಪಿ ವಿಚಾರತಃ ।**
**ಮನಸಾ ಕರ್ಮಣಾ ವಾಚಾ ತದಸ್ತೇಯಂ ಸಮಾಸತಃ ॥೧೫॥**

**ಮೈಥುನಸ್ಯಾ ಪ್ರವೃತ್ತಿರ್ಹಿ ಮನೋವಾಕ್ಕಾಯಕರ್ಮಣಾ ।**
**ಬ್ರಹ್ಮಚರ್ಯ ಮಿತಿ ಪ್ರೋಕ್ತಂ ಯತೀನಾಂ ಬ್ರಹ್ಮಚಾರಿಣಾಂ॥೧೬॥**

**ಇಹ ವೈಖಾನಸಾನಾಂ ಚ ವಿದಾರಾಣಾಂ ವಿಶೇಷತಃ ।**
**ಸದಾರಾಣಾಂ ಗೃಹಸ್ಥಾನಾಂ ತಥೈವ ಚ ವದಾಮಿ ವಃ ॥೧೭॥**

**ಸ್ವದಾರೇ ವಿಧಿವತ್ಕೃತ್ವಾ ನಿವೃತ್ತಿಶ್ಚಾನ್ಯತ ಸ್ಸದಾ ।**
**ಮನಸಾ ಕರ್ಮಣಾ ವಾಚಾ ಬ್ರಹ್ಮಚರ್ಯ ಮಿತಿ ಸ್ಮೃತಂ ॥೧೮॥**

**ಮೇಧ್ಯಾ ಸ್ವನಾರೀ ಸಂಭೋಗಂ ಕೃತ್ವಾ ಸ್ನಾನಂ ಸಮಾಚರೇತ್ ।**
**ಏವಂ ಗೃಹಸ್ಥೋ ಯುಕ್ತಾತ್ಮಾ ಬ್ರಹ್ಮಚಾರೀ ನ ಸಂಶಯಃ ॥೧೯॥**

---

ಉಂಟುಮಾಡುವ ಮಾತುಗಳು ಅಶ್ಲೀಲವೆನಿಸುವುವು. ಅಂತಹ ಮಾತುಗಳನ್ನಾಡಬಾರದೆಂದು ವೇದವಿಧಿಯು ಇರುವುದು. ಇತರರ ದೋಷಗಳನ್ನು ತಿಳಿದಿದ್ದರೂ ಅದನ್ನು ಹೇಳಬಾರದೆಂದು ಮತ್ತೊಂದು ನಿಯಮವಿರುವುದು. ಈ ನಿಯಮಗಳನ್ನೆಲ್ಲವನ್ನೂ ಅನುಸರಿಸಿ ಯುಕ್ತವಾದ ಮಾತನಾಡುವುದೇ ಸತ್ಯವೆನಿಸುವುದು.

೧೫. ಎಷ್ಟೇ ಕಷ್ಟವು ಬಂದರೂ ವಿಚಾರಮಾಡಿ ಮನಸ್ಸಿನಿಂದಲೂ ಕೆಲಸದಿಂದಲೂ, ಮಾತಿನಿಂದಲೂ ಪರರ ವಸ್ತುವನ್ನು ತೆಗೆದುಕೊಳ್ಳದಿರುವುದೇ ಅಸ್ತೇಯವೆನಿಸುವುದು.

೧೬. ಮನಸ್ಸಿನಿಂದಲೂ ಮಾತಿನಿಂದಲೂ ಕಾರ್ಯದಿಂದಲೂ ಸ್ತ್ರೀಸಂಗದ ಸಂಬಂಧವಿಲ್ಲದೇ ಇರುವುದೇ ಸನ್ಯಾಸಿಗಳಿಗೂ, ಬ್ರಹ್ಮಚಾರಿಗಳಿಗೂ ಪತ್ನಿಯರಿಲ್ಲದ ವೈಖಾನಸರಿಗೂ ಬ್ರಹ್ಮಚರ್ಯವೆನಿಸುವುದು.

೧೭–೧೯. ಹಾಗೆಯೇ ಪತ್ನೀಸಹಿತರಾದ ಗೃಹಸ್ಥರ ವಿಚಾರವನ್ನು ನಿಮಗೆ ಹೇಳುವೆನು. ಗೃಹಸ್ಥರು ತಮ್ಮ ಪತ್ನಿಯಲ್ಲಿ ವಿಧಿಯನ್ನನುಸರಿಸಿ ಋತುಕಾಲದಲ್ಲಿ ಸಂಭೋಗವನ್ನು ಮಾಡಿ ಸ್ನಾನ ಮಾಡಬೇಕು. ಮನಸ್ಸಿನಿಂದಲೂ ಮಾತಿನಿಂದಲೂ ಕಾರ್ಯದಿಂದಲೂ ಪರಸ್ತ್ರೀಯರ ಸಂಬಂಧ

**ಅಹಿಂಸಾಽಪ್ಯೇವಮೇವೈಷಾ ದ್ವಿಜಗುರ್ವಗ್ನಿಪೂಜನೇ ।**
**ವಿಧಿನಾ ಯಾದೃಶೀ ಹಿಂಸಾ ಸಾ ತ್ವಹಿಂಸಾ ಇತಿ ಸ್ಮೃತಾ ॥೨೦॥**

**ಸ್ತ್ರಿಯಃ ಸ್ಸದಾ ಪರಿತ್ಯಾಜ್ಯಾಃ ಸಂಗಂ ನೈವ ಚ ಕಾರಯೇತ್ ।**
**ಕುಣಪೇಷು ಯಥಾ ಚಿತ್ತಂ ತಥಾ ಕುರ್ಯಾದ್ವಿಚಕ್ಷಣಃ ॥೨೧॥**

**ವಿಣ್ಮೂತ್ರೋತ್ಸರ್ಗಕಾಲೇಷು ಬಹಿರ್ಭೂಮೌ ಯಥಾ ಮತಿಃ ।**
**ತಥಾ ಕಾರ್ಯಾ ರತೌ ಚಾಪಿ ಸ್ವದಾರೇ ಚಾನ್ಯತಃ ಕುತಃ ॥೨೨॥**

**ಅಂಗಾರಸದೃಶೀ ನಾರೀ ಘೃತಕುಂಭಸಮಃ ಪುಮಾನ್ ।**
**ತಸ್ಮಾನ್ನಾರೀಷು ಸಂಸರ್ಗಂ ದೂರತಃ ಪರಿವರ್ಜಯೇತ್ ॥೨೩॥**

---

ವನ್ನು ಬಿಡಬೇಕು. ಹೀಗೆ ಗೃಹಸ್ಥನು ನಿಯಮವನ್ನನುಸರಿಸಿ ಯೋಗಿಯಾಗಿದ್ದರೆ ಅವನೂ ಬ್ರಹ್ಮಚಾರಿಯೆನಿಸಿಕೊಳ್ಳುವನು. ಸಂದೇಹವಿಲ್ಲ.

೨೦. ಅಹಿಂಸೆಯ ವಿಚಾರದಲ್ಲಿಯೂ ಹೀಗೆಯೇ ಬ್ರಾಹ್ಮಣ ಗುರು ಅಗ್ನಿ ಇವರುಗಳ ಪೂಜಾವಿಷಯದಲ್ಲಿ ವೇದವಿಧಿಯಿಂದ ಹಿಂಸೆಯು ಪ್ರಾಪ್ತವಾದರೆ ಅದು ಅಹಿಂಸೆಯೆನಿಸಿಕೊಳ್ಳುವುದು.

೨೧. ಸ್ತ್ರೀಯರನ್ನು ಯಾವಾಗಲೂ ಬಿಟ್ಟಿರಬೇಕು. ಅವರ ಸಂಗವನ್ನು ಮಾಡಲೇ ಬಾರದು. ಬುದ್ಧಿವಂತರಾದವರು ಸ್ತ್ರೀಯರನ್ನು ಕಂಡರೆ ಹೆಣವನ್ನು ಕಂಡಂತೆ ಮನಸ್ಸಿನಲ್ಲಿ ಅಸಹ್ಯ ಪಡಬೇಕು.

೨೨. ಮಲಮೂತ್ರಗಳನ್ನು ವಿಸರ್ಜಿಸುವ ಕಾಲಗಳಲ್ಲಿ ದೂರವಾಗಿ ಹೊರಗೆ ಹೋಗಬೇಕು. ಎಂಬೀ ಬುದ್ಧಿಯು ಹೇಗೆ ಉಂಟಾಗುವುದೋ ಹಾಗೆಯೇ ತನ್ನ ಪತ್ನಿಯಲ್ಲಿ ಸಂಗಮಾಡುವ ವಿಚಾರದಲ್ಲಿಯೂ ಇದೇ ನಿಯಮವನ್ನು ಅನುಸರಿಸಬೇಕು. ಹೀಗೆಂದಮೇಲೆ ಪರಸ್ತ್ರೀವಿಚಾರದಲ್ಲಿ ಹೇಳಬೇಕಾದುದೇ ಇಲ್ಲ.

೨೩. ಸ್ತ್ರೀಯು ಬೆಂಕಿಯ ಕೊಡಕ್ಕೆ ಸಮಾನಳಾದವಳು, ಪುರುಷನು ತುಪ್ಪದ ಪಾತ್ರೆಗೆ ಸಮಾನನಾದವನು. ಬೆಂಕಿಯ ಸಮೀಪದಲ್ಲಿದ್ದರೆ ಹಾಕು ತುಪ್ಪವು ಕರಗಿ ಹೋಗುವುದು. ಆದುದರಿಂದ ಸ್ತ್ರೀ ಸಂಗವನ್ನು ದೂರದಲ್ಲಿಯೇ ಬಿಟ್ಟುಬಿಡಬೇಕು.

ಭೋಗೇನ ತೃಪ್ತಿರ್ನೈವಾಸ್ತಿ ವಿಷಯಾಣಾಂ ವಿಚಾರತಃ ।
ತಸ್ಮಾದ್ವಿರಾಗಃ ಕರ್ತವ್ಯೋ ಮನಸಾ ಕರ್ಮಣಾ ಗಿರಾ ॥೨೪॥
ನ ಜಾತು ಕಾಮಃ ಕಾಮಾನಾಮುಪಭೋಗೇನ ಶಾಮ್ಯತಿ ।
ಹವಿಷಾ ಕೃಷ್ಣವರ್ತ್ಮೇವ ಭೂಯ ಏವಾಭಿವರ್ಧತೇ ॥೨೫॥
ತಸ್ಮಾತ್ತ್ಯಾಗಸ್ಸದಾ ಕಾರ್ಯಸ್ತ್ವಮೃತತ್ವಾಯ ಯೋಗಿನಾ ।
ಅವಿರಕ್ತೋ ಯತೋ ಮರ್ತ್ಯೋ ನಾನಾಯೋನಿಷು ವರ್ತತೇ॥೨೬॥
ತ್ಯಾಗೇನೈವಾಮೃತತ್ವಂ ಹಿ ಶ್ರುತಿಸ್ಮೃತಿವಿದಾಂ ವರಾಃ ।
ಕರ್ಮಣಾ ಪ್ರಜಯಾ ನಾಸ್ತಿ ದ್ರವ್ಯೇಣ ದ್ವಿಜಸತ್ತಮಾಃ ॥೨೭॥
ತಸ್ಮಾದ್ವಿರಾಗಃ ಕರ್ತವ್ಯೋ ಮನೋವಾಕ್ಕಾಯಕರ್ಮಣಾ ।
ಋತೌ ಋತೌ ನಿವೃತ್ತಿಸ್ತು ಬ್ರಹ್ಮಚರ್ಯಮಿತಿ ಸ್ಮೃತಂ ॥೨೮॥

---

೨೪. ವಿಚಾರಮಾಡಿದರೆ ವಿಷಯಗಳ ಅನುಭವದಿಂದ ತೃಪ್ತಿಯುಂಟಾಗುವುದಿಲ್ಲ. ಆದುದರಿಂದ ಮನೋವಾಕ್ಕಾಯಕರ್ಮಗಳಿಂದ ವೈರಾಗ್ಯವನ್ನು ಆಚರಿಸಬೇಕು.

೨೫. ಇಷ್ಟಾರ್ಥಗಳನ್ನು ಅನುಭವಿಸುವುದರಿಂದ ಕಾಮವು ಎಂದಿಗೂ ಶಾಂತವಾಗುವುದಿಲ್ಲ. ಹವಿಸ್ಸಿನಿಂದ ಅಗ್ನಿಯು ಹೆಚ್ಚುವಂತೆ ಮತ್ತಷ್ಟು ಕಾಮವು ಹೆಚ್ಚುವುದು.

೨೬. ಆದುದರಿಂದ ಮೋಕ್ಷಕ್ಕೋಸ್ಕರವಾಗಿ ಯೋಗಿಯಾದವನು ವೈರಾಗ್ಯವನ್ನು ಯಾವಾಗಲೂ ಆಚರಿಸಬೇಕು. ವೈರಾಗ್ಯವಿಲ್ಲದ ಮನುಜನು ಅನೇಕ ಜನ್ಮಗಳನ್ನೆತ್ತಬೇಕಾಗುವುದು.

೨೭. ವೇದಗಳನ್ನೂ ಧರ್ಮಶಾಸ್ತ್ರಗಳನ್ನೂ ತಿಳಿದವರಲ್ಲಿ ಶ್ರೇಷ್ಠರಾದ ಮುನಿಗಳೇ, ಕೇಳಿರಿ. ಅಗ್ನಿಹೋತ್ರವೇ ಮೊದಲಾದ ಸಹಸ್ರಸಂವತ್ಸರಸತ್ರವೆಂಬ ಯಾಗವೇ ಕೊನೆಯಾಗಿ ಉಳ್ಳ ಕರ್ಮಗಳಿಂದಲೂ ಪಿತೃಋಣ ವಿಮೋಚನೆಗೆ ಕಾರಣವಾದ ಪುತ್ರರಿಂದಲೂ ದಾನಗಳಿಂದ ಅನೇಕ ವಿಧವಾದ ಫಲಗಳುಂಟಾಗುವುದರಿಂದ ಅದಕ್ಕೆ ಕಾರಣವಾದ ಹಣದಿಂದಲೂ ಮೋಕ್ಷವು ದೊರೆಯುವುದಿಲ್ಲ. ವೈರಾಗ್ಯವೊಂದರಿಂದಲೇ ಮೋಕ್ಷವು ದೊರೆಯುವುದು ಆದುದರಿಂದ ವೈರಾಗ್ಯವನ್ನೇ ಅಭ್ಯಾಸಮಾಡಬೇಕು.

೨೮. ಋತುಕಾಲವನ್ನು ಬಿಟ್ಟು ಮಿಕ್ಕಕಾಲಗಳಲ್ಲಿ ಮನೋವಾಕ್ಕಾಯಕರ್ಮಗಳಿಂದ ಸ್ತ್ರೀಸಂಗವಿಲ್ಲದಿರುವುದೇ ಬ್ರಹ್ಮಚರ್ಯವೆನಿಸುವುದು.

**ಯಮಾಸ್ಸಂಕ್ಷೇಪತಃ ಪ್ರೋಕ್ತಾ ನಿಯಮಾಂಶ್ಚ ವದಾಮಿ ವಃ ।**
**ಶೌಚ ಮಿಜ್ಯಾ ತಪೋ ದಾನಂ ಸ್ವಾಧ್ಯಾಯೋ ಪಸ್ಥನಿಗ್ರಹಃ ॥೨೯॥**
**ವ್ರತೋಪವಾಸ ಮೌನಂ ಚ ಸ್ನಾನಂ ಚ ನಿಯಮಾ ದಶ ।**
**ನಿಯಮ ಸ್ಸ್ಯಾದನೀಹಾ ಚ ಶೌಚಂ ತುಷ್ಟಿ ಸ್ತಪಸ್ತಥಾ ॥೩೦॥**
**ಜಪಃ ಶಿವಪ್ರಣೀಧಾನಂ ಪದ್ಮಕಾದ್ಯಂ ತಥಾಽಽಸನಂ ।**
**ಬಾಹ್ಯ ಮಾಭ್ಯಂತರಂ ಪ್ರೋಕ್ತಂ ಶೌಚ ಮಾಭ್ಯಂತರಂ ವರಂ ॥೩೧॥**
**ಬಾಹ್ಯ ಶೌಚೇನ ಯುಕ್ತಃ ಸಂ ಸ್ತಥಾ ಚಾಭ್ಯಂತರಂ ಚರೇತ್ ।**

---

"ಸ್ಮರಣಂ ಕೀರ್ತನಂ ಕೇಲಿಃ ಪ್ರೇಕ್ಷಣಂ ಗುಹ್ಯಭಾಷಣಂ ।
ಸಂಕಲ್ಪೋಽ ಧ್ಯವಸಾಯಶ್ಚ ಕ್ರಿಯಾನಿರ್ವೃತ್ತಿರೇವ ಚ ॥
ಏತನ್ಮೈಥುನಮಷ್ಟಾಂಗ ಪ್ರವದಂತಿ ಮನೀಷಿಣಃ ।
ವಿಪರೀತಂ ಬ್ರಹ್ಮಚರ್ಯ ಮೇತದೇವಾಷ್ಟಲಕ್ಷಣಂ ॥

ಎಂದು ಎಂಟು ಪ್ರಕಾರದ ಸ್ತ್ರೀಸಂಗ ನಿವೃತ್ತಿಯೇ ಬ್ರಹ್ಮಚರ್ಯವೆನಿಸುವುದೆಂದು ಹೇಳಿರುವುದು. "ಬ್ರಹ್ಮಚರ್ಯ ಪ್ರತಿಷ್ಠಾಯಾಂ ವೀರ್ಯ ಲಾಭಃ" ಎಂದು ಯೋಗ ಸೂತ್ರವಿರುವುದು. ಆದುದರಿಂದ ಬ್ರಹ್ಮಚರ್ಯವು ಅತ್ಯಂತಾವಶ್ಯಕವಾದುದು.

೨೯. ಯೋಗಾಂಗವಾದ ಯಮವೆಂಬುದರ ಲಕ್ಷಣವನ್ನು ಸಂಕ್ಷೇಪವಾಗಿ ಹೇಳಿಯಾಯ್ತು. ಇನ್ನು ಮುಂದೆ ನಿಮಗೆ ನಿಯಮಗಳನ್ನು ಹೇಳುವೆನು. ಶೌಚ, ಇಜ್ಯಾ, ತಪಸ್ಸು, ದಾನ, ಸ್ವಾಧ್ಯಾಯ, ಉಪಸ್ಥನಿಗ್ರಹ, ವ್ರತ, ಉಪವಾಸ, ಮೌನ, ಸ್ನಾನ, ಈ ಹತ್ತೂ ನಿಯಮಗಳು.

೩೦. ಅನೀಹ, ಶೌಚ, ತುಷ್ಟಿ, ತಪಸ್ಸು, ಜಪ, ಶಿವಪ್ರಣಿಧಾನ, ಇವುಗಳು ನಿಯಮಗಳೆಂದು ಮತ್ತೊಂದು ಮತವು. ಪದ್ಮಾಸನವೇ ಮುಂತಾದುವು ಆಸನಗಳು.

೩೧. ಬಾಹ್ಯ, ಆಭ್ಯಂತರ, ಎಂದು ಶೌಚವು ಎರಡು ವಿಧವಾಗಿದೆ. ಆಭ್ಯಂತರಶೌಚವು ಉತ್ತಮವಾದುದು. ಅದರೂ ಬಾಹ್ಯ ಶೌಚದಿಂದ ಕೂಡಿ ಆಭ್ಯಂತರ ಶೌಚವನ್ನು ಆಚರಿಸಬೇಕು.

ಆಗ್ನೇಯಂ ವಾರಣಂ ಬ್ರಾಹ್ಮಂ ಕರ್ತವ್ಯಂ ಶಿವಪೂಜಕೈಃ ॥೩೨॥
ಸ್ನಾನಂ ವಿಧಾನತ ಸ್ಸಮ್ಯಕ್ ಪಶ್ಚಾದಾಭ್ಯಂತರಂ ಚರೇತ್ ।
ಆದೇಹಾಂತಂ ಮೃದಾ ಲಿಪ್ಯ ತೀರ್ಥತೋಯೇಷು ಸರ್ವದಾ ॥೩೩॥
ಅವಗಾಹ್ಯಾಪಿ ಮಲಿನೋ ಹ್ಯಂತಶ್ಶೌಚವಿವರ್ಜಿತಃ ।
ಶೈವಲಾ ಝಷಕಾ ಮತ್ಸ್ಯಾಃ ಸತ್ವಾ ಮತ್ಸ್ಯೋಪಜೀವಿನಃ ॥೩೪॥
ಸದಾ ವಗಾಹ್ಯ ಸಲಿಲೇ ವಿಶುದ್ಧಾಃ ಕಿಂ ದ್ವಿಜೋತ್ತಮಾಃ ।
ತಸ್ಮಾದಾಭ್ಯಂತರಂ ಶೌಚಂ ಸದಾ ಕಾರ್ಯಂ ವಿಧಾನತಃ ॥೩೫॥
ಆತ್ಮಜ್ಞಾನಾಂಭಸಿ ಸ್ನಾತ್ವಾ ಸಕೃದಾಲಿಪ್ಯ ಭಾವತಃ ।
ಸುವೈರಾಗ್ಯಮೃದಾ ಶುದ್ಧಃ ಶೌಚಮೇವಂ ಪ್ರಕೀರ್ತಿತಂ ॥೩೬॥

---

೩೨. ಶಿವನನ್ನು ಪೂಜಿಸುವವರು ಆಗ್ನೇಯ, ವಾರುಣ, ಬ್ರಾಹ್ಮ, ಎಂಬ ಸ್ನಾನಗಳನ್ನು ವಿಧಿಗನುಸಾರವಾಗಿ ಮಾಡಿ ಬಳಿಕ ಆಭ್ಯಂತರ ಸ್ನಾನವನ್ನು ಮಾಡಬೇಕು. ಭಸ್ಮಸ್ನಾನವು ಆಗ್ನೇಯವೆಂದೂ, ನೀರಿನಲ್ಲಿ ಸ್ನಾನ ಮಾಡುವುದು ವಾರುಣವೆಂದೂ, ಮಂತ್ರದಿಂದ ಸ್ನಾನಮಾಡುವುದು ಬ್ರಾಹ್ಮವೆಂದೂ ಹೇಳಿದೆ.

೩೩. ಮೈಗೆಲ್ಲಕ್ಕೂ ಮಣ್ಣನ್ನು ಬಳಿದುಕೊಂಡು ಪುಣ್ಯತೀರ್ಥಗಳಲ್ಲಿ ಯಾವಾಗಲೂ ಸ್ನಾನಮಾಡಿದರೂ ಅನ್ತಶ್ಶುದ್ಧಿ (ಮನಸ್ಸಿನ ನೈರ್ಮಲ್ಯ) ಯಿಲ್ಲದವನು ಮಲಿನನಾಗಿಯೇ ಇರುವನು.

೩೪–೩೫. ಎಲೈ ಬ್ರಾಹ್ಮಣಶ್ರೇಷ್ಠರೇ, ಕೇಳಿರಿ. ಪಾಚಿ, ದೊಡ್ಡ ಸಣ್ಣ ಮೀನುಗಳು, ಮೀನನ್ನು ತಿಂದು ಜೀವಿಸುವ ಪ್ರಾಣಿಗಳು, ಇವು ಯಾವಾಗಲೂ ನೀರಿನಲ್ಲಿ ಮುಳುಗಿರುವುವು. ಹೀಗಿದ್ದ ಮಾತ್ರಕ್ಕೆ ಅವುಗಳು ಪರಿಶುದ್ಧವಾದುವುಗಳಾಗುವುವೇ? ಆದುದರಿಂದ ಯಾವಾಗಲೂ ವಿಧಿಗನುಸಾರವಾಗಿ ಅನ್ತಶ್ಶುದ್ಧಿಯನ್ನು ಆಚರಿಸಬೇಕು. ಅದೆಂತೆಂದರೆ–

೩೬. ವೈರಾಗ್ಯವೆಂಬ ಮಣ್ಣನ್ನು ಒಂದಾವೃತ್ತಿ ಬಳಿದುಕೊಂಡು ಆತ್ಮಜ್ಞಾನವೆಂಬ ನೀರಿನಲ್ಲಿ ಸ್ನಾನಮಾಡಿ ಮನಸ್ಸಿನ ಭಾವವನ್ನು ಎಂದರೆ ಮನೋವೃತ್ತಿಗಳನ್ನು ಶುದ್ಧಮಾಡಿಕೊಳ್ಳಬೇಕು. ಇದೇ ಶೌಚವೆನಿಸುವುದು.

ಶುದ್ಧಸ್ಯ ಸಿದ್ಧಯೋ ದೃಷ್ಟಾ ನೈವಾಶುದ್ಧಸ್ಯ ಸಿದ್ಧಯಃ ।
ನ್ಯಾಯೇನಾಗತಯಾ ವೃತ್ತ್ಯಾ ಸಂತುಷ್ಟೋ ಯಸ್ತು ಸುವ್ರತಃ ॥೩೭॥
ಸಂತೋಷಸ್ತಸ್ಯ ಸತತಮತೀತಾರ್ಥಸ್ಯ ಚಾಸ್ಮೃತಿಃ ।
ಚಾಂದ್ರಾಯಣಾದಿ ನಿಪುಣ ಸ್ತಪಾಂಸಿ ಸುಶುಭಾನಿ ಚ ॥೩೮॥
ಸ್ವಾಧ್ಯಾಯಸ್ತು ಜಪಃ ಪ್ರೋಕ್ತಃ ಪ್ರಣವಸ್ಯ ತ್ರಿಧಾ ಸ್ಮೃತಃ ।
ವಾಚಿಕ ಶ್ಚಾಧಮೋ ಮುಖ್ಯ ಉಪಾಂಶು ಶ್ಚೋತ್ತಮೋತ್ತಮಃ ॥
ಮಾನಸೋ ವಿಸ್ತರೇಣೈವ ಕಲ್ಪೇ ಪಂಚಾಕ್ಷರೇ ಸ್ಮೃತಃ ।
ತಥಾ ಶಿವಪ್ರಣೀಧಾನಂ ಮನೋವಾಕ್ಕಾಯಕರ್ಮಣಾ ॥೪೦॥
ಶಿವಜ್ಞಾನಂ ಗುರೋರ್ಭಕ್ತಿ ರಚಲಾ ಸುಪ್ರತಿಷ್ಠಿತಾ ।

---

ಬಾಹ್ಯಶುದ್ಧಿಯೂ ಅಂತ ಶ್ಶುದ್ಧಿಯೂ ಉಳ್ಳವನಿಗೇ ಸಕಲಸಿದ್ಧಿಗಳೂ ಉಂಟಾಗುವುವು. ಇದನ್ನು ಎಲ್ಲರೂ ಕಂಡಿರುವರು. ಅಶುದ್ಧರಾದವರಿಗೆ ಸಿದ್ಧಿಗಳು ಉಂಟಾಗುವುದು ಇಲ್ಲವೇ ಇಲ್ಲ.

೩೭–೩೮. ನ್ಯಾಯಮಾರ್ಗದಿಂದ ತನಗೆ ದೊರೆತ ವಸ್ತುಗಳಿಂದ ಯಾವನು ತೃಪ್ತಿಯನ್ನು ಹೊಂದುವನೋ ಅವನಿಗೆ ಸಂತೋಷವಿರುವುದು. ಇಲ್ಲದಿರುವವುಗಳನ್ನು ಜ್ಞಾಪಕಕ್ಕೂ ತಂದುಕೊಳ್ಳದೇ ಇರುವುದೇ "ಅನೀಹಾ" ಎನಿಸುವುದು. ಚಾಂದ್ರಾಯಣಾದಿ ನಿಯಮಗಳೇ ಮಂಗಳಕರವಾದ ತಪಸ್ಸುಗಳೆನಿಸುವುವು.

೩೯. ಪ್ರಣವಮಂತ್ರ ಜಪವನ್ನೇ ಸ್ವಾಧ್ಯಾಯವೆಂದು ಕರೆಯುವರು. ಇದು ಅಧಮ, ಮುಖ್ಯ, ಉತ್ತಮೋತ್ತಮ, ಎಂದು ಮೂರು ಬಗೆಯಾಗಿರುವುದು. ಮಂತ್ರಗಳನ್ನು ಅನೇಕಾವೃತ್ತಿ ಗಟ್ಟಿಯಾಗಿ ಉಚ್ಚರಿಸುವುದು ಅಧಮವು. ಇತರರಿಗೆ ಕೇಳಿಸದಂತೆ ಉಚ್ಚರಿಸುವುದು ಮುಖ್ಯವು. ಮನಸ್ಸಿನಲ್ಲಿಯೇ ಮಂತ್ರಾರ್ಥವನ್ನು ಅನುಸಂಧಾನಮಾಡುವುದು ಉತ್ತಮೋತ್ತಮವು. ಪಂಚಾಕ್ಷರಕಲ್ಪದಲ್ಲಿ ಇದನ್ನು ವಿಸ್ತಾರವಾಗಿ ಹೇಳಿರುವುದು.

೪೦. ಗುರುವಿನಲ್ಲಿ ಸ್ಥಿರವಾದ ಭಕ್ತಿಯೂ ಮನೋವಾಕ್ಕಾಯಕರ್ಮಗಳಲ್ಲಿ ಶಿವನನ್ನೇ ಧ್ಯಾನಿಸಿ ಅವನ ಮಹಿಮೆಗಳನ್ನು ಕೊಂಡಾಡಿ ಅವನನ್ನು ಪೂಜಿಸುವುದೇ ಮುಂತಾದ ಶಿವನ ಉಪಾಸನೆಯೂ ಶಿವಪ್ರಣಿಧಾನವೆನಿಸುವುದು.

ನಿಗ್ರಹೋ ಹ್ಯಪಹೃತ್ಯಾಶು ಪ್ರಸಕ್ತಾನೀಂದ್ರಿಯಾಣಿ ಚ ॥೪೧॥
ವಿಷಯೇಷು ಸಮಾಸೇನ ಪ್ರತ್ಯಾಹಾರಃ ಪ್ರಕೀರ್ತಿತಃ ।
ಚಿತ್ತಸ್ಯ ಧಾರಣಾ ಪ್ರೋಕ್ತಾ ಸ್ಥಾನಬಂಧ ಸ್ಸಮಾಸತಃ ॥೪೨॥
ತಸ್ಯಾಃ ಸ್ವಾಸ್ಥ್ಯೇನ ಧ್ಯಾನಂ ಚ ಸಮಾಧಿ ಶ್ಚ ವಿಚಾರತಃ ।
ತತ್ರೈಕ ಚಿತ್ತತಾ ಧ್ಯಾನಂ ಪ್ರತ್ಯಯಾಂತರವರ್ಜಿತಂ ॥೪೩॥
ಚಿದ್ಭಾಸ ಮರ್ಥಮಾತ್ರಸ್ಯ ದೇಹಶೂನ್ಯ ಮಿವ ಸ್ಥಿತಂ ।
ಸಮಾಧಿ ಸ್ಸರ್ವಹೇತು ಶ್ಚ ಪ್ರಾಣಾಯಾಮ ಇತಿ ಸ್ಮೃತಃ ॥೪೪॥

---

೪೧. ವಿಷಯಗಳಲ್ಲಿ ಸಂಬಧಿಸಿಕೊಂಡಿರುವ ಇಂದ್ರಿಯವೃತ್ತಿಗಳನ್ನು ಬೇಗನೆ ತಡೆದು ನಿಲ್ಲಿಸುವುದು ಪ್ರತ್ಯಾಹಾರವೆಂದು ಸಂಗ್ರಹವಾಗಿ ಹೇಳಿರುವುದು.

೪೨–೪೩. ಮನಸ್ಸನ್ನು ಹಿಂದೆ ಹೇಳಿದಂತೆ ಹೃದಯಾದಿ ಪ್ರದೇಶಗಳಲ್ಲಿ ನೆಲೆಗೊಳಿಸುವುದೇ ಧಾರಣೆಯೆಂದು ಸಂಗ್ರಹವಾಗಿ ಹೇಳಿರುವುದು. ಧಾರಣೆಯಲ್ಲಿ ನೆಲೆಗೊಳಿಸಿದ ಮನಸ್ಸು ಹೆಚ್ಚುಕಾಲ ಒಂದೇ ವಿಷಯದಲ್ಲಿ ನೆಲೆಸಿದ್ದರೆ ಅದು ಧ್ಯಾನವು. ಒಂದು ಗೊತ್ತಾದ ವಿಷಯವನ್ನು ಧ್ಯಾನ ಮಾಡುತ್ತ ಮತ್ತೊಂದಕ್ಕೆ ಚಿತ್ತವೃತ್ತಿಯು ಹೋಗದಿದ್ದರೆ ಆ ಏಕಾಗ್ರತೆಯ ಚಿತ್ತವೃತ್ತಿಯನ್ನು ಸಮಾಧಿ ಎಂದು ಕರೆಯುವರು.

೪೪. ಸಮಸ್ತ ಪದಾರ್ಥಗಳೂ ಜ್ಞಾನದಿಂದಲೇ ಅಂದರೆ ಚೈತನ್ಯದಿಂದಲೇ ಪ್ರಕಾಶಕ್ಕೆ ಬಂದಿರುವುವು. ಆ ಚೈತನ್ಯವು ಸ್ಥೂಲಸೂಕ್ಷ್ಮಕಾರಣ ಶರೀರಗಳ ವಿಲೀನಾವಸ್ಥೆಯಲ್ಲಿ ಅಂದರೆ ತುರೀಯಾವಸ್ಥೆಯಲ್ಲಿ ಇರುವುದು. ಆ ತುರೀಯಾವಸ್ಥೆಯನ್ನೇ ಸಮಾಧಿ ಎಂದು ಕರೆಯುವುದು. ಅಂದರೆ ಸಮಾಧಿಯಲ್ಲಿ ಸಕಲ ಪದಾರ್ಥಗಳೂ ಜ್ಞಾನಸ್ವರೂಪದಲ್ಲಿ ನಿರ್ವಿಕಾರ ಚೈತನ್ಯರೂಪವಾಗಿರುವುವು. ಹಠಪ್ರದೀಪಿಕೆಯಲ್ಲಿಯೂ,

"ಸಲಿಲೇ ಸೈಂಧವಂ ಯದ್ವತ್ಸಾಮ್ಯಂ ಭವತಿ ಯೋಗತಃ ।
ತಥಾಽಽತ್ಮಮನಸೋರೈಕ್ಯಂ ಸಮಾಧಿ ರಭಿಧೀಯತೇ ॥
ತತ್ಸಮಂ ಚ ದ್ವಯೋರೈಕ್ಯಂ ಜೀವಾತ್ಮಪರಮಾತ್ಮನೋಃ ।
ಪ್ರನಷ್ಟಸರ್ವಸಂಕಲ್ಪಂ ಸಮಾಧಿ ಸ್ಸೋಽಭಿಧೀಯತೇ ॥"

ಎಂದು ಹೇಳಿರುವುದು. ನೀರಿನಲ್ಲಿ ಉಪ್ಪು ಕರಗಿದಂತೆ ಆತ್ಮನಲ್ಲಿ ಮನಸ್ಸು ಐಕ್ಯವಾಗುವುದು ಸಮಾಧಿಯೆನಿಸುವುದು. ಸಮಸ್ತಧ್ಯಾನ ಸಮಾಧಿಗಳಿಗೂ ಪ್ರಾಣಾಯಾಮವೇ ಕಾರಣವು.

ಪ್ರಾಣಃ ಸ್ವದೇಹಜೋ ವಾಯುಃ ಯಮಸ್ತಸ್ಯ ನಿರೋಧನಂ ।
ತ್ರಿಧಾ ದ್ವಿಜೈ ರ್ಯಮಃ ಪ್ರೋಕ್ತೋ ಮಂದೋ ಮಧ್ಯೋತ್ತಮಸ್ತಥಾ ॥೪೫॥
ಪ್ರಾಣಾಪಾನನಿರೋಧಸ್ತು ಪ್ರಾಣಾಯಾಮಃ ಪ್ರಕೀರ್ತಿತಃ ।
ಪ್ರಾಣಾಯಾಮಸ್ಯ ಮಾನಂ ತು ಮಾತ್ರಾ ದ್ವಾದಶಕಂ ಸ್ಮೃತಂ॥೪೬॥
ನೀಚೋ ದ್ವಾದಶ ಮಾತ್ರಸ್ತು ಉದ್ಘಾತೋ ದ್ವಾದಶಃ ಸ್ಮೃತಃ ।
ಮಧ್ಯಮಸ್ತು ದ್ವಿರುದ್ಘಾತ ಶ್ಚತುರ್ವಿಂಶತಿ ಮಾತ್ರಕಃ ॥೪೭॥
ಮುಖ್ಯಸ್ತು ಯಸ್ತ್ರಿರುದ್ಘಾತಃ ಷಟ್ತ್ರಿಂಶನ್ಮಾತ್ರ ಉಚ್ಯತೇ ।
ಪ್ರಸ್ವೇದಕಂಪನೋತ್ಥಾನಜನಕಶ್ಚ ಯಥಾಕ್ರಮಂ ॥೪೮॥
ಆನಂದೋದ್ಭವಯೋಗಾರ್ಥಂ ನಿದ್ರಾಘೂರ್ಣಿ ಸ್ತಥೈವ ಚ ।
ರೋಮಾಂಚಧ್ವನಿಸಂವಿದ್ಧಸ್ವಾಂಗಮೋಟನಕಂಪನಂ ॥೪೯॥

---

೪೫. ದೇಹದಲ್ಲಿರುವ ವಾಯುವಿಗೆ ಪ್ರಾಣವೆಂದು ಹೆಸರು. ಅದನ್ನು ಒಂದೆಡೆಯಲ್ಲಿ ನಿಲ್ಲಿಸುವುದಕ್ಕೆ ಯಮವೆಂದು ಹೆಸರು. ಆ ಯಮವೆಂಬುದು ಮಂದ, ಮಧ್ಯ, ಉತ್ತಮ, ಎಂದು ಮೂರು ಬಗೆಯಾಗಿರುವುದು.

೪೬. ಪ್ರಾಣವಾಯುವನ್ನೂ ಅಪಾನವಾಯುವನ್ನೂ ಒಂದೆಡೆಯಲ್ಲಿ ತಡೆದು ನಿಲ್ಲಿಸುವುದೇ ಪ್ರಾಣಾಯಾಮವೆನಿಸುವುದು. ಹನ್ನೆರಡುಮಾತ್ರಾ ಕಾಲವೇ ಪ್ರಾಣಾಯಾಮದ ಕಾಲಪ್ರಮಾಣವು.

೪೭. ಹನ್ನೆರಡು ಮಾತ್ರಾಕಾಲದ ಉದ್ಘಾತವು ನೀಚವೆಂದರೆ ಹಿಂದೆ ಹೇಳಿದಂತೆ ಮಂದವೆಂಬ ಹೆಸರನ್ನು ಪಡೆವುದು. ಎರಡು ಉದ್ಘಾತ ಕಾಲವು ಇಪ್ಪತ್ತನಾಲ್ಕು ಮಾತ್ರಾಕಾಲವು ಮಧ್ಯಮವೆನಿಸುವುದು. ಮೂರು ಉದ್ಘಾತಕಾಲವು ಮೂವತ್ತಾರು ಮಾತ್ರೆಗಳ ಕಾಲ ಉಳ್ಳದ್ದಾಗಿ ಮುಖ್ಯ ವೆನಿಸುವುದು. ಇದು ಉತ್ತಮೋತ್ತಮವಾದುದು.

೪೮. ಕ್ರಮವಾಗಿ ನೀಚ, ಮಧ್ಯಮ, ಮುಖ್ಯ, ಪ್ರಾಣಾಯಾಮ ಗಳು ಸ್ವೇದ, ಕಂಪನ, ಉತ್ಥಾನ, ಇವುಗಳನ್ನು ಉಂಟುಮಾಡತಕ್ಕವು ಗಳಾಗುವುವು.

೪೯. ಪ್ರಾಣಾಯಾಮಕಾಲದಲ್ಲಿ ಆನಂದದ ಆವಿರ್ಭಾವವಾಗುವುದಕ್ಕೋಸ್ಕರವಾಗಿ ನಿದ್ರೆಯಕಾಲದಲ್ಲಿ ಗೊರಕೆಯ ಶಬ್ದದಂತೆ ಶಬ್ದವೂ, ರೋಮಾಂಚವೂ, ದುಂದುಭಿಯ ಧ್ವನಿಯಂತೆ ಇರುವ ಧ್ವನಿಯಿಂದಕೂಡಿ ಆಸನಬಂಧದ ಅವಯವಗಳ ಚಲನೆಯೂ ಆನಂದದಿಂದ ಶರೀರವು ಉಯ್ಯಾಲೆಯಂತೆ ಅಲುಗಾಡುವುದೂ ಉಂಟಾಗುವುವು.

ಭ್ರಮಣಂ ಸ್ವೇದಜನ್ಯಾ ಸಾ ಸಂವಿನ್ಮೂರ್ಛಾ ಭವೇದ್ಯದಾ ।
ತದೋತ್ತಮೋತ್ತಮಃ ಪ್ರೋಕ್ತಃ ಪ್ರಾಣಾಯಾಮ ಸ್ಸುಶೋಭನಃ॥
ಸಗರ್ಭೋಽಗರ್ಭ ಇತ್ಯುಕ್ತಃ ಸಜಪೋ ವಿಜಪಃ ಕ್ರಮಾತ್ ।
ಇಭೋ ವಾಶರಭೋ ವಾಽಪಿ ದುರಾಧರ್ಷೋಽಥ ಕೇಸರೀ ॥೫೧॥
ಗೃಹೀತೋ ದಮ್ಯಮಾನಸ್ತು ಯಥಾ ಸ್ವಸ್ಥಸ್ತು ಜಾಯತೇ ।
ತಥಾ ಸಮೀರಣೋಽಸ್ವಸ್ಥೋ ದುರಾಧರ್ಷಶ್ಚ ಯೋಗಿನಾಂ ॥೫೨॥
ನ್ಯಾಯತಃ ಸೇವ್ಯಮಾನಸ್ತು ಸ ಏವಂ ಸ್ವಸ್ಥತಾಂ ವ್ರಜೇತ್ ।
ಯಥೈವ ಮೃಗರಾಟ್ ನಾಗಃ ಶರಭೋ ವಾಽಪಿ ದುರ್ಮದಃ ॥೫೩॥

---

೫೦. ಪ್ರಾಣಾಯಾಮದಿಂದ ನೀರಿನಲ್ಲಿ ನೆಲದಮೇಲೆ ಸಂಚರಿಸುವಂತೆ ಸಂಚರಿಸುವ ಶಕ್ತಿಯು ಭ್ರಮಣವೆನಿಸುವುದು. ಪ್ರಾಣಾಯಾಮದ ಆಯಾಸದಿಂದುಂಟಾದ ಬೆವರಿನಿಂದ ಕೂಡಿದ ಸಮಾಧಿಯು "ಸಂವಿತ್" ಎಂದರೆ ಜ್ಞಾನರೂಪವಾದ ಮೂರ್ಛೆಯು, ಯಾವಾಗ ಆಗುವುದೋ ಆಗಲದು ಅತ್ಯುತ್ತಮವಾದ ಮಂಗಳಕರವಾದ ಪ್ರಾಣಾಯಾಮವೆನಿಸುವುದು. ಆ ಪ್ರಾಣಾಯಾಮದ ಭೇದಗಳೆಲ್ಲವನ್ನೂ ಹಠಯೋಗ ಪ್ರದೀಪಿಕೆಯಲ್ಲಿ ಹೇಳಿರುವುದು. "ಸೂರ್ಯಭೇದನ ಮುಜ್ಜಾಯೀ ಸೀತ್ಕಾರೀ ಶೀತಲೀ ತಥಾ । ಭಸ್ರಿಕಾ ಭ್ರಾಮರೀ ಮೂರ್ಛಾ ಪ್ಲಾವನೀತ್ಯಷ್ಟ ಕುಂಭಕಾಃ ॥" ಎಂದು ಎಂಟು ವಿಧ ಕುಂಭಕ ಪ್ರಾಣಾಯಾಮಗಳ ಲಕ್ಷಣಗಳನ್ನು ಅಲ್ಲಿ ತಿಳಿಯಬಹುದು.

೫೧-೫೨. ಮಂತ್ರ ಜಪಸಹಿತವಾದ ಪ್ರಾಣಾಯಾಮವು ಸಗರ್ಭವೆಂತಲೂ, ಮಂತ್ರಜಪವಿಲ್ಲದುದು ಅಗರ್ಭವೆಂತಲೂ, ಹೆಸರನ್ನು ಪಡೆದಿರುವುದು. ರೇಚಕ ಪೂರಕ ಸಹಿತವಾದ ಕುಂಭಕವು ಸಗರ್ಭವೆಂತಲೂ ಕೇವಲ ಕುಂಭಕವು ಅಗರ್ಭವೆಂತಲೂ ಮತ್ತೊಂದು ಮತವು. ಆನೆ, ಶರಭ, ಸಿಂಹ ಮುಂತಾದ ದುಷ್ಟ ಮೃಗಗಳನ್ನು ಹಿಡಿದು ಪಳಗಿಸಿದರೆ ಹೇಗೆ ಹೇಳಿದಂತೆ ಕೇಳುವುವೋ ಹಾಗೆ ತಡೆದು ನಿಲ್ಲಿಸಲು ಸಾಧ್ಯವಾದುದಾಗಿರುವ ವಾಯುವನ್ನು ಯೋಗಿಗಳು ಅಭ್ಯಾಸಬಲದಿಂದ ತಡೆದು ಒಂದೆಡೆಯಲ್ಲಿ ನಿಲ್ಲಿಸಿದರೆ ಅದು ಫಲಕಾರಿಯಾಗುವುದು.

೫೩-೫೪. ಮದಿಸಿದ ಆನೆ, ಶರಭಗಳನ್ನು ಪ್ರೀತಿಯಿಂದ ಕಾಪಾಡಿದರೆ ಕೆಲವು ಕಾಲದಮೇಲೆ ಅವು ತಮ್ಮ ಕ್ರೂರತೆಯನ್ನು ಬಿಟ್ಟು ಹೇಗೆ ಶಾಂತ

**ಕಾಲಾಂತರ ವಶಾದ್ಯೋಗಾದ್ದ ವ್ಯುತೇ ಪರಮಾದರಾತ್ ।**
**ತಥಾ ಪರಿಚಯಾತ್ ಸ್ವಾಸ್ಥ್ಯಂ ಸಮತ್ವಂ ಚಾಧಿಗಚ್ಛತಿ ॥೫೪॥**
**ಯೋಗಾದಭ್ಯಸತೇ ಯಸ್ತು ವ್ಯಸನಂ ನೈವ ಜಾಯತೇ ।**
**ಏವಮಭ್ಯಸ್ಯಮಾನಸ್ತು ಮುನೇಃ ಪ್ರಾಣೋ ವಿನಿರ್ದಹೇತ್ ॥೫೫॥**
**ಮನೋವಾಕ್ಕಾಯಜಾನ್ ದೋಷಾನ್ ಕರ್ತುರ್ದೇಹಂ ಚ ರಕ್ಷತಿ ।**
**ಸಂಯುಕ್ತಸ್ಯ ತಥಾ ಸಮ್ಯಕ್ ಪ್ರಾಣಾಯಾಮೇನ ಧೀಮತಃ ॥೫೬॥**
**ದೋಷಾತ್ತಸ್ಮಾಚ್ಚ ನಶ್ಯಂತಿ ನಿಶ್ವಾಸಸ್ತೇನ ಜೀರ್ಯತೇ ।**
**ಪ್ರಾಣಾಯಾಮೇನ ಸಿಧ್ಯಂತಿ ದಿವ್ಯಾಃ ಶಾಂತ್ಯಾದಯಃ ಕ್ರಮಾತ್ ॥**
**ಶಾಂತಿಃ ಪ್ರಶಾಂತಿರ್ದೀಪ್ತಿಶ್ಚ ಪ್ರಸಾದಶ್ಚ ತಥಾ ಕ್ರಮಾತ್ ।**
**ಆದೌ ಚತುಷ್ಟಯಸ್ಯೇಹ ಪ್ರೋಕ್ತಾ ಶಾಂತಿರಿಹ ದ್ವಿಜಾಃ ॥೫೮॥**
**ಸಹಜಾಗಂತುಕಾನಾಂ ಚ ಪಾಪಾನಾಂ ಶಾಂತಿರುಚ್ಯತೇ ।**

---

ವಾಗಿರುವುವೋ ಹಾಗೆ ಅಭ್ಯಾಸಬಲದಿಂದ ವಿಧಿಗನುಸಾರವಾಗಿ ಸೇವಿಸಿದ ವಾಯುವು ಶಾಂತತೆಯನ್ನೂ, ಸಮಭಾವವನ್ನೂ ಹೊಂದುವುದು.

೫೫. ಯೋಗಮಾರ್ಗದಿಂದ ಪ್ರಾಣಾಯಾಮವನ್ನು ಅಭ್ಯಾಸ ಮಾಡುವವನಿಗೆ ದುಃಖವು ಉಂಟಾಗುವುದೇ ಇಲ್ಲವು. ಹೀಗೆಯೇ ಪ್ರಾಣಾಯಾಮದ ಅಭ್ಯಾಸವನ್ನು ಮಾಡುತ್ತಿರುವ ಮುನಿಯ ಪ್ರಾಣ ವಾಯುವು ಮನೋವಾಕ್ಕಾಯ ಸಂಬಂಧವಾದ ದೋಷಗಳನ್ನು ನಾಶ ಮಾಡಿ ಅವನ ದೇಹವನ್ನು ರಕ್ಷಿಸುವುದು.

೫೬. ಉತ್ತಮವಾದ ಪ್ರಾಣಾಯಾಮದ ಅಭ್ಯಾಸದಿಂದ ಕೂಡಿದ ಬುದ್ಧಿವಂತನಾದ ಮನುಷ್ಯನ ಶರೀರ ಸಂಬಂಧವಾದ ದೋಷಗಳೆಲ್ಲವೂ ಆ ಪ್ರಾಣಾಯಾಮದಿಂದಲೇ ನಾಶವಾಗುವುವು. ಇದರಿಂದ ನಿಶ್ವಾಸೋಚ್ಛ್ವಾಸಕ್ರಮವು ಶರೀರವನ್ನು ಪುಷ್ಟಿಮಾಡುವುದು.

೫೭. ಪ್ರಾಣಾಯಾಮಾಭ್ಯಾಸದಿಂದ ಯೋಗಿಗೆ ಕ್ರಮವಾಗಿ ಶಾಂತಿ, 'ಪ್ರಶಾಂತಿ, ದೀಪ್ತಿ, ಪ್ರಸಾದ ಎಂಬ ಶ್ರೇಷ್ಠವಾದ ಗುಣಗಳು ಸಿದ್ಧಿಸುವುವು.

೫೮. ಎಲೈ ಬ್ರಾಹ್ಮಣರೇ, ಕೇಳಿರಿ. ಮೇಲೆ ಹೇಳಿರುವ ನಾಲ್ಕು ಸಿದ್ಧಿಗಳಲ್ಲಿ ಮೊದಲನೆಯದು ಶಾಂತಿಯೆಂಬುದು. ಇದು ಮನುಷ್ಯನ ಹುಟ್ಟನೊಡನೆ ಬಂದಿದ್ದ ಮತ್ತು ಆಗಂತುಕವಾದ ಪಾಪಗಳನ್ನು ಶಾಂತ ಮಾಡುವುದು.

ಪ್ರಶಾಂತಿಃ ಸಂಯಮಃ ಸಮ್ಯಗ್ವಚಸಾಮಿತಿ ಸಂಸ್ಮೃತಾ ॥೫೯॥
ಪ್ರಕಾಶೋ ದೀಪ್ತಿರಿತ್ಯುಕ್ತಃ ಸರ್ವತಃ ಸರ್ವದಾ ದ್ವಿಜಾಃ ।
ಸರ್ವೇಂದ್ರಿಯಪ್ರಸಾದಸ್ತು ಬುದ್ಧೇರ್ಮ್ಯ ಮರುತಾಮಪಿ ॥೬೦॥
ಪ್ರಸಾದ ಇತಿ ಸಂಪ್ರೋಕ್ತಃ ಸ್ವಾಂತೇ ತ್ವಿಹ ಚತುಷ್ಟಯೇ ।
ಪ್ರಾಣೋಽಪಾನಃ ಸಮಾನಶ್ಚ ಉದಾನೋ ವ್ಯಾನಏವ ಚ ॥೬೧॥
ನಾಗಃ ಕೂರ್ಮಸ್ತು ಕೃಕಲೋ ದೇವದತ್ತೋ ಧನಂಜಯಃ ।
ಏತೇಷಾಂ ಯಃ ಪ್ರಸಾದಸ್ತು ಮರುತಾಮಿತಿ ಸಂಸ್ಮೃತಃ ॥೬೨॥
ಪ್ರಯಾಣಂ ಕುರುತೇ ತಸ್ಮಾದ್ವಾಯುಃ ಪ್ರಾಣ ಇತಿ ಸ್ಮೃತಃ ।
ಅಪಾನಯತ್ಯಪಾನಸ್ತು ಆಹಾರಾದೀನ್ ಕ್ರಮೇಣ ಚ ॥೬೩॥

---

೫೯. ಶಾಸ್ತ್ರಾನುಸಾರವಾಗಿ ಮಾತುಗಳನ್ನು ಕಟ್ಟನಲ್ಲಿಟ್ಟುಕೊಂಡಿರುವುದೇ ಪ್ರಶಾಂತಿ ಎನಿಸುವುದು. ಭಾರತದಲ್ಲಿ "ಅವ್ಯಾಹತಂ ವ್ಯಾಹೃತಾಚ್ಛ್ರೇಷ್ಠಮಾಹುಃ ಸತ್ಯಂ ವದೇದ್ವ್ಯಾಹೃತಂ ತದ್ದ್ವಿತೀಯಂ॥ ಧರ್ಮಂ ವದೇದ್ವ್ಯಾಹೃತಂ ತತ್ತೃತೀಯಂ । ಪ್ರಿಯಂ ವದೇದ್ವ್ಯಾಹೃತಂ ತಚ್ಚತುರ್ಥಂ ॥" ಎಂದು ಹೇಳಿರುವುದು. ಮೌನವಾಗಿರುವುದು ಅತ್ಯುತ್ತಮವು, ಮಾತನಾಡಿದರೆ ಆ ಮಾತು ಸತ್ಯವಾಗಿಯೂ, ಧರ್ಮವಾಗಿಯೂ, ಪ್ರಿಯವಾಗಿಯೂ ಇರಬೇಕೆಂಬುದೇ ಇದರ ತಾತ್ಪರ್ಯವು.

೬೦. ಯಾವಾಗಲೂ ಎಲ್ಲಾ ಅವಯವಗಳಲ್ಲಿಯೂ ಇರುವ ತೇಜಸ್ಸನ್ನೇ ದೀಪ್ತಿ ಎಂದು ಕರೆಯುವರು. ಸಕಲ ಇಂದ್ರಿಯಗಳ ಮತ್ತು ಬುದ್ಧಿಯ ಪರಿಶುದ್ಧಿಯೂ ಉಚ್ಛ್ವಾಸ ನಿಶ್ವಾಸವಾಯುಗಳ ಸಮತ್ವವೂ ಪ್ರಸಾದ ವೆನಿಸುವುದು.

೬೧-೬೨. ಕ್ರಮವಾಗಿ ಪ್ರಾಣ, ಅಪಾನ, ಸಮಾನ, ಉದಾನ, ವ್ಯಾನ ಎಂಬ ವಾಯುಗಳಿಗೆ ಅಥವಾ ಪಂಚ ಪ್ರಾಣಗಳಿಗೆ ನಾಗ, ಕೂರ್ಮ, ಕೃಕಲ, ದೇವದತ್ತ, ಧನಂಜಯ, ಎಂದು ಹೆಸರಿರುವುದು. ಇವುಗಳು ಶರೀರದಲ್ಲಿ ತಂತಮ್ಮ ಕೆಲಸವನ್ನು ಮಾಡುತ್ತಾ ಸಮಾನಸ್ಥಿತಿಯಲ್ಲಿರುವುದು ಪ್ರಸಾದವೆನಿಸುವುದು.

೬೩-೬೪. ಮರಣ ಕಾಲದಲ್ಲಿ ಶರೀರವನ್ನು ಬಿಟ್ಟು ಹೋಗುವ ವಾಯುವಿಗೆ ಪ್ರಾಣವೆಂದೂ, ಆಹಾರಾದಿಗಳನ್ನು ಕ್ರಮವಾಗಿ ಶರೀರದ ಅವಯವಗಳಿಗೆ ಕೊಡುವ ವಾಯುವಿಗೆ ಅಪಾನವೆಂದೂ, ಅಂಗಗಳಲ್ಲಿ

ವ್ಯಾನೋ ವ್ಯಾನಾಮಯತ್ಯಂಗಂ ವ್ಯಾಧ್ಯಾದೀನಾಂ ಪ್ರಕೋಪಕಃ।
ಉದ್ವೇಜಯತಿ ಮರ್ಮಾಣಿ ಉದಾನೋಽಯಂ ಪ್ರಕೀರ್ತಿತಃ ॥೬೪॥
ಸಮಂ ನಯತಿ ಗಾತ್ರಾಣಿ ಸಮಾನಃ ಪಂಚವಾಯವಃ ।
ಉದ್ಗಾರೇ ನಾಗ ಆಖ್ಯಾತಃ ಕೂರ್ಮ ಉನ್ಮೀಲನೇ ತು ಸಃ ॥೬೫॥
ಕೃಕಲಃ ಕ್ಷುತಕಾಯೈವ ದೇವದತ್ತೋ ವಿಜೃಂಭಣೇ ।
ಧನಂಜಯೋ ಮಹಾಘೋಷಃ ಸರ್ವಗಃ ಸ ಮೃತೇಽಪಿಹಿ ॥೬೬॥
ಇತಿ ಯೋ ದಶವಾಯೂನಾಂ ಪ್ರಾಣಾಯಾಮೇನ ಸಿಧ್ಯತಿ ।
ಪ್ರಸಾದೋಽಸ್ಯ ತುರೀಯಾ ತು ಸಂಜ್ಞಾ ವಿಪ್ರಾಶ್ಚತುಷ್ಟಯೇ ॥
ವಿಸ್ವರಸ್ತು ಮಹಾನ್ ಪ್ರಜ್ಞಾ ಮನೋ ಬ್ರಹ್ಮಾ ಚಿತಿಃ ಸ್ಮೃತಿಃ ।
ಖ್ಯಾತಿಃ ಸಂವಿತ್ತತಃ ಪಶ್ಚಾದೀಶ್ವರೋ ಮತಿರೇವ ಚ ॥೬೮॥

---

ಸೇರಿಕೊಂಡು ರೋಗಾದಿಗಳನ್ನುಂಟುಮಾಡುವ ವಾಯುವಿಗೆ ವ್ಯಾನವೆಂದೂ, ಶರೀರದ ಮರ್ಮಸ್ಥಾನಗಳನ್ನು ಉದ್ವೇಗಗೊಳಿಸುವುದರಿಂದ ಉದಾನವೆಂದೂ, ಶರೀರವನ್ನು ಸಮಸ್ಥಿತಿಯಲ್ಲಿಟ್ಟುಕೊಂಡಿರುವ ವಾಯುವಿಗೆ ಸಮಾನವೆಂದೂ ಐದು ಹೆಸರುಗಳಿರುವುವು.

೬೫-೬೬. ನಾಗವೆಂಬ ಪ್ರಾಣವಾಯುವು ವಮನಕಾರ್ಯವನ್ನು ಮಾಡುವುದು. ಕೂರ್ಮವೆಂಬ ವಾಯುವು ಕಣ್ಣುರೆಪ್ಪೆಯನ್ನು ತೆರೆಯುವುದಕ್ಕೆ ಉಪಯೋಗವಾಗುವುದು, ಕೃಕಲವೆಂಬ ಸಮಾನವಾಯುವು ಸೀನುವ ಕಾರ್ಯವನ್ನು ಮಾಡುವುದು. ದೇವದತ್ತವೆಂಬ ಉದಾನವಾಯುವು ಆಕಳಿಸುವ ಕಾರ್ಯವನ್ನು ಮಾಡುವುದು. ಧನಂಜಯವೆಂಬ ವ್ಯಾನವಾಯುವು ದೊಡ್ಡ ಧ್ವನಿಯಿಂದ ಕೂಡಿ ಶರೀರವು ಪ್ರಾಣರಹಿತವಾಗಿದ್ದರೂ ಆ ಶರೀರವನ್ನೆಲ್ಲವನ್ನೂ ವ್ಯಾಪಿಸಿಕೊಂಡಿರುವುದು.

೬೭. ಎಲೈ ಮುನಿಗಳೇ, ಈ ರೀತಿಯಲ್ಲಿ ವಿವರಿಸಿದ ಹತ್ತು ಬಗೆಯ ವಾಯು ಕಾರ್ಯಗಳನ್ನು ಪ್ರಾಣಾಯಾಮದಿಂದ ತನ್ನಧೀನ ಮಾಡಿಕೊಂಡರೆ ಅಂತಹ ಮನುಷ್ಯನಿಗೆ ಪ್ರಸಾದವೆಂಬ ನಾಲ್ಕನೆಯ ಗುಣವುಂಟಾಗುವುದು.

೬೮-೬೯. ಮಹತ್ತತ್ವರೂಪವಾದ ಬುದ್ಧಿಗೆ, ದ್ವಂದ್ವತಾಪಗಳಿಲ್ಲದ ವಿಸ್ವರ, ಮಹಾನ್, ಪ್ರಜ್ಞಾ, ಮನಸ್ಸು, ಬ್ರಹ್ಮ, ಚಿತಿ, ಸ್ಮೃತಿ, ಖ್ಯಾತಿ,

**ಬುದ್ಧೇರೇತಾ ದ್ವಿಜಾಃ ಸಂಜ್ಞಾ ಮಹತಃ ಪರಿಕೀರ್ತಿತಾಃ ।**
**ಅಸ್ಯಾ ಬುದ್ಧೇಃ ಪ್ರಸಾದಸ್ತು ಪ್ರಾಣಾಯಾಮೇನ ಸಿಧ್ಯತಿ ॥೬೯॥**
**ನಿಸ್ವರೋ ನಿಸ್ವರೀಭಾವೋ ದ್ವಂದ್ವಾನಾಂ ಮುನಿಸತ್ತಮಾಃ ।**
**ಅಗ್ರಜಃ ಸರ್ವತತ್ವಾನಾಂ ಮಹಾನ್ಯಃ ಪರಿಮಾಣತಃ ॥೭೦॥**

**ಯತ್ ಪ್ರಮಾಣಗುಹಾಪ್ರಜ್ಞಾ ಮನಸ್ತು ಮನುತೇ ಯತಃ ।**
**ಬೃಹತ್ವಾದ್ಬೃಂಹಣತ್ವಾಚ್ಚ ಬ್ರಹ್ಮಾ ಬ್ರಹ್ಮವಿದಾಂ ವರಾಃ ॥೭೧॥**
**ಸರ್ವಕರ್ಮಾಣಿ ಭೋಗಾರ್ಥಂ ಯಚ್ಚಿನೋತಿ ಚಿತಿಃ ಸ್ಮೃತಾ ।**
**ಸ್ಮರತೇ ಯತ್ ಸ್ಮೃತಿಃ ಸರ್ವಂ ಸಂವಿದ್ವೈ ವಿಂದತೇ ಯತಃ ॥೭೨॥**
**ಖ್ಯಾಯತೇ ಯತ್ತ್ವತಿ ಖ್ಯಾತಿಃ ಜ್ಞಾನಾದಿಭಿರನೇಕಶಃ ।**
**ಸರ್ವತತ್ವಾಧಿಪಃ ಸರ್ವಂ ವಿಜಾನಾತಿ ಯದೀಶ್ವರಃ ॥೭೩॥**
**ಮನುತೇ ಮನ್ಯತೇ ಯಸ್ಮಾನ್ಮತಿರ್ಮತಿಮತಾಂ ವರಾಃ ।**

---

ಸಂವಿತ್,ಈಶ್ವರ, ಮತಿ ಎಂಬ ಹೆಸರುಗಳಿರುವುವು. ಈ ಬುದ್ಧಿಯ ಪ್ರಸನ್ನತೆಯು ಪ್ರಾಣಾಯಾಮದಿಂದ ಸಿದ್ಧಿಸುವುದು.

೭೦–೭೧. ಮುನಿಶ್ರೇಷ್ಠರೇ, ಕೇಳಿರಿ. ಸುಖದುಃಖಗಳಿಲ್ಲದಿರುವ ಸ್ಥಿತಿಯನ್ನು ನಿಸ್ವರವೆಂದೂ, ಸಕಲ ತತ್ವಗಳಿಗಿಂತಲೂ ಮೊದಲು ಹುಟ್ಟಿ ಅಳತೆಯಲ್ಲಿ ದೊಡ್ಡದಾದುದಕ್ಕೆ ಮಹತ್ತೆಂದೂ, ಪ್ರಮಾಣಸ್ವರೂಪ ವಾಸಸ್ಥಾನವಾದುದರಿಂದ ಪ್ರಜ್ಞೆ ಎಂದೂ, ಆಲೋಚಿಸುವ ಕೆಲಸವನ್ನೂ ಮಾಡುವುದರಿಂದ ಮನಸ್ಸೆಂದೂ, ದೊಡ್ಡದಾಗಿ ಅಭಿವೃದ್ಧಿಯಾಗುವುದರಿಂದ ಬ್ರಹ್ಮವೆಂದೂ ಹೆಸರು ಬಂದಿರುವುದು.

೭೨–೭೩. ಅನುಭವಕ್ಕಾಗಿ ಸಮಸ್ತ ಕರ್ಮಗಳನ್ನೂ ಕೂಡಿಡುವುದರಿಂದ ಚಿತಿ ಎಂದೂ, ಎಲ್ಲವನ್ನೂ ಜ್ಞಾಪಕಕ್ಕೆ ತಂದುಕೊಳ್ಳುವುದರಿಂದ ಸ್ಮೃತಿ ಎಂದೂ ಎಲ್ಲವನ್ನೂ ಸಂಪಾದಿಸುವುದರಿಂದ ಸಂವಿತ್ ಎಂದೂ, ತಿಳಿವಳಿಕೆಯಿಂದ ಅನೇಕ ಬಗೆಯಾಗಿ ಪ್ರಸಿದ್ಧಿಗೆ ಬಂದಿರುವುದರಿಂದ ಖ್ಯಾತಿಯೆಂದೂ, ಎಲ್ಲ ತತ್ವಗಳಿಗೂ ಮೇಲಾದುದಾಗಿ ಎಲ್ಲವನ್ನೂ ತಿಳಿಯುವುದರಿಂದ ಈಶ್ವರನೆಂದೂ, ಆಲೋಚಿಸುವ ಕಾರ್ಯವನ್ನು ಮಾಡಿ ತಿಳಿದುಕೊಳ್ಳುವುದರಿಂದ ಮತಿ ಎಂದೂ, ಬುದ್ಧಿಗೆ ಹೆಸರು ಬಂದಿರುವುದು.

ಅರ್ಥಂ ಬೋಧಯತೇ ಯಚ್ಚ ಬುಧ್ಯತೇ ಬುದ್ಧಿರುಚ್ಯತೇ ॥೭೪॥
ಅಸ್ಯಾ ಬುದ್ಧೇಃ ಪ್ರಸಾದಸ್ತು ಪ್ರಾಣಾಯಾಮೇನ ಸಿದ್ಧ್ಯತಿ ।
ದೋಷಾನ್ನಿನಿರ್ದಹೇತ್ಸರ್ವಾನ್ ಪ್ರಾಣಾಯಾಮಾದಸೌ ಯಮೀ ॥

ಪಾತಕಂ ಧಾರಣಾಭಿಸ್ತು ಪ್ರತ್ಯಾಹಾರೇಣ ನಿರ್ದಹೇತ್ ।
ವಿಷಯಾನ್ ವಿಷವದ್ಧ್ಯಾತ್ವಾ ಧ್ಯಾನೇನಾನೀಶ್ವರಾನ್ ಗುಣಾನ್ ॥

ಸಮಾಧಿನಾ ಯತಿಶ್ರೇಷ್ಠಾಃ ಪ್ರಜ್ಞಾವೃದ್ಧಿಂ ವಿವರ್ಧಯೇತ್ ।
ಸ್ಥಾನಂ ಲಬ್ಧ್ವೈವ ಕುರ್ವೀತ ಯೋಗಾಷ್ಟಾಂಗಾನಿ ವೈ ಕ್ರಮಾತ್ ॥

ಲಬ್ಧ್ವಾಸನಾನಿ ವಿಧಿವದ್ಯೋಗಸಿದ್ಧ್ಯರ್ಥಮಾತ್ಮವಿತ್ ।
ಅದೇಶಕಾಲೇ ಯೋಗಸ್ಯ ದರ್ಶನಂ ಹಿ ನ ವಿದ್ಯತೇ ॥೭೮॥

ಅಗ್ನ್ಯಭ್ಯಾಶೇ ಜಲೇ ವಾಪಿ ಶುಷ್ಕಪರ್ಣಚಯೇ ತಥಾ ।
ಜಂತುವ್ಯಾಪ್ತೇ ಶ್ಮಶಾನೇ ಚ ಜೀರ್ಣಗೋಷ್ಠೇ ಚತುಷ್ಪಥೇ ॥೭೯॥

---

೭೪–೭೫. ಅರ್ಥವನ್ನು ತಿಳಿಸಿಕೊಡುವುದರಿಂದಲೂ ತಾನು ತಿಳಿಯುವುದರಿಂದಲೂ ಈ ತತ್ವಕ್ಕೆ ಬುದ್ಧಿ ಎಂದು ಹೆಸರು ಬಂದಿರುವುದು. ಈ ಬುದ್ಧಿಯ ಪ್ರಸನ್ನತೆಯು (ಪಾರಿಶುಧ್ಯವು) ಪ್ರಾಣಾಯಾಮದಿಂದ ಸಿದ್ಧಿಸುವುದು. ಯೋಗಾಭ್ಯಾಸಮಾಡುವ ಮನುಜನು ಪ್ರಾಣಾಯಾಮದಿಂದ ಸಕಲ ದೋಷಗಳನ್ನೂ ನಾಶಮಾಡುವನು.

೭೬. ಧಾರಣೆ ಎಂಬ ಯೋಗಾಂಗದಿಂದಲೂ, ಪ್ರತ್ಯಾಹಾರದಿಂದಲೂ, ಪಾಪವನ್ನು ನಾಶಮಾಡಬೇಕು. ಧ್ಯಾನವೆಂಬ ಯೋಗಾಂಗದಿಂದ ಅಯೋಗ್ಯವಾದ ಗುಣಗಳನ್ನೂ, ಇಂದ್ರಿಯ ಸಂಬಂಧವಾದ ಸುಖಗಳನ್ನೂ, ವಿಷದಂತೆ ಭಾವಿಸಿ, ಸಮಾಧಿಯೆಂಬ ಯೋಗಾಂಗದಿಂದ ಜ್ಞಾನವನ್ನು ಅಭಿವೃದ್ಧಿಗೊಳಿಸಬೇಕು.

೭೭–೭೮. ಆತ್ಮಜ್ಞಾನಿಯು ಯೋಗಸಿದ್ಧಿಗಾಗಿ ವಿಧಿಗನುಸಾರವಾದ ಆಸನಗಳನ್ನೂ ಯುಕ್ತವಾದ ಸ್ಥಳವನ್ನೂ ಹೊಂದಿಸಿಕೊಂಡು ಅಷ್ಟಾಂಗ ಯೋಗವನ್ನು ಅಭ್ಯಾಸಮಾಡಬೇಕು. ಅಯೋಗ್ಯವಾದ ಪ್ರದೇಶದಲ್ಲಿಯೂ ಕಾಲಗಳಲ್ಲಿಯೂ ಅಭ್ಯಾಸಮಾಡಿದ ಯೋಗವು ಸಿದ್ಧಿಸುವುದೇ ಇಲ್ಲವು.

೭೯–೮೦ ಬೆಂಕಿ, ನೀರು, ಇವುಗಳ ಸಮೀಪದಲ್ಲಿಯೂ ಒಣಗಿದ ಎಲೆಗಳ ರಾಶಿಯಲ್ಲಿಯೂ, ಹುಳುಗಳಿರುವ ಕಡೆಯಲ್ಲಿಯೂ, ಸ್ಮಶಾನದಲ್ಲಿಯೂ,

ಸಶಬ್ದೇ ಸಭಯೇ ವಾಽಪಿ ಚೈತ್ಯ ವಲ್ಮೀಕಸಂಚಯೇ ।
ಅಶುಭೇ ದುರ್ಜನಾಕ್ರಾಂತೇ ಮಶಕಾದಿಸಮನ್ವಿತೇ ॥೮೦॥

ನಾಚರೇದ್ದೇಹ ಬಾಧಾಯಾಂ ದೌರ್ಮನಸ್ಯಾದಿಸಂಭವೇ ।
ಸಗುಪ್ತೇ ತು ಶುಭೇ ರಮ್ಯೇ ಗುಹಾಯಾಂ ಪರ್ವತಸ್ಯ ತು ॥೮೧॥

ಭವಕ್ಷೇತ್ರೇ ಸುಗುಪ್ತೇ ವಾ ಭವಾರಾಮೇ ವನೇಽಪಿ ವಾ ।
ಗೃಹೇ ತು ಸುಶುಭೇ ದೇಶೇ ವಿಜನೇ ಜಂತುವರ್ಜಿತೇ ॥೮೨॥

ಅತ್ಯಂತನಿರ್ಮಲೇ ಸಮ್ಯಕ್ ಸುಪ್ರಲಿಪ್ತೇ ವಿಚಿತ್ರಿತೇ ।
ದರ್ಪಣೋದರಸಂಕಾಶೇ ಕೃಷ್ಣಾಗರುಸುಧೂಪಿತೇ ॥೮೩॥

ನಾನಾಪುಷ್ಪಸಮಾಕೀರ್ಣೇ ವಿತಾನೋಪರಿಶೋಭಿತೇ ।
ಫಲಪಲ್ಲವಮಾಲಾಢ್ಯೇ ಕುಶಪುಷ್ಪಸಮನ್ವಿತೇ ॥೮೪॥
ಸಮಾಸನಸ್ಥೋ ಯೋಗಾಂಗಾನ್ಯಭ್ಯಸೇದ್ಧೃಷಿತಃ ಸ್ವಯಂ ।

---

ಹಳೆಯದಾದ ವನಗಳ ಕೊಟ್ಟಿಗೆಯಲ್ಲಿಯೂ, ನಾಲ್ಕುಬೀದಿಗಳು ಕೂಡುವ ಸ್ಥಳದಲ್ಲಿಯೂ, ದೊಡ್ಡದಾದ ದೇವಸ್ಥಾನದಲ್ಲಿಯೂ, ಹುತ್ತಗಳಿರುವ ಸ್ಥಳದಲ್ಲಿಯೂ, ಅಮಂಗಳ ಮತ್ತು ದುರ್ಜನರಿಂದ ತುಂಬಿದ ಸ್ಥಳದಲ್ಲಿಯೂ, ಸೊಳ್ಳೆ, ನೊಣ, ಮುಂತಾದುವಿರುವ ಸ್ಥಳದಲ್ಲಿಯೂ, ಮನಸ್ಸಿಗೆ ಕೆಟ್ಟ ಯೋಚನೆಯು ಹುಟ್ಟುವ ಸ್ಥಳದಲ್ಲಿಯೂ, ಶರೀರಕ್ಕೆ ತೊಂದರೆಯುಂಟಾಗುವ ಮತ್ತಾವ ಸ್ಥಳದಲ್ಲಿಯೂ, ಯೋಗಾಭ್ಯಾಸವನ್ನು ಮಾಡಬಾರದು.

೮೧—೮೪. ಗೋಪ್ಯವಾದ, ಮಂಗಳಕರವಾದ ಮನೋಹರವಾದ ಪರ್ವತದ ಗುಹೆಯಲ್ಲೂ, ಗೋಪ್ಯವಾದ ಶಿವಸಂಬಂಧವಾದ ಕ್ಷೇತ್ರಗಳಲ್ಲೂ, ತೋಟಗಳಲ್ಲಿಯೂ, ಕಾಡಿನಲ್ಲಿಯೂ, ಮನೆಯಲ್ಲಾದರೆ ಜನರಿಲ್ಲದ, ಹುಳುಗಳು ಮುಂತಾದುವಿಲ್ಲದ, ಅತ್ಯಂತ ಪರಿಶುದ್ಧವಾದ, ಚೆನ್ನಾಗಿ ನೆಲವನ್ನು ಸಾರಿಸಿರುವ, ಚಿತ್ರಗಳನ್ನು ಬರೆದಿರುವ, ಕನ್ನಡಿಯಂತೆ ಹೊಳೆಯುತ್ತಿರುವ, ಪ್ರದೇಶದಲ್ಲಿ ಕರಿಯ ಅಗರು ಧೂಪದಿಂದ ಸುವಾಸನೆಯನ್ನುಂಟು ಮಾಡುವ ಬಗೆಬಗೆಯ ಹೂಗಳನ್ನು ಹರಡಿ ಚಿಗುರು ಹಣ್ಣು ಮುಂತಾದುವುಗಳಿಂದಲೂ, ದರ್ಭೆಗಳು, ಹೂಗಳು ಮುಂತಾದುವುಗಳಿಂದಲೂ ಕೂಡಿದ ಪ್ರದೇಶದಲ್ಲಿ ಸಮವಾದ ಆಸನದಲ್ಲಿ ಕುಳಿತು ಸಂತೋಷದಿಂದ ಯೋಗಾಭ್ಯಾಸವನ್ನು ಮಾಡಬೇಕು.

**ಪ್ರಣಿಪತ್ಯ ಗುರುಂ ಪಶ್ಚಾದ್ಭವಂ ದೇವೀಂ ವಿನಾಯಕಂ ॥೪೫॥**
**ಯೋಗೀಶ್ವರಾನ್ ಸಶಿಷ್ಯಾಂಶ್ಚ ಯೋಗಂ ಯುಂಜೀತ ಯೋಗವಿತ್**
**ಆಸನಂ ಸ್ವಸ್ತಿಕಂ ಬದ್ಧ್ವಾ ಪದ್ಮಮರ್ಧಾಸನಂ ತು ವಾ ॥೪೬॥**
**ಸಮಜಾನುಸ್ತಥಾ ಧೀಮಾನೇಕಜಾನುರಥಾಪಿ ವಾ ।**
**ಸಮಂ ಧೃಡಾಸನೋ ಭೂತ್ವಾ ಸಂಹೃತ್ಯ ಚರಣಾವುಭೌ ॥೪೭॥**
**ಸಂವೃತಾಸ್ಯೋ ಪಬದ್ಧಾಕ್ಷ ಉರೋವಿಷ್ಟಭ್ಯ ಜಾಗ್ರತಃ ।**
**ಪಾರ್ಷ್ಣಿಭ್ಯಾಂ ವೃಷಣೌ ರಕ್ಷಂಸ್ತಥಾ ಪ್ರಜನನಂ ಪುನಃ ॥೪೮॥**
**ಕಿಂಚಿದುನ್ನಮಿತಶಿರಾ ದಂತೈರ್ದಂತಾನ್ನ ಸಂಸ್ಪೃಶೇತ್ ।**
**ಸಂಪ್ರೇಕ್ಷ್ಯ ನಾಸಿಕಾಗ್ರಂ ಸ್ವಂ ದಿಶಶ್ಚಾನವಲೋಕಯನ್ ॥೪೯॥**

---

೪೫. ಮೊದಲು ಗುರುವಿಗೆ ನಮಸ್ಕಾರಮಾಡಿ, ತರುವಾಯ ಶಿವನಿಗೂ ದೇವಿಗೂ ವಿನಾಯಕನಿಗೂ ನಮಸ್ಕರಿಸಿ, ಹಿಂದೆ ಏಳನೆಯ ಅಧ್ಯಾಯದಲ್ಲಿ ಹೇಳಿದ ಯೋಗೀಶ್ವರರಿಗೂ ಅವರ ಶಿಷ್ಯರಿಗೂ ನಮಸ್ಕರಿಸಿ, ಯೋಗಾಭ್ಯಾಸವನ್ನು ಮಾಡಬೇಕು.

೪೬–೫೦ ಸ್ವಸ್ತಿಕ, ಪದ್ಮ, ಅರ್ಧಾಸನ, ಇವುಗಳಲ್ಲೊಂದು ಆಸನವನ್ನು ಹಾಕಿಕೊಂಡು, ಮಂಡಿಗಳನ್ನು ಸಮವಾಗಿ ಅಥವಾ ಒಂದು ಮಂಡಿಯನ್ನು ತನಗನುಕೂಲವಾಗುವಂತೆ ಇಟ್ಟು, ಧೃಡವಾಗಿ ಕುಳಿತುಕೊಂಡು, ಎರಡು ಪಾದಗಳನ್ನೂ ಮಡಿಸಿಕೊಂಡು, ಎದೆಯನ್ನು ಮುಂದಕ್ಕೆ ಚಾಚಿ, ಬಾಯನ್ನು ಮುಚ್ಚಿಕೊಂಡು ಕಣ್ಣುಗಳ ದೃಷ್ಟಿಯನ್ನು ಮೇಲು ಭಾಗದಲ್ಲಿಟ್ಟು, ತಲೆಯನ್ನು ಸ್ವಲ್ಪ ಮೇಲಕ್ಕೆ ಎತ್ತಿ, ಹಿಮ್ಮಡಿಗಳಿಂದ ವೃಷಣವನ್ನೂ ಲಿಂಗವನ್ನೂ ಒತ್ತಿ ಹಲ್ಲುಗಳನ್ನು ಒಂದಕ್ಕೊಂದನ್ನು ಸೇರಿಸದೆ ತನ್ನ ಮೂಗಿನತುದಿಯಲ್ಲಿ ದೃಷ್ಟಿಯನ್ನಿಟ್ಟು, ದಿಕ್ಕುಗಳನ್ನು ನೋಡದೆ ತಮೋಗುಣವನ್ನು ರಜೋಗುಣದಿಂದ ಮುಚ್ಚಿ, ರಜೋಗುಣವನ್ನು ಸತ್ವಗುಣದಿಂದ ಮುಚ್ಚಿ ಸತ್ವಗುಣಭೂಯಿಷ್ಠನಾಗಿ ಮಂಗಳಕರವಾದ ಧ್ಯಾನಯೋಗಾಭ್ಯಾಸವನ್ನು ಮಾಡಬೇಕು. ಆಸನಗಳ ವಿಷಯದಲ್ಲಿ ದೀಪಿಕೆ ಎಂಬ ಗ್ರಂಥದಲ್ಲಿ ''ಜಾನೂರ್ವೋರಂತರೇ ಸಮ್ಯಕ್ ಕೃತ್ವಾ ಪಾದತಲೇ ಉಭೇ। ಋಜುಕಾಯಸಮಾಸೀನಃ ಸ್ವಸ್ತಿಕಂ ತತ್ಪ್ರಚಕ್ಷತೇ ॥ ವಾಮೋರೂಪರಿ ದಕ್ಷಿಣಂ ಚ ಚರಣಂ ಸಂಸ್ಥಾಪ್ಯ ವಾಮಂ ತಥಾ। ದಕ್ಷೋರೂಪರಿ ಪಶ್ಚಿ

ತಮಃ ಪ್ರಚ್ಛಾದ್ಯ ರಜಸಾ ರಜಃ ಸತ್ವೇನ ಛಾದಯೇತ್ ।
ತತಃ ಸತ್ವಸ್ಥಿತೋ ಭೂತ್ವಾ ಶಿವಧ್ಯಾನಂ ಸಮಭ್ಯಸೇತ್ ॥೯೦॥
ಓಂಕಾರವಾಚ್ಯಂ ಪರಮಂ ಶುದ್ಧಂ ದೀಪಶಿಖಾಕೃತಿಂ ।
ಧ್ಯಾಯೇದ್ವೈ ಪುಂಡರೀಕಸ್ಯ ಕರ್ಣಿಕಾಯಾಂ ಸಮಾಹಿತಃ ॥೯೧॥
ನಾಭೇರಧಸ್ತಾದ್ವಾ ವಿದ್ವಾನ್ ಧ್ಯಾತ್ವಾ ಕಮಲ ಮುತ್ತಮಂ।
ತ್ರ್ಯಂಗುಲೇ ಚಾಷ್ಟಕೋಣಂ ವಾ ಪಂಚಕೋಣಮಥಾಪಿ ವಾ॥೯೨॥
ತ್ರಿಕೋಣಂ ಚ ತಥಾ ಜ್ಞೇಯಂ ಸೌಮ್ಯಂ ಸೌರಂ ಸ್ವಶಕ್ತಿಭಿಃ ।
ಸೌರಂ ಸೌಮ್ಯಂ ತಥಾ ಜ್ಞೇಯಮಥವಾಽನುಕ್ರಮೇಣ ತು ॥೯೩॥

---

ಮೇನ ವಿಧಿನಾ ಧೃತ್ವಾಕರಾಭ್ಯಾಂ ದೃಢಂ। ಅಂಗುಷ್ಠೌ ಹೃದಯೇ ನಿಧಾಯ ಚುಬುಕಂ ನಾಸಾಗ್ರಮಾಲೋಕಯೇತ್ಏತದ್ವ್ಯಾಧಿ ವಿನಾಶ ಕಾರಿ ಯಮಿನಾಂ ಪದ್ಮಾಸನಂ ಪ್ರೋಚ್ಯತೇ ॥ ''ಎಂದು ಹೇಳಿರುವುದು. ಇದಲ್ಲದೆ ಆಸನಗಳ ವಿಷಯದಲ್ಲಿ ಮತಾಂತರಗಳೂ ಇರುವುವು. ಅವುಗಳನ್ನು ಯೋಗಶಾಸ್ತ್ರವೆಂಬ ಗ್ರಂಥದಲ್ಲಿಯೇ ತಿಳಿಯಬೇಕು.

೯೧. ಸಮಾಧಿಯನ್ನು ಅಭ್ಯಾಸಮಾಡಿದ ಮನುಷ್ಯನು ತನ್ನ ಹೃದಯವೆಂಬ ಕಮಲದ ನಡುವೆ ಓಂಕಾರ ಮಂತ್ರದ ಅರ್ಥಸ್ವರೂಪನೂ, ಶ್ರೇಷ್ಠನೂ, ಪರಿಶುದ್ಧನೂ, ದೀಪದ ಉರಿಯಂತೆ ಪ್ರಕಾಶಸ್ವರೂಪನೂ ಆದ ಆತ್ಮನನ್ನು ಧ್ಯಾನಮಾಡಬೇಕು.

೯೨. ಹೊಕ್ಕುಳಿನಿಂದ ಮೂರು ಅಂಗುಲ ಕೆಳಭಾಗದಲ್ಲಿ ಒಂದು ಕಮಲವಿರುವಂತೆ ಭಾವಿಸಬೇಕು. ಅಥವಾ ಅಷ್ಟ ಕೋಣಾಕೃತಿಯನ್ನಾಗಲೀ ಪಂಚಕೋಣಾಕೃತಿಯನ್ನಾಗಲೀ, ತ್ರಿಕೋಣವನ್ನಾಗಲೀ ಧ್ಯಾನಮಾಡಿ ಆಗ್ನೇಯ ಸೌಮ್ಯ ಸೌರ ಎಂಬ ಅಗ್ನಿ, ಚಂದ್ರ, ಸೂರ್ಯರ ತೇಜಸ್ಸುಗಳನ್ನು ಅದರದರ ಶಕ್ತಿಸಹಿತವಾಗಿ ಧ್ಯಾನಮಾಡಬೇಕು.

೯೩-೯೪. ಸೂರ್ಯ, ಚಂದ್ರ, ಅಗ್ನಿ, ಈ ಕ್ರಮದಲ್ಲಾಗಲಿ ಅಗ್ನಿ ಸೂರ್ಯ, ಚಂದ್ರ, ಈ ಕ್ರಮದಲ್ಲಾಗಲೀ ಧ್ಯಾನಮಾಡಬೇಕು. ಅಗ್ನಿ ಮಂಡಲದ ಕೆಳಭಾಗದಲ್ಲಿ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ ಇವು

**ಆಗ್ನೇಯಂ ಚ ತತಃ ಸೌರಂ ಸೌಮ್ಯಮೇವಂ ವಿಧಾನತಃ ।**
**ಅಗ್ನೇರಧಃಪ್ರಕಲ್ಪ್ಯೈವಂ ಧರ್ಮಾದೀನಾಂ ಚತುಷ್ಟಯಂ ॥೯೪॥**

**ಗುಣತ್ರಯಂ ಕ್ರಮೇಣೈವ ಮಂಡಲೋಪರಿ ಭಾವಯೇತ್ ।**
**ಸತ್ವಸ್ಥಂ ಚಿಂತಯೇದ್ರುದ್ರಂ ಸ್ವಶಕ್ತ್ಯಾ ಪರಿಮಂಡಿತಂ ॥೯೫॥**

**ನಾಭೌ ವಾಽಥ ಗಲೇ ವಾಽಪಿ ಭ್ರೂಮಧ್ಯೇ ವಾ ಯಥಾ ವಿಧಿ ।**
**ಲಲಾಟ ಫಲಕಾಯಾಂ ವಾ ಮೂರ್ಧ್ನಿ ಧ್ಯಾನಂ ಸಮಾಚರೇತ್॥೯೬॥**

**ದ್ವಿದಲೇ ಷೋಡಶಾರೇ ವಾ ದ್ವಾದಶಾರೇ ಕ್ರಮೇಣ ತು ।**
**ದಶಾರೇ ವಾ ಷಡಸ್ರೇ ವಾ ಚತುರಸ್ರೇ ಸ್ಮರೇ ಚ್ಛಿವಂ ॥೯೭॥**

**ಕನಕಾಭೇ ತಥಾಽಽಗಾರಸನ್ನಿಭೇ ಸುಸಿತೇಽಪಿ ವಾ ।**
**ದ್ವಾದಶಾದಿತ್ಯಸಂಕಾಶೇ ಚಂದ್ರಬಿಂಬಸಮೇಽಪಿ ವಾ ॥೯೮॥**

**ವಿದ್ಯುತ್ಕೋಟಿನಿಭೇ ಸ್ಥಾನೇ ಚಿಂತಯೇತ್ಪರಮೇಶ್ವರಂ ।**

---

ಗಳನ್ನು ಕಲ್ಪಿಸಿ ಮಂಡಲದ ಮೇಲ್ಭಾಗದಲ್ಲಿ ಸತ್ವರಜಸ್ತಮೋಗುಣ ಗಳನ್ನು ಭಾವಿಸಬೇಕು.

೯೫. ಸತ್ವಗುಣಲ್ಲಿ ತನ್ನ ಶಕ್ತಿಯಿಂದ ಉಮಾದೇವೀಸಹಿತನಾದ ರುದ್ರನನ್ನು ಧ್ಯಾನಿಸಬೇಕು.

೯೬. ಹೊಕ್ಕುಳಿನಲ್ಲಾಗಲೀ ಕಂಠದಲ್ಲಾಗಲಿ ಹುಬ್ಬುಗಳ ನಡುವೆ ಯಲ್ಲಾಗಲಿ ಹಣೆಯಲ್ಲಾಗಲೀ ನೆತ್ತಿಯಲ್ಲಾಗಲೀ ಧ್ಯಾನವನ್ನು ಮಾಡ ಬೇಕು. ಅಂದರೆ ಏಕಾಗ್ರವಾಗಿ ಮನಸ್ಸನ್ನು ನಿಲ್ಲಿಸಬೇಕು.

೯೭. ದ್ವಿದಲ, ಹದಿನಾರುದಲ, ಹನ್ನೆರಡುದಲ, ಹತ್ತುದಲಗಳುಳ್ಳ, ಕಮಲಗಳಲ್ಲಿರುವ ಸ್ಥಳಗಳು ಷಟ್ಕೋಣ ಅಥವಾ ಚತುಷ್ಕೋಣಗಳು. ಈ ಆರು ಸ್ಥಳಗಳಲ್ಲಿ ಸಾಧಕನು ಯಾವ ಸ್ಥಳದಲ್ಲಿ ತನ್ನ ಮನಸ್ಸನ್ನು ನೆರ ಗೊಳಿಸುವುದು ಸುಲಭವೋ ಅಲ್ಲಿ ಶಿವನನ್ನು ಧ್ಯಾನಿಸಬೇಕು.

೯೮. ಹಾಗೆ ಮನಸ್ಸನ್ನು ನೆಲೆಗೊಳಿಸಿದ ಕಾಂತಿಯು ಚಿನ್ನ, ಬೆಂಕಿಯಕೆಂಡ, ಅಚ್ಚಬಿಳುಪು, ಹನ್ನೆರಡು ಸೂರ್ಯರಕಾಂತಿ, ಚಂದ್ರ ಮಂಡಲದಕಾಂತಿ ಕೋಟಿಮಿಂಚುಗಳಕಾಂತಿ ಇವುಗಳಲ್ಲಿ ಸಾಧಕನು ತನ ಗಿಷ್ಟವಾದ ಕಾಂತಿಯನ್ನು, ತನ್ನ ಮನಸ್ಸನ್ನು ನೆಲೆಗೊಳಿಸಿದ ಸ್ಥಳದಲ್ಲಿ ಭಾವಿಸಿ ಪರಮೇಶ್ವರನನ್ನು ಧ್ಯಾನಮಾಡಬೇಕು.

ಅಗ್ನಿವರ್ಣೇಽಥವಾ ವಿದ್ಯುದ್ವಲಯಾಭೇ ಸಮಾಹಿತಃ ॥೯೯॥
ವಜ್ರಕೋಟಿನಿಭೇ ಸ್ಥಾನೇ ಪದ್ಮರಾಗ ನಿಭೇಽಪಿ ವಾ ।
ನೀಲಲೋಹಿತಬಿಂಬೇ ವಾ ಯೋಗೀ ಧ್ಯಾನಂ ಸಮಭ್ಯಸೇತ್ ॥೧೦೦॥
ಮಹೇಶ್ವರಂ ಹೃದಿ ಧ್ಯಾಯೇನ್ನಾಭಿಪದ್ಮೇ ಸದಾಶಿವಂ ।
ಚಂದ್ರಚೂಡಂ ಲಲಾಟೇ ತು ಭ್ರೂಮಧ್ಯೇ ಶಂಕರಂ ಸ್ವಯಂ॥೧೦೧॥
ದಿವ್ಯೇ ಚ ಶಾಶ್ವತಸ್ಥಾನೇ ಶಿವಧ್ಯಾನಂ ಸಮಭ್ಯಸೇತ್ ।
ನಿರ್ಮಲಂ ನಿಷ್ಕಲಂ ಬ್ರಹ್ಮ ಸುಶಾಂತಂ ಜ್ಞಾನರೂಪಿಣಂ ॥೧೦೨॥
ಅಲಕ್ಷಣಮನಿರ್ದೇಶ್ಯಮಣೋರಲ್ಪತರಂ ಶುಭಂ ।
ನಿರಾಲಂಬ ಮತರ್ಕ್ಯಂ ಚ ವಿನಾಶೋತ್ಪತ್ತಿ ವರ್ಜಿತಂ ॥೧೦೩॥

---

೯೯–೧೦೦. ಆ ಪರಮೇಶ್ವರನ ಬಿಂಬವನ್ನು ಅಗ್ನಿಯವರ್ಣ, ಮಿಂಚಿನಕಾಂತಿ, ಕೋಟಿವಜ್ರಗಳಕಾಂತಿ, ಪದ್ಮರಾಗರತ್ನದಕಾಂತಿ, ಇವುಗಳಲ್ಲೊಂದು ಕಾಂತಿಯಿಂದ ಕೂಡಿದುದನ್ನಾಗಿ ಯಾಗಲಿ ನೀಲಲೋಹಿತ ಬಿಂಬವೆಂದರೆ ಸೂರ್ಯ ಬಿಂಬದಲ್ಲಿಯಾಗಲಿ, ಯೋಗಿಯು ತನ್ನ ಸೌಕರ್ಯಕ್ಕನುಸಾರವಾಗಿ ಒಂದನ್ನು ಗೊತ್ತುಮಾಡಿಕೊಂಡುಧ್ಯಾನ ಮಾಡಬೇಕು. ಶ್ರುತಿಯಲ್ಲಿ "ಅಸೌ ಯೋಽ ವಸರ್ಪತಿನೀಲಗ್ರೀವೋ ವಿಲೋಹಿತಃ" ಎಂದು ಸೂರ್ಯ ಮಂಡಲದಲ್ಲಿರುವ ಮಹಾರುದ್ರನನ್ನು ನೀಲಗ್ರೀವನೆಂದು ಹೇಳಿದೆ.

೧೦೧–೧೦೨. ಹೃದಯಸ್ಥಾನದಲ್ಲಿ ಮಹೇಶ್ವರನನ್ನೂ, ನಾಭಿಕಮಲದಲ್ಲಿ ಸದಾಶಿವನನ್ನೂ, ಹಣೆಯಲ್ಲಿ ಚಂದ್ರಶೇಖರನನ್ನೂ, ಹುಬ್ಬುಗಳ ನಡುವೆ ಶಂಕರನನ್ನೂ, ಮೂರ್ತಿರೂಪದಿಂದ ಧ್ಯಾನ ಮಾಡಬೇಕು. ಶ್ರೇಷ್ಠವಾದ ನೆತ್ತಿಯಲ್ಲಿರುವ ಸಹಸ್ರದಳಪದ್ಮದಲ್ಲಿ ಪರಿಶುದ್ಧನೂ ನಿರಾಕಾರನೂ ಜ್ಞಾನಸ್ವರೂಪನೂ ಶಾಂತನೂ ಆದ ಪರಬ್ರಹ್ಮಸ್ವರೂಪನಾದ ಶಿವನನ್ನೂ ಧ್ಯಾನ ಮಾಡಬೇಕು.

೧೦೩–೧೦೪. ಆ ಪರಮಾತ್ಮ ವಸ್ತುವು ಯಾವ ಲಕ್ಷಣವೂ ಇಲ್ಲದುದು. ಎಂದರೆ ಸೂಕ್ಷ್ಮಬುದ್ಧಿಯಿಂದ ವಿಚಾರಮಾಡಿ ತಿಳಿಯಬೇಕಾದುದು. ಮಂಗಳಕರವಾದುದು. ಅದಕ್ಕೆ ಯಾವ ಆಶ್ರಯವೂ ಇಲ್ಲ.

**ಕೈವಲ್ಯಂ ಚೈವ ನಿರ್ವಾಣಂ ನಿಶ್ರೇಯಸಮನೂಪಮಂ ।**
**ಅಮೃತಂ ಚಾಕ್ಷರಂ ಬ್ರಹ್ಮ ಹ್ಯಪುನರ್ಭವ ಮದ್ಭುತಂ ॥೧೦೪॥**

**ಮಹಾನಂದಂ ಪರಾನಂದಂ ಯೋಗಾನಂದ ಮನಾಮಯಂ ।**
**ಹೇಯೋಪಾದೇಯರಹಿತಂ ಸೂಕ್ಷ್ಮಾತ್ಸೂಕ್ಷ್ಮತರಂ ಶಿವಂ ॥**

**ಸ್ವಯಂ ವೇದ್ಯಮವೇದ್ಯಂ ತಚ್ಛಿವಂ ಜ್ಞಾನಮಯಂ ಪರಂ ।**
**ಅತೀಂದ್ರಿಯಮನಾಭಾಸಂ ಪರಂ ತತ್ವಂ ಪರಾತ್ಪರಂ ॥೧೦೬॥**

**ಸರ್ವೋಪಾಧಿವಿನಿರ್ಮುಕ್ತಂ ಧ್ಯಾನಗಮ್ಯಂ ವಿಚಾರತಃ ।**
**ಅದ್ವಯಂ ತಮಸಶ್ಚೈವ ಪರಸ್ತಾತ್ಸಂಸ್ಥಿತಂ ಪರಂ ॥೧೦೭॥**

**ಮನಸ್ಯೇವಂ ಮಹಾದೇವಂ ಹೃತ್ಪದ್ಮೇ ವಾಽಪಿ ಚಿಂತಯೇತ್ ।**
**ನಾಭೌ ಸದಾಶಿವಂ ಚಾಪಿ ಸರ್ವದೇವಾತ್ಮಕಂ ವಿಭುಂ ॥೧೦೮॥**

---

ತರ್ಕಮಾಡತಕ್ಕ ಬುದ್ಧಿಯುಳ್ಳಜನರಿಗೆ ಗೋಚರಿಸತಕ್ಕುದಲ್ಲ. ಹುಟ್ಟು, ಸಾವುಗಳಿಲ್ಲದುದು, ಅದೊಂದೇ ವಸ್ತುವು ಎಲ್ಲೆಡೆಯಲ್ಲೂ ಆವರಿಸಿರುವುದು. ಅಸಮಾನವಾದ ಸುಖಸಂತೋಷ ಸ್ವರೂಪವಾದುದು. ಹುಟ್ಟು ಸಾವುಗಳಿಲ್ಲದ ಆ ಬ್ರಹ್ಮವಸ್ತುವು ಅತ್ಯಂತ ಆಶ್ಚರ್ಯಕರವಾದುದು.

೧೦೫–೧೦೬. ಅದು ದೋಷರಹಿತವಾದ, ಮಹಾನಂದ, ಪರಮಾನಂದ ಯೋಗಾನಂದ ಸ್ವರೂಪವಾದುದು. ನಿಂದ್ಯವೆಂದು ಅದನ್ನು ಯಾರೂ ಬಿಟ್ಟುಬಿಡುವುದಿಲ್ಲ. ಗ್ರಾಹ್ಯವೆಂದು ಅದನ್ನು ಯಾರೂ ಕಟ್ಟಿಕೊಳ್ಳುವುದಿಲ್ಲ. ಅದು ಅತ್ಯಂತಸೂಕ್ಷ್ಮಬುದ್ಧಿಗೋಚರವೂ ಮಂಗಳಸ್ವರೂಪವೂ ಆದುದು. ತನಗೆ ತಾನೇ ತಿಳಿಯತಕ್ಕುದು. ನಿರ್ದುಷ್ಟವಾದ ಜ್ಞಾನ ಸ್ವರೂಪವಾದುದು. ಇಂದ್ರಿಯಗಳಿಗೆ ಗೋಚರವಾಗದ ಪ್ರಕಾಶರಹಿತವಾದ, ಅತ್ಯಂತ ಶ್ರೇಷ್ಠವಾದ ಪರ ತತ್ವರೂಪವಾದುದು.

೧೦೭. ಅದು ಸಮಸ್ತ ವಸ್ತು ದೋಷಗಳಿಂದ ಬಿಡಲ್ಪಟ್ಟುದು. ವಿಚಾರಯುಕ್ತವಾದ ಜ್ಞಾನ ಧ್ಯಾನಗಳಿಂದ ತಿಳಿಯಬೇಕಾದುದು. ಇದಕ್ಕೆ ಸಮಾನವಾದ ಮತ್ತೊಂದು ವಸ್ತುವಿಲ್ಲ. ಮಾಯೆಯನ್ನು ಮೀರಿ ಯಾವಾಗಲೂ ಸತ್‌ಸ್ವರೂಪದಿಂದಿರತಕ್ಕುದು.

೧೦೮. ಈ ರೀತಿಯಲ್ಲಿ ಮನಸ್ಸಿನಲ್ಲಿ ಮಹಾದೇವನನ್ನು ಧ್ಯಾನಿಸಬೇಕು. ಅಥವಾ ಹೃದಯ ಕಮಲದಲ್ಲಿ ಧ್ಯಾನಿಸಬಹುದು. ಸಮಸ್ತ

**ದೇಹಮಧ್ಯೇ ಶಿವಂ ದೇವಂ ಶುದ್ಧಜ್ಞಾನಮಯಂ ವಿಭುಂ ।**
**ಕನ್ಯಸೇನೈವ ಮಾರ್ಗೇಣ ಚೋದ್ಘಾತೇನಾಪಿ ಶಂಕರಂ ॥೧೦೯॥**
**ಕ್ರಮಶಃ ಕನ್ಯಸೇನೈವ ಮಧ್ಯಮೇನಾಪಿ ಸುವ್ರತಃ ।**
**ಉತ್ತಮೇನಾಪಿ ವೈ ವಿದ್ವಾನ್ ಕುಂಭಕೇನ ಸಮಭ್ಯಸೇತ್ ॥೧೧೦॥**
**ದ್ವಾತ್ರಿಂಶದ್ರೇಚಯೇದ್ಧೀಮಾನ್ ಹೃದಿ ನಾಭೌ ಸಮಾಹಿತಃ ।**
**ರೇಚಕಂ ಪೂರಕಂ ತ್ಯಕ್ತ್ವಾ ಕುಂಭಕಂ ಚ ದ್ವಿಜೋತ್ತಮಾಃ ॥**
**ಸಾಕ್ಷಾತ್ಸಮರಸೇನೈವ ದೇಹಮಧ್ಯೇ ಸ್ಮರೇಚ್ಛಿವಂ ।**

---

ದೇವತಾಸ್ವರೂಪನೂ, ಸರ್ವವ್ಯಾಪಿಯೂ ಆದ ಸದಾಶಿವನನ್ನು ನಾಭಿ ಕಮಲದಲ್ಲಿಯಾದರೂ ಧ್ಯಾನಮಾಡಬಹುದು.

೧೦೯–೧೧೦. ಅಂತು ಪರಿಶುದ್ಧನೂ ಜ್ಞಾನಸ್ವರೂಪನೂ ಸರ್ವ ವ್ಯಾಪಿಯೂ ಆದ (ಶಿವನನ್ನು) ಮಂಗಳಕರನಾದ ದೇವನನ್ನು ಈ ದೇಹದ ಮಧ್ಯದಲ್ಲಿ ನೆತ್ತಿಯನ್ನೂ ವ್ಯಾಪಿಸುವ ಸುಷುಮ್ನಾನಾಡಿಯ ಮಾರ್ಗದಿಂದಾಗಲೀ ಉದ್ಘಾತವೆನಿಸುವ ಹನ್ನೆರಡು ಮಾತ್ರಾಕಾಲಿಕವಾದ, ಕುಂಭಕ ಪ್ರಾಣಾಯಾಮದಿಂದಲಾಗಲೀ, ಇಪ್ಪತ್ತುನಾಲ್ಕು ಮಾತ್ರಾಕಾಲವಾದ ಮಧ್ಯಮ ಪ್ರಾಣಾಯಾಮದಿಂದಲಾಗಲೀ, ಮೂವತ್ತಾರು ಮಾತ್ರಾಕಾಲ ವಾದ ಉತ್ತಮ ಕುಂಭಕ ಪ್ರಾಣಾಯಾಮದಿಂದಲಾಗಲೀ ಪ್ರತಿದಿನವೂ ಅಭ್ಯಾಸದಿಂದ ಧ್ಯಾನಮಾಡಬೇಕು.

೧೧೧. ಎಲೈ ಬ್ರಾಹ್ಮಣಶ್ರೇಷ್ಠರೇ, ಬುದ್ಧಿವಂತನಾದ ಸಮಾಧಿನಿಷ್ಠನು ಹೃದಯದಲ್ಲಿಯೂ ನಾಭಿಯಲ್ಲಿಯೂ ಚಿತ್ತವನ್ನು ನೆಲೆಗೊಳಿಸಿ ಮೂವತ್ತೆರಡು ಬಾರಿ ರೇಚಕ, ಪೂರಕ, ಕುಂಭಕ ಪ್ರಾಣಾಯಾಮವೊಂದರಿಂದಲೇ ಶಿವನನ್ನೂ ಧ್ಯಾನಿಸಬೇಕು. ಕೇವಲ ಕುಂಭಕ ಪ್ರಾಣಾಯಾಮದ ಮಹಿಮೆಯನ್ನು ಹಠದೀಪಿಕೆಯಲ್ಲಿ "**ಕುಂಭಕೇ ಕೇವಲೇ ಸಿದ್ಧೇ ರೇಚ ಪೂರಕವರ್ಜಿತೇ । ನ ತಸ್ಯ ದುರ್ಲಭಂ ಕಿಂಚಿತ್ತ್ರಿಷು ಲೋಕೇಷು ವಿದ್ಯತೇ ॥" ಎಂದು ಹೇಳಿರುವರು.**

ಏಕೀಭಾವಂ ಸಮೇತ್ಯೈವಂ ತತ್ರ ಯದ್ರಸಸಂಭವಂ ॥೧೧೨॥
ಆನಂದಂ ಬ್ರಹ್ಮಣೋ ವಿದ್ವಾನ್ ಸಾಕ್ಷಾತ್ಸಮರಸೇ ಸ್ಥಿತಃ ।
ಧಾರಣಾ ದ್ವಾದಶಾಯಾಮಾ ಧ್ಯಾನಂ ದ್ವಾದಶಧಾರಣಂ ॥೧೧೩॥
ಧ್ಯಾನಂ ದ್ವಾದಶಕಂ ಯಾವತ್ಸಮಾಧಿರಭಿಧೀಯತೇ ।
ಅಥವಾ ಜ್ಞಾನಿನಾಂ ವಿಪ್ರಾಃ ಸಂಪರ್ಕಾದೇವ ಜಾಯತೇ ॥೧೧೪॥
ಪ್ರಯತ್ನಾದ್ವಾ ತಯೋಸ್ತುಲ್ಯಂ ಚಿರಾದ್ವಾ ಹ್ಯಚಿರಾದ್ದ್ವಿಜಾಃ ।
ಯೋಗಾಂತರಾಯಾಸ್ತಸ್ಯಾಥ ಜಾಯಂತೇ ಯುಂಜತಃ ಪುನಃ ॥
ನಶ್ಯಂತ್ಯಭ್ಯಾಸತಸ್ತೇಽಪಿ ಪ್ರಣಿಧಾನೇನ ವೈ ಗುರೋಃ ।

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಾರ್ಧೇ ಅಷ್ಟಾಂಗಯೋಗ
ನಿರೂಪಣಂನಾಮ ಅಷ್ಟಮೋಽಧ್ಯಾಯಃ

---

೧೧೨. ಹೀಗೆ ಸಮರಸವಾದ ಕುಂಭಕ ಪ್ರಾಣಾಯಾಮದಿಂದ ಆ ಶಿವನಲ್ಲಿ ಐಕ್ಯಭಾವವನ್ನು ಪಡೆದು ಆ ಸಂದರ್ಭದಲ್ಲಿ ಉಂಟಾದ ರಸದಿಂದ ಬ್ರಹ್ಮಾನಂದವನ್ನನುಭವಿಸುತ್ತಾ ಯೋಗಿಯು ಆತ್ಮ ಸ್ವರೂಪದಲ್ಲಿದ್ದು ಬಿಡುವನು.

೧೧೩–೧೧೪. ಹನ್ನೆರಡು ಪ್ರಾಣಾಯಾಮಗಳಿಗೆ ಒಂದುಧಾರಣೆ ಎಂದು ಹೆಸರು. ಹನ್ನೆರಡು ಧಾರಣ ಕಾಲಕ್ಕೆ ಒಂದು ಧ್ಯಾನವೂ, ಹನ್ನೆರಡು ಧ್ಯಾನಗಳಿಗೆ ಒಂದು ಸಮಾಧಿಯೂ, ಆಗುವುದು. ಎಲೈ ಬ್ರಾಹ್ಮಣರೇ, ಈ ರೀತಿಯಲ್ಲಿ ಪ್ರಾಣಾಯಾಮ ಪ್ರಯತ್ನದಿಂದ ಸಮಾಧಿಯು ಉಂಟಾಗುವುದಲ್ಲದೆ ಜ್ಞಾನಿಗಳ ಸಹವಾಸದಿಂದಲೂ ಈ ಸ್ಥಿತಿಯುಂಟಾಗುವುದು. ಪೂರ್ವಜನ್ಮದಲ್ಲಿ ಅಭ್ಯಾಸ ಮಾಡಿರುವವರಿಗೆ ಸ್ವಲ್ಪ ಕಾಲದಲ್ಲಿಯೂ, ಈ ಜನ್ಮದಲ್ಲಿ ಅಭ್ಯಾಸ ಮಾಡುವವರಿಗೆ ಹೆಚ್ಚು ಕಾಲದ ಮೇಲೆಯೂ ಯೋಗ ಸಿದ್ಧಿಯುಂಟಾಗುವುದು.

೧೧೫. ಯೋಗಾಭ್ಯಾಸವನ್ನು ಮಾಡುವವರಿಗೆ ವಿಘ್ನಗಳು ಅನೇಕವಾಗಿರುವುವು. ಅವುಗಳೆಲ್ಲವೂ ಅಭ್ಯಾಸಬಲದಿಂದಲಾದರೂ ಗುರುಗಳ ಸನ್ನಿಧಾನಮಹಿಮೆಯಿಂದಲಾದರೂ ನಾಶವಾಗುವುವು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಾರ್ಧದಲ್ಲಿ
ಅಷ್ಟಾಂಗಯೋಗ ನಿರೂಪಣೆ ಎಂಬ ಎಂಟನೆಯ ಅಧ್ಯಾಯವು ಮುಗಿದುದು.

अथ श्रीलिंगमहापुराणे पूर्वार्धे नवमोऽध्यायः

ನವಮೋ ಯೋಗಿನಾಂ ವಿಘ್ನಾದ್ಯುಪಸರ್ಗಾಶ್ಚ ಸಿದ್ಧಯಃ ।
ಅಷ್ಟಾಷ್ಟವಿಧಮೈಶ್ವರ್ಯಂ ಯೋಗಪ್ರಾಪ್ಯಂ ನಿರೂಪ್ಯತೇ ॥

॥ ಸೂತ ಉವಾಚ ॥

ಆಲಸ್ಯಂ ಪ್ರಥಮಂ ಪಶ್ಚಾದ್ವ್ಯಾಧಿಪೀಡಾ ಪ್ರಜಾಯತೇ ।
ಪ್ರಮಾದಃ ಸಂಶಯಸ್ಥಾನೇ ಚಿತ್ತಸ್ಯೇಹಾನವಸ್ಥಿತಿಃ ॥ ೧ ॥

ಅಶ್ರದ್ಧಾದರ್ಶನಂ ಭ್ರಾಂತಿರ್ದುಃಖಂ ಚ ತ್ರಿವಿಧಂ ತತಃ ।
ದೌರ್ಮನಸ್ಯ ಮಯೋಗ್ಯೇಷು ವಿಷಯೇಷು ಚ ಯೋಗತಾ ॥ ೨ ॥

ದಶಧಾಽಭಿಪ್ರಜಾಯಂತೇ ಮುನೇರ್ಯೋಗಾಂತರಾಯಕಾಃ ।
ಆಲಸ್ಯಂ ಚಾಪ್ರವೃತ್ತಿಶ್ಚ ಗುರುತ್ವಾತ್ಕಾಯಚಿತ್ತಯೋಃ ॥ ೩ ॥

ವ್ಯಾಧಯೋ ಧಾತುವೈಷಮ್ಯಾತ್ ಕರ್ಮಜಾ ದೋಷಜಾಸ್ತಥಾ ।
ಪ್ರಮಾದಸ್ತು ಸಮಾಧೇಸ್ತು ಸಾಧನಾನಾಮಭಾವನಂ ॥ ೪ ॥

---

ಲಿಂಗಮಹಾಪುರಾಣದ ಪೂರ್ವಾರ್ಧದಲ್ಲಿ ಒಂಬತ್ತನೆಯ ಅಧ್ಯಾಯವು

(ಈ ಒಂಬತ್ತನೆಯ ಅಧ್ಯಾಯದಲ್ಲಿ ಯೋಗಿಗಳಿಗೆ ಬರುವ ವಿಘ್ನಗಳೂ ಅಷ್ಟಸಿದ್ಧಿಗಳೂ ಯೋಗದಿಂದ ಬರುವ ಅಷ್ಟೈಶ್ವರ್ಯಗಳ ವಿಚಾರವೂ ಹೇಳಲ್ಪಡುತ್ತದೆ.)

೧-೨. ಸೂತನು ಹೇಳಿದನು: ಆಲಸ್ಯ, ವ್ಯಾಧಿಪೀಡೆ, ಪ್ರಮಾದ, ಸ್ಥಾನಸಂಶಯ, ಅನವಸ್ಥಿತಚಿತ್ತ, ಅಶ್ರದ್ಧೆ, ಭ್ರಾಂತಿದರ್ಶನ, ತ್ರಿವಿಧ ದುಃಖಗಳು, ದೌರ್ಮನಸ್ಯ, ವಿಷಯಾಸಕ್ತಿ, ಈ ಹತ್ತೂ ಯೋಗಕ್ಕೆ ವಿಘ್ನಗಳೆನಿಸುವುವು.

೩-೪. ಮನಸ್ಸಿನ ಮತ್ತು ಶರೀರದ ಗುರುತ್ವದಿಂದ ಕಾರ್ಯ ಪ್ರವೃತ್ತಿಯಿಲ್ಲದಿರುವುದೇ ಆಲಸ್ಯವೆನಿಸುವುದು. ಪೂರ್ವಕರ್ಮದಿಂದಲೂ ಆಹಾರಾದಿದೋಷಗಳಿಂದಲೂ ಶರೀರದಲ್ಲಿ ಉಂಟಾಗುವ ಸಪ್ತಧಾತುಗಳ ವಿಷಮಾವಸ್ಥೆಯನ್ನೇ ವ್ಯಾಧಿಗಳೆಂದು ಕರೆವರು. ಚಿತ್ತೈಕಾಗ್ರತೆಗೆ ಬೇಕಾದ ಸಂಪೂರ್ಣ ಸಾಧನಗಳಿಲ್ಲದಿರುವುದೇ ಪ್ರಮಾದವೆನಿಸುವುದು.

ಇದಂ ವೇತ್ಯ್ಯುಭಯಸ್ಪೃಕ್ತಂ ವಿಜ್ಞಾನಂ ಸ್ಥಾನಸಂಶಯಃ ।
ಅನವಸ್ಥಿತ ಚಿತ್ತತ್ವಮಪ್ರತಿಷ್ಠಾ ಹಿ ಯೋಗಿನಃ ॥ ೫ ॥

ಲಬ್ಧಾಯಾಮಪಿ ಭೂಮೌ ಚ ಚಿತ್ತಸ್ಯ ಭವಬಂಧನಾತ್ ।
ಅಶ್ರದ್ಧಾ ಭಾವರಹಿತಾ ವೃತ್ತಿ ರ್ವೈ ಸಾಧನೇಷು ಚ ॥ ೬ ॥

ಸಾಧ್ಯೆ ಚಿತ್ತಸ್ಯ ಹಿ ಗುರೌ ಜ್ಞಾನಾಚಾರ ಶಿವಾದಿಷು ।
ವಿಪರ್ಯಯಜ್ಞಾನಮಿತಿ ಭ್ರಾಂತಿದರ್ಶನ ಮುಚ್ಯತೇ ॥ ೭ ॥

ಅನಾತ್ಮನ್ಯಾತ್ಮವಿಜ್ಞಾನಮಜ್ಞಾನಾತ್ತಸ್ಯ ಸನ್ನಿಧೌ ।
ದುಃಖಮಾಧ್ಯಾತ್ಮಿಕಂ ಪ್ರೋಕ್ತಂ ತಥಾ ಚೈವಾಧಿಭೌತಿಕಂ ॥ ೮ ॥

ಆಧಿದೈವಿಕಮಿತ್ಯುಕ್ತಂ ತ್ರಿವಿಧಂ ಸಹಜಂ ಪುನಃ ।
ಇಚ್ಛಾವಿಘಾತಾತ್ಸಂ ಷೋಭಶ್ಚೇತಸಸ್ತದುದಾಹೃತಂ ॥ ೯ ॥

---

೫. ಇದೇ ಅಹುದೇ? ಅಲ್ಲವೇ? ಎಂಬ ವಿಧವಾದ ತಿಳಿವಳಿಕೆಯಿಂದ ಕೂಡಿದ ಜ್ಞಾನವನ್ನು ಸ್ಥಾನಸಂಶಯವೆಂದು ಕರೆಯುವರು. ಭೂಮಿಯಲ್ಲಿ ಎಲ್ಲಾ ಅನುಕೂಲತೆಗಳು ಪ್ರಾಪ್ತವಾಗಿದ್ದರೂ ಯೋಗಿಗೆ ಸಂಸಾರದ ನಿರ್ಬಂಧದಿಂದ ಮನಸ್ಸಿನ ಸ್ಥೈರ್ಯವಿಲ್ಲದಿರುವುದೇ ಅನವಸ್ಥಿತ ಚಿತ್ತವೆನಿಸುವುದು.

೬. ಸಾಧನಸಾಧ್ಯ ರೂಪವಾದ, ಗುರುಗಳಲ್ಲಿಯೂ ಜ್ಞಾನ, ಆಚಾರ, ಶಿವ, ಮುಂತಾದ ವಿಷಯಗಳಲ್ಲಿಯೂ, ನಂಬಿಕೆಯಿಲ್ಲದ ಮನಸ್ಸಿನ ವೃತ್ತಿಯನ್ನು ಅಶ್ರದ್ಧೆ ಎಂದು ಹೇಳುವರು.

೭. ಒಂದನ್ನು ಮತ್ತೊಂದನ್ನಾಗಿ ತಿಳಿಯುವ ಜ್ಞಾನವನ್ನು ಭ್ರಾಂತಿ ದರ್ಶನವೆನ್ನುವರು. ಆ ಭ್ರಾಂತಿಯಿದ್ದಾಗ ಅಜ್ಞಾನದಿಂದ ಅನಾತ್ಮವಸ್ತುವನ್ನು ಆತ್ಮವಸ್ತುವೆಂದು ತಿಳಿಯುವ ಸ್ವಭಾವವುಂಟಾಗುವುದು.

೮–೯. ಆಸೆಯು ನೆರವೇರದೆ ಇದ್ದುದರಿಂದ ಮನಸ್ಸಿನಲ್ಲಿ ಉಂಟಾಗುವ ಚಾಂಚಲ್ಯ ರೂಪವಾದ ಚಿತ್ತವೃತ್ತಿಯನ್ನು ದುಃಖವೆನ್ನುವರು. ಆ ದುಃಖವು ಶರೀರ ಮತ್ತು ಮನಸ್ಸಿಗೆ ಸಂಬಂಧಪಟ್ಟು ಎರಡು ವಿಧವಾಗಿ ಆಧ್ಯಾತ್ಮಿಕವೆನಿಸುವುದು. ಇತರ ಪ್ರಾಣಿಗಳಿಂದುಂಟಾದುದು ಆಧಿಭೌತಿಕವೆನಿಸುವುದು. ಶೀತೋಷ್ಣಾದಿಗಳಿಂದುಂಟಾದುದು ಆಧಿದೈವವೆನಿಸುವುದು. ಹೀಗೆ ದುಃಖವು ಮೂರು ವಿಧವಾಗಿರುವುದು.

ದೌರ್ಮನಸ್ಯಂ ನಿರೋದ್ಧವ್ಯಂ ವೈರಾಗ್ಯೇಣ ಪರೇಣ ತು ।
ತಮಸಾ ರಜಸಾ ಚೈವ ಸಂಸ್ಪೃಷ್ಟಂ ದುರ್ಮನಃ ಸ್ಮೃತಂ ॥೧೦॥
ತದಾ ಮನಸಿ ಸಂಜಾತಂ ದೌರ್ಮನಸ್ಯಮಿತಿಸ್ಮೃತಂ ।
ಹಠಾತ್‌ಸ್ವೀಕರಣಂ ಕೃತ್ವಾ ಯೋಗ್ಯಾಯೋಗ್ಯ (ಗ್ಯಾ) ವಿವೇಕತಃ ॥
ವಿಷಯೇಷು ವಿಚಿತ್ರೇಷು ಜಂತೋರ್ವಿಷಯಲೋಲತಾ ।
ಅಂತರಾಯಾ ಇತಿಖ್ಯಾತಾ ಯೋಗಸ್ಯೈತೇ ಹಿ ಯೋಗಿನಾಂ ॥೧೨॥
ಅತ್ಯಂತೋತ್ಸಾಹಯುಕ್ತಸ್ಯ ನಶ್ಯಂತಿ ನ ಚ ಸಂಶಯಃ ।
ಪ್ರನಷ್ಟೇಷ್ವಂತರಾಯೇಷು ದ್ವಿಜಾಃ ಪಶ್ಚಾದ್ಧಿ ಯೋಗಿನಃ ॥೧೩॥
ಉಪಸರ್ಗಾಃ ಪ್ರವರ್ತಂತೇ ಸರ್ವೇ ತೇಽಸಿದ್ಧಿಸೂಚಕಾಃ ।

---

೧೦. ತಮೋಗುಣ ಮತ್ತು ರಜೋಗುಣಗಳಿಂದ ಕೂಡಿದ ಮನಸ್ಸನ್ನು ದುರ್ಮನಸ್ಸೆಂದು ಹೇಳುವರು. ಆ ಕಾಲದಲ್ಲಿ ಮನಸ್ಸಿನಲ್ಲುಂಟಾದ ಚಿತ್ತವೃತ್ತಿಯು ದೌರ್ಮನಸ್ಯವೆನಿಸುವುದು. ಉತ್ತಮವಾದ ವೈರಾಗ್ಯದಿಂದ ಈ ಚಿತ್ತವೃತ್ತಿಯನ್ನು ತಡೆಯಬೇಕು.

೧೧. ವಿಚಿತ್ರವಾದ ಅನೇಕ ವಿಷಯಗಳಲ್ಲಿ ಯೋಗ್ಯವಾದುವುಗಳನ್ನೂ ಬಿಟ್ಟು, ವಿವೇಕದಿಂದ ವಿಚಾರಮಾಡದೆ ಬಲಾತ್ಕಾರವಾಗಿ ಅಯೋಗ್ಯವಾದುವುಗಳನ್ನೂ ಮನಃಪೂರ್ವಕವಾಗಿ ಸ್ವೀಕರಿಸುವುದೇ ವಿಷಯಾ ಸಕ್ತಿಯು.

೧೨. ಇವುಗಳೇ ಯೋಗಿಗಳಿಗೆ ಉಂಟಾಗುವ ಯೋಗಾಂತರಾಯಗಳು. ಅತ್ಯಂತ ಉತ್ಸಾಹದಿಂದ ಕೂಡಿದ ಮನುಷ್ಯನಿಗೆ ಇವುಉಂಟಾಗುವುದಿಲ್ಲ.

೧೩. ಎಲೈ ಬ್ರಾಹ್ಮಣರೇ, ಯೋಗಿಗೆ ವಿಘ್ನಗಳು ನಾಶವಾದ ಮೇಲೆ ಯೋಗಕ್ಕೆ ಅ ಸಿದ್ಧಿಯನ್ನು ಸೂಚಿಸುವ ಉಪದ್ರವಗಳು ಉಂಟಾಗುವುವು. ಈ ಉಪದ್ರವಗಳು ಸಮಾಧಿಯ ವಿಷಯದಲ್ಲಿ ಅಸಿದ್ಧಿ ಸೂಚಕಗಳು. ವ್ಯುತ್ಥಾನ ದಸೆಯಲ್ಲಿ ಅಂದರೆ ಏಕಾಗ್ರ ಚಿತ್ತವಿಲ್ಲದಾಗ ಸಿದ್ಧಿರೂಪಗಳು ಯೋಗ ಸೂತ್ರದಲ್ಲಿ "ತತಃ ಪ್ರಾತಿಭಶ್ರಾವಣವೇದನಾದರ್ಶನಾಸ್ವಾದವಾರ್ತಾ ಜಾಯಂತೇ" "ತೇ ಸಮಾಧೌ ಉಪಸರ್ಗಾಃವ್ಯುತ್ಥಾನೇಸಿದ್ಧಯಃ" ಎಂದು ಹೇಳಿರುವುದು.

ಪ್ರತಿಭಾ ಪ್ರಥಮಾ ಸಿದ್ಧಿರ್ದ್ವಿತೀಯಾ ಶ್ರವಣಾ ಸ್ಮೃತಾ ॥೧೪॥
ವಾರ್ತಾ ತೃತೀಯಾ ವಿಪ್ರೇಂದ್ರಾಸ್ತುರೀಯಾ ಚೇಹ ದರ್ಶನಾ ।
ಆಸ್ವಾದಾ ಪಂಚಮೀ ಪ್ರೋಕ್ತಾ ವೇದನಾ ಷಷ್ಠಿಕಾ ಸ್ಮೃತಾ ॥೧೫॥
ಸ್ವಲ್ಪ ಷಟ್ ಸಿದ್ಧಿ ಸಂತ್ಯಾಗಾತ್ಸಿದ್ಧಿದಾಃ ಸಿದ್ಧಯೋ ಮುನೇಃ ।
ಪ್ರತಿಭಾ ಪ್ರತಿಭಾ ವೃತ್ತಿಃ ಪ್ರತಿಭಾವ ಇತಿ ಸ್ಥಿತಿಃ ॥೧೬॥
ಬುದ್ಧಿರ್ವಿವೇಚನಾ ವೇದ್ಯಂ ಬುಧ್ಯತೇ ಬುದ್ಧಿರುಚ್ಯತೇ ।
ಸೂಕ್ಷ್ಮೇ ವ್ಯವಹಿತೇಽತೀತೇ ವಿಪ್ರಕೃಷ್ಟೇತ್ವನಾಗತೇ ॥೧೭॥
ಸರ್ವತ್ರ ಸರ್ವದಾ ಜ್ಞಾನಂ ಪ್ರತಿಭಾನಂಕ್ರಮೇಣ ತು ।
ಶ್ರವಣಾತ್ಸರ್ವಶಬ್ದಾನಾಮಪ್ರಯತ್ನೇನ ಯೋಗಿನಃ ॥೧೮॥
ಹ್ರಸ್ವದೀರ್ಘಪ್ಲುತಾದೀನಾಂ ಗುಹ್ಯಾನಾಂ ಶ್ರವಣಾದಪಿ।

---

೧೪–೧೫. ವ್ಯುತ್ಥಾನದೆಸೆಯಲ್ಲಿ ೧. ಪ್ರತಿಭಾ, ೨. ಶ್ರವಣಾ, ೩. ವಾರ್ತಾ, ೪. ದರ್ಶನಾ, ೫. ಆಸ್ವಾದ, ೬. ವೇದನಾ, ಎಂಬ ಆರು ಸಿದ್ಧಿಗಳು ಯೋಗೋಪದ್ರವಗಳಾಗಿ ಅಸಿದ್ಧಿಸೂಚಕಗಳಾಗಿರುವುವು.

ಈ ಆರು ಸಿದ್ಧಿಗಳ ಉಪಯೋಗವನ್ನು ಬಿಟ್ಟು ಯೋಗಿಗೆ ಅಣಿಮಾದಿ ಅಷ್ಟಸಿದ್ಧಿಗಳು ಯೋಗಸಿದ್ಧಿಯನ್ನುಂಟು ಮಾಡುವುವು.

೧೬–೧೭. ಯೋಗಸೂತ್ರದ ಕ್ರಮವನ್ನು ಅನುಸರಿಸಿ ಪ್ರತಿಭಾದಿಗಳ ಸ್ವರೂಪವನ್ನು ವಿವರಿಸುವರು. ಪ್ರತಿಭಾ ಎಂಬುದು ಒಂದು ಮನೋವೃತ್ತಿಯು. ಪ್ರತಿಭಾವ ಎಂದೂ ಅದಕ್ಕೆ ಹೆಸರಿರುವುದು. ಬುದ್ಧಿಯು ತಿಳಿಯಬೇಕಾದುದನ್ನು ವಿಮರ್ಶೆ ಮಾಡಿ ತಿಳಿದುಕೊಳ್ಳುವ ಮನಸ್ಸಿನ ಶಕ್ತಿಯು. ಸೂಕ್ಷ್ಮವಾದುದು, ದೂರದಲ್ಲಿರುವುದು, ಕಳೆದುಹೋದುದು, ಸಮೀಪದಲ್ಲಿರುವುದು, ಮುಂದೆ ಆಗುತಕ್ಕುದು, ಇವುಗಳ ವಿಷಯಯವಾದ ಬುದ್ಧಿಯ ತಿಳಿವಳಿಕೆಯನ್ನೂ ಪ್ರತಿಭೆ ಎಂದು ಕರೆಯುವರು.

೧೮. ಯೋಗಿಗೆ ಹ್ರಸ್ವ ದೀರ್ಘ, ಪ್ಲುತ, ಸೂಕ್ಷ್ಮ, ಗೋಪ್ಯರೂಪವಾದ ಸಮಸ್ತ ಶಬ್ದಗಳೂ ಪ್ರಯತ್ನವಿಲ್ಲದೆ ಕೇಳುವ ಶಕ್ತಿ ಬಂದರೆ ಅದನ್ನು ಶ್ರವಣಸಿದ್ಧಿ ಎನ್ನುವರು.

ಸ್ಪರ್ಶಸ್ಯಾಧಿಗಮೋ ಯಸ್ತು ವೇದನಾ ತೂಪಸಾದಿತಾ ॥೧೯॥
ದರ್ಶನಾದ್ದಿವ್ಯರೂಪಾಣಾಂ ದರ್ಶನಂ ಚಾಪ್ರಯತ್ನತಃ ।
ಸಂವಿದ್ದಿವ್ಯರಸೇ ತಸ್ಮಿನ್ನಾಸ್ವಾದೋ ಹ್ಯಪ್ರಯತ್ನತಃ ॥೨೦॥
ವಾರ್ತಾ ಚ ದಿವ್ಯಗಂಧಾನಾಂ ತನ್ಮಾತ್ರಾ ಬುದ್ಧಿಸಂವಿದಾ ।
ವಿಂದಂತೇ ಯೋಗಿನಸ್ತಸ್ಮಾದಾಬ್ರಹ್ಮಭುವನಂ ದ್ವಿಜಾಃ ॥೨೧॥
ಜಗತ್ಯಸ್ಮಿನ್ ಹಿ ದೇಹಸ್ಥಂ ಚತುಃಷಷ್ಟಿಗುಣಂ ಸಮಂ ।
ಔಪಸರ್ಗಿಕಮೇತೇಷು ಗುಣೇಷು ಗುಣಿತಂ ದ್ವಿಜಾಃ ॥೨೨॥
ಸಂತ್ಯಾಜ್ಯಂ ಸರ್ವಥಾ ಸರ್ವಮೌಪಸರ್ಗಿಕಮಾತ್ಮನಃ ।
ಪೈಶಾಚೇ ಪಾರ್ಥಿವಂ ಚಾಪ್ಯಂ ರಾಕ್ಷಸಾನಾಂ ಪುರೇ ದ್ವಿಜಾಃ ॥೨೩॥

---

೧೯. ಕೈಯಿಂದ ಮುಟ್ಟಿ ನೋಡದಿದ್ದರೂ ಪದಾರ್ಥಗಳ ಶೀತೋಷ್ಣಾದಿ ಸ್ವಭಾವಗಳನ್ನು ತಿಳಿಯುವ ಬುದ್ಧಿಶಕ್ತಿಗೆ ವೇದನೆ ಎಂದು ಹೆಸರು.

೨೦. ಪ್ರಯತ್ನವಿಲ್ಲದೆ ದಿವ್ಯ ರೂಪಾದಿಗಳನ್ನು ನೋಡುವ ಶಕ್ತಿಗೆ ದರ್ಶನಸಿದ್ಧಿ ಎಂದೂ, ಹಾಗೆಯೇ ಪ್ರಯತ್ನವಿಲ್ಲದೆ ದಿವ್ಯರಸಗಳ ರುಚಿಯನ್ನು ತಿಳಿವ ಶಕ್ತಿಗೆ ಆಸ್ವಾದವೆಂದೂ ಹೆಸರಿರುವುದು.

೨೧–೨೨. ಯೋಗಿಗಳು ತಮ್ಮ ಯೋಗಶಕ್ತಿಯಿಂದುಂಟಾದ ಸೂಕ್ಷ್ಮಬುದ್ಧಿಯಿಂದ ಬ್ರಹ್ಮಲೋಕದವರೆಗೂ ಇರುವ ದಿವ್ಯ ಶಬ್ದಗಳನ್ನೂ ತಮ್ಮ ದೇಹದಲ್ಲಿಯೇ ಇರುವಂತೆ ತಿಳಿಯುವರು ಮತ್ತು ಅನುಭವಿಸುವರು. ಈ ಶಕ್ತಿಯನ್ನು ವಾರ್ತಾ ಎಂದು ಕರೆವರು. ಈ ಆರು ಸಿದ್ಧಿಗಳೂ ಮುಂದೆ ಹೇಳುವ ಅರವತ್ತುನಾಲ್ಕು ಗುಣಗಳಿಂದ ಕೂಡಿದವುಗಳಾಗಿ ಮಾಯಿಕವೆನಿಸುವುವು. ಸಚ್ಚಿದಾನಂದ ಸ್ವರೂಪವಾದ ಸ್ವಾತ್ಮಸ್ಥಿತಿಗೆ ಇವುಗಳು (ಅಡ್ಡಿಯಾಗಿ) ದುಃಖ ಪ್ರಯೋಜಕಗಳಾಗಿರುವುವು. ಆದುದರಿಂದ ಸರ್ವ ಪ್ರಕಾರಗಳಿಂದಲೂ ಇವುಗಳನ್ನು ತ್ಯಾಗ ಮಾಡಬೇಕು.

೨೩–೨೪. ಪಿಶಾಚ ಲೋಕವೆಲ್ಲವೂ ಪೃಥಿವೀ (ತನ್ಮಾತ್ರ) ತತ್ವಾತ್ಮಕವಾದುದು. ರಾಕ್ಷಸ ಲೋಕವೆಲ್ಲವೂ ಅಪ್ ತತ್ವಾತ್ಮಕವಾದುದು. ಯಕ್ಷಲೋಕವೆಲ್ಲವೂ ತೈಜಸಾತ್ಮಕವಾದುದು. ಗಾಂಧರ್ವ ಲೋಕವು

ಯಾಕ್ಷ್ಯೇತು ತೈಜಸಂ ಪ್ರೋಕ್ತಂ ಗಾಂಧರ್ವೇ ಶ್ವಸನಾತ್ಮಕಂ।
ಐಂದ್ರೇ ವ್ಯೋಮಾತ್ಮಕಂ ಸರ್ವಂ ಸೌಮ್ಯೇ ಚೈವ ತು ಮಾನಸಂ ॥
ಪ್ರಾಜಾಪತ್ಯೇ ತ್ವಹಂಕಾರಂ ಬ್ರಾಹ್ಮೇ ಬೋಧಮನುತ್ತಮಂ।
ಆದ್ಯೇ ಚಾಷ್ಟೌ ದ್ವಿತೀಯೇ ಚ ತಥಾ ಷೋಡಶರೂಪಕಂ ॥೨೫॥
ಚತುರ್ವಿಂಶತ್ತೃತೀಯೇ ತು ದ್ವಾತ್ರಿಂಶಚ್ಚ ಚತುರ್ಥಕೇ।
ಚತ್ವಾರಿಂಶತ್ಪಂಚಮೇ ತು ಭೂತಮಾತ್ರಾತ್ಮಕಂ ಸ್ಮೃತಂ ॥೨೬॥
ಗಂಧೋ ರಸಸ್ತಥಾ ರೂಪಂ ಶಬ್ದಃ ಸ್ಪರ್ಶಸ್ತಥೈವ ಚ।
ಪ್ರತ್ಯೇಕಮಷ್ಟಧಾ ಸಿದ್ಧಂ ಪಂಚಮೇ ತಚ್ಛತಕ್ರತೋಃ ॥೨೭॥
ತಥಾಽಷ್ಟಚತ್ವಾರಿಂಶಚ್ಚ ಷಟ್ಪಂಚಾಶತ್ತಥೈವ ಚ।
ಚತುಃಷಷ್ಟಿಗುಣಂ ಬ್ರಾಹ್ಮಂ ಲಭತೇ ದ್ವಿಜಸತ್ತಮಾಃ ॥೨೮॥

---

ವಾಯು ತತ್ವಾತ್ಮಕವು. ಇಂದ್ರಲೋಕವು ಆಕಾಶತತ್ವಾತ್ಮಕವು. ಚಂದ್ರ ಲೋಕವು ಮನಸ್ತತ್ವಾತ್ಮಕವು. ಪ್ರಜಾಪತಿಲೋಕವು ಅಹಂಕಾರತತ್ವಾತ್ಮಕವು. ಬ್ರಹ್ಮಲೋಕವು ಶ್ರೇಷ್ಠವಾದ ಬುದ್ಧಿತತ್ವಾತ್ಮಕವು.

೨೫–೨೬. ಮೊದಲನೆಯ ಪೃಥಿವೀತತ್ವದಲ್ಲಿ ಎಂಟು ಗುಣಗಳು. ಎರಡನೆಯ ಅಪ್ ತತ್ವದಲ್ಲಿ ಹದಿನಾರು, ಮೂರನೆಯ ತೇಜಸ್ತತ್ತ್ವದಲ್ಲಿ ಇಪ್ಪತ್ತು ನಾಲ್ಕು, ನಾಲ್ಕನೆಯ ವಾಯುತತ್ವದಲ್ಲಿ ಮೂವತ್ತೆರಡು, ಐದನೆಯ ಆಕಾಶತತ್ವದಲ್ಲಿ ನಲವತ್ತು ಗುಣಗಳು.

೨೭. ಗಂಧ, ರಸ, ರೂಪ, ಸ್ಪರ್ಶ, ಶಬ್ದ, ತನ್ಮಾತ್ರಗಳು ಕ್ರಮವಾಗಿ ಒಂದಕ್ಕಿಂತ ಒಂದು ಎಂಟು ಗುಣಗಳಿಂದ ಹೆಚ್ಚಿ ಐದನೆಯದಾದ ಇಂದ್ರಲೋಕದವರೆಗೆ ಸಿದ್ಧವಾದುದಾಗಿ ಇವಲ್ಲಿ ಕ್ರಮವಾಗಿ ೮. ೧೬. ೨೪. ೩೨. ೪೦. ಗುಣಗಳು ಇರುವುವು.

೨೮. ಚಂದ್ರಲೋಕವು ಮನಸ್ತತ್ವಾತ್ಮಕವಾಗಿ ನಲವತ್ತೆಂಟು ಗುಣಗಳಿಂದಲೂ, ಪ್ರಜಾಪತಿಲೋಕವು ಅಹಂಕಾರತತ್ವ ರೂಪವಾಗಿ ಐವತ್ತಾರು ಗುಣಗಳಿಂದಲೂ, ಬ್ರಹ್ಮಲೋಕವು (ಐಶ್ವರ್ಯವು) ಬುದ್ಧಿ ತತ್ವಾತ್ಮಕವಾಗಿ ಅರವತ್ತು ನಾಲ್ಕು ಗುಣಗಳಿಂದಲೂ ಕೂಡಿದುದಾಗಿರುವುದು.

ಔಪಸರ್ಗಿಕಮಾಬ್ರಹ್ಮ ಭುವನೇಷು ಪರಿತ್ಯಜೇತ್ ।
ಲೋಕೇಷ್ವಾಲೋಕ್ಯ ಯೋಗೇನ ಯೋಗವಿತ್ಪರಮಂ ಸುಖಂ ॥೨೯॥
ಸ್ಥೂಲತಾ ಹ್ರಸ್ವತಾ ಬಾಲ್ಯಂ ವಾರ್ಧಕ್ಯಂ ಯೌವನಂ ತಥಾ ।
ನಾನಾಜಾತಿಸ್ವರೂಪಂ ಚ ಚತುರ್ಭಿರ್ದೇಹಧಾರಣಂ ॥೩೦॥
ಪಾರ್ಥಿವಾಂಶಂ ವಿನಾ ನಿತ್ಯಂ ಸುರಭಿರ್ಗಂಧಸಂಯುತಃ ।
ಏತದಷ್ಟಗುಣಂ ಪ್ರೋಕ್ತಮೈಶ್ವರ್ಯಂ ಪಾರ್ಥಿವಂ ಮಹತ್ ॥೩೧॥
ಜಲೇ ನಿವಸನಂ ಯದ್ವದ್ಭೂಮ್ಯಾಮಿವ ವಿನಿರ್ಗಮಃ ।
ಇಚ್ಛೇಚ್ಛಕ್ತಃ ಸ್ವಯಂ ಪಾತುಂ ಸಮುದ್ರಮಪಿ ನಾತುರಃ ॥೩೨॥
ಯತ್ರೇಚ್ಛತಿ ಜಗತ್ಯಸ್ಮಿನ್ ತತ್ರಾಸ್ಯ ಜಲದರ್ಶನಂ ।
ಯದ್ಯದ್ವಸ್ತು ಸಮಾದಾಯ ಭೋಕ್ತುಮಿಚ್ಛತಿ ಕಾಮತಃ ॥೩೩॥

---

೨೯. ಬ್ರಹ್ಮಲೋಕ ಪರ್ಯಂತವಾಗಿರುವ ಸಕಲಲೋಕಗಳೂ ಪರಮಪುರುಷಾರ್ಥದ ದೃಷ್ಟಿಯಿಂದ ಅಮುಖ್ಯವೆಂಬುದನ್ನು ವಿಚಾರ ಮಾಡಿ ಯಾವ ಯೋಗಿಯು ಅವುಗಳನ್ನು ಬಿಟ್ಟು ಬಿಡುವನೋ ಅವನು ಯೋಗವನ್ನು ತಿಳಿದವನಾಗಿ ಶಾಶ್ವತವಾದ ಸುಖವನ್ನು ಪಡೆಯುವನು.

೩೦. ಇಲ್ಲಿಂದ ಮುಂದೆ ಪೃಥಿವೀತತ್ತ್ವ ಮೊದಲಾಗಿ ಪ್ರತಿಯೊಂದರ ಗುಣಗಳನ್ನು ವಿವರಿಸಲಾಗುವುದು. ದಪ್ಪವಾಗಿರುವುದು, ಸಣ್ಣನಾಗಿರುವುದು, ಬಾಲ್ಯ, ಯೌವನ, ಮುಪ್ಪು, ಬಗೆಬಗೆಯ ಜಾತಿಸ್ವರೂಪ.

೩೧. ಪೃಥಿವಿಯ ಅಂಶವಿಲ್ಲದೆ ಮಿಕ್ಕ ನಾಲ್ಕು ಭೂತಗಳಿಂದಲೇ ದೇಹವನ್ನು ಧರಿಸುವ ಶಕ್ತಿ, ಯಾವಾಗಲೂ ಮೂಗಿಗೆ ಹಿತವಾದ ಸುವಾಸನೆಯಿಂದ ಕೂಡಿರುವುದು. ಈ ಎಂಟುಗುಣಗಳು ಭೂಮಿಯ ಸಂಬಂಧವಾದ ಅಷ್ಟೈಶ್ವರ್ಯಗಳು.

೩೨-೩೫. ಭೂಮಿಯಲ್ಲಿ ವಾಸಮಾಡುವಂತೆ ನೀರಿನಲ್ಲಿ ವಾಸಮಾಡುವುದು, ಸಂಚರಿಸುವುದು, ಬಾಯಾರಿಕೆಯ ಬಾಧೆಯಿಲ್ಲದಿದ್ದರೂ ಅಪೇಕ್ಷಿಸಿದರೆ ಸಮುದ್ರವನ್ನಾದರೂ ಕುಡಿದುಬಿಡುವ ಶಕ್ತಿ, ಈ ಪ್ರಪಂಚದಲ್ಲಿ ಅಪೇಕ್ಷಿಸಿದ ಕಡೆಯಲ್ಲಿ ನೀರನ್ನು ಕಾಣುವ ಶಕ್ತಿ, ಯಾವ ವಸ್ತುವನ್ನು ತೆಗೆದುಕೊಂಡು ಅಪೇಕ್ಷೆಯಿಂದ ತಿನ್ನುವುದಕ್ಕೆ ಆಶಿಸಿದರೆ ಅವೆಲ್ಲವೂ ರಸಯುಕ್ತವಾಗುವಂತೆ ಮಾಡುವ ಶಕ್ತಿ, ಪೃಥಿವೀ ಮತ್ತು ಅಪ್ ತತ್ವಗಳ

**ತತ್ತ್ವದ್ವಸಾನ್ವಿತಂ ತಸ್ಯ ತ್ರಯಾಣಾಂ ದೇಹಧಾರಣಂ।**
**ಭಾಂಡಂ ವಿನಾಽಥ ಹಸ್ತೇನ ಜಲಪಿಂಡಸ್ಯ ಧಾರಣಂ ॥೩೪॥**
**ಅವ್ರಣತ್ವಂ ಶರೀರಸ್ಯ ಪಾರ್ಥಿವೇನ ಸಮನ್ವಿತಂ।**
**ಏತತ್ ಷೋಡಶಕಂ ಪ್ರೋಕ್ತಂ ಆಪ್ಯಮೈಶ್ವರ್ಯಮುತ್ತಮಂ**
**ದೇಹಾದಗ್ನಿವಿನಿರ್ಮಾಣಂ ತತ್ತಾಪಭಯವರ್ಜಿತಂ।**
**ಲೋಕಂ ದಗ್ಧಮಪೀಹಾನ್ಯದದಗ್ಧಂ ಸ್ವವಿಧಾನತಃ ॥೩೬॥**
**ಜಲಮಧ್ಯೇ ಹುತವಹಂ ಚಾಧಾಯ ಪರಿರಕ್ಷಣಂ।**
**ಅಗ್ನಿನಿಗ್ರಹಣಂ ಹಸ್ತೇ ಸ್ಮೃತಿಮಾತ್ರೇಣ ಚಾಗಮಃ ॥೩೭॥**
**ಭಸ್ಮೀಭೂತವಿನಿರ್ಮಾಣಂ ಯಥಾ ಪೂರ್ವಂ ಸಕಾಮತಃ।**
**ದ್ವಾಭ್ಯಾಂ ರೂಪವಿನಿಷ್ಪತ್ತಿರ್ವಿನಾ ತ್ರೈಸ್ತ್ರಿಭಿರಾತ್ಮನಃ ॥೩೮॥**

---

ರಡನ್ನು ಬಿಟ್ಟು ಮಿಕ್ಕ ಮೂರು ತತ್ವಗಳಿಂದಲೇ ದೇಹವನ್ನು ಧರಿಸಿರುವುದು, ಪಾತ್ರೆಯಿಲ್ಲದೆ ಕೈಯಿಂದಲೇ ನೀರನ್ನು ತುಂಬಿಕೊಂಡು ಬರುವ ಶಕ್ತಿ, ಶರೀರದಲ್ಲಿ ಗಾಯವಿಲ್ಲದಿರುವುದು ಮತ್ತು ಭೂಮಿ ತತ್ವ ಸಂಬಂಧವಾದ ಎಂಟು ಗುಣಗಳೂ ಸೇರಿ, ಈ ಹದಿನಾರು ಗುಣಗಳೂ ಅಪ್ ತತ್ವ ಸಂಬಧವಾದ ಐಶ್ವರ್ಯಗಳು.

೩೬–೩೮. ಎಲೈ ಋಷಿಶ್ರೇಷ್ಠರೇ, ಕೇಳಿ ತನ್ನ ಶರೀರದಿಂದಲೇ ಬೆಂಕಿಯನ್ನು ಹುಟ್ಟಿಸುವುದು, ಬೆಂಕಿಯು ಸುಡುತ್ತದೆಂಬ ಭಯವಿಲ್ಲದಿರುವುದು, ಪ್ರಪಂಚವೆಲ್ಲವೂ ಸುಟ್ಟುಹೋಗುತ್ತಿದ್ದರೂ ತನ್ನ ಯೋಗಶಕ್ತಿಯಿಂದ ಮತ್ತೊಂದನ್ನು ಸುಡದಂತೆ ಮಾಡುವುದು, ನೀರಿನಲ್ಲಿ ಅಗ್ನಿಯನ್ನಿಟ್ಟು ಕಾಪಾಡಿಕೊಂಡು ಬರುವುದು, ಕೈಯಲ್ಲಿ ಬೆಂಕಿಯನ್ನು ಹಿಡಿದು ಅದು ಸುಡದಂತೆ ಅದರ ಶಕ್ತಿಯನ್ನು ತಡೆಯುವುದು, ನೆನೆಸಿದ ಕಡೆಯಲ್ಲಿ ಅಗ್ನಿಯು ಬರುವಂತೆ ಮಾಡುವುದು, ಬೆಂಕಿಯಿಂದ ಸುಟ್ಟು ಬೂದಿಯಾದುದನ್ನು ಅಪೇಕ್ಷಿಸಿದರೆ ಮೊದಲಿನಂತೆಯೇ ಮಾಡುವುದು, ಪೃಥಿವೀ ಅಪ್ ತೇಜಸ್ಸು ಈ ಮೂರು ತತ್ವಗಳನ್ನು ಬಿಟ್ಟು ಮಿಕ್ಕ ವಾಯು ಆಕಾಶ ಈ ಎರಡು ತತ್ವಗಳಿಂದಲೇ ತನ್ನ ಶರೀರವನ್ನು ಧರಿಸಿರುವುದು ಮತ್ತು ಹಿಂದಿನ ಅಪ್ ತತ್ವದ ಹದಿನಾರು ಗುಣಗಳಿಂದ ಕೂಡಿ ಒಟ್ಟು ಈ ಇಪ್ಪತ್ತುನಾಲ್ಕು ಗುಣಗಳು ತೇಜಸ್ತತ್ವದ ಗುಣಗಳು.

ಚತುರ್ವಿಂಶಾತ್ಮಕಂ ಹ್ಯೇತತ್ತೈಜಸಂ ಮುನಿಪುಂಗವಾಃ।
ಮನೋಗತಿತ್ವಂ ಭೂತಾನಾಮಂತರ್ನಿವಸನಂ ತಥಾ ॥೩೯॥
ಪರ್ವತಾದಿಮಹಾಭಾರಂ ಸ್ಕಂಧೇನೋದ್ವಹನಂ ಪುನಃ।
ಲಘುತ್ವಂ ಚ ಗುರುತ್ವಂ ಚ ಪಾಣಿಭ್ಯಾಂ ವಾಯುಧಾರಣಂ ॥೪೦॥
ಅಂಗುಲ್ಯಗ್ರನಿಘಾತೇನ ಭೂಮೇಃ ಸರ್ವತ್ರ ಕಂಪನಂ।
ಏತೇನ ದೇಹನಿಷ್ಪತ್ತಿಃ ವಾತೈಶ್ವರ್ಯಂ ಸ್ಮೃತಂ ಬುಧೈಃ ॥೪೧॥
ಛಾಯಾವಿಹೀನನಿಷ್ಪತ್ತಿರಿಂದ್ರಿಯಾಣಾಂ ಚ ದರ್ಶನಂ।
ಆಕಾಶಗಮನಂ ನಿತ್ಯಮಿಂದ್ರಿಯಾರ್ಥೈಃ ಸಮನ್ವಿತಂ ॥೪೨॥

---

೩೯–೪೧. ಮನಸ್ಸು ಬಂದಕಡೆ ಸಂಚರಿಸುವ ಶಕ್ತಿ, ಸಮಸ್ತ ಪ್ರಾಣಿಗಳ ಶರೀರದೊಳಗೆ ಸೇರಿಕೊಳ್ಳುವ ಶಕ್ತಿ (ಪರಕಾಯ ಪ್ರವೇಶ), ಪರ್ವತವೇ ಮುಂತಾದ ಮಹಾಭಾರವಾದ ವಸ್ತುಗಳನ್ನು ಹೆಗಲ ಮೇಲೆ ಹೊತ್ತುಕೊಳ್ಳುವ ಶಕ್ತಿ, ತನ್ನ ಶರೀರವನ್ನು ಭಾರವಿಲ್ಲದಂತೆಯೂ, ಭಾರವಾಗುವಂತೆಯೂ ಮಾಡುವ ಶಕ್ತಿ, ಕೈಗಳಿಂದ ಗಾಳಿಯನ್ನು ಹಿಡಿದುಕೊಳ್ಳುವುದು, ಬೆರಳಿನ ತುದಿಯ ಏಟಿನಿಂದ ಭೂಮಿಯೆಲ್ಲವೂ ನಡುಗುವಂತೆ ಮಾಡುವುದು, ಆಕಾಶ ತತ್ವವೊಂದರಿಂದಲೇ ಶರೀರವನ್ನು ಧರಿಸಿರುವುದು ಮತ್ತು ಹಿಂದೆ ಹೇಳಿದ ಇಪ್ಪತ್ತು ನಾಲ್ಕು ಗುಣಗಳೊಡನೆ ಸೇರಿದ ಈ ಎಂಟುಗುಣಗಳು ಎಂದರೆ ಮೂವತ್ತೆರಡು ಗುಣಗಳು ವಾಯು ಸಂಬಂಧವಾದ ಐಶ್ವರ್ಯಗಳು.

೪೨–೪೩. ನೆರಳೂಕೂಡ ಕಾಣದಂತೆ ಶರೀರವನ್ನು ಧರಿಸಿರುವುದು ಇಂದ್ರಿಯಗಳನ್ನೂ, ಮಂತ್ರ ಅವುಗಳ ಕಾರ್ಯದಿಂದ ಮಾತ್ರವಲ್ಲದೆ ಗೋಚರ ಮಾಡಿಕೊಳ್ಳುವಿಕೆ, ಯಾವಾಗಲೂ ಆಕಾಶದಲ್ಲಿ ಸಂಚರಿಸುವುದು, ಇಂದ್ರಿಯಾರ್ಥಗಳಾದ ವಿಷಯಗಳಿಂದ ಬೇಕಾದಾಗ ಕೂಡಿರುವುದು, ದೂರದ ಶಬ್ದವನ್ನು ಕೇಳುವುದು, ಎಲ್ಲ ವಿಧವಾದ ಶಬ್ದಗಳನ್ನೂ ತಿಳಿಮಕೊಳ್ಳುವುದು, ಪಂಚತನ್ಮಾತ್ರಗಳ ಸೂಕ್ಷ್ಮರೂಪಗಳನ್ನು ತಿಳಿದುಕೊಳ್ಳುವುದು, ಸಕಲ ಪ್ರಾಣಿಗಳಿಗೂ ತನ್ನ ಶಕ್ತಿಯನ್ನು ತೋರಿಸುವಿಕೆ,

ದೂರೇ ಚ ಶಬ್ದಗ್ರಹಣಂ ಸರ್ವಶಬ್ದಾವಗಾಹನಂ ।
ತನ್ಮಾತ್ರಲಿಂಗಗ್ರಹಣಂ ಸರ್ವಪ್ರಾಣಿನಿದರ್ಶನಂ ॥೪೩॥

ಐಂದ್ರಮೈಶ್ವರ್ಯಮಿತ್ಯುಕ್ತಮೇತೈರುಕ್ತೈಃ ಪುರಾತನಃ ।
ಯಥಾ ಕಾಮೋಪಲಬ್ಧಿಶ್ಚ ಯಥಾ ಕಾಮವಿನಿರ್ಗಮಃ ॥೪೪॥

ಸರ್ವತ್ರಾಭಿಭವಶ್ಚೈವ ಸರ್ವಗುಹ್ಯನಿದರ್ಶನಂ ।
ಕಾಮಾನುರೂಪನಿರ್ಮಾಣಂ ವಶಿತ್ವಂ ಪ್ರಿಯದರ್ಶನಂ ॥೪೫॥

ಸಂಸಾರದರ್ಶನಂ ಚೈವ ಮಾನಸಂ ಗುಣಲಕ್ಷಣಂ ।
ಛೇದನಂ ತಾಡನಂ ಬಂಧಂ ಸಂಸಾರಪರಿವರ್ತನಂ ॥೪೬॥

ಸರ್ವಭೂತಪ್ರಸಾದಶ್ಚ ಮೃತ್ಯುಕಾಲಜಯಸ್ತಥಾ ।
ಪ್ರಾಜಾಪತ್ಯಮಿದಂ ಪ್ರೋಕ್ತಮಾಹಂಕಾರಿಕಮುತ್ತಮಂ ॥೪೭॥

---

ಈ ಎಂಟುಗುಣಗಳೊಡನೆ ಹಿಂದಿನ ಮೂವತ್ತೆರಡು ಗುಣಗಳೂಸೇರಿ ಒಟ್ಟು ನಲವತ್ತು ಗುಣಗಳು ಇಂದ್ರೈಶ್ವರ್ಯವೆನಿಸುವುವು. ಈ ಐದು ವಿಧವಾದ ಐಶ್ವರ್ಯಗಳಿಂದ ಕೂಡಿದ ಕಾಯವ್ಯೂಹವನ್ನು ಉತ್ಪತ್ತಿ ಮಾಡುವ ಶಕ್ತಿಯು ಇಂದ್ರನಿಗಿರುವುದು.

೪೪–೪೫. ಇಷ್ಟಬಂದ ಕಡೆಯಲ್ಲಿ ಕಾಣಿಸಿಕೊಳ್ಳುವುದು, ಇಷ್ಟ ಬಂದಂತೆ ಹೊರಟುಹೋಗುವುದು, ಎಲ್ಲೆಡೆಯಲ್ಲೂ ಇರುವುದು, ಗುಟ್ಟಾಗಿರುವುದೆಲ್ಲವನ್ನೂ ತಿಳಿದುಕೊಳ್ಳುವುದು, ಇಷ್ಟಬಂದ ರೂಪಸಹಿತವಾಗುವುದು, ಎಲ್ಲರನ್ನೂ ತನ್ನ ಆದೀನವಮಾಡಿಕೊಳ್ಳುವಷು ನೋಡಿದವರಿಗೆ ಸಂತೋಷವನ್ನಂಟು ಮಾಡುವುದು, ಜನನ ಮರಣಸ್ವರೂಪವಾದ ಸಂಸಾರದ ತತ್ವವನ್ನು ತಿಳಿದಿರುವುದು, ಇವೆಲ್ಲವೂ ಒಟು, ನಲವತ್ತೆಂಟುಗುಣಗಳು ಮನಸ್ತತ್ವದ ಲಕ್ಷಣಗಳೂ ಚಂದ್ರನ ಐಶ್ವರ್ಯಗಳು.

೪೬. ಕತ್ತರಿಸುವುದು, ಹೊಡೆಯುವುದು, ಸೀಳುವುದು, ಒಡೆಯುವುದು, ಕಟ್ಟುವುದು, ಜನನ ಮರಣ ಸ್ವರೂಪವಾದ ಸಂಸಾರವನ್ನು ಬದಲಾಯಿಸಿ ನಡೆಸುವುದು, ಸಮಸ್ತಪ್ರಾಣಿಗಳ ವಿಷಯದಲ್ಲಿ ಅನುಗ್ರಹ ಬುದ್ಧಿ, ಮರಣವನ್ನು ಜಯಿಸಿರುವುದು ಇವುಗಳೆಲ್ಲವೂಸೇರಿ ಒಟ್ಟು ಐವತ್ತಾರು ಗುಣಗಳು ಅಹಂಕಾರ ತತ್ವಸಂಬಂಧವಾದ, ದಕ್ಷನೇ ಮುಂತಾದ ಪ್ರಜಾಪತಿಗಳ ಸಂಬಂಧವಾದ, ಐಶ್ವರ್ಯಗಳು.

ಅಕಾರಣ ಜಗತ್ಸೃಷ್ಟಿಸ್ತಥಾಽನುಗ್ರಹ ಏವ ಚ ।
ಪ್ರಲಯಶ್ಚಾಧಿಕಾರಶ್ಚ ಲೋಕವೃತ್ತಪ್ರವರ್ತನಂ ॥೪೮॥
ಅಸಾದೃಶ್ಯಮಿದಂ ವ್ಯಕ್ತಂ ನಿರ್ಮಾಣಂ ಚ ಪೃಥಕ್ ಪೃಥಕ್ ।
ಸಂಸಾರಸ್ಯ ಚ ಕರ್ತೃತ್ವಂ ಬ್ರಾಹ್ಮಮೇತದನುತ್ತಮಂ ॥೪೯॥
ಏತಾವತ್ತತ್ವಮಿತ್ಯುಕ್ತಂ ಪ್ರಾಧಾನ್ಯಂ ವೈಷ್ಣವಂ ಪದಂ ।
ಬ್ರಹ್ಮಣಾ ತದ್ಗುಣಂ ಶಕ್ಯಂ ವೇತ್ತುಮನ್ಯೈರ್ನ ಶಕ್ಯತೇ ॥೫೦॥
ವಿದ್ಯತೇ ತತ್ಪರಂ ಶೈವಂ ವಿಷ್ಣುನಾ ನಾವಗಮ್ಯತೇ ।
ಅಸಂಖ್ಯೇಯಗುಣಂ ಶುದ್ಧಂ ಕೋ ಜಾನೀಯಾಚ್ಛಿವಾತ್ಮಕಂ ॥೫೧॥

---

೪೭–೪೯. ಯಾವ ಕಾರಣವೂ ಇಲ್ಲದೆ ಹಠಾತ್ತಾಗಿ ಪ್ರಪಂಚವನ್ನು ಸೃಷ್ಟಿಸುವುದು, ಸೃಷ್ಟಿಸಿದ ಪ್ರಪಂಚವನ್ನು ಕಾಪಾಡುವುದು, ಅದನ್ನು ನಾಶಮಾಡುವುದು, ಈ ಅಧಿಕಾರಗಳೂ, ಸೃಷ್ಟಿಸಿದ ಪ್ರಜೆಗಳು ಸನ್ಮಾರ್ಗದಲ್ಲಿರುವಂತೆ ಮಾಡುವುದು, ಅಸದೃಶವಾದ ಬೇರೆಬೇರೆ ಸೃಷ್ಟಿಗಳು, ಒಟ್ಟು ಜನನ ಮರಣರೂಪಸಂಸಾರ ಪ್ರವಾಹಕ್ಕೆ ತಾನು ಕರ್ತೃವಾಗಿರುವುದು, ಇವೆಲ್ಲವೂಸೇರಿ ಒಟ್ಟು ಅರವತ್ತುನಾಲ್ಕು ಗುಣಗಳು ಬುದ್ಧಿತತ್ವವಾದ ಬ್ರಹ್ಮನ ಐಶ್ವರ್ಯವಾಗಿರುವುವು.

೫೦. ಇಲ್ಲಿಯವರೆಗೆ ಬ್ರಹ್ಮನ ಐಶ್ವರ್ಯಪರ್ಯಂತವಾಗಿ ಹೇಳಿ ಅದಕ್ಕೂ ಕಾರಣವಾದ ಪ್ರಧಾನವೆಂದರೆ ಪ್ರಕೃತಿಸಂಬಂಧವಾದ ವೈಷ್ಣವ ಪದವು ಎಂದರೆ ವಿಷ್ಣುವಿನ ಐಶ್ವರ್ಯವನ್ನು ಹೇಳಿದಂತಾಗಿರುವುದು. ಆ ಪ್ರಕೃತಿಯ ಗುಣಗಳನ್ನು ಬ್ರಹ್ಮನು ಮಾತ್ರತಿಳಿಯಲು ಸಾಧ್ಯವಾಗಿರುವುದು. ಇತರರು ತಿಳಿಯಲಾರರು. ಆದುದರಿಂದಲೇ ತೈತ್ತರೀಯೋಪನಿಷತ್ತಿನಲ್ಲಿ ಅಕಾಮಹತನಾದ ಶ್ರೋತ್ರಿಯನಿಗೆ ಬ್ರಹ್ಮಾನಂದ ಪ್ರಾಪ್ತಿ ಪರ್ಯಂತವಾಗಿ ಹೇಳಿರುವುದು.

೫೧. ಸರ್ವೋತ್ಕೃಷ್ಟವಾದ ಶಿವಸಂಬಂಧಿಯಾದ ಐಶ್ವರ್ಯವು ಯಾವಾಗಲೂ ನಿತ್ಯವಾಗಿ ಇರುವುದು. ಅದನ್ನು ವಿಷ್ಣುವೂ ತಿಳಿಯಲಾರನು. ಪರಿಶುದ್ಧವಾದ ಲೆಕ್ಕವಿಲ್ಲದಷ್ಟು ಗುಣಗಳಿಂದ ಕೂಡಿರುವ ಶಿವತತ್ವವನ್ನು ಯಾವನುತಾನೇ ತಿಳಿಯ ಬಲ್ಲನು? ಅದುದರಿಂದಲೇ ಶಂಕರಾಚಾರ್ಯರು ಸೌಂದರ್ಯ ಲಹರಿಯಲ್ಲಿ ಹೀಗೆಹೇಳಿರುವರು.

**ವ್ಯುತ್ಥಾನೇ ಸಿದ್ಧಯಶ್ಚೈತಾ ಹ್ಯುಪಸರ್ಗಾಶ್ಚ ಕೀರ್ತಿತಾಃ ।**
**ನಿರೋದ್ಧವ್ಯಾಃ ಪ್ರಯತ್ನೇನ ವೈರಾಗ್ಯೇಣ ಪರೇಣ ತು ॥೫೨॥**

**ನಾಶಾತಿಶಯತಾಂ ಜ್ಞಾತ್ವಾ ವಿಷಯೇಷು ಭಯೇಷು ಚ ।**
**ಅಶ್ರದ್ಧಯಾ ತ್ಯಜೇತ್ಸರ್ವಂ ವಿರಕ್ತ ಇತಿ ಕೀರ್ತಿತಃ ॥೫೩॥**

**ವೈತೃಷ್ಣ್ಯಂ ಪುರುಷೇ ಖ್ಯಾತಂ ಗುಣ ವೈತೃಷ್ಣ್ಯ ಮುಚ್ಯತೇ ।**
**ವೈರಾಗ್ಯೇಣೈವ ಸಂತ್ಯಾಜ್ಯಾಃ ಸಿದ್ಧಯಶ್ಚೌಪಸರ್ಗಿಕಾಃ ॥೫೪॥**

**ಔಪಸರ್ಗಿಕಮಾಬ್ರಹ್ಮ ಭುವನೇಷು ಪರಿತ್ಯಜೇತ್ ।**
**ನಿರುಧ್ಯೈವ ತ್ಯಜೇತ್ಸರ್ವಂ ಪ್ರಸೀದತಿ ಮಹೇಶ್ವರಃ ॥೫೫॥**

---

"ವಿರಂಚಿಃ ಪಂಚತ್ವಂ ವ್ರಜತಿ ಹರಿರಾಪ್ನೋತಿ ವಿರತಿಂ ।
ವಿನಾಶಂ ಕೀನಾಶೋ ಭಜತಿ ಧನದೋ ಯಾತಿ ನಿಧನಂ ॥
ವಿತಂದ್ರಾ ಮಾಹೇಂದ್ರೀ ವಿತತಿರಪಿ ಸಂಮೀಲತಿ ದೃಶಾಂ ।
ಮಹಾಸಂಸಾರೇಽಸ್ಮಿನ್ ವಿಲಸತಿ ಸತಿ ತ್ವತ್ಪತಿರಸೌ ॥"
ಎಂದು ಹೇಳಿರುವರು.

೫೨. ಈ ಅರವತ್ತು ನಾಲ್ಕು ಗುಣಗಳೂ ವ್ಯವಹಾರ ದೆಸೆಯಲ್ಲಿ ಸಿದ್ಧಿಗಳೆನಿಸಿ ಫಲದಾಯಕಗಳಾಗಿರುವುವು. ಸಮಾಧಿಕಾಲದಲ್ಲಿ ಉಪಸರ್ಗಗಳೆನಿಸಿಕೊಂಡು ಬಾಧಕಗಳಾಗಿರುವುವು. ಆದುದರಿಂದ ಉತ್ತಮವಾದ ವೈರಾಗ್ಯದಿಂದ ಪ್ರಯತ್ನ ಪೂರ್ವಕವಾಗಿ ಇವುಗಳನ್ನು ತಡೆದಿಡಬೇಕು.

೫೩. ಭಯವನ್ನುಂಟುಮಾಡುವ ವಿಷಯಭೋಗಗಳು ನಾಶವಾಗತಕ್ಕವುಗಳೆಂದೂ, ಮೇಲು ಕೀಳುಭಾವದಿಂದ ದುಃಖಕರಗಳೆಂದೂ, ತಿಳಿದು ಅವುಗಳಲ್ಲಿ ನಂಬಿಕೆಯನ್ನಿಡದೆ ವಿರಕ್ತನಾದವನು ಆ ವಿಷಯ ಭೋಗಗಳನ್ನು ತ್ಯಾಗಮಾಡಬೇಕು.

೫೪–೫೫. ಮೇಲೆ ಹೇಳಿದ ಅರವತ್ತುನಾಲ್ಕು ಗುಣಗಳಲ್ಲಿ ಆಸೆಯಿಲ್ಲದಿರುವುದೇ ಮನುಷ್ಯನಿಗೆ 'ವಿತೃಷ್ಣೆ' ಎನಿಸುವುದು. ಈ ಉಪಸರ್ಗರೂಪ ಸಿದ್ಧಿಗಳನ್ನು ವೈರಾಗ್ಯದಿಂದಲೇ ಬಿಟ್ಟು ಬಿಡಬೇಕು. ಬ್ರಹ್ಮಲೋಕ ಪರ್ಯಂತವಾಗಿ ಈ ಉಪಸರ್ಗರೂಪ ಸಿದ್ಧಿಗಳನ್ನು ಬಲಾತ್ಕಾರದಿಂದ ತ್ಯಾಗಮಾಡಿದರೆ ಮಹೇಶ್ವರನು ಪ್ರಸನ್ನನಾಗುವನು.

ಪ್ರಸನ್ನೇ ವಿಮಲಾ ಮುಕ್ತಿ ರ್ವೈರಾಗ್ಯೇಣ ಪರೇಣ ವೈ ।
ಅಥವಾಽನುಗ್ರಹಾರ್ಥಂ ಚ ಲೀಲಾಽರ್ಥಂ ವಾ ತದಾ ಮುನಿಃ ॥೫೬॥
ಅನಿರುಧ್ಯ ವಿಚೇಷ್ಟೇ ದ್ಯಃ ಸೋಽಪ್ಯೇವಂ ಹಿ ಸುಖೀ ಭವೇತ್ ।
ಕ್ವಚಿದ್ಭೂಮಿಂ ಪರಿತ್ಯಜ್ಯ ಹ್ಯಾಕಾಶೇ ಕ್ರೀಡತೇ ಶ್ರಿಯಾ ॥೫೭॥
ಉದ್ಗಿರೇಚ್ಚ ಕ್ವಚಿದ್ವೇದಾನ್ ಸೂಕ್ಷ್ಮಾನರ್ಥಾನ್ ಸಮಾಸತಃ ।
ಕ್ವಚಿಚ್ಛ್ರುತೇ ತದರ್ಥೇನ ಶ್ಲೋಕಬಂಧಂ ಕರೋತಿ ಸಃ ॥೫೮॥
ಕ್ವಚಿದ್ದಂಡಕ ಬಂಧಂ ತು ಕುರ್ಯಾದ್ಬಂಧಂ ಸಹಸ್ರಶಃ ।
ಮೃಗಪಕ್ಷಿಸಮೂಹಸ್ಯ ರುತ ಜ್ಞಾನಂ ಚ ವಿಂದತಿ ॥೫೯॥
ಬ್ರಹ್ಮಾದ್ಯಂ ಸ್ಥಾವರಾಂತಂ ಚ ಹಸ್ತಾಮಲಕವದ್ಭವೇತ್ ।
ಬಹುನಾಽತ್ರ ಕಿಮುಕ್ತೇನ ವಿಜ್ಞಾನಾನಿ ಸಹಸ್ರಶಃ ॥೬೦॥
ಉತ್ಪದ್ಯಂತೇ ಮುನಿಶ್ರೇಷ್ಠಾ ಮುನೇಸ್ತಸ್ಯ ಮಹಾತ್ಮನಃ ।

---

೫೬. ಪರಮೇಶ್ವರನು ಪ್ರಸನ್ನನಾದರೆ ಆ ವೈರಾಗ್ಯದಿಂದಲೇ ಶ್ರೇಷ್ಠವಾದ ಮುಕ್ತಿಯು ಪ್ರಾಪ್ತವಾಗುವುದು. ಅಥವಾ ಯೋಗಿಯಾದವನು ಲೋಕಾನುಗ್ರಹಕ್ಕಾಗಿಯೂ, ಲೀಲೆಗಾಗಿಯೂ, ಅನಾಸಕ್ತನಾಗಿ ಈ ಸಿದ್ಧಿಗಳನ್ನು ತಡೆಯದೆ ಉಪಯೋಗಿಸಿದರೂ, ಅವನೂ, ಮೋಕ್ಷಸುಖವನ್ನು ಹೊಂದುವನು.

೫೭-೫೯. ಯೋಗಿಯಾದವನು ಲೀಲಾರ್ಥವಾಗಿ ಸಿದ್ಧಿಯನ್ನು ಉಪಯೋಗಿಸಿದಾಗ ಕೆಲವು ಸಂದರ್ಭದಲ್ಲಿ ಭೂಮಿಯನ್ನು ಬಿಟ್ಟು ಸಂಚರಿಸುವನು. ಸೂಕ್ಷ್ಮವಾದ ವೇದಾಭಿಪ್ರಾಯಗಳನ್ನು ಸಂಗ್ರಹವಾಗಿ ಹೇಳುತ್ತಿರುವನು. ವೇದಾರ್ಥವನ್ನು ಸೂಚಿಸುವ ಶ್ಲೋಕರೂಪವಾದ ಕವಿತ್ವಗಳನ್ನು ಮಾಡುವನು, ದಂಡಕಗಳೆಂಬ ಶ್ಲೋಕಗಳನ್ನು ರಚಿಸುವನು, ಮೃಗಗಳ ಮತ್ತು ಪಕ್ಷಿಗಳ ಧ್ವನಿಯಿಂದ ಅವುಗಳ ಅಭಿಪ್ರಾಯಗಳನ್ನು ತಿಳಿಯುವನು.

೬೦. ಶ್ರೇಷ್ಠರಾದ ಮುನಿಗಳೇ, ಕೇಳಿ, ಹೆಚ್ಚು ಹೇಳುವುದೇನು? ಯೋಗಿಗೆ ಬ್ರಹ್ಮನಿಂದ ಮೊದಲಾಗಿ ಸ್ಥಾವರವೇ ಕೊನೆಯಾಗಿ ಉಳ್ಳ ಸಮಸ್ತ ಪ್ರಪಂಚದಲ್ಲಿರುವ ಸಕಲ ವಿಷಯಗಳೂ ಅಂಗೈಯಲ್ಲಿರುವ ನೆಲ್ಲಿಯಕಾಯಿಯಂತೆ ಗೋಚರಿಸುವುವು. ಆ ಮಹಾತ್ಮನಿಗೆ ಅನೇಕ ಬಗೆಯಾದ ವಿಜ್ಞಾನಗಳು ಉಂಟಾಗುವುವು.

ಅಭ್ಯಾಸೇನ್ನೈವ ವಿಜ್ಞಾನಂ ವಿಶುದ್ಧಂ ಚ ಸ್ಥಿರಂ ಭವೇತ್ ॥೬೧॥
ತೇಜೋರೂಪಾಣಿ ಸರ್ವಾಣಿ ಸರ್ವಂ ಪಶ್ಯತಿ ಯೋಗವಿತ್ ।
ದೇವ ಬಿಂಬಾನ್ಯನೇಕಾನಿ ವಿಮಾನಾನಿ ಸಹಸ್ರಶಃ ॥೬೨॥

ಪಶ್ಯತಿ ಬ್ರಹ್ಮವಿಷ್ಣ್ವಿಂದ್ರಯಮಾಗ್ನಿ ವರುಣಾದಿಕಾನ್ ।
ಗ್ರಹ ನಕ್ಷತ್ರತಾರಾಶ್ಚ ಭುವನಾನಿ ಸಹಸ್ರಶಃ ॥೬೩॥

ಪಾತಾಲತಲಸಂಸ್ಥಾಶ್ಚ ಸಮಾಧಿಸ್ಥಃ ಸ ಪಶ್ಯತಿ ।
ಆತ್ಮವಿದ್ಯಾ ಪ್ರದೀಪೇನ ಸ್ವಸ್ಥೇನಾ ಚಲನೇನ ತು ॥೬೪॥

ಪ್ರಸಾದಾಮೃತಪೂರ್ಣೇನ ಸತ್ವಪಾತ್ರಸ್ಥಿತೇನ ತು ।
ತಮೋ ನಿಹತ್ಯ ಪುರುಷಃ ಪಶ್ಯತಿ ಹ್ಯಾತ್ಮನೀಶ್ವರಂ ॥೬೫॥

ತಸ್ಯ ಪ್ರಸಾದಾದ್ಧರ್ಮಶ್ಚ ಐಶ್ವರ್ಯಂ ಜ್ಞಾನಮೇವ ಚ ।
ವೈರಾಗ್ಯಮಪವರ್ಗಶ್ಚ ನಾತ್ರಕಾರ್ಯಾ ವಿಚಾರಣಾ ॥೬೬॥

---

೬೧–೬೩. ಯೋಗಾಭ್ಯಾಸದಿಂದ ಶುದ್ಧವಾದ ವಿಜ್ಞಾನವು ಸ್ಥಿರ ಪಡುವುದು. ಬೆಳಕಿನರೂಪವಾದ ಸಕಲವನ್ನೂ ಅಂದರೆ ದೇವತೆಗಳ ಶರೀರಗಳು, ಸಾವಿರಾರು ವಿಮಾನಗಳು, ಬ್ರಹ್ಮ, ವಿಷ್ಣು, ಇಂದ್ರ, ಯಮ, ಅಗ್ನಿ, ವರುಣ, ಮುಂತಾದ ದೇವತೆಗಳು, ಗ್ರಹಗಳು, ನಕ್ಷತ್ರಗಳು, ಅನೇಕ ಲೋಕಗಳು, ಪಾತಾಲ ಲೋಕದಲ್ಲಿರುವವರು, ಇವರೆಲ್ಲರನ್ನೂ ಸಮಾಧಿಯಲ್ಲಿದ್ದ ಯೋಗಿಯು ನೋಡುವನು.

೬೪–೬೫. ಪುರುಷನು ತನ್ನಲ್ಲಿಯೇ ಮನಸ್ಸಿನಲ್ಲಿ ಸತ್ವಗುಣವೆಂಬ ಪಾತ್ರೆಯಲ್ಲಿರುವ ಪರಮೇಶ್ವರನ ಅನುಗ್ರಹವೆಂಬ ಅಮೃತದಿಂದ ತುಂಬಿದ, ಚಲಿಸದೆ ಚೆನ್ನಾಗಿ ಉರಿಯುತ್ತಿರುವ, ಆತ್ಮವಿದ್ಯೆ ಎಂಬ ದೀಪದಿಂದ ಕತ್ತಲೆ (ಅಜ್ಞಾನ) ಯನ್ನು ನಾಶಮಾಡಿ ಪರಮಾತ್ಮನನ್ನು ನೋಡುವನು.

೬೬. ಆ ಪರಮೇಶ್ವರನ ಅನುಗ್ರಹದಿಂದಲೇ ಧರ್ಮವೂ, ಐಶ್ವರ್ಯವೂ, ಜ್ಞಾನವೂ, ವೈರಾಗ್ಯವೂ, ಮೋಕ್ಷವೂ, ಉಂಟಾಗುವುದು. ಈ ವಿಷಯದಲ್ಲಿ ಸಂದೇಹವಿಲ್ಲ.

ನ ಶಕ್ಯೋ ವಿಸ್ತರೋ ವಕ್ತುಂ ವರ್ಷಾಣಾಮಯುತೈರಪಿ ।
ಯೋಗೇ ಪಾಶುಪತೇ ನಿಷ್ಠಾ ಸ್ಥಾತವ್ಯಂ ಚ ಮುನೀಶ್ವರಾಃ ॥೬೭॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಾರ್ಧೇ ನವಮೋಽಧ್ಯಾಯಃ

---

೬೭. ಎಲೈ ಋಷಿಗಳೇ, ಹತ್ತುಸಾವಿರ ವರುಷಗಳವರೆಗೆ ಹೇಳಿದರೂ ಶಿವನ ಮಹಿಮೆಯ ವಿಸ್ತಾರವು ಮುಗಿಯುವುದಿಲ್ಲವು. ಆದುದರಿಂದ ಪಾಶುಪತವೆಂಬ ಶೈವ ಯೋಗದಲ್ಲಿ ಮರಣಪರ್ಯಂತವಾಗಿಯೂ ಇರಬೇಕು.

ಉಪಾಸನೆಯಿಂದ ಮೇಲೆ ಹೇಳಿದಂತೆ ಸಿದ್ಧಿಗಳು ಉಂಟಾಗಿ ಯೋಗಿಯು ಅಂತಹ ಸಮಾಧಿಯಲ್ಲಿ ನೆಲೆಸುತ್ತಾನೆ. ಆ ಸಿದ್ಧಿಗಳಲ್ಲಿ ಆಶೆಯನ್ನಿಡದೆ ಜ್ಞಾನ, ವೈರಾಗ್ಯಗಳಿಂದ ವೇದಾಂತದಲ್ಲಿ ಹೇಳಿರುವ ತತ್ವ ಸಮಾಧಿಯ ಸ್ವರೂಪವನ್ನು ಹಠಯೋಗದೀಪಿಕೆಯಲ್ಲೂ ಹೀಗೆ ವರ್ಣಿಸಿದೆ.

ಸಲಿಲೇ ಸೈಂಧವಂ ಯದ್ವತ್ ಸಾಮ್ಯಂ ಭವತಿ ಯೋಗತಃ ।
ತಥಾಽತ್ಮಮನಸೋರೈಕ್ಯಂ ಸಮಾಧಿರಭಿಧೀಯತೇ ॥
ತತ್ಸಮಂ ಚ ದ್ವಯೋರೈಕ್ಯಂ ಜೀವಾತ್ಮಪರಮಾತ್ಮನೋಃ ।
ಪ್ರಣಷ್ಟ ಸರ್ವಸಂಕಲ್ಪಂ ಸಮಾಧಿಸ್ಸೋಽಭಿಧೀಯತೇ ॥

ಇದೇ ಪರಮ ಪುರುಷಾರ್ಥವಾದ ಮೋಕ್ಷದ ಸ್ವರೂಪವು. ಮೇಲೆ ಹೇಳಿರುವ ಸಿದ್ಧಿಗಳೆಲ್ಲವೂ ಈ ಮೋಕ್ಷ ರೂಪವಾದ ನಿಶ್ರೇಯಸಕ್ಕೆ ಅಂತರಾಯ ( ಅಡ್ಡಿ ) ಗಳು ಎಂದು ಪತಂಜಲಿಯ ಯೋಗಸೂತ್ರದಲ್ಲೂ ಹೇಳಿದೆ. ಆದುದರಿಂದ ಈ ಆಂತರಾಳಿಕವಾದ, ಜ್ಞಾನಯೋಗಿಗೆ ದಾರಿಯಲ್ಲಿ ದೊರೆಯುವ, ಈ ಸಿದ್ಧಿಯ ಆಕರ್ಷಣೆಗೆ ಮನಸೋಲದೆ, ಮುಂದುವರಿದು, ಪರಮ ಪುರುಷಾರ್ಥವನ್ನು ಪಡೆಯುವುದರಲ್ಲಿಯೇ ಆದರವನ್ನು ಬೆಳೆಸುತ್ತಿರಬೇಕೆಂದು ಭಾವವು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಾರ್ಧದಲ್ಲಿ
ಒಂಬತ್ತನೆಯ ಅಧ್ಯಾಯವು ಮುಗಿದುದು.

ಅಥ ಶ್ರೀಲಿಂಗಮಹಾಪುರಾಣೇ ಪೂರ್ವಾರ್ಧೇ ದಶಮೋಽಧ್ಯಾಯಃ

**ದಶಮೇ ಶ್ರೀಮಹೇಶಸ್ಯ ಪ್ರಸಾದಾರ್ಹಾನ್ವಿಶೇಷತಃ ।**
**ಶ್ರದ್ಧಯೈವ ತು ದೃಶ್ಯತ್ವಂ ಲಿಂಗೇ ಪೂಜ್ಯತ್ವಮೇವ ಚ ॥**

**ಸೂತ ಉವಾಚ**

**ಸತಾಂ ಜಿತಾತ್ಮನಾಂ ಸಾಕ್ಷಾತ್ ದ್ವಿಜಾತೀನಾಂ ದ್ವಿಜೋತ್ತಮಾಃ ।**
**ಧರ್ಮಜ್ಞಾನಾಂ ಚ ಸಾಧೂನಾಮಾಚಾರ್ಯಾಣಾಂ ಶಿವಾತ್ಮನಾಂ ॥**

**ದಯಾವತಾಂ ದ್ವಿಜಶ್ರೇಷ್ಠಾಸ್ತಥಾ ಚೈವ ತಪಸ್ವಿನಾಂ ।**
**ಸನ್ಯಾಸಿನಾಂ ವಿರಕ್ತಾನಾಂ ಜ್ಞಾನಿನಾಂ ವಶಗಾತ್ಮನಾಂ ॥೨॥**

**ದಾನಿನಾಂ ಚೈವ ದಾಂತಾನಾಂ ತ್ರಯಾಣಾಂ ಸತ್ಯವಾದಿನಾಂ ।**
**ಅಲುಬ್ಧಾನಾಂ ಸಯೋಗಾನಾಂ ಶ್ರುತಿಸ್ಮೃತಿವಿದಾಂ ದ್ವಿಜಾಃ ॥ ೩ ॥**
**ಶ್ರೌತಸ್ಮಾರ್ತಾವಿರುದ್ಧಾನಾಂ ಪ್ರಸೀದತಿ ಮಹೇಶ್ವರಃ ।**

---

ಲಿಂಗಮಹಾಪುರಾಣದ ಪೂರ್ವಾರ್ಧದಲ್ಲಿ ಹತ್ತನೆಯ ಅಧ್ಯಾಯವು

(ಈ ಹತ್ತನೆಯ ಅಧ್ಯಾಯದಲ್ಲಿ ಮಹೇಶ್ವರನ ಅನುಗ್ರಹಕ್ಕೆ ಯೋಗ್ಯರಾದವರ ಸ್ವರೂಪವನ್ನೂ, ಶ್ರದ್ಧೆಯಿಂದಲೇ ಮಹೇಶ್ವರನ ದರ್ಶನವುಂಟಾಗುವುದೆಂಬುದನ್ನೂ, ಲಿಂಗವೇ ಪೂಜಾಯೋಗ್ಯವೆಂಬು ದನ್ನೂ, ವಿವರಿಸಿ ಹೇಳಲಾಗುವುದು.)

೧–೩. ಸೂತನು ಹೇಳಿದನು. ಸಜ್ಜನರಿಗೂ, ಇಂದ್ರಿಯಗಳನ್ನು ಜಯಿಸಿದವರಿಗೂ, ದ್ವಿಜಾತಿಗಳಿಗೂ, ಧರ್ಮಜ್ಞರಿಗೂ ಸಾಧುಗಳಿಗೂ, ಆಚಾರ್ಯರಿಗೂ, ಶಿವಸ್ವರೂಪರಿಗೂ, ದಯಾಶಾಲಿಗಳಿಗೂ, ತಪಸ್ವಿಗಳಿಗೂ, ಸನ್ಯಾಸಿಗಳಿಗೂ, ವಿರಕ್ತರಿಗೂ, ಜ್ಞಾನಿಗಳಿಗೂ, ಮನಸ್ಸನ್ನು ತನ್ನಧೀನದಲ್ಲಿಟ್ಟುಕೊಂಡವರಿಗೂ, ದಾನಿಗಳಿಗೂ, ದಾಂತರಿಗೂ, ಸತ್ಯವಾದ ಮಾತನಾಡುವವರಿಗೂ, ಲೋಭಬುದ್ಧಿ ಇಲ್ಲದವರಿಗೂ, ಯೋಗಾಭ್ಯಾಸ ಮಾಡುವವರಿಗೂ, ವೇದ, ಮತ್ತು ಧರ್ಮಶಾಸ್ತ್ರಗಳನ್ನು ತಿಳಿದವರಿಗೂ, ಶ್ರೌತಸ್ಮಾರ್ತಕರ್ಮಗಳಿಗೆ ವಿರೋಧವಿಲ್ಲದಂತೆ ನಡೆದುಕೊಳ್ಳುವವರಿಗೂ ಮಹೇಶ್ವರನು ಪ್ರಸನ್ನನಾಗುವನು.

ಸದಿತಿ ಬ್ರಹ್ಮಣಃ ಶಬ್ದಸ್ತದಂತೇ ಯೇ ಲಭಂತ್ಯುತ ॥ ೪ ॥
ಸಾಯುಜ್ಯಂ ಬ್ರಹ್ಮಣಾ ಯಾಂತಿ ತೇನ ಸಂತಃ ಪ್ರಚಕ್ಷತೇ ।
ದಶಾತ್ಮಕೇ ಯೇ ವಿಷಯೇ ಸಾಧನೇ ಚಾಷ್ಟಲಕ್ಷಣೇ ॥ ೫ ॥
ನ ಕ್ರುಧ್ಯಂತಿ ನ ಹೃಷ್ಯಂತಿ ಜಿತಾತ್ಮಾನಸ್ತು ತೇ ಸ್ಮೃತಾಃ ।
ಸಾಮಾನ್ಯೇಷು ಚ ದ್ರವ್ಯೇಷು ತಥಾ ವೈಶೇಷಿಕೇಷು ಚ ॥ ೬ ॥
ಬ್ರಹ್ಮಕ್ಷತ್ರವಿಶೋ ಯಸ್ಮಾದ್ಯುಕ್ತಾಸ್ತಸ್ಮಾದ್ದ್ವಿಜಾತಯಃ ।
ವರ್ಣಾಶ್ರಮೇಷು ಯುಕ್ತಸ್ಯ ಸ್ವರ್ಗಾದಿ ಸುಖಕಾರಿಣಃ ॥ ೭ ॥
ಶ್ರೌತಸ್ಮಾರ್ತಸ್ಯ ಧರ್ಮಸ್ಯ ಜ್ಞಾನಾದ್ಧರ್ಮಜ್ಞ ಉಚ್ಯತೇ ।
ವಿದ್ಯಾಯಾಃ ಸಾಧನಾತ್ಸಾಧುರ್ಬ್ರಹ್ಮಚಾರೀ ಗುರೋರ್ಹಿತಃ॥ ೮ ॥

---

೪–೫. ಸತ್ ಎಂಬ ಶಬ್ದವು ಪರಬ್ರಹ್ಮನನ್ನು ಹೇಳುವುದು. ಮರಣಕಾಲದಲ್ಲಿ ಆ ಪರಬ್ರಹ್ಮನಲ್ಲಿ ಐಕ್ಯವನ್ನು ಎಂದರೆ ಸಾಯುಜ್ಯರೂಪವಾದ ಮುಕ್ತಿಯನ್ನು ಯಾರು ಪಡೆಯುವರೋ ಅವರನ್ನು ಸಂತರೆಂದು ಕರೆಯುವರು. ಹತ್ತು ಇಂದ್ರಿಯಗಳಿಗೆ ಸಂಬಂಧಿಸಿದ ವಿಷಯಗಳಲ್ಲಿಯೂ, ಅಷ್ಟಾಂಗಯೋಗದ ವಿಷಯದಲ್ಲೂ, ಹಿಂದಿನ ಅಧ್ಯಾಯದಲ್ಲಿ ಹೇಳಿದ ಅಷ್ಟೈಶ್ವರ್ಯಗಳ ವಿಷಯದಲ್ಲೂ, ಯಾರು ಕೋಪವನ್ನೂ ಸಂತೋಷವನ್ನೂ ಹೊಂದುವುದಿಲ್ಲವೋ ಅವರು ಜಿತೇಂದ್ರಿಯರೆನಿಸುವರು.

೬–೭. ಸಾಮಾನ್ಯವಾದ ಮತ್ತು ಆಯಾ ವರ್ಣಾಶ್ರಮದವರಿಗೆ ವಿಶೇಷವಾದ ಪದಾರ್ಥ (ಧರ್ಮ) ಗಳ ವಿಷಯದಲ್ಲಿ ಬ್ರಾಹ್ಮಣ, ಕ್ಷತ್ರಿಯ, ವೈಶ್ಯರಿಗೆ ಮಾತ್ರ ಸಂಬಂಧವಿರುವುದರಿಂದ, ಈ ಮೂರು ವರ್ಣದವರನ್ನೂ ದ್ವಿಜರೆಂದು ಕರೆಯುವರು. ವರ್ಣಾಶ್ರಮಗಳಿಗೆ ವಿಹಿತವಾದ ಸ್ವರ್ಗಾದಿ ಸುಖಗಳನ್ನು ಕೊಡುವ ಶ್ರುತಿಸ್ಮೃತಿಗಳಲ್ಲಿ ಹೇಳಿರುವ ಧರ್ಮಗಳನ್ನು ತಿಳಿದಿರುವವರನ್ನು ಧರ್ಮಜ್ಞರೆಂದು ಕರೆಯುವರು.

೮–೧೦. ಗುರುವಿಗೆ ಇಷ್ಟನಾದ, ವಿದ್ಯೆಯನ್ನು ಕಲಿಯುವ ಬ್ರಹ್ಮಚಾರಿಯೂ, ಯಜ್ಞಾದಿ ಕ್ರಿಯೆ (ಕರ್ಮ)ಗಳನ್ನು ಮಾಡುವ ಗೃಹಸ್ಥನೂ, ಅರಣ್ಯದಲ್ಲಿ ತಪಸ್ಸುಮಾಡುವ ವೈಖಾನಸನೆಂಬ ವಾನಪ್ರಸ್ಥಾಶ್ರಮಿಯೂ,

**ಕ್ರಿಯಾಣಾಂ ಸಾಧನಾಚ್ಚೈವ ಗೃಹಸ್ಥಃ ಸಾಧುರುಚ್ಯತೇ ।**
**ಸಾಧನಾತ್ತಪಸೋಽರಣ್ಯೇ ಸಾಧುರ್ವೈಖಾನಸಃ ಸ್ಮೃತಃ ॥ ೯ ॥**

**ಯತಮಾನೋ ಯತಿಸ್ಸಾಧುಃ ಸ್ಮೃತೋ ಯೋಗಸ್ಯಸಾಧನಾತ್ ।**
**ಏವಮಾಶ್ರಮಧರ್ಮಾಣಾಂ ಸಾಧನಾತ್ಸಾಧವಃ ಸ್ಮೃತಾಃ ॥೧೦॥**

**ಗೃಹಸ್ಥೋ ಬ್ರಹ್ಮಚಾರೀ ಚ ವಾನಪ್ರಸ್ಥೋ ಯತಿಸ್ತಥಾ ।**
**ಧರ್ಮಾಧರ್ಮಾವಿಹ ಪ್ರೋಕ್ತೌ ಶಬ್ದಾವೇತೌ ಕ್ರಿಯಾತ್ಮಕೌ ॥೧೧॥**

**ಕುಶಲಾಕುಶಲಂ ಕರ್ಮ ಧರ್ಮಾಧರ್ಮಾವಿತಿ ಸ್ಮೃತೌ ।**
**ಧಾರಣಾರ್ಥೋ ಮಹಾನೇಷ ಧರ್ಮಶಬ್ದಃ ಪ್ರಕೀರ್ತಿತಃ ॥೧೨॥**

**ಅಧಾರಣೇ ಮಹತ್ವೇ ಚ ಅಧರ್ಮ ಇತಿ ಚೋಚ್ಯತೇ ।**
**ಅತ್ರೇಷ್ಟಪ್ರಾಪಕೋ ಧರ್ಮ ಆಚಾರ್ಯೈರುಪದಿಶ್ಯತೇ ॥೧೩॥**

---

ಯೋಗಾಭ್ಯಾಸ ಮಾಡುತ್ತ ಮೋಕ್ಷಹೊಂದಲು ಯತ್ನಿಸುತ್ತಿರುವ ಸನ್ಯಾಸಿಯೂ, ಅವರವರ ಆಶ್ರಮಕ್ಕೆ ವಿಹಿತವಾದ ಕರ್ಮಗಳನ್ನು ಮಾಡುತ್ತಾ ಅಶ್ರಮಧರ್ಮಗಳನ್ನು ಸಾಧಿಸುವುದರಿಂದ ಈ ನಾಲ್ಕು ಆಶ್ರಮದವರೂ ಸಾಧುಗಳೆನಿಸುವರು.

೧೧–೧೨. ಇಲ್ಲಿ ಕ್ರಿಯಾರೂಪವಾದ ಧರ್ಮ ಅಧರ್ಮ ಎಂಬ ಎರಡು ಶಬ್ದಗಳನ್ನು ಹೇಳಿರುವುದು. ಯೋಗ್ಯಕರ್ಮವನ್ನು ಧರ್ಮ ವೆಂದೂ, ಅಯೋಗ್ಯಕರ್ಮವನ್ನು ಆಧರ್ಮವೆಂದೂ, ಹೇಳುವರು. ಆದುದರಿಂದ ಮಾಬೇಕಾದ ಕರ್ಮಗಳು ಧರ್ಮವೆಂದೂ, ಬಿಡಬೇಕಾದ ಕರ್ಮಗಳು ಅಧರ್ಮವೆಂದೂ, ಹೇಳಿದ ಹಾಗೆ ಆಯಿತು.

೧೩–೧೫. ಇಷ್ಟಫಲವನ್ನು ಕೂಡುವ ಕರ್ಮವು ಧರ್ಮವೆಂದೂ, ಅನಿಷ್ಟಫಲವನ್ನು ಕೊಡುವುದು ಅಧರ್ಮವೆಂದೂ, ಆಚಾರ್ಯರು ಉಪ ದೇಶ ಮಾಡುವರು. ವಯಸ್ಸಿನಿಂದಲೂ, ಜ್ಞಾನದಿಂದಲೂ, ವೃದ್ಧರಾದ ವರೂ, ಇಂದ್ರಿಯ ಭೋಗಾಸಕ್ತಿಯಿಲ್ಲದವರೂ, ಆತ್ಮಜ್ಞಾನಿಗಳೂ. ಡಂಭವಿಲ್ಲದಿರುವವರೂ, ವಿನಯಗುಣವುಳ್ಳವರೂ, ಸರಳಸ್ವಭಾವದವರೂ,

**ಅಧರ್ಮಶ್ಚಾನಿಷ್ಟಫಲೋ ಹ್ಯಾಚಾರ್ಯೈರುಪದಿಶ್ಯತೇ ।**
**ವೃದ್ಧಾಶ್ಚಾಲೋಲುಪಾಶ್ಚೈವ ಆತ್ಮವನ್ತೋ ಹ್ಯದಾಂಭಿಕಾಃ ॥೧೪॥**
**ಸಮ್ಯಗ್ವಿನೀತಾ ಋಜವಸ್ತಾನಾಚಾರ್ಯಾನ್ಪ್ರಚಕ್ಷತೇ ।**
**ಸ್ವಯಮಾಚರತೇ ಯಸ್ಮಾದಾಚಾರೇ ಸ್ಥಾಪಯತ್ಯಪಿ ॥೧೫॥**
**ಆಚಿನೋತಿ ಚ ಶಾಸ್ತ್ರಾರ್ಥಾನಾಚಾರ್ಯಸ್ತೇನ ಚೋಚ್ಯತೇ ।**
**ವಿಜ್ಞೇಯಂ ಶ್ರವಣಾಚ್ಛ್ರೌತಂ ಸ್ಮರಣಾತ್ ಸ್ಮಾರ್ತಮುಚ್ಯತೇ ॥**
**ಇಜ್ಯಾ ವೇದಾತ್ಮಕಂ ಶ್ರೌತಂ ಸ್ಮಾರ್ತಂ ವರ್ಣಾಶ್ರಮಾತ್ಮಕಂ ।**
**ದೃಷ್ಟ್ವಾಽನುರೂಪಮರ್ಥಂ ಯಃ ಪೃಷ್ಟೋ ನೈವಾಪಿ ಗೂಹತಿ ॥**
**ಯಥಾ ದೃಷ್ಟಪ್ರವಾದಸ್ತು ಸತ್ಯಂ ಲೈಂಗೇಽತ್ರ ಪಠ್ಯತೇ ।**
**ಬ್ರಹ್ಮಚರ್ಯಂ ತಥಾ ಮೌನಂ ನಿರಾಹಾರತ್ವಮೇವ ಚ ॥೧೮॥**
**ಅಹಿಂಸಾ ಸರ್ವತಃ ಶಾಂತಿಃ ತಪ ಇತ್ಯಭಿಧೀಯತೇ ।**

---

ಆದವರನ್ನು ಆಚಾರ್ಯರೆನ್ನುವರು. ಇವರು ಶಾಸ್ತ್ರಾರ್ಥಗಳನ್ನು ಪ್ರಕಟಪಡಿಸುತ್ತಾ ತಾವು ಧರ್ಮವನ್ನಾಚರಿಸುತ್ತಾ, ಇತರರು ಧರ್ಮವನ್ನಾಚರಿಸುವಂತೆ ಮಾಡುವುದರಿಂದ ಆಚಾರ್ಯರೆಂದು ಇವರಿಗೆ ಹೆಸರು ಬಂದಿರುವುದು.

೧೬. ವೇದವನ್ನು ಕಿವಿಯಿಂದ ಕೇಳಿ ಆಚರಿಸುವ ಕರ್ಮವನ್ನು ಶ್ರೌತವೆಂದೂ, ಶಾಸ್ತ್ರವಾಕ್ಯಗಳನ್ನು ಜ್ಞಾಪಕಕ್ಕೆ ತಂದುಕೊಂಡು ಆಚರಿಸುವ ಕರ್ಮಗಳನ್ನು ಸ್ಮಾರ್ತವೆಂದೂ, ಹೇಳುವರು. ಯಾಗಸಂಬಂಧವಾದ ತಿಳಿವಳಿಕೆಯೆಲ್ಲವೂ ಶ್ರೌತವಾಗುವುದು. ವರ್ಣಾಶ್ರಮಧರ್ಮಸಂಬಂಧವಾದತಿಳಿವಳಿಕೆಯೆಲ್ಲವೂ ಸ್ಮಾರ್ತವೆನಿಸುವುದು.

೧೭. ತಾನು ಕಂಡುದನ್ನು ಇತರರು ಪ್ರಶ್ನೆಮಾಡಿದರೆ ಯೋಗ್ಯವಾಗಿದ್ದರೆ ಹೇಳುವುದು, ಅಯೋಗ್ಯವಾಗಿದ್ದರೆ ಹೇಳದಿರುವುದು, ಕಂಡುದನ್ನು ಕಂಡಂತೆ ಹೇಳುವುದು, ಈ ಮೂರು ಬಗೆಯ ಸತ್ಯವಚನವನ್ನು ಈ ಲಿಂಗಪುರಾಣದಲ್ಲಿ ಸತ್ಯ ಧರ್ಮವೆಂದು ಹೇಳಿರುವುದು.

೧೮. ಬ್ರಹ್ಮಚಾರಿಯ ವ್ರತ, ಮಾತನಾಡದಿರುವುದು, ಉಪವಾಸ ವ್ರತ, ಯಾವ ಪ್ರಾಣಿಗಳನ್ನೂ ಹಿಂಸಿಸದಿರುವುದು, ಮನಸ್ಸಿನ ಸಮಾಧಾನಸ್ಥಿತಿ, ಇವುಗಳನ್ನು ತಪಸ್ಸೆಂದು ಹೇಳುವರು.

ಆತ್ಮವತ್ಸರ್ವಭೂತೇಷು ಯೋ ಹಿತಾಯಾಹಿತಾಯ ಚ ॥೧೯॥
ವರ್ತತೇ ತ್ವಸಕೃದ್ವೃತ್ತಿಃ ಕೃತ್ಸ್ನಾ ಹ್ಯೇಷಾ ದಯಾ ಸ್ಮೃತಾ ।
ಯದ್ಯದಿಷ್ಟತಮಂ ದ್ರವ್ಯಂ ನ್ಯಾಯೇನೈವಾಗತಂ ಕ್ರಮಾತ್ ॥೨೦॥
ತತ್ತದ್ಗುಣವತೇ ದೇಯಂ ದಾತುಸ್ತದ್ದಾನಲಕ್ಷಣಂ ।
ದಾನಂ ತ್ರಿವಿಧಮಿತ್ಯೇತತ್ ಕನಿಷ್ಠಜ್ಯೇಷ್ಠಮಧ್ಯಮಂ ॥೨೧॥
ಕಾರುಣ್ಯಾತ್ಸರ್ವಭೂತೇಭ್ಯಃ ಸಂವಿಭಾಗಸ್ತು ಮಧ್ಯಮಃ ।
ಶ್ರುತಿಸ್ಮೃತಿಭ್ಯಾಂ ವಿಹಿತೋ ಧರ್ಮೋ ವರ್ಣಾಶ್ರಮಾತ್ಮಕಃ ॥೨೨॥
ಶಿಷ್ಟಾಚಾರಾವಿರುದ್ಧಶ್ಚ ಸ ಧರ್ಮಃ ಸಾಧುರುಚ್ಯತೇ ।
ಮಾಯಾಕರ್ಮಫಲತ್ಯಾಗೀ ಶಿವಾತ್ಮಾ ಪರಿಕೀರ್ತಿತಃ ॥೨೩॥

---

೧೯. ತನ್ನಂತೆಯೇ ಮಿತ್ರರಿಗೂ, ಶತ್ರುಗಳಿಗೂ, ಸಮಸ್ತಪ್ರಾಣಿಗಳಿಗೂ, ಹಿತಾಹಿತಗಳುಂಟೆಂದು ತಿಳಿದು ಅವುಗಳಿಗೆ ಯಾವಾಗಲೂ ಹಿತವನ್ನೇ ಕೋರುವ ಮನೋವೃತ್ತಿಗೆ ದಯೆ ಎಂದು ಹೆಸರು.

೨೦–೨೨. ನ್ಯಾಯಮಾರ್ಗದಲ್ಲಿ ತನಗೆ ಬಂದ, ತನಗಿಷ್ಟವಾದ ವಸ್ತುವನ್ನು ಗುಣವಂತನಿಗೆ ಕೊಡುವುದೇ ದಾತೃವಿನ ದಾನಲಕ್ಷಣವು. ದಾನವು ಉತ್ತಮ, ಮಧ್ಯಮ, ಅಧಮವೆಂದು ಮೂರು 'ವಿಧವಾದುದು. ಸಮಸ್ತಪ್ರಾಣಿಗಳ ವಿಷಯದಲ್ಲಿಯೂ ಕರುಣೆಯಿಂದ ಕೂಡಿ ಪಾತ್ರಾಪಾತ್ರಾದಿ ವಿಚಾರವನ್ನು ಮಾಡದೆ ಕೊಟ್ಟು ಬಿಡುವುದು ಮಧ್ಯಮವು. ವೇದ ಮತ್ತು ಧರ್ಮಶಾಸ್ತ್ರಗಳಲ್ಲಿ ಹೇಳಿರುವ ವರ್ಣಾಶ್ರಮಧರ್ಮಾದಿಗಳನ್ನೂ ಪಾತ್ರಾಪಾತ್ರಗಳನ್ನೂ ವಿಚಾರಮಾಡಿ ಶಿಷ್ಟಾಚಾರಕ್ಕೆ ವಿರೋಧವಿಲ್ಲದಂತೆ ದಾನ ಮಾಡುವುದು ಉತ್ತಮವು. ಮಿಕ್ಕುದು ಅಧಮವು.

೨೩–೨೪. ಕರ್ಮಫಲವು ಮಾಯಾಮಯವಾದುದೆಂದು ತಿಳಿದು ಆ ಫಲಾಪೇಕ್ಷೆಯನ್ನು ಬಿಟ್ಟವನನ್ನು ಶಿವಾತ್ಮನೆಂದು ಕರೆವರು. ಶಿವಗೀತೆಯಲ್ಲಿ "ಕಿಂಚಿಜ್ಜಲಂ ವಾ ಚುಲುಕೋದಕಂ ವಾ ಯಚ್ಛಂಕರ ತ್ವಾಂ ಪ್ರತಿಗೃಹ್ಯ ಧತ್ಸೇ । ತ್ರೈಲೋಕ್ಯಲಕ್ಷ್ಮೀಮಪಿ ಯಜ್ಜನೇಭ್ಯಃ ಸರ್ವಂ ತ್ವವಿದ್ಯಾ ಕೃತಮೇವ ಮನ್ಯೇ ॥" ಎಂದು ಹೇಳಿರುವುದು. ಜನ್ಮಮರಣಾ

ನಿವೃತ್ತಃ ಸರ್ವಸಂಗೇಭ್ಯೋ ಯುಕ್ತೋ ಯೋಗೀ ಪ್ರಕೀರ್ತಿತಃ ।
ಅಸಕ್ತೋ ಭಯುತೋ ಯಸ್ತು ವಿಷಯೇಷು ವಿಚಾರ್ಯ ಚ ॥
ಅಲುಬ್ಧಃ ಸಂಯಮೀ ಪ್ರೋಕ್ತಃ ಪ್ರಾರ್ಥಿತೋಽಪಿ ಸಮಂತತಃ ।
ಆತ್ಮಾರ್ಥಂ ವಾ ಪರಾರ್ಥಂ ವಾ ಇಂದ್ರಿಯಾಣೀಹ ಯಸ್ಯ ವೈ॥೨೫॥
ನ ಮಿಥ್ಯಾ ಸಂಪ್ರವರ್ತಂತೇ ಶಮಸ್ಯೈವ ತು ಲಕ್ಷಣಂ ।
ಅನುದ್ವಿಗ್ನೋ ಹ್ಯನಿಷ್ಟೇಷು ತಥೇಷ್ಟಾನ್ನಾಭಿನಂದತಿ ॥೨೬॥
ಪ್ರೀತಿತಾಪವಿಷಾದೇಭ್ಯೋ ವಿನಿವೃತ್ತಿರ್ವಿರಕ್ತತಾ ।
ಸನ್ಯಾಸಃ ಕರ್ಮಣಾಂ ನ್ಯಾಸಃ ಕೃತಾನಾಮುಕೃತೈಃ ಸಹ ॥೨೭॥
ಕುಶಲಾಕುಶಲಾನಾಂ ತು ಪ್ರಹಾಣಂ ನ್ಯಾಸ ಉಚ್ಯತೇ ।
ಅವ್ಯಕ್ತಾದ್ಯವಿಶೇಷಾಂತೇ ವಿಕಾರೇಽಸ್ಮಿನ್ನ ಚೇತನೇ ॥೨೮॥

---

ದಿಗಳಿಂದ ಸಕಲವೂ ಅನಿತ್ಯವಾದುವುಗಳೆಂದು ವಿಮರ್ಶಿಸಿ ಸಕಲವಿಷಯ ಗಳಲ್ಲಿ ರಾಗದ್ವೇಷಅಭಿಮಾನ ಸಂಬಂಧಗಳನ್ನು ಬಿಟ್ಟು ಪ್ರಾಣಾಯಾಮಾ ದಿಯೋಗಾಂಗಗಳಲ್ಲಿ ಆಸಕ್ತನಾದವನನ್ನು ಯೋಗಿ ಎನ್ನುವರು.

೨೫. ವಿಷಯಗಳ ಸಂಬಂಧವಾದ ಆಸೆಯಿಲ್ಲದವನೇ ಸಂಯಮೀ (ಇಂದ್ರಿಯನಿಗ್ರಹವುಳ್ಳವನು) ಎನಿಸುವನು. ಎಲ್ಲರೂ ಎಷ್ಟು ಪ್ರಾರ್ಥನೆ ಮಾಡಿದರೂ ಯಾವನ ಇಂದ್ರಿಯಗಳು ತನ್ನ ಸುಖಕ್ಕಾಗಲೀ ಇತರರ ಪ್ರಯೋಜನಕ್ಕಾಗಲೀ ಮಾಯಾಮಯವಾದ ವಿಷಯ ಸುಖಗಳಲ್ಲಿ ಪ್ರವೃತ್ತಿಸುವುದಿಲ್ಲವೋ ಆ ಸ್ಥಿತಿಯು ಶಮಗುಣದ ಲಕ್ಷಣವಾಗಿರು ವುದು.

೨೬. ಕಷ್ಟ ಬಂದಾಗ ದುಃಖಪಡದೆ ಸುಖ ಬಂದಾಗ ಸಂತೋಷ ಪಡದೆ ಪ್ರೀತಿ, ಸಂತಾಪ, ವಿಷಾದ, ಇವುಗಳನ್ನು ಬಿಟ್ಟಿರುವ ಸ್ಥಿತಿಯು ವೈರಾಗ್ಯ ವೆನಿಸುವುದು.

೨೭–೨೮. ಮಾಡದಿದ್ದ ಕರ್ಮಗಳಿಗೆ ಹೇಗೆ ಫಲವಿಲ್ಲವೋ ಹಾಗೆಯೇ ಮಾಡಿದ ಕರ್ಮಗಳಿಗೂ ಫಲವನ್ನಪೇಕ್ಷಿಸದೆ ಕರ್ಮಫಲತ್ಯಾಗ ಮಾಡು ವುದೇ ಸನ್ಯಾಸ ವೆನಿಸುವುದು. ಪ್ರಕೃತಿ ಮೊದಲುಗೊಂಡು ಪರಮಾಣು ಪರ್ಯಂತವಾಗಿ ವಿಕಾರವಾದ ಅಚೇತನ (ಜಡ) ವಾದ ಪ್ರಪಂಚದಲ್ಲಿ ಶುಭಾಶುಭಕರ್ಮಫಲಗಳ ತ್ಯಾಗವನ್ನೇ ನ್ಯಾಸವೆಂದು ಹೇಳುವರು.

ಚೇತನಾಚೇತನಾನ್ಯತ್ವವಿಜ್ಞಾನಂ ಜ್ಞಾನಮುಚ್ಯತೇ ।
ಏವಂ ತು ಜ್ಞಾನಯುಕ್ತಸ್ಯ ಶ್ರದ್ಧಾಯುಕ್ತಸ್ಯ ಶಂಕರಃ ॥೨೯॥
ಪ್ರಸೀದತಿ ನ ಸಂದೇಹೋ ಧರ್ಮಶ್ಚಾಯಂ ದ್ವಿಜೋತ್ತಮಾಃ ।
ಕಿಂತು ಗುಹ್ಯತಮಂ ವಕ್ಷ್ಯೇ ಸರ್ವತ್ರ ಪರಮೇಶ್ವರೇ ॥೩೦॥
ಭವೇ ಭಕ್ತಿರ್ನಸಂದೇಹಸ್ತಯಾ ಯುಕ್ತೋ ವಿಮುಚ್ಯತೇ ।
ಅಯೋಗ್ಯಸ್ಯಾಪಿ ಭಗವಾನ್ ಭಕ್ತಸ್ಯ ಪರಮೇಶ್ವರಃ ॥೩೧॥
ಪ್ರಸೀದತಿ ನ ಸಂದೇಹೋ ನಿಗೃಹ್ಯ ವಿವಿಧಂ ತಮಃ ।
ಜ್ಞಾನಮಧ್ಯಾಪನಂ ಹೋಮೋ ಧ್ಯಾನಂ ಯಜ್ಞಃ ತಪಃ ಶ್ರುತಂ ॥
ದಾನಮಧ್ಯಯನಂ ಸರ್ವಂ ಭವಭಕ್ತ್ಯೈ ನ ಸಂಶಯಃ ।

---

೨೯-೩೦. ಜೀವ, ಜಡ, ಇವುಗಳಿಗಿಂತಲೂ ಬೇರೆಯಾದ ಆತ್ಮ ವಸ್ತುವನ್ನು ತಿಳಿಯುವುದೇ ಜ್ಞಾನವೆನಿಸುವುದು. ಎಲೈ ಬ್ರಾಹ್ಮಣರೇ, ಅತ್ಯಂತ ಗೋಪ್ಯವಾದ ವಿಷಯವನ್ನು ಹೇಳುವೆನು ಕೇಳಿ. ಈ ರೀತಿ ಯಾದ ಆತ್ಮಜ್ಞಾನದಿಂದ ಕೂಡಿ ನಂಬಿಕೆಯುಳ್ಳ ಮನುಷ್ಯನಿಗೆ ಶಂಕರನು ಪ್ರಸನ್ನನಾಗಿ ಅನುಗ್ರಹವನ್ನು ಮಾಡುವನು. ಈ ವಿಷಯದಲ್ಲಿ ಸಂದೇಹ ವಿಲ್ಲ. ಇದೇ ಉತ್ತಮವಾದ ಧರ್ಮವು.

೩೧. ಆ ಶಂಕರನಲ್ಲಿ ಭಕ್ತಿಯುಳ್ಳವನು ಮುಕ್ತಿಯನ್ನು ಹೊಂದು ವನು. ಸಂದೇಹವಿಲ್ಲವು. ಭಕ್ತಿಯೊಂದಿದ್ದರೆ ಆ ಭಕ್ತಿಯು ಮುಕ್ತಿಗೆ ಅರ್ಹನಲ್ಲದಿದ್ದರೂ, ಪರಮೇಶ್ವರನು ತನ್ನ ಮಹಿಮೆಯಿಂದ ಅವನ ಅನೇಕ ಬಗೆಯ ಅಜ್ಞಾನಗಳನ್ನು ನಾಶಮಾಡಿ ಅವನಿಗೆ ಅನುಗ್ರಹವನ್ನು ಮಾಡುವನು, ಈ ವಿಷಯದಲ್ಲಿ ಸಂದೇಹವಿಲ್ಲ.

೩೨. ಜ್ಞಾನಾಭ್ಯಾಸ, ವೇದವನ್ನು ಅಭ್ಯಾಸಮಾಡುವುದು; ಮತ್ತು ಇತರರಿಗೆ ಹೇಳಿಕೊಡುವುದು; ಹೋಮ, ಜ್ಯೋತಿಷ್ಟೋಮಾದಿ ಯಜ್ಞ ಗಳು, ಧಾನ, ತಪಸ್ಸು, ಶಾಸ್ತ್ರಾಭ್ಯಾಸ, ಧ್ಯಾನ ಇವುಗಳೆಲ್ಲವೂ ಭಕ್ತಿಯ ಉತ್ಪತ್ತಿಗಾಗಿಯೇ ಮನುಷ್ಯನು ಆಚರಿಸಬೇಕಾದುದೆಂದು ಶಾಸ್ತ್ರದಲ್ಲಿ ಹೇಳಿರುವುದು.

ಚಾಂದ್ರಾಯಣಸಹಸ್ರೈಶ್ಚ ಪ್ರಾಜಾಪತ್ಯಶತೈಸ್ತಥಾ ॥೩೩॥
ಮಾಸೋಪವಾಸೈಶ್ಚಾನ್ಯೈರ್ವಾ ಭಕ್ತಿರ್ಮುನಿವರೋತ್ತಮಾಃ ।
ಅಭಕ್ತಾ ಭಗವತ್ಯಸ್ಮಿಂಲ್ಲೋಕೇ ಗಿರಿಗುಹಾಶಯೇ ॥೩೪॥
ಪತಂತಿ ಚಾತ್ಮಭೋಗಾರ್ಥಂ ಭಕ್ತೋ ಭಾವೇನ ಮುಚ್ಯತೇ ।
ಭಕ್ತಾನಾಂ ದರ್ಶನಾದೇವ ನೃಣಾಂ ಸ್ವರ್ಗಾದಯೋ ದ್ವಿಜಾಃ ॥೩೫॥
ನ ದುರ್ಲಭಾ ನ ಸಂದೇಹೋ ಭಕ್ತಾನಾಂ ಕಿಂ ಪುನಸ್ತಥಾ ।
ಬ್ರಹ್ಮವಿಷ್ಣು ಸುರೇಂದ್ರಾಣಾಂ ತಥಾऽನ್ಯೇಷಾಮಪಿ ಸ್ಥಿತಿಃ ॥೩೬॥
ಭಕ್ತ್ಯಾ ಏವ ಮುನೀನಾಂ ಚ ಬಲಸೌಭಾಗ್ಯಮೇವ ಚ ।
ಭವೇನ ಚ ತಥಾ ಪ್ರೋಕ್ತಂ ಸಂಪ್ರೇಕ್ಷ್ಯೋಮಾಂ ಪಿನಾಕಿನಾ ॥
ದೇವ್ಯೈ ದೇವೇನ ಮಧುರಂ ವಾರಾಣಸ್ಯಾಂ ಪುರಾ ದ್ವಿಜಾಃ ।

---

೩೩–೩೪. ಸಾವಿರ ಚಾಂದ್ರಾಯಣವ್ರತಗಳನ್ನು ಮಾಡುವುದು, ನೂರು ಪ್ರಾಜಾತ್ಯಹೋಮಗಳನ್ನು ಮಾಡುವುದು, ಮಾಸೋಪವಾಸ, ಇವುಗಳಿಂದ ಭಕ್ತಿಯು ಉತ್ಪತ್ತಿಯಾಗುವುದು. ಮಹಾಮಹಿಮನಾದ ಪರಮೇಶ್ವರನಲ್ಲಿ ಭಕ್ತಿಯಿಲ್ಲದವರು ಈ ಲೋಕದಲ್ಲಿ ವೇದದಲ್ಲಿ ಹೇಳಿದಂತೆ ಜ್ಯೋತಿಷ್ಟೋಮಾದಿ ಯಜ್ಞಗಳನ್ನು ಮಾಡಿ ಸ್ವರ್ಗಸುಖಕ್ಕೋಸ್ಕರವಾಗಿ ಕರ್ಮಮಾರ್ಗದಲ್ಲಿ ಬಿದ್ದುಬಿಡುವರು. ಅಥವಾ ಪರ್ವತದ ಗುಹೆಯಂತಿರುವ ಸಂಸಾರದಲ್ಲಿ ಬಿದ್ದುಬಿಡುವರು. ಭಕ್ತನಾದರೋ ಪರಮೇಶ್ವರನಲ್ಲಿ ಏಕಾಗ್ರಚಿತ್ತ ರೂಪವಾದ ಭಕ್ತಿಭಾವದಿಂದ ಮೋಕ್ಷವನ್ನು ಹೊಂದುವನು.

೩೫–೩೬. ಎಲೈ ಬ್ರಾಹ್ಮಣರೇ, ಭಕ್ತರ ದರ್ಶನವನ್ನು ಮಾಡಿದರೂ ಮನುಷ್ಯರಿಗೆ ಸ್ವರ್ಗಾದಿಸುಖಗಳುಂಟಾಗುವುವು. ಎಂದ ಮೇಲೆ ಭಕ್ತರ ವಿಷಯದಲ್ಲಿ ಹೇಳಬೇಕಾದುದೇನು? ಅವರಿಗೆ ದುರ್ಲಭವಾದುದಾವುದೂ ಇರುವುದಿಲ್ಲ. ಬ್ರಹ್ಮ, ವಿಷ್ಣು, ದೇವೇಂದ್ರ, ಮುಂತಾದ ದೇವತೆಗಳಿಗೂ, ಇತರರಿಗೂ, ಇದೇ ನಿಯಮವಿರುವುದು. ಎಂದರೆ ಭಕ್ತಿಯಿಲ್ಲದೆ ಸುಖಪ್ರಾಪ್ತಿಯಿಲ್ಲ.

೩೭. ಋಷಿಗಳಿಗೆ ಬಲವೂ ಸಂಪತ್ತೂ ಭಕ್ತಿಯಿಂದಲೇ ಉಂಟಾಗುವುದು. ಎಲೈ ಬ್ರಾಹ್ಮಣರೇ, ಹಿಂದೆ ವಾರಾಣಸೀ ಪಟ್ಟಣದಲ್ಲಿ ಈಶ್ವರನು ಉಮಾದೇವಿಯನ್ನು ಕುರಿತು ಭಕ್ತಿಯ ಸ್ವರೂಪವನ್ನು ಹೇಳಿರುವನು.

**ಅವಿಮುಕ್ತೇ ಸಮಾಸೀನಾ ರುದ್ರೇಣ ಪರಮಾತ್ಮನಾ ॥ ೩೮॥**
**ರುದ್ರಾಣೀ ರುದ್ರಮಾಹೇದಂ ಲಬ್ಧ್ವಾವಾರಾಣಸೀಂ ಪುರೀಂ ।**

**॥ ಶ್ರೀದೇವ್ಯುವಾಚ ॥**

**ಕೇನ ವಶ್ಯೋ ಮಹಾದೇವ ಪೂಜ್ಯೋ ದೃಶ್ಯಸ್ತ್ವಮೀಶ್ವರಃ ॥೩೯॥**
**ತಪಸಾ ವಿದ್ಯಯಾ ವಾಽಪಿ ಯೋಗೇನೇಹ ವದ ಪ್ರಭೋ ।**

**॥ ಸೂತ ಉವಾಚ ॥**

**ನಿಶಮ್ಯ ವಚನಂ ತಸ್ಯಾಸ್ತಥಾ ಹ್ಯಾಲೋಕ್ಯ ಪಾರ್ವತೀಂ ॥೪೦॥**
**ಆಹ ಬಾಲೇಂದುತಿಲಕಃ ಪೂರ್ಣೇಂದು ವದನಾಂ ಹಸನ್ ।**
**ಸ್ಮೃತ್ವಾಽಥ ಮೇನಯಾ ಪತ್ಯಾ ಗಿರೇರ್ಗಾಂ ಕಥಿತಾಂ ಪುರಾ ॥೪೧॥**
**ಚಿರಕಾಲಸ್ಥಿತಿಂ ಪ್ರೇಕ್ಷ್ಯ ಗಿರೌ ದೇವ್ಯಾ ಮಹಾತ್ಮನಃ ।**
**ದೇವಿ ಲಬ್ಧಾ ಪುರೀ ರಮ್ಯಾ ತ್ವಯಾ ಯತ್ಪೃಷ್ಟುಮರ್ಹಸಿ ॥೪೨॥**

---

೩೮. ಅವಿಮುಕ್ತ ಕ್ಷೇತ್ರವೆನಿಸಿದ ಕಾಶೀಪಟ್ಟಣದಲ್ಲಿ ಪರಮಾತ್ಮನಾದ ರುದ್ರನ ಸಮೀಪದಲ್ಲಿ ಕುಳಿತು ರುದ್ರಾಣಿಯು ಈ ಮುಂದೆ ಹೇಳುವ ಮಾತನ್ನು ಹೇಳಿದಳು.

೩೯. ಓ ಮಹಾದೇವನೇ, ಈಶ್ವರನಾದ ನೀನು ಭೂಲೋಕದ ಜನರಿಗೆ ಪೂಜ್ಯನಾಗಿರುವೆ. ನೀನು ಅವರಿಗೆ ವಶನಾಗಿ ದರ್ಶನ ಕೊಡಬೇಕಾದರೆ ತಪಸ್ಸಿನಿಂದಲೇ ? ವಿದ್ಯೆಯಿಂದಲೇ ? ಅಥವಾ ಯೋಗಾಭ್ಯಾಸದಿಂದಲೇ ? ಯಾವುದರಿಂದ ನಿನ್ನ ದರ್ಶನ ವಾಗುವುದೆಂಬುದನ್ನು ಸ್ವಾಮಿಯಾದ ನೀನು ನನಗೆ ಹೇಳಬೇಕು.

೪೦. ಬಾಲಚಂದ್ರನನ್ನು ಹಣೆಯಲ್ಲಿ ಧರಿಸಿದ ಶಿವನು ಪಾರ್ವತಿಯು ಹೇಳಿದ ಮಾತನ್ನು ಕೇಳಿ ಪೂರ್ಣಚಂದ್ರನಂತೆ ಕಾಂತಿಯುಕ್ತವಾದ ಆ ದೇವಿಯ ಮುಖವನ್ನು ನೋಡಿ ನಗುತ್ತಾ ಹೇಳಿದನು.

೪೧–೪೨–೪೩. ಎಲೈ ದೇವಿಯೇ, ನಿನ್ನೊಡನೆ ನಾನು ಹಿಮವಂತನ ಮನೆಯಲ್ಲಿ ಬಹಳ ದಿನದಿಂದಿದ್ದುದನ್ನು ನೋಡಿ, ವಾಸಸ್ಥಾನವನ್ನು ನಿರ್ಮಿಸುವುದಕ್ಕಾಗಿ ಭೂಮಿಯನ್ನು ಗೊತ್ತು ಮಾಡಬೇಕೆಂದು ನಿನ್ನ ತಾಯಿಯಾದ ಮೇನೆಯು ಹೇಳಿದುದನ್ನು ಮರೆತು ಬಿಟ್ಟಿರುವೆ. ಈಗ ಮನೋ

ಸ್ಥಾನಾರ್ಥಂ ಕಥಿತಂ ಮಾತ್ರಾ ವಿಸ್ಮೃತೇಹ ವಿಲಾಸಿನಿ ।
ಪುರಾ ಪಿತಾಮಹೇನಾಪಿ ಪೃಷ್ಟಃ ಪ್ರಶ್ನವತಾಂ ವರೇ ॥೪೩॥
ಯಥಾ ತ್ವಯಾಽದ್ಯ ವೈ ಪೃಷ್ಟೋ ದೃಷ್ಟ್ವಂ ಬ್ರಹ್ಮಾತ್ಮಕಂ ತ್ವಹಂ ।
ಶ್ವೇತೇ ಶ್ವೇತೇನ ವರ್ಣೇನ ದೃಷ್ಟ್ವಾ ಕಲ್ಪೇ ತು ಮಾಂ ಶುಭೇ ॥೪೪॥
ಸದ್ಯೋ ಜಾತಂ ತಥಾ ರಕ್ತೇ ರಕ್ತಂ ವಾಮಂ ಪಿತಾಮಹಃ ।
ಪೀತೇ ತತ್ಪುರುಷಂ ಪೀತಮಘೋರೇ ಕೃಷ್ಣಮೀಶ್ವರಂ ॥೪೫॥
ಈಶಾನಂ ವಿಶ್ವರೂಪಾಖ್ಯೇ ವಿಶ್ವರೂಪಂ ತದಾಹ ಮಾಂ ।

॥ ಪಿತಾಮಹ ಉವಾಚ ॥

ವಾಮ ತತ್ಪುರಷಾಘೋರಸದ್ಯೋಜಾತ ಮಹೇಶ್ವರ ॥೪೬॥
ದೃಷ್ಟೋ ಮಯಾ ತ್ವಂ ಗಾಯತ್ರ್ಯಾ ದೇವದೇವ ಮಹೇಶ್ವರ ।
ಕೇನ ವಶ್ಯೋ ಮಹಾದೇವ ಧ್ಯೇಯಃ ಕುತ್ರ ಘೃಣಾನಿಧೇ ॥೪೭॥
ದೃಶ್ಯಃ ಪೂಜ್ಯಸ್ತಥಾ ದೇವ್ಯಾ ವಕ್ತುಮರ್ಹಸಿ ಶಂಕರ ।

---

ಹರವಾದ ಈ ಕಾಶೀಪಟ್ಟಣವು ನಮ್ಮ ವಾಸಸ್ಥಾನವಾಗಿರುವುದು. ಈಗ ನೀನು ನನ್ನನ್ನು ಪ್ರಶ್ನೆ ಮಾಡಬಹುದು. ಹಿಂದೆ ಬ್ರಹ್ಮನೂ ಇದೇರೀತಿಯಲ್ಲಿ ಪ್ರಶ್ನೆ ಮಾಡಿದ್ದನು.

೪೪–೪೫. ಈಗ ನೀನು ಕೇಳಿದಂತೆಯೇ ಬ್ರಹ್ಮನು ಪರಬ್ರಹ್ಮಸ್ವರೂಪನಾದ ನನ್ನನ್ನು ನೋಡಬೇಕೆಂದು ಶ್ವೇತಕಲ್ಪದಲ್ಲಿ ಬಿಳಿಯ ಬಣ್ಣದಿಂದ ಇದ್ದ ಸದ್ಯೋಜಾತನನ್ನೂ, ರಕ್ತಕಲ್ಪದಲ್ಲಿ ಕೆಂಪು ಬಣ್ಣದಿಂದ ಇದ್ದ ವಾಮದೇವನನ್ನೂ, ಪೀತಕಲ್ಪದಲ್ಲಿ ಹಳದಿಬಣ್ಣದಿಂದ ಇದ್ದ ತತ್ಪುರುಷನನ್ನೂ, ಕಪ್ಪು ಬಣ್ಣದ ಅಘೋರನನ್ನೂ, ಚಿತ್ರವರ್ಣದ ಈಶಾನನನ್ನೂ ನೋಡಿ ನನ್ನನ್ನು ಕುರಿತು ಹೀಗೆಕೇಳಿದನು.

೪೬–೪೭. ಓ ಮಹೇಶ್ವರನೇ, ನಾನು ಗಾಯತ್ರೀ ದೇವಿಯೊಡನೆ ನಿನ್ನ ಸದ್ಯೋಜಾತಾದಿ ಪಂಚ ಬ್ರಹ್ಮ ಸ್ವರೂಪವನ್ನು ನೋಡಿದೆನು. ನೀನು ದೇವೀಸಹಿತನಾಗಿ ಯಾವ ಉಪಾಸನೆಯಿಂದ ನನಗೆ ದರ್ಶನವನ್ನು ಕೊಟ್ಟು ನನ್ನ ಪೂಜೆಯನ್ನು ಸ್ವೀಕರಿಸಿ ನನಗೆ ವಶನಾಗುವೆ? ದಯಾನಿಧಿಯಾದ ನೀನು ಅದನ್ನು ಹೇಳಬೇಕು.

॥ ಶ್ರೀಭಗವಾನುವಾಚ ॥

ಅಪ್ರೋಚಂ ಶ್ರದ್ಧಯೈವೇತಿ ವಶ್ಯೋ ವಾರಿಜಸಂಭವ ॥೪೮॥
ಧ್ಯೇಯೋ ಲಿಂಗೇ ತ್ವಯಾ ದೃಷ್ಟೋ ವಿಷ್ಣುನಾ ಪಯಸಾಂ ನಿಧೌ ।
ಪೂಜ್ಯಃ ಪಂಚಾಸ್ಯರೂಪೇಣ ಪವಿತ್ರೈಃ ಪಂಚಭಿರ್ದ್ವಿಜೈಃ ॥೪೯॥
ಭವ ಭಕ್ತ್ಯಾಽದ್ಯ ದೃಷ್ಟೋಽಹಂ ತ್ವಯಾಽಂಡಜ ಜಗದ್ಗುರೋ ।
ಸೋಽಪಿ ಮಾಮಾಹ ಭಾವಾರ್ಥಂ ದತ್ತಂ ತಸ್ಮೈ ಮಯಾ ಪುರಾ ॥
ಭಾವಂ ಭಾವೇನ ದೇವೇಶಿ ದೃಷ್ಟವಾನ್ಮಾಂ ಹೃದೀಶ್ವರಂ ।
ತಸ್ಮಾತ್ತು ಶ್ರದ್ಧಯಾ ವಶ್ಯೋ ದೃಶ್ಯಃ ಶ್ರೇಷ್ಠಗಿರೇಃ ಸುತೇ ॥೫೧॥
ಪೂಜ್ಯೋ ಲಿಂಗೇ ನ ಸಂದೇಹಃ ಸರ್ವದಾ ಶ್ರದ್ಧಯಾ ದ್ವಿಜೈಃ ।
ಶ್ರದ್ಧಾ ಧರ್ಮಃ ಪರಃ ಸೂಕ್ಷ್ಮಃ ಶ್ರದ್ಧಾ ಜ್ಞಾನಂ ಹುತಂ ತಪಃ ॥

---

೪೮–೪೯. ಶ್ರೀ ಭಗವಂತನು ಹೇಳಿದನು: ಎಲೈ ಕಮಲಸಂಭವನಾದ ಬ್ರಹ್ಮನೇ, ಭಕ್ತಿಯಿಂದಲೇ ನಾನು ವಶನಾಗುವೆನು. ನನ್ನನ್ನು ಧ್ಯಾನಮಾಡಬೇಕಾದರೆ ನೀನೂ ವಿಷ್ಣುವೂ ಸಮುದ್ರ ಮಧ್ಯದಲ್ಲಿ ನೋಡಿದ ಲಿಂಗಾಕೃತಿಯಲ್ಲಿ ಧ್ಯಾನಮಾಡಬೇಕು. ಪರಿಶುದ್ಧರಾದ ಐದು ಜನ ಬ್ರಾಹ್ಮಣರಿಂದ ಸದ್ಯೋಜಾತಾದಿ ಪಂಚಮುಖಗಳಿಂದ ಕೂಡಿದ ನನ್ನನ್ನು ಪೂಜೆ ಮಾಡಿಸಬೇಕು.

ಲೋಕಕ್ಕೆಲ್ಲಕ್ಕೂ ದೊಡ್ಡವನಾದ ಎಲೈ ಬ್ರಹ್ಮನೇ, ನಿನ್ನ ಭಕ್ತಿಯಿಂದಲೇ ನಾನು ಈಗ ನಿನಗೆ ದರ್ಶನವನ್ನು ಕೊಟ್ಟೆನು.

೫೦–೫೧ ಎಲೈ ಪಾರ್ವತಿಯೇ, ಆ ಬ್ರಹ್ಮನು ಭಕ್ತಿಯನ್ನು ಕರುಣಿಸಬೇಕೆಂದು ನನ್ನನ್ನು ಕೇಳಿದನು. ಅವನಿಗೆ ನಾನು ಭಕ್ತಿಯನ್ನು ಕೊಟ್ಟೆನು. ಆ ಭಕ್ತಿಯಿಂದಲೇ ನನ್ನನ್ನು ಅವನು ಮನಸ್ಸಿನಲ್ಲಿಯೇ ದರ್ಶನಮಾಡಿದನು. ಶ್ರೇಷ್ಠನಾದ ಪರ್ವತರಾಜನ ಪುತ್ರಿಯೇ, ಕೇಳು ಈ ಕಾರಣದಿಂದ ನಾನು ಭಕ್ತಿಗೆ ವಶನಾಗಿ ದರ್ಶನ ಕೊಡುವೆನು.

೫೨. ಬ್ರಾಹ್ಮಣರು ಯಾವಾಗಲೂ ಭಕ್ತಿಯಿಂದ ಲಿಂಗದಲ್ಲಿ ನನ್ನನ್ನು ಪೂಜಿಸಬೇಕು. ಭಕ್ತಿರೂಪವಾದ ಕಾರ್ಯೋತ್ಸಾಹವೇ ಶ್ರದ್ಧೆ ಎನಿಸುವುದು. ಆ ಉತ್ಸಾಹವೇ ಸೂಕ್ಷ್ಮವಾದ ಮತ್ತು ಶ್ರೇಷ್ಠವಾದ ಧರ್ಮವು. ಇದೇ

ಶ್ರದ್ಧಾ ಸ್ವರ್ಗಶ್ಚ ಮೋಕ್ಷಶ್ಚ ದೃಶ್ಯೋಽಹಂ ಶ್ರದ್ಧಯಾ ಸದಾ ।

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಾರ್ಧೇ ಬಕ್ತಿಭಾವಕಥನಂ
ನಾಮ ದಶಮೋಽಧ್ಯಾಯಃ

---

ಜ್ಞಾನಸ್ವರೂಪವಾಗುವುದು. ಇದೇ ಹೋಮವು, ತಪಸ್ಸು, ಸ್ವರ್ಗಫಲವು. ಮೋಕ್ಷವೂ ಇದರಿಂದಲೇ ಉಂಟಾಗುವುದು. ಆದುದರಿಂದ ನಾನು ಯಾವಾಗಲೂ ಭಕ್ತಿಯುಳ್ಳವರಿಗೇ ಕಾಣಿಸಿಕೊಳ್ಳುವೆನು.

ಇಲ್ಲಿಗೆ ಲಿಂಗಮಹಾಪುರಾಣದಲ್ಲಿ ಪೂರ್ವಾರ್ಧದಲ್ಲಿ
ಬಕ್ತಿಭಾವ ಕಥನವೆಂಬ ಹತ್ತನೆಯ ಅಧ್ಯಾಯವು
ಮುಗಿದುದು.



ಅಥ ಶ್ರೀಲಿಂಗಮಹಾಪುರಾಣೇ ಪೂರ್ವಾರ್ಧೇ ಏಕಾದಶೋಽಧ್ಯಾಯಃ

ಏಕಾದಶೇಽಸ್ಮಿನ್ನಧ್ಯಾಯೇ ಸದ್ಯೋಜಾತಸಮುದ್ಭವಃ ।
ತಚ್ಛಿಷ್ಯಸಂಭವಶ್ಚೈವ ಕಥ್ಯತೇ ಪಾಪನಾಶನಃ ॥

॥ ಋಷಯ ಊಚುಃ ॥

ಕಥಂ ವೈ ದೃಷ್ಟವಾನ್ಬ್ರಹ್ಮಾ ಸದ್ಯೋಜಾತಂ ಮಹೇಶ್ವರಂ ।
ವಾಮದೇವಂ ಮಹಾತ್ಮಾನಂ ಪುರಾಣಪುರುಷೋತ್ತಮಂ ॥ ೧ ॥
ಅಘೋರಂ ಚ ತಥೇಶಾನಂ ಯಥಾವದ್ವಕ್ತುಮರ್ಹಸಿ ।

॥ ಸೂತ ಉವಾಚ ॥

ಏಕೋನವಿಂಶಕಃ ಕಲ್ಪೋ ವಿಜ್ಞೇಯಃ ಶ್ವೇತಲೋಹಿತಃ ॥ ೨ ॥
ತಸ್ಮಿಂಸ್ತತ್ಪರಮಂ ಧ್ಯಾನಂ ಧ್ಯಾಯತೋ ಬ್ರಹ್ಮಣಸ್ತದಾ ।
ಉತ್ಪನ್ನಸ್ತು ಶಿಖಾಯುಕ್ತಃ ಕುಮಾರಃ ಶ್ವೇತಲೋಹಿತಃ ॥ ೩ ॥

---

ಲಿಂಗಮಹಾಪುರಾಣದ ಪೂರ್ವಾರ್ಧದಲ್ಲಿ ಹನ್ನೊಂದನೆಯ ಅಧ್ಯಾಯವು

(ಈ ಹನ್ನೊಂದನೆಯ ಅಧ್ಯಾಯದಲ್ಲಿ ಸದ್ಯೋಜಾತರೂಪನಾದ ಶಿವನ ಅವತಾರವನ್ನೂ ಅವನ ಶಿಷ್ಯರ ಅವತಾರಗಳನ್ನೂ ವಿವರಿಸಲಾಗುವುದು. ಇವನ್ನು ಹೇಳಿ ಕೇಳಿದವರ ಪಾಪವನ್ನು ಇವು ನಾಶಮಾಡತಕ್ಕವುಗಳು.)

೧. ಋಷಿಗಳು ಹೇಳಿದರು; ಬ್ರಹ್ಮನು ಸದ್ಯೋಜಾತ, ವಾಮದೇವ, ಅಘೋರ, ತತ್ಪುರುಷ, ಈಶಾನ ಎಂಬ ಪಂಚ ಬ್ರಹ್ಮಮೂರ್ತಿಗಳನ್ನು ಹೇಗೆ ಕಂಡನು? ಆ ಕ್ರಮವನ್ನು ನಮಗೆ ಹೇಳಬೇಕು.

೨–೩. ಸೂತನು ಹೇಳಿದನು; ಹತ್ತೊಂಬತ್ತನೆಯದಾದ ಶ್ವೇತಲೋಹಿತವೆಂಬ ಕಲ್ಪದಲ್ಲಿ ಪರಬ್ರಹ್ಮನನ್ನು ಧ್ಯಾನಿಸುತ್ತಿರುವ ಬ್ರಹ್ಮನ ಎದುರಿಗೆ ಬಿಳುಪು ಮತ್ತು ಕೆಂಪು ಬಣ್ಣದಿಂದ ಕೂಡಿದ, ತಲೆಯಲ್ಲಿ ತುಂಬಾ ಕೂದಲುಳ್ಳ, ಕುಮಾರನು ಕಾಣಿಸಿಕೊಂಡನು.

ತಂ ದೃಷ್ಟ್ವಾ ಪುರುಷಂ ಶ್ರೀಮಾನ್ಬ್ರಹ್ಮಾ ವೈ ವಿಶ್ವತೋಮುಖಃ ।
ಹೃದಿ ಕೃತ್ವಾ ಮಹಾತ್ಮಾನಂ ಬ್ರಹ್ಮರೂಪಿಣಮೀಶ್ವರಂ ॥ ೪ ॥
ಸದ್ಯೋಜಾತಂ ತತೋ ಬ್ರಹ್ಮಾ ಧ್ಯಾನಯೋಗಪರೋಽ ಭವತ್ ।
ಧ್ಯಾನಯೋಗಾತ್ಪರಂ ಜ್ಞಾತ್ವಾ ವವಂದೇ ದೇವಮೀಶ್ವರಂ ॥ ೫ ॥
ಸದ್ಯೋಜಾತಂ ತತೋ ಬ್ರಹ್ಮಾ ಬ್ರಹ್ಮ ವೈ ಸಮಚಿಂತಯತ್ ।
ತತೋಽಸ್ಯ ಪಾರ್ಶ್ವತಃ ಶ್ವೇತಾಃ ಪ್ರಾದುರ್ಭೂತಾ ಮಹಾಯಶಾಃ ॥
ಸುನಂದೋ ನಂದನಶ್ಚೈವ ವಿಶ್ವನಂದೋಪನಂದನೌ ।
ಶಿಷ್ಯಾಸ್ತೇ ವೈ ಮಹಾತ್ಮಾನೋ ಯೈಸ್ತದ್ಬ್ರಹ್ಮ ಸದಾಽಽವೃತಂ ॥ ೭ ॥
ತಸ್ಯಾಗ್ರೇ ಶ್ವೇತವರ್ಣಾಭಃ ಶ್ವೇತೋ ನಾಮ ಮಹಾಮುನಿಃ ।
ವಿಜಜ್ಞೇಽಥ ಮಹಾತೇಜಾಸ್ತಸ್ಮಾಜಜ್ಞೇ ಹರಸ್ತ್ವಸೌ ॥ ೮ ॥

---

೪-೫. ತೇಜಶ್ಶಾಲಿಯಾದ ಚತುರ್ಮುಖಬ್ರಹ್ಮನು ಆ ಪುರುಷನನ್ನು ಕಂಡು ಆಗ ತಾನೇ ಹುಟ್ಟಿದ ಪರಬ್ರಹ್ಮಸ್ವರೂಪನಾದ ಮಹಾಮಹಿಮನಾದ ಆ ದೇವನನ್ನು ಮನಸ್ಸಿನಲ್ಲಿಟ್ಟು ಧ್ಯಾನಾಸಕ್ತನಾದನು. ಬಳಿಕ ಆ ಧ್ಯಾನದಿಂದ ಅವನನ್ನೇ ಪರಬ್ರಹ್ಮನೆಂದು ತಿಳಿದು ಆ ದೇವನಿಗೆ ನಮಸ್ಕಾರಮಾಡಿದನು.

೬-೭. ಆ ಮೇಲೆ ಬ್ರಹ್ಮನು ಸದ್ಯೋಜಾತಮೂರ್ತಿಯನ್ನೇ ಪರಬ್ರಹ್ಮನೆಂದು ಧ್ಯಾನಮಾಡಿದನು. ಬಳಿಕ ಆ ಸದ್ಯೋ ಜಾತಮೂರ್ತಿಯ ಪಾರ್ಶ್ವಗಳಿಂದ ಬೆಳ್ಳಗಿರುವ ಸುನಂದ, ನಂದನ, ವಿಶ್ವನಂದ, ಉಪನಂದನ ಎಂಬ ಮಹಾಮಹಿಮರಾದ ನಾಲ್ಕುಜನ ಶಿಷ್ಯರು ಆ ಸದ್ಯೋಜಾತ ಮೂರ್ತಿಯನ್ನು ಯಾವಾಗಲೂ ಸೇವಿಸುತ್ತಿದ್ದರು.

೮. ಆ ಮೇಲೆ ಆ ಸದ್ಯೋಜಾತ ಮೂರ್ತಿಯ ಮುಂಭಾಗದಲ್ಲಿ ಮಹಾ ತೇಜಶ್ಶಾಲಿಯಾದ ಶ್ವೇತನೆಂಬ ಮಹಾಮುನಿಯು ಕಾಣಿಸಿಕೊಂಡನು. ಆ ಸದ್ಯೋಜಾತ ಮೂರ್ತಿಯಿಂದಲೇ ಹುಟ್ಟಿದುದರಿಂದ ಈ ಶ್ವೇತಮಹಾಮುನಿಯೂ ಶಿವಸ್ವರೂಪನು.

ತತ್ರ ತೇ ಮುನಯಸ್ಸರ್ವೇ ಸದ್ಯೋಜಾತಂ ಮಹೇಶ್ವರಂ ।
ಪ್ರಪನ್ನಾಃ ಪರಯಾ ಭಕ್ತ್ಯಾ ಗೃಣಂತೋ ಬ್ರಹ್ಮ ಶಾಶ್ವತಂ ॥ ೯ ॥

ತಸ್ಮಾದ್ವಿಶ್ವೇಶ್ವರಂ ದೇವಂ ಯೇ ಪ್ರಪದ್ಯಂತಿ ವೈ ದ್ವಿಜಾಃ ।
ಪ್ರಾಣಾಯಾಮಪರಾ ಭೂತ್ವಾ ಬ್ರಹ್ಮತತ್ಪರಮಾನಸಾಃ ॥೧೦॥

ತೇ ಸರ್ವೇ ಪಾಪನಿರ್ಮುಕ್ತಾಃ ವಿಮಲಾ ಬ್ರಹ್ಮವರ್ಚಸಃ ।
ವಿಷ್ಣುಲೋಕಮತಿಕ್ರಮ್ಯ ರುದ್ರಲೋಕಂ ವ್ರಜಂತಿ ತೇ ॥೧೧॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಾರ್ಧೇ ಸದ್ಯೋಜಾತಮಾಹಾತ್ಮ್ಯಂ ನಾಮೈಕಾದಶೋಽಧ್ಯಾಯಃ

---

೯. ಆ ಸಂದರ್ಭದಲ್ಲಿ ಅಲ್ಲಿದ್ದ ಮುನಿಗಳೆಲ್ಲರೂ ಸದ್ಯೋಜಾತನಾದ ಮಹೇಶ್ವರನನ್ನು ಶಾಶ್ವತನಾದ ಪರಬ್ರಹ್ಮನೆಂದು ತಿಳಿದು ಅತ್ಯಂತ ಭಕ್ತಿಯಿಂದ ಅವನನ್ನು ಶರಣು ಹೊಂದಿದರು.

೧೦–೧೧. ಆದುದರಿಂದ ಯಾವ ಬ್ರಾಹ್ಮಣರು ಪ್ರಾಣಾಯಾಮದಲ್ಲಿ ಆಸಕ್ತರಾಗಿ ಏಕಾಗ್ರಚಿತ್ತದಿಂದ ಪರಬ್ರಹ್ಮನನ್ನು ಧ್ಯಾನಿಸುತ್ತಾ ಭಕ್ತಿಯಿಂದ ಶಿವನನ್ನು ಮರೆಹೊಗುವರೋ, ಅವರೆಲ್ಲರೂ ಪಾಪವನ್ನು ಕಳೆದುಕೊಂಡು, ನಿರ್ಮಲವಾದ ಬ್ರಹ್ಮತೇಜಸ್ಸನ್ನು ಹೊಂದಿ, ವಿಷ್ಣು ಲೋಕವನ್ನು ದಾಟಿ, ರುದ್ರ ಲೋಕಕ್ಕೆ ಹೋಗುವರು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಾರ್ಧದಲ್ಲಿ ಸಧ್ಯೋಜಾತ ಮಹಾತ್ಮೆ ಎಂಬ ಹನ್ನೊಂದನೆಯ ಅಧ್ಯಾಯವು ಮುಗಿದುದು.

ಅಥ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ದ್ವಾದಶೋಽಧ್ಯಾಯಃ ೧೨

**ಲೈಂಗೇಽಸ್ಮಿನ್ ದ್ವಾದಶಾಧ್ಯಾಯೇ ಬ್ರಹ್ಮಣೋಽನುಗ್ರಹೇಚ್ಛಯಾ**
**ಉದ್ಭವೋ ವಾಮದೇವಸ್ಯ ಶಿಷ್ಯಾಣಾಂ ಚೈವ ವರ್ಣ್ಯತೇ ॥**

**ತಸ್ಮಿನ್ತ್ರಿಂಶತಮಃ ಕಲ್ಪೋ ರಕ್ತೋ ನಾಮ ಪ್ರಕೀರ್ತಿತಃ ।**
**ಬ್ರಹ್ಮಾ ಯತ್ರ ಮಹಾತೇಜಾ ರಕ್ತವರ್ಣಮಧಾರಯತ್ ॥ ೧ ॥**

**ಧ್ಯಾಯತಃ ಪುತ್ರಕಾಮಸ್ಯ ಬ್ರಹ್ಮಣಃ ಪರಮೇಷ್ಠಿನಃ ।**
**ಪ್ರಾದುರ್ಭೂತೋ ಮಹಾತೇಜಾಃ ಕುಮಾರೋ ರಕ್ತಭೂಷಣಃ ॥**

**ರಕ್ತಮಾಲ್ಯಾಂಬರಧರೋ ರಕ್ತನೇತ್ರಃ ಪ್ರತಾಪವಾನ್ ।**
**ಸ ತಂ ದೃಷ್ಟ್ವಾ ಮಹಾತ್ಮಾನಂ ಕುಮಾರಂ ರಕ್ತವಾಸಸಂ ॥ ೩ ॥**

**ಪರಂ ಧ್ಯಾನಂ ಸಮಾಶ್ರಿತ್ಯ ಬುಬುಧೇ ದೇವಮೀಶ್ವರಂ ।**
**ಸ ತಂ ಪ್ರಣಮ್ಯ ಭಗವಾನ್ ಬ್ರಹ್ಮಾ ಪರಮಯಂತ್ರಿತಃ ॥ ೪ ॥**

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಹನ್ನೆರಡನೆಯ ಅಧ್ಯಾಯ

(ಈ ಹನ್ನೆರಡನೆಯ ಅಧ್ಯಾಯದಲ್ಲಿ ಬ್ರಹ್ಮನಿಗೆ ಅನುಗ್ರಹಮಾಡಬೇಕೆಂದು ವಾಮದೇವನ ಉತ್ಪತ್ತಿಯೂ, ಅವನ ಶಿಷ್ಯರ ಉತ್ಪತ್ತಿಯೂ, ಇವನ್ನು ವರ್ಣಿಸಲಾಗುವುದು.)

೧. ಸೂತನು ಹೇಳಿದನು: ಇಪ್ಪತ್ತನೆಯದಾದ ರಕ್ತವೆಂಬ ಕಲ್ಪದಲ್ಲಿ ಮಹಾತೇಜಶ್ಶಾಲಿಯಾದ ಬ್ರಹ್ಮನು ರಕ್ತವರ್ಣವನ್ನು ಧರಿಸಿದ್ದನು.

೨-೩. ಆ ಬ್ರಹ್ಮನು ಪುತ್ರಕಾಮನೆಯಿಂದ ಧ್ಯಾನಮಾಡುತ್ತಿರಲು ಮಹಾತೇಜಸ್ವಿಯೂ, ಕೆಂಪಾದ ಆಭರಣಗಳು, ವಸ್ತ್ರಗಳು, ಹೂಗಳು, ಇವುಗಳನ್ನು ಧರಿಸಿದ ಕುಮಾರನು ಕಾಣಿಸಿಕೊಂಡನು. ಆ ಮಹಾಮಹಿಮನಾದ ಕುಮಾರನನ್ನು ಕಂಡು ಮತ್ತೆ ಧ್ಯಾನದಿಂದ ಅವನೇ ಪರಮೇಶ್ವರನೆಂದು ತಿಳಿದುಕೊಂಡನು.

೪-೫. ಮಹಾಮಹಿಮನಾದ ಬ್ರಹ್ಮನು ವಿಶೇಷವಾದ ಭಕ್ತಿಯಿಂದ ಅವನಿಗೆ ನಮಸ್ಕಾರ ಮಾಡಿ ಅವನನ್ನು ಪರಬ್ರಹ್ಮಸ್ವರೂಪನಾದ

**ವಾಸುದೇವಂ ತತೋ ಬ್ರಹ್ಮಾ ಬ್ರಹ್ಮ ವೈ ಸಮಚಿಂತಯತ್ ।**
**ತಥಾ ಸ್ತುತೋ ಮಹಾದೇವೋ ಬ್ರಹ್ಮಣಾ ಪರಮೇಶ್ವರಃ ॥ ೫ ॥**

**ಪ್ರತೀತಹೃದಯಃ ಸರ್ವ ಇದಮಾಹ ಪಿತಾಮಹಂ ।**
**ಧ್ಯಾಯತಾ ಪುತ್ರಕಾಮೇನ ಯಸ್ಮಾತ್ತೇಽಹಂ ಪಿತಾಮಹ ॥ ೬ ॥**

**ದೃಷ್ಟಃ ಪರಮಯಾ ಭಕ್ತ್ಯಾ ಸ್ತುತಶ್ಚ ಬ್ರಹ್ಮಪೂರ್ವಕಂ ।**
**ತಸ್ಮಾದ್ಧ್ಯಾನಂ ಬಲಂ ಪ್ರಾಪ್ಯ ಕಲ್ಪೇ ಕಲ್ಪೇ ಪ್ರಯತ್ನತಃ ॥ ೭ ॥**

**ವೇತ್ಸ್ಯಸೇ ಮಾಂ ಪ್ರಸಂಖ್ಯಾತಂ ಲೋಕಧಾತಾರಮೀಶ್ವರಂ ।**
**ತತಸ್ತಸ್ಯ ಮಹಾತ್ಮನಶ್ಚತ್ವಾರಸ್ತೇ ಕುಮಾರಕಾಃ ॥ ೮ ॥**

**ಸಂಬಭೂವುರ್ಮಹಾತ್ಮಾನೋ ವಿಶುದ್ಧಾ ಬ್ರಹ್ಮವರ್ಚಸಃ ।**
**ವಿರಜಾಶ್ಚ ವಿಬಾಹುಶ್ಚ ವಿಶೋಕೋ ವಿಶ್ವಭಾವನಃ ॥ ೯ ॥**

**ಬ್ರಹ್ಮಣ್ಯಾ ಬ್ರಹ್ಮಣಸ್ತುಲ್ಯಾ ವೀರಾ ಅಧ್ಯವಸಾಯಿನಃ ।**
**ರಕ್ತಾಂಬರಧರಾಃ ಸರ್ವೇ ರಕ್ತಮಾಲ್ಯಾನುಲೇಪನಾಃ ॥೧೦॥**

---

ವಾಸುದೇವನೆಂದು ತಿಳಿದುಕೊಂಡನು. ಬ್ರಹ್ಮನ ಸ್ತೋತ್ರವನ್ನು ಕೇಳಿ ಆ ಪರಮೇಶ್ವರನು ಸಂತೋಷದಿಂದ ಬ್ರಹ್ಮನನ್ನು ಕುರಿತು ಹೇಳಿದನು.

೬–೭. "ಎಲೈ ಬ್ರಹ್ಮನೇ, ಪುತ್ರಕಾಮನೆಯಿಂದ ಧ್ಯಾನಮಾಡಿದುದರಿಂದ ನಿನಗೆ ಕಾಣಿಸಿಕೊಂಡಿರುವೆನು. ನೀನು ಅತ್ಯಂತ ಭಕ್ತಿಯಿಂದ ವೇದಮಂತ್ರವಾದ 'ವಾಮದೇವಾಯ ನಮೋ' ಇತ್ಯಾದಿ ಮಂತ್ರದಿಂದ ನನ್ನನ್ನು ಸ್ತೋತ್ರಮಾಡಿರುವೆ. ಆದುದರಿಂದ ನೀನು ಧ್ಯಾನರೂಪವಾದ ಬಲವನ್ನು ಹೊಂದಿ ಪ್ರತಿಯೊಂದು ಕಲ್ಪದಲ್ಲಿಯೂ ಪ್ರಯತ್ನಪೂರ್ವಕವಾಗಿ ಸರ್ವಶ್ರೇಷ್ಠನೆಂದೂ, ಲೋಕಕ್ಕೆ ಆಧಾರಭೂತನೆಂದೂ, ಸಾಂಖ್ಯರು ಹೇಳುತ್ತಿರುವ ಈಶ್ವರನಾದ ನನ್ನನ್ನು ವಿಚಾರಮಾಡಿ ತಿಳಿದುಕೊಳ್ಳುವೆ" ಎಂದು ಹೇಳಿದನು.

೮–೯. ಆಮೇಲೆ ಆ ವಾಮದೇವಮೂರ್ತಿಗೆ ಮಹಾಮಹಿಮರೂ ಬ್ರಹ್ಮತೇಜಸುಳ್ಳವರೂ ಆದ, ವಿರಜ, ವಿಬಾಹು, ವಿಶೋಕ, ವಿಶ್ವಭಾವನ, ಎಂಬ ನಾಲ್ವರು ಮಕ್ಕಳು ಹುಟ್ಟಿದರು.

೧೦–೧೧. ಆ ನಾಲ್ವರು ಮಕ್ಕಳೂ ಬ್ರಹ್ಮನಿಗೆ ಸಮಾನರಾದವರು· ಶೂರರು. ಪರಬ್ರಹ್ಮಸಂಬಂಧವಾದ ನಿಶ್ಚಯಜ್ಞಾನವುಳ್ಳವರು. ಕೆಂಪಾದ

ರಕ್ತಕುಂಕುಮಲಿಪ್ತಾಂಗಾ ರಕ್ತಭಸ್ಮಾನುಲೇಪನಾಃ ।
ತತೋ ವರ್ಷಸಹಸ್ರಾಂತೇ ಬ್ರಹ್ಮತ್ವೇಽಧ್ಯವಸಾಯಿನಃ ॥೧೧॥

ಗೃಣಂತಶ್ಚ ಮಹಾತ್ಮಾನೋ ಬ್ರಹ್ಮ ತದ್ವಾಮದೈವಿಕಂ ।
ಅನುಗ್ರಹಾರ್ಥಂ ಲೋಕಾನಾಂ ಶಿಷ್ಯಾಣಾಂ ಹಿತಕಾಮ್ಯಯಾ ॥೧೨॥

ಧರ್ಮೋಪದೇಶಮಖಿಲಂ ಕೃತ್ವಾ ತೇ ಬ್ರಹ್ಮಣಃ ಪ್ರಿಯಾಃ ।
ಪುನರೇವ ಮಹಾದೇವಂ ಪ್ರವಿಷ್ಟಾ ರುದ್ರಮವ್ಯಯಂ ॥೧೩॥

ಯೇಽಪಿ ಚಾನ್ಯೇ ದ್ವಿಜಶ್ರೇಷ್ಠಾ ಯುಂಜಾನಾ ವಾಮಮೀಶ್ವರಂ ।
ಪ್ರವಿಶಂತಿ ಮಹಾದೇವಂ ತದ್ಭಕ್ತಾಸ್ತತ್ಪರಾಯಣಾಃ ॥೧೪॥

ತೇ ಸರ್ವೇ ಪಾಪನಿರ್ಮುಕ್ತಾ ವಿಮಲಾ ಬ್ರಹ್ಮಚಾರಿಣಃ ।
ರುದ್ರಲೋಕಂ ಗಮಿಷ್ಯಂತಿ ಪುನರಾವೃತ್ತಿದುರ್ಲಭಂ ॥೧೫॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ದ್ವಾದಶೋಽಧ್ಯಾಯಃ

---

ವಸ್ತ್ರ, ಗಂಧ, ಹೂಗಳನ್ನು ಧರಿಸಿ ಕೆಂಪಾದ ಭಸ್ಮವನ್ನೂ, ಕುಂಕುಮವನ್ನೂ ಬಳಿದುಕೊಂಡು ಇರುವರು. ಬ್ರಹ್ಮಭಾವಸಿದ್ಧಿಯುಳ್ಳವರು

೧೨–೧೩. ಆ ಮಹಾತ್ಮರು ವಾಮದೇವಾಯ ನಮೋ ಎಂಬ ಮಂತ್ರವನ್ನು ಜಪ ಮಾಡತಕ್ಕವರು. ಲೋಕಾನುಗ್ರಹಾರ್ಥವಾಗಿಯೂ ಶಿಷ್ಯರ ಹಿತಕ್ಕಾಗಿಯೂ, ಸಮಸ್ತ ಧರ್ಮೋಪದೇಶಗಳನ್ನೂ ಮಾಡಿ ಬ್ರಹ್ಮನಿಗೆ ಪ್ರೀತಿಪಾತ್ರರಾಗಿ ಸಾವಿರ ವರ್ಷಗಳ ಮೇಲೆ ನಾಶರಹಿತನಾದ ಮಹಾದೇವನಾದ ರುದ್ರನಲ್ಲೇ ಮತ್ತೆ ಪ್ರವೇಶಮಾಡಿದರು.

೧೪. ಇತರ ಬ್ರಾಹ್ಮಣರು ಯಾರಾದರೂ ವಾಮದೇವಾಯನಮೋ ಎಂಬ ಮಂತ್ರವನ್ನು ಜಪಿಸಿ ಆ ಈಶ್ವರನಲ್ಲಿ ಭಕ್ತಿಯುಳ್ಳವರಾಗಿ ಅವನ ಧ್ಯಾನಾಸಕ್ತರಾದರೆ ಅವರೂ ಮಹಾದೇವನ ದರ್ಶನವನ್ನು ಮಾಡುವರು.

೧೫. ಹಾಗೆ ಮಹಾದೇವನ ದರ್ಶನವನ್ನು ಮಾಡಿದವರೆಲ್ಲರೂ ಪಾಪವನ್ನು ಕಳೆದು ಕೊಂಡು ಪರಿಶುದ್ಧರಾಗಿ ಬ್ರಹ್ಮಜ್ಞಾನ ಉಳ್ಳವರಾಗಿ ಪುನರಾವೃತ್ತಿಯಿಲ್ಲದೆ ರುದ್ರಲೋಕಕ್ಕೆ ಹೋಗುವರು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಹನ್ನೆರಡನೆಯ ಅಧ್ಯಾಯವು ಮುಗಿದುದು.

अथ श्री लिंगमहापुराणे पूर्वभागे
त्रयोदशोऽध्यायः

**त्रयोदशेऽस्मिन्नध्यायॆ विश्वसृक् ध्यानयोगतः ।**
**तत्पुरुषोद्भवः सम्यग्गायत्र्यश्चैव वर्ण्यते ॥**

**॥ सूतवाच ॥**

**एकविंशत्तमः कल्पः पीतवासा इति स्मृतः ।**
**ब्रह्मा यत्र महाभागः पीतवासा बभूव ह ॥ १ ॥**
**ध्यायतः पुत्रकामस्य ब्रह्मणः परमेष्ठिनः ।**
**प्रादुर्भूतो महातेजाः कुमारः पीतवस्त्रधृक् ॥**
**पीतगंधानुलिप्तांगः पीतमाल्यांबरो युवा ।**
**हेमयज्ञोपवीतश्च पीतोष्णीषो महाभुजः॥ ३ ॥**

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಹದಿಮೂರನೆಯ ಅಧ್ಯಾಯವು

ಈ ಹದಿಮೂರನೆಯ ಅಧ್ಯಾಯದಲ್ಲಿ ಬ್ರಹ್ಮನ ಧ್ಯಾನದಿಂದ ತತ್ಪುರುಷನ ಆವಿರ್ಭಾವವೂ, ರುದ್ರಗಾಯತ್ರಿಯ ವರ್ಣನೆಯೂ ಇವನ್ನು ತಿಳಿಸಲಾಗುವುದು.

೧. ಇಪ್ಪತ್ತೊಂದನೆಯ ಕಲ್ಪದಲ್ಲಿ ಬ್ರಹ್ಮನು ಪೀತಾಂಬರವನ್ನು ಧರಿಸಿದ್ದನು. ಆ ಕಲ್ಪಕ್ಕೆ ಪೀತವಾಸ ಕಲ್ಪವೆಂದು ಹೆಸರು. ಪೀತವಾಸ ಎಂದರೆ ಹಳದೀ ಬಣ್ಣದ ವಸ್ತ್ರವು.

೨-೩. ಬ್ರಹ್ಮನು ಪುತ್ರಕಾಮನೆಯಿಂದ ಧ್ಯಾನಮಾಡುತ್ತಿರಲು ಮಹಾತೇಜಸ್ವಿಯೂ, ಹಳದಿ ಬಣ್ಣದ ಗಂಧ, ವಸ್ತ್ರ, ಪುಷ್ಪ ಇವುಗಳನ್ನೂ ಚಿನ್ನದ ಯಜ್ಞೋಪವೀತವನ್ನೂ ಹಳದೀ ಬಣ್ಣದ ಪಾಗನ್ನೂ ಧರಿಸಿ ಮಹಾಬಲಶಾಲಿಯಾದ ಕುಮಾರನು ಅವತರಿಸಿದನು; ಅವನು ಯೌವನವಂತನಾಗಿದ್ದನು.

ತಂ ದೃಷ್ಟ್ವಾ ಧ್ಯಾನಸಂಯುಕ್ತೋ ಬ್ರಹ್ಮಾ ಲೋಕಮಹೇಶ್ವರಂ ।
ಮನಸಾ ಲೋಕಧಾತಾರಂ ಪ್ರಪೇದೇ ಶರಣಂ ವಿಭುಂ ॥ ೪ ॥

ತತೋ ಧ್ಯಾನಗತಸ್ತತ್ರ ಬ್ರಹ್ಮಾ ಮಾಹೇಶ್ವರೀಂ ವರಾಂ ।
ಗಾಂ ವಿಶ್ವರೂಪಾಂ ದದೃಶೇ ಮಹೇಶ್ವರಮುಖಾಚ್ಚ್ಯುತಾಂ ॥ ೫ ॥

ಚತುಷ್ಪದಾಂ ಚತುರ್ವಕ್ತ್ರಾಂ ಚತುರ್ಹಸ್ತಾಂ ಚತುಸ್ಸ್ತನೀಂ ।
ಚತುರ್ನೇತ್ರಾಂ ಚತುಃಶೃಂಗೀಂ ಚತುರ್ದಂಷ್ಟ್ರಾಂ ಚತುರ್ಮುಖೀಂ

ದ್ವಾತ್ರಿಂಶದ್ಗುಣಸಂಯುಕ್ತಾಮೀಶ್ವರೀಂ ಸರ್ವತೋಮುಖೀಂ ।
ಸ ತಾಂ ದೃಷ್ಟ್ವಾ ಮಹಾತೇಜಾ ಮಹಾದೇವೀಂ ಮಹೇಶ್ವರೀಂ ॥

ಪುನರಾಹ ಮಹಾದೇವಃ ಸರ್ವದೇವನಮಸ್ಕೃತಃ ।
ಮತಿಃ ಸ್ಮೃತಿ ರ್ಬುದ್ಧಿರಿತಿ ಗಾಯಮಾನಃ ಪುನಃ ಪುನಃ ॥ ೮ ॥

---

೪. ಬ್ರಹ್ಮನು ಅವನನ್ನು ನೋಡಿ ಲೋಕಕ್ಕೆಲ್ಲಕ್ಕೂ ಒಡೆಯನಾದ ಸಕಲವನ್ನೂ ಸೃಷ್ಟಿಮಾಡುವ ಸರ್ವವ್ಯಾಪಿಯಾದ ಶಿವನನ್ನು ಮನಸ್ಸಿನಲ್ಲಿ ಶರಣು ಹೊಂದಿದನು.

೫–೬. ಆ ಬಳಿಕ ಬ್ರಹ್ಮನು ಧ್ಯಾನಾಸಕ್ತನಾಗಿ ಮಹೇಶ್ವರನ ಮುಖದಿಂದಲೇ ಬಂದ ಆ ಮಹೇಶ್ವರನ ಸಂಬಂಧವಾದ ಶ್ರೇಷ್ಠವಾದ ಒಂದು ಗೋವನ್ನು ಕಂಡನು. ಆ ಗೋವಿಗೆ ನಾಲ್ಕು ಕಾಲುಗಳು, ನಾಲ್ಕು ಬಾಯಿಗಳು, ನಾಲ್ಕುಕೈಗಳು, ನಾಲ್ಕು ಮೊಲೆಗಳು, ನಾಲ್ಕು ಕಣ್ಣುಗಳು, ನಾಲ್ಕು ಕೊಂಬುಗಳು, ನಾಲ್ಕು ಹಲ್ಲುಗಳು, ನಾಲ್ಕು ಮುಖಗಳು ಇದ್ದವು. ಸಾಮುದ್ರಿಕ ಶಾಸ್ತ್ರದಲ್ಲಿ ಹೇಳಿರುವ ಮೂವತ್ತೆರಡು ಗುಣಗಳೂ ಇದ್ದವು. ಅಥವಾ ಹದಿನಾರನೆಯ ಅಧ್ಯಾಯದಲ್ಲಿ ಹೇಳಿರುವ ಯೋಗಾದಿ ಮೂವತ್ತೆರಡು ಗುಣಗಳಿದ್ದವು. ಆ ಗೋವು ಈಶ್ವರನಂತೆ ಸರ್ವತೋ ಮುಖವಾದುದು; ವಿಚಿತ್ರರೂಪವುಳ್ಳದ್ದು.

೭–೮. ಸಮಸ್ತ ದೇವತೆಗಳಿಂದ ನಮಸ್ಕರಿಸಲ್ಪಟ್ಟ ಮಹಾದೇವನು ಆ ಮಹಾಮಹಿಮಳಾದ ಗೋರೂಪಳಾದ ಮಹೇಶ್ವರಿಯನ್ನು ನೋಡಿ ಮತಿ, ಸ್ಮೃತಿ, ಬುದ್ಧಿ ಎಂದು ಮತ್ತೆ ಮತ್ತೆ ಗಾನಮಾಡುತ್ತಾ ಹೇಳಿದನು.

ಏಹ್ಯೇಹೀತಿ ಮಹಾದೇವಿ ಸಾಽತಿಷ್ಠತ್ಪ್ರಾಂಜಲಿರ್ವಿಭುಂ ।
ವಿಶ್ವಮಾವೃತ್ಯ ಯೋಗೇನ ಜಗತ್ಸರ್ವಂ ವಶೀಕುರು ॥ ೯ ॥
ಅಥ ತಾಮಾಹ ದೇವೇಶೋ ರುದ್ರಾಣೀ ತ್ವಂ ಭವಿಷ್ಯಸಿ ।
ಬ್ರಾಹ್ಮಣಾನಾಂ ಹಿತಾರ್ಥಾಯ ಪರಮಾರ್ಥಾ ಭವಿಷ್ಯಸಿ ॥೧೦॥
ತಥೈನಾಂ ಪುತ್ರಕಾಮಸ್ಯ ಧ್ಯಾಯತಃ ಪರಮೇಷ್ಠಿನಃ ।
ಪ್ರದದೌ ದೇವದೇವೇಶಃ ಚತುಷ್ಪಾದಾಂ ಜಗದ್ಗುರುಃ ॥೧೧॥
ತತಸ್ತಾಂ ಧ್ಯಾನಯೋಗೇನ ವಿದಿತ್ವಾ ಪರಮೇಶ್ವರೀಂ ।
ಬ್ರಹ್ಮಾ ಲೋಕಗುರೋಃ ಸೋಽಥ ಪ್ರತಿಪೇದೇ ಮಹೇಶ್ವರೀಂ ॥೧೨॥
ಗಾಯತ್ರೀಂ ತು ತತೋ ರೌದ್ರೀಂ ಧ್ಯಾತ್ವಾ ಬ್ರಹ್ಮಾನುಯಂತ್ರಿತಃ ।
ಇತ್ಯೇತಾಂ ವೈದಿಕೀಂ ವಿದ್ಯಾಂ ರೌದ್ರೀಂ ಗಾಯತ್ರಿಮೀರಿತಾಂ ॥೧೩॥

---

೯–೧೦. ಎಲೈ ಮಹಾದೇವಿಯೇ, ಬಾ, ಬಾ, ಎಂದು ಹೇಳುತ್ತಲು, ಆ ಗೋದೇವಿಯು ಕೈ ಮುಗಿದುಕೊಂಡು ಶಿವನ ಎದುರಿಗೆ ನಿಂತಳು. ಬಳಿಕ ಆ ದೇವನು ದೇವಿಯನ್ನು ಕುರಿತು ನೀನು ರುದ್ರಾಣಿ ಎಂಬ ಹೆಸರನ್ನು ಹೊಂದಿರುವೆ. ಯೋಗ ಶಕ್ತಿಯಿಂದ ಪ್ರಪಂಚವನ್ನೆಲ್ಲವನ್ನೂ ವ್ಯಾಪಿಸಿ ಆ ಪ್ರಪಂಚವನ್ನೆಲ್ಲವನ್ನೂ ನಿನ್ನಧೀನಮಾಡಿಕೋ. ಬ್ರಾಹ್ಮಣರ ಹಿತಕ್ಕೋಸ್ಕರವಾಗಿ ನೀನು ಮೋಕ್ಷಸ್ವರೂಪಳಾಗಿ ಇರುವೆ.

೧೧. ಹೀಗೆಂದು ಹೇಳಿದ ಮೇಲೆ ನಾಲ್ಕು ಪಾದಗಳುಳ್ಳ ಆ ದೇವಿಯನ್ನು ಜಗದ್ಗುರುವಾದ ಶಿವನು ಪುತ್ರಕಾಮನೆಯಿಂದ ಧ್ಯಾನಮಾಡುತ್ತಿರುವ ಬ್ರಹ್ಮನಿಗೆ ಕೊಟ್ಟನು.

೧೨. ಆ ಮೇಲೆ ಬ್ರಹ್ಮನು ಲೋಕಗಳಿಗೆಲ್ಲಕ್ಕೂ ಗುರುವಾದ ಮಹೇಶ್ವರನಿಂದ ಉದ್ಭವಿಸಿದ ಮಹಾದೇವಿಯಿಂದ ರುದ್ರಗಾಯತ್ರಿಯನ್ನು ಪಡೆದು ಧ್ಯಾನಯೋಗದಿಂದ ಆ ರುದ್ರಗಾಯತ್ರಿಯನ್ನು ಸಾಕ್ಷಾತ್ಕರಿಸಿಕೊಂಡನು.

೧೩. ಆ ಮೇಲೆ ಬ್ರಹ್ಮನು ಯೋಗನಿಷ್ಠನಾಗಿ ವೈದಿಕ ವಿದ್ಯೆಯಾದ ರುದ್ರಗಾಯತ್ರಿ ಎನಿಸುವ, ಜ್ಞಾನದಾಯಕವಾದ ತತ್ಪುರುಷಾಯ ಎಂಬ ಮಂತ್ರವನ್ನು ಜಪಿಸಿ ಧ್ಯಾನಮಾಡಿದನು.

ಜಪಿತ್ವಾ ತು ಮಹಾದೇವೀಂ ಬ್ರಹ್ಮಾ ಲೋಕನಮಸ್ಕೃತಾಂ ।
ಪ್ರಪನ್ನಸ್ತು ಮಹಾದೇವಂ ಧ್ಯಾನಯುಕ್ತೇನ ಚೇತಸಾ ॥೧೪॥

ತತಸ್ತಸ್ಯ ಮಹಾದೇವೋ ದಿವ್ಯಂಯೋಗಂ ಬಹುಶ್ರುತಂ ।
ಐಶ್ವರ್ಯಂ ಜ್ಞಾನಸಂಪತ್ತಿಂ ವೈರಾಗ್ಯಂ ಚ ದದೌ ಪ್ರಭುಃ ॥೧೫॥

ತತೋಽಸ್ಯ ಪಾರ್ಶ್ವತೋ ದಿವ್ಯಾಃ ಪ್ರಾದುರ್ಭೂತಾಃ ಕುಮಾರಕಾಃ ।
ಪೀತಮಾಲ್ಯಾಂಬರಧರಾಃ ಪೀತ ಸ್ರಗನುಲೇಪನಾಃ ॥೧೬॥

ಪೀತಾಭೋಽಶ್ಲೇಷಶಿರಸಃ ಪೀತಾಸ್ಯಾಃ ಪೀತಮೂರ್ಧಜಾಃ ।
ತತೋ ವರ್ಷಸಹಸ್ರಾಂತ ಉಷಿತ್ವಾ ವಿಮಲೌಜಸಃ ॥೧೭॥

ಯೋಗಾತ್ಮಾನಸ್ತಪೋಹ್ಲಾದಾಃ ಬ್ರಾಹ್ಮಣಾನಾಂ ಹಿತೈಷಿಣಃ ।
ಧರ್ಮಯೋಗಬಲೋಪೇತಾ ಮುನೀನಾಂ ದೀರ್ಘಸತ್ರಿಣಾಂ ॥

---

೧೪. ಬ್ರಹ್ಮನು ಸಮಸ್ತರಿಂದಲೂ ನಮಸ್ಕಾರ ಮಾಡಿಸಿಕೊಳ್ಳುವ ರುದ್ರಗಾಯತ್ರೀ ಮಂತ್ರವನ್ನು ಜಪಿಸಿ ಏಕಾಗ್ರ ಚಿತ್ತದಿಂದ ಮಹಾದೇವನನ್ನು ಶರಣು ಹೊಂದಿದನು.

೧೫. ಆ ಬಳಿಕ ಮಹಾದೇವನು ಬ್ರಹ್ಮನಿಗೆ ದಿವ್ಯವಾದ ಯೋಗಶಕ್ತಿಯನ್ನೂ, ಅನೇಕ ಶಾಸ್ತ್ರಜ್ಞಾನವನ್ನೂ, ಸಮಸ್ತ ಸಂಪತ್ತನ್ನೂ, ವೈರಾಗ್ಯವನ್ನೂ, ಬ್ರಹ್ಮಜ್ಞಾನವನ್ನೂ ಅನುಗ್ರಹಿಸಿದನು.

೧೬. ಆ ಮೇಲೆ ಆ ಮಹಾದೇವನ ಪಾರ್ಶ್ವಗಳಿಂದ ಹಳದಿಯ ಬಣ್ಣದ ವಸ್ತ್ರ, ಗಂಧ, ಹೂ, ಮತ್ತು ಪಾಗುಗಳನ್ನು ಧರಿಸಿದ ಕೂದಲುಗಳು ಮುಖವೂ ಹಳದಿಯ ಬಣ್ಣವಾಗಿರುವ ದಿವ್ಯ ಕುಮಾರರು ಹುಟ್ಟಿದರು.

೧೭-೧೮. ಆ ಕುಮಾರರು ಆರುಸಾವಿರ ವರ್ಷಗಳ ವರೆಗೆ ಯೋಗಾಭ್ಯಾಸವನ್ನೂ ತಪಸ್ಸನ್ನೂ ಮಾಡುತ್ತಾ ಬ್ರಾಹ್ಮಣರಿಗೆ ಹಿತವನ್ನು ಕೋರುತ್ತಾ ಉತ್ತಮವಾದ ತೇಜಸ್ಸುಳ್ಳವರಾಗಿ ದೊಡ್ಡ ದೊಡ್ಡ ಯಾಗಗಳನ್ನು ಮಾಡಿದ ಋಷಿಗಳಿಗೆ ಶ್ರೇಷ್ಠವಾದ ಯೋಗವಿದ್ಯೆಯನ್ನು ಉಪದೇಶ ಮಾಡಿ ಕೊನೆಗೆ ಮಹೇಶ್ವರನಲ್ಲೇ ಐಕ್ಯರಾದರು.

ಉಪದಿಶ್ಯ ಮಹಾಯೋಗಂ ಪ್ರವಿಷ್ಟಾಸ್ತೇ ಮಹೇಶ್ವರಂ ।
ಏವಮೇತೇನ ವಿಧಿನಾ ಯೇ ಪ್ರಸನ್ನಾ ಮಹೇಶ್ವರಂ ॥೧೯॥
ಅನ್ಯೇಽಪಿ ನಿಯತಾತ್ಮಾನೋ ಧ್ಯಾನಯುಕ್ತಾ ಜಿತೇಂದ್ರಿಯಾಃ ।
ತೇ ಸರ್ವೇ ಪಾಪಮುತ್ಸೃಜ್ಯ ವಿಮಲಾ ಬ್ರಹ್ಮವರ್ಚಸಃ ॥೨೦॥
ಪ್ರವಿಶಂತಿ ಮಹಾದೇವಂ ರುದ್ರಂ ತೇ ತ್ವಪುನರ್ಭವಾಃ

ಇತಿ ಶ್ರೀ ಲಿಂಗಮಹಾಪುರಾಣೆ ಪೂರ್ವಭಾಗೇ ತ್ರಯೋದಶೋಽಧ್ಯಾಯಃ

---

೧೯–೨೦. ಹೀಗೆಯೇ ಯೋಗಮಾರ್ಗವನ್ನನುಸರಿಸಿ ಇತರರು ಯಾರಾದರೂ ಜಿತೇಂದ್ರಿಯರಾಗಿ ಧ್ಯಾನದಿಂದ ಏಕಾಗ್ರ ಚಿತ್ತರಾಗಿ ಮಹೇಶ್ವರನನ್ನು ಶರಣು ಹೊಂದಿದರೆ ಅವರೆಲ್ಲರೂ ಪಾಪವನ್ನು ಕಳೆದು ಕೊಂಡು ಪರಿಶುದ್ಧರೂ ಬ್ರಹ್ಮತೇಜಸ್ಸುಳ್ಳವರೂ ಆಗಿ ಪುನರ್ಜನ್ಮವಿಲ್ಲದವ ರಾಗಿ ಶಿವನಲ್ಲಿ ಐಕ್ಯವನ್ನು ಹೊಂದುವರು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಹದಿಮೂರನೆಯ ಅಧ್ಯಾಯವು ಮುಗಿದುದು.



## ಅಥ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ
## ಚತುರ್ದಶೋಽಧ್ಯಾಯಃ

**ಚತುರ್ದಶೇಽಸ್ಮಿನ್ನಧ್ಯಾಯೇ ವಿಧೇಃಪ್ರಿಯಚಿಕೀರ್ಷಯಾ ।**
**ಅಘೋರಸ್ಯೋದ್ಭವಃ ಪುಣ್ಯೋ ವರ್ಣ್ಯತೇ ಪಾಪಪಾವಕಃ ॥**

**॥ ಸೂತ ಉವಾಚ ॥**

**ತತಸ್ತಸ್ಮಿನ್ಗತೇ ಕಲ್ಪೇ ಪೀತವರ್ಣೇ ಸ್ವಯಂಭುವಃ ।**
**ಪುನರನ್ಯಃ ಪ್ರವೃತ್ತಸ್ತು ಕಲ್ಪೋ ನಾಮ್ನಾಸಿತಸ್ತು ಸಃ ॥ ೧ ॥**
**ಏಕಾರ್ಣವೇ ತದಾವೃತ್ತೇ ದಿವ್ಯೇ ವರ್ಷಸಹಸ್ರಕೇ ।**
**ಸ್ರಷ್ಟುಕಾಮಃ ಪ್ರಜಾ ಬ್ರಹ್ಮಾ ಚಿಂತಯಾಮಾಸ ದುಃಖಿತಃ ॥ ೨ ॥**
**ತಸ್ಯ ಚಿಂತಯಮಾನಸ್ಯ ಪುತ್ರಕಾಮಸ್ಯ ವೈ ಪ್ರಭೋಃ ।**
**ಕೃಷ್ಣಃ ಸಮಭವದ್ವರ್ಣೋ ಧ್ಯಾಯತಃ ಪರಮೇಷ್ಠಿನಃ ॥ ೩ ॥**

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಹದಿನಾಲ್ಕನೆಯ ಅಧ್ಯಾಯವು

ಈ ಹದಿನಾಲ್ಕನೆಯ ಅಧ್ಯಾಯದಲ್ಲಿ ಬ್ರಹ್ಮನಿಗೆ ಹಿತವನ್ನು ಮಾಡಬೇಕೆಂಬ ಅಪೇಕ್ಷೆಯಿಂದ ಪಾಪವನ್ನು ನಾಶಮಾಡುವ ಪುಣ್ಯಕರನಾದ ಅಘೋರನ ಉತ್ಪತ್ತಿಯನ್ನು ಹೇಳಲಾಗುವುದು.

೧. ಸೂತನು ಹೇಳಿದನು: ಬ್ರಹ್ಮನ ಪೀತವರ್ಣವೆಂಬ ಕಲ್ಪವು ಕಳೆದಮೇಲೆ ಮತ್ತೊಂದು ಅಸಿತವೆಂಬ ಹೆಸರಿನ ಕಲ್ಪವು ಪ್ರಾರಂಭವಾಯಿತು.

೨. ದೇವಮಾನದ ಒಂದುಸಾವಿರ ವರ್ಷಗಳವರೆಗೆ ಸಕಲ ಪ್ರಪಂಚವೂ ಸಮುದ್ರದಲ್ಲಿ ಐಕ್ಯವಾಗಿರಲು ಹಾಗೆ ಬಹು ಕಾಲವು ಕಳೆದ ಮೇಲೆ ಬ್ರಹ್ಮನು ಜೀವರುಗಳ ಸೃಷ್ಟಿಯನ್ನು ಹೇಗೆ ಮಾಡಬೇಕೆಂಬ ಆತಂಕ ವಿಷಾದಗಳ ಆಲೋಚನೆಯಿಂದ ಕೂಡಿದನು.

೩. ಹಾಗೆ ಚಿಂತಿಸುತ್ತಿರುವ ಪುತ್ರಕಾಮನೆಯಿಂದ ಕೂಡಿದ ಬ್ರಹ್ಮನು ಧ್ಯಾನಿಸುತ್ತಿರಲಾಗಿ ಅವನ ಮುಂದೆ ಕೃಷ್ಣವರ್ಣದ ಪುರುಷನು ಕಾಣಿಸಿಕೊಂಡನು.

ಅಥಾಪಶ್ಯನ್ಮಹಾತೇಜಾಃ ಪ್ರಾದುರ್ಭೂತಂ ಕುಮಾರಕಂ ।
ಕೃಷ್ಣವರ್ಣಂ ಮಹಾವೀರ್ಯಂ ದೀಪ್ಯಮಾನಂ ಸ್ವತೇಜಸಾ ॥ ೪ ॥
ಕೃಷ್ಣಾಂಬರಧರೋಷ್ಣೀಷಂ ಕೃಷ್ಣಯಜ್ಞೋಪವೀತಿನಂ ।
ಕೃಷ್ಣೇನ ಮೌಳಿನಾ ಯುಕ್ತಂ ಕೃಷ್ಣಸ್ರಗನುಲೇಪನಂ ॥ ೫ ॥
ಸ ತಂ ದೃಷ್ಟ್ವಾ ಮಹಾತ್ಮಾನಮಘೋರಂ ಘೋರವಿಕ್ರಮಂ ।
ವವಂದೇ ದೇವದೇವೇಶಮದ್ಭುತಂ ಕೃಷ್ಣಪಿಂಗಳಂ ॥ ೬ ॥
ಪ್ರಾಣಾಯಾಮಪರಃ ಶ್ರೀಮಾನ್ ಹೃದಿ ಕೃತ್ವಾ ಮಹೇಶ್ವರಂ ।
ಮನಸಾ ಧ್ಯಾನಯುಕ್ತೇನ ಪ್ರಸನ್ನಸ್ತು ತಮೀಶ್ವರಂ ॥ ೭ ॥
ಅಘೋರಂ ತು ತತೋ ಬ್ರಹ್ಮಾ ಬ್ರಹ್ಮರೂಪಂ ವ್ಯಚಿಂತಯತ್ ।
ತಥಾ ವೈ ಧ್ಯಾಯಮಾನಸ್ಯ ಬ್ರಹ್ಮಣಃ ಪರಮೇಷ್ಠಿನಃ ॥ ೮ ॥
ಪ್ರದದೌ ದರ್ಶನಂ ದೇವೋ ಹ್ಯಘೋರೋ ಘೋರವಿಕ್ರಮಃ ।

---

೪-೫. ಆ ಮೇಲೆ ಮಹಾತೇಜಸ್ಸುಳ್ಳ ಬ್ರಹ್ಮನು ಕಪ್ಪುಬಣ್ಣವುಳ್ಳವನೂ ಮಹಾಪರಾಕ್ರಮಿಯೂ ತನ್ನ ತೇಜಸ್ಸಿನಿಂದ ಪ್ರಕಾಶಿಸುತ್ತಿರುವವನೂ ಕಪ್ಪುಬಣ್ಣದ ವಸ್ತ್ರ, ಪಾಗು, ಯಜ್ಞೋಪವೀತ, ಗಂಧ ಇವುಗಳನ್ನು ಧರಿಸಿದವನೂ ಆಗಿರುವ ಆ ಕುಮಾರನನ್ನು ನೋಡಿದನು.

೬. ಆ ಬ್ರಹ್ಮನು ಮಹಾಮಹಿಮನೂ, ಶತ್ರುಗಳಿಗೆ ಭಯಂಕರವಾದ ಪರಾಕ್ರಮವುಳ್ಳವನೂ, ಆಶ್ಚರ್ಯಕರವಾದ ರೂಪವುಳ್ಳವನೂ, ಕೃಷ್ಣಪಿಂಗಳನೂ, ದೇವತೆಗಳಿಗೆಲ್ಲರಿಗೂ ದೇವನೂ ಆದ ಆ ಅಘೋರಮೂರ್ತಿಯನ್ನು ನೋಡಿ ನಮಸ್ಕಾರಮಾಡಿದನು

೭. ಆಮೇಲೆ ತೇಜಸ್ವಿಯಾದ ಆ ಬ್ರಹ್ಮನು ಪ್ರಾಣಾಯಾಮವನ್ನು ಮಾಡಿ ಮಹೇಶ್ವರನನ್ನು ಧ್ಯಾನಿಸುತ್ತಾ, ಭಕ್ತಿಯಿಂದ ಅವನನ್ನು ಶರಣು ಹೊಂದಿ, ಆ ಅಘೋರಮೂರ್ತಿಯನ್ನು ಪರಬ್ರಹ್ಮಸ್ವರೂಪವೆಂಬುದಾಗಿ ಧ್ಯಾನಮಾಡಿದನು.

೮. ಹಾಗೆ ಧ್ಯಾನಮಾಡುತ್ತಿದ್ದ, ಮಹಾಯಜ್ಞಗಳ ಫಲವಾಗಿ ದೊಡ್ಡ ಪದವಿಯುಳ್ಳ ಆ ಬ್ರಹ್ಮನಿಗೆ ಮಹಾಪರಾಕ್ರಮವುಳ್ಳ ಅಘೋರಮೂರ್ತಿಯು ದರ್ಶನವನ್ನು ಕೊಟ್ಟನು.

ಅಥಾಽಸ್ಯ ಪಾರ್ಶ್ವತಃ ಕೃಷ್ಣಾಃ ಕೃಷ್ಣಸ್ರಗನುಲೇಪನಾಃ ॥ ೯ ॥
ಚತ್ವಾರಸ್ತು ಮಹಾತ್ಮಾನಃ ಸಂಬಭೂವುಃ ಕುಮಾರಕಾಃ ।
ಕೃಷ್ಣಃ ಕೃಷ್ಣಶಿಖಶ್ಚೈವ ಕೃಷ್ಣಾಸ್ಯಃ ಕೃಷ್ಣವಸ್ತ್ರಧೃಕ್ ॥೧೦॥
ತತೋ ವರ್ಷಸಹಸ್ರಂ ತು ಯೋಗತಃ ಪರಮೇಶ್ವರಂ ।
ಉಪಾಸಿತ್ವಾ ಮಹಾಯೋಗಂ ಶಿಷ್ಯೇಭ್ಯಃ ಪ್ರದದುಃ ಪುನಃ ॥೧೧॥
ಯೋಗೇನ ಯೋಗಸಂಪನ್ನಾಃ ಪ್ರವಿಶ್ಯ ಮನಸಾ ಶಿವಂ ।
ಅಮಲಂ ನಿರ್ಗುಣಂ ಸ್ಥಾನಂ ಪ್ರವಿಷ್ಟಾ ವಿಶ್ವಮೀಶ್ವರಂ ॥೧೨॥
ಏವಮೇತೇನ ಯೋಗೇನ ಯೇಽಪಿ ಚಾನ್ಯೇ ಮನೀಷಿಣಃ ।
ಚಿಂತಯಂತಿ ಮಹಾದೇವಂ ಗಂತಾರೋ ರುದ್ರಮವ್ಯಯಂ ॥೧೩॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಚತುರ್ದಶೋಽಧ್ಯಾಯಃ

---

೯–೧೦. ಆ ಮೇಲೆ ಆ ಅಘೋರ ಮೂರ್ತಿಯ ಪಕ್ಕದಿಂದ ಕಪ್ಪು ಬಣ್ಣದ ದೇಹವುಳ್ಳ, ಕರಿಯ ಹೂವಿನಮಾಲೆಯೂ ಗಂಧಲೇಪವೂ ಉಳ್ಳ, ಮಹಾನುಭಾವರಾದ ನಾಲ್ಕುಜನ ಕುಮಾರಕರು ಕೃಷ್ಣ, ಕೃಷ್ಣ ಶಿಖ, ಕೃಷ್ಣಾಸ್ಯ, ಕೃಷ್ಣವಸ್ತ್ರಧಾರಿ, ಎಂಬುವರು ಉದ್ಭವಿಸಿದರು.

೧೧. ಅನಂತರದಲ್ಲಿ ಆ ಕುಮಾರಕರು ಒಂದು ಸಾವಿರ ವರ್ಷಗಳ ವರೆಗೆ ತಮ್ಮ ಚಿತ್ತವೃತ್ತಿಯನ್ನು ತಡೆದು ಪರಶಿವನನ್ನು ಉಪಾಸನೆ ಮಾಡಿ ಪಡೆದ ಯೋಗದ ಕ್ರಮವನ್ನು ತಮ್ಮ ಶಿಷ್ಯರಿಗೆ ಉಪದೇಶ ಮಾಡಿದರು.

೧೨–೧೩. ಈ ರೀತಿಯಲ್ಲಿ ಆ ಕುಮಾರಕರು ಯೋಗಾಭ್ಯಾಸದಿಂದ ಯೋಗ ಸಿದ್ಧಿಯನ್ನು ಪಡೆದವರಾಗಿ, ಏಕಾಗ್ರವಾದ ಮನಸ್ಸಿನಿಂದ ಉಪಾಸ್ಯನಾದ ಆ ಪರಶಿವನಲ್ಲಿ ಲೀನರಾಗಿ, ದೋಷಗಳಿಲ್ಲದ, ಗುಣಗಳ ಲೇಪವೂ ಇಲ್ಲದ, ವಿಶ್ವವ್ಯಾಪಿಯೂ, ಪ್ರಪಂಚ ಸ್ವರೂಪನೂ ಆದ, ಎಲ್ಲಕ್ಕೂ ಆಶ್ರಯನಾದ ಪರಶಿವನನ್ನು, ತ್ರಿಪುಟಿಯು ಅಳಿದು ಹೋಗಲು, ಅಭೇದೋಪಸನೆಯಿಂದ ಪಡೆದು ಒಂದುಗೂಡಿದರು. ಇದೇ ರೀತಿಯಲ್ಲಿ ಇತರ ಉಪಾಸಕರೂ ಈ ಯೋಗಾಭ್ಯಾಸದಿಂದ ಜ್ಞಾನವುಳ್ಳವರಾಗಿ ಪರಮೇಶ್ವರನನ್ನು ಉಪಾಸನೆ ಮಾಡಿದರೆ. ಅಂಥವರೂ ನಾಶರಹಿತರಾಗಿ ನಿತ್ಯನಾಗಿರುವ ರುದ್ರನನ್ನು ಪಡೆದು ಅಭೇದವನ್ನು ಸಾಕ್ಷಾತ್ಕಾರದಿಂದ ಅನುಭವಿಸುವರು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಹದಿನಾಲ್ಕನೆಯ ಅಧ್ಯಾಯವು ಮುಗಿದುದು.

ಅಥ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ಪಂಚದಶೋಽಧ್ಯಾಯಃ

॥ ಸೂತ ಉವಾಚ ॥

ತತಸ್ತಸ್ಮಿನ್ಗತೇ ಕಲ್ಪೇ ಕೃಷ್ಣವರ್ಣೇ ಭಯಾನಕೇ ।
ತುಷ್ಟಾವ ದೇವದೇವೇಶಂ ಬ್ರಹ್ಮಾ ತಂ ಬ್ರಹ್ಮರೂಪಿಣಂ ॥ ೧ ॥
ಅನುಗೃಹ್ಯ ತತಸ್ತುಷ್ಟೋ ಬ್ರಹ್ಮಾಣಮಭವದ್ಧರಃ ।
ಅನೇನೈವ ತು ರೂಪೇಣ ಸಂಹರಾಮಿ ನ ಸಂಶಯಃ ॥ ೨ ॥
ಬ್ರಹ್ಮಹತ್ಯಾದಿಕಾನ್ಘೋರಾಂಸ್ತಥಾಽನ್ಯಾನಪಿ ಪಾತಕಾನ್ ।
ಹೀನಾಂಶ್ಚೈವ ಮಹಾಭಾಗ ತಥೈವ ವಿವಿಧಾನ್ಯಪಿ ॥ ೩ ॥
ಉಪಪಾತಕಮಪ್ಯೇವಂ ತಥಾ ಪಾಪಾನಿ ಸುವ್ರತ ।
ಮಾನಸಾನಿ ಸುತೀಕ್ಷ್ಣಾನಿ ವಾಚಿಕಾನಿ ಪಿತಾಮಹ ॥ ೪ ॥
ಕಾಯಿಕಾನಿ ಸುಮಿಶ್ರಾಣಿ ತಥಾ ಪ್ರಾಸಂಗಿಕಾನಿ ಚ ।
ಬುದ್ಧಿಪೂರ್ವಂ ಕೃತಾನ್ಯೇವ ಸಹಜಾಗಂತುಕಾನಿ ಚ ॥ ೫ ॥
ಮಾತೃದೇಹೋತ್ಥಿತಾನ್ಯೇವಂ ಪಿತೃದೇಹೇ ಚ ಪಾತಕಂ ।
ಸಂಹರಾಮಿ ನ ಸಂದೇಹಃ ಸರ್ವಂ ಪಾತಕಜಂ ವಿಭೋ ॥ ೬ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಹದಿನೈದನೆಯ ಅಧ್ಯಾಯ

೧. ಸೂತನು ಹೇಳಿದನು: ಆಮೇಲೆ ಭಯಂಕರವಾದ ಕೃಷ್ಣವರ್ಣವೆಂಬ ಕಲ್ಪವು ಕಳೆಯುತ್ತಿರಲಾಗಿ, ಬ್ರಹ್ಮನು ಅಘೋರಮಂತ್ರಸ್ವರೂಪನಾದ ದೇವತೆಗಳಿಗೆಲ್ಲರಿಗೂ ದೇವನಾದ ಶಿವನನ್ನು ಸ್ತೋತ್ರ ಮಾಡಿದನು.

೨–೬. ಸ್ತೋತ್ರಮಾಡಿಸಿಕೊಂಡ ಶಿವನು ಸಂತೋಷದಿಂದ ಬ್ರಹ್ಮನನ್ನು ಕುರಿತು, ನಾನು ಈ ಅಘೋರ ರೂಪದಿಂದ, ಬ್ರಹ್ಮಹತ್ಯೆಯೇ ಮುಂತಾದ ಮಹಾಪಾಪಗಳನ್ನೂ, ಬಗೆಬಗೆಯಾದ ಅಲ್ಪ ಪಾಪಗಳನ್ನೂ, ಉಪಪಾಪಗಳನ್ನೂ, ಮನೋವಾಕ್ಕಾಯಗಳಿಂದುಂಟಾದ ಪಾಪಗಳನ್ನೂ ಬುದ್ಧಿ ಪೂರ್ವಕವಾಗಿ ಮಾಡಿದಪಾಪಗಳನ್ನೂ, ಸಹಜವೂ, ಆಗಂತುಕವೂ, ತಾಯಿಯ, ಮತ್ತೂ ತಂದೆಯ ದೇಹಗಳ ಸಂಬಂಧದಿಂದ ಉತ್ಪತ್ತಿಯಾದವುಗಳೂ, ಆದ ಸಮಸ್ತ ಪಾಪಗಳನ್ನೂ, ಆ ಪಾಪಗಳಿಂದುಂಟಾದ ದುಃಖಗಳನ್ನೂ ನಾಶಮಾಡುವೆನು. ಈ ವಿಷಯದಲ್ಲಿ ಸಂದೇಹವಿಲ್ಲ.

**ಲಕ್ಷಂ ಜಪ್ತ್ವಾ ಹ್ಯಘೋರೇಭ್ಯೋ ಬ್ರಹ್ಮಹಾ ಮುಚ್ಯತೇ ಪ್ರಭೋ।**
**ತದರ್ಧಂ ವಾಚಿಕೇ ವತ್ಸ ತದರ್ಧಂ ಮಾನಸೇ ಪುನಃ ॥ ೭ ॥**

**ಚತುರ್ಗುಣಂ ಬುದ್ಧಿಪೂರ್ವೇ ಕ್ರೋಧಾದಷ್ಟಗುಣಂ ಸ್ಮೃತಂ ।**
**ವೀರಹಾ ಲಕ್ಷಮಾತ್ರೇಣ ಭ್ರೂಣಹಾ ಕೋಟಿಮಭ್ಯಸೇತ್ ॥ ೮ ॥**

**ಮಾತೃಹಾ ನಿಯುತಂ ಜಪ್ತ್ವಾ ಶುದ್ಧ್ಯತೇ ನಾತ್ರ ಸಂಶಯಃ ।**
**ಗೋಘ್ನಶ್ಚೈವ ಕೃತಘ್ನಶ್ಚ ಸ್ತ್ರೀಘ್ನಃ ಪಾಪಯುತೋ ನರಃ ॥ ೯ ॥**

**ಅಯುತಾ ಘೋರಮಭ್ಯಸ್ಯ ಮುಚ್ಯತೇ ನಾತ್ರ ಸಂಶಯಃ ।**
**ಸುರಾಪೋ ಲಕ್ಷಮಾತ್ರೇಣ ಬುದ್ಧ್ಯಾಽ ಬುದ್ಧ್ಯಾಽಪಿ ವೈ ಪ್ರಭೋ॥**

**ಮುಚ್ಯತೇ ನಾತ್ರ ಸಂದೇಹಸ್ತದರ್ಧೇನ ಚ ವಾರುಣೀಂ ।**
**ಅಸ್ನಾತಾಶೀ ಸಹಸ್ರೇಣ ಅಜಪೀ ಚ ತಥಾ ದ್ವಿಜಃ ॥೧೧॥**

---

೭. ಕಾರ್ಯರೂಪದಲ್ಲಿ ಬ್ರಹ್ಮಹತ್ಯ ಮಾಡಿದವನು, ಅಘೋರಮಂತ್ರವನ್ನು ಒಂದು ಲಕ್ಷಬಾರಿ ಜಪಮಾಡಿದರೆ ಆ ಪಾಪವು ಬಿಡುಗಡೆಯಾಗುವುದು. ಇದೇ ಪಾಪವನ್ನು ಮಾತಿನಿಂದ ಮಾಡಿದರೆ, ಅರ್ಧಲಕ್ಷ ಜಪದಿಂದಲೂ, ಮನಸ್ಸಿನಿಂದ ಮಾಡಿದರೆ ಕಾಲು ಲಕ್ಷ ಜಪದಿಂದಲೂ, ಪರಿಶುದ್ಧನಾಗುವನು.

೮. ಮನಃ ಪೂರ್ವಕವಾಗಿ ಮಾಡಿದ ಪಾಪಕ್ಕೆ ನಾಲ್ಕು ಲಕ್ಷ ಜಪವನ್ನೂ, ಕೋಪದಿಂದ ಮಾಡಿದ ಬ್ರಹ್ಮಹತ್ಯೆಗೆ ಎಂಟು ಲಕ್ಷ ಜಪವನ್ನೂ, ವೀರನಾಶಕ್ಕೆ ಲಕ್ಷವನ್ನೂ, ಭ್ರೂಣಹತ್ಯೆಗೆ ಕೋಟಿಜಪವನ್ನೂ ಮಾಡಬೇಕು.

೯–೧೦. ತಾಯಿಯನ್ನು ಕೊಂದವನೂ, ಗೋವನ್ನು ಕೊಂದವನೂ, ಉಪಕಾರಮಾಡಿದವನಿಗೆ ಅಪಕಾರ ಮಾಡಿದವನೂ, ಹೆಂಗಸನ್ನು ಕೊಂದವನೂ, ಮದ್ಯಪಾನ ಮಾಡಿದವನೂ, ಅವರವರ ಪಾಪನಾಶಕ್ಕಾಗಿ, ಈ ಅಘೋರಮಂತ್ರವನ್ನು, ಲಕ್ಷಬಾರಿ ಜಪಮಾಡಿದರೆ ಆ ಪಾಪವು ನಾಶವಾಗುವುದರಲ್ಲಿ ಸಂದೇಹವಿಲ್ಲ.

೧೧. ವಾರುಣೀ ಎಂಬ ಮಾದಕಮದ್ಯವನ್ನು ಕುಡಿದವನು ಅರ್ಧಲಕ್ಷಜಪವನ್ನೂ, ಸ್ನಾನ, ಜಪ, ಹೋಮ, ದಾನ, ಇವುಗಳನ್ನು ಮಾಡದೆ ಊಟಮಾಡಿದವನು ಪಾಪ ಪರಿಹಾರಕ್ಕಾಗಿ, ಸಾವಿರಜಪವನ್ನೂ ಮಾಡಿ

**ಅಹುತಾಶೀ ಸಹಸ್ರೇಣ ಅದಾತಾ ಚ ವಿಶುದ್ಧ್ಯತಿ ।**
**ಬ್ರಾಹ್ಮಣಸ್ವಾಪಹರ್ತಾ ಚ ಸ್ವರ್ಣಸ್ತೇಯೀ ನರಾಧಮಃ ॥೧೨॥**

**ನಿಯುತಂ ಮಾನಸಂ ಜಪ್ತ್ವಾ ಮುಚ್ಯತೇ ನಾತ್ರ ಸಂಶಯಃ ।**
**ಗುರುತಲ್ಪಗತೋ ವಾಽಪಿ ಮಾತೃಘ್ನೋ ವಾ ನರಾಧಮಃ ॥೧೩॥**

**ಬ್ರಹ್ಮಘ್ನಶ್ಚ ಜಪೇದೇವಂ ಮಾನಸಂ ವೈ ಪಿತಾಮಹ ।**
**ಸಂಪರ್ಕಾತ್ಪಾಪಿನಾಂ ಪಾಪಂ ತತ್ಸಮಂ ಪರಿಭಾಷಿತಂ ॥೧೪॥**

**ತಥಾಽಪ್ಯಯುತಮಾತ್ರೇಣ ಪಾತಕಾದ್ವೈ ಪ್ರಮುಚ್ಯತೇ ।**
**ಸಂಸರ್ಗಾತ್ಪಾತಕೀ ಲಕ್ಷಂ ಜಪೇದ್ವೈ ಮಾನಸಂ ಧಿಯಾ ॥೧೫॥**

**ಉಪಾಂಶು ಯಚ್ಚತುರ್ಧಾ ವೈ ವಾಚಿಕಂ ಚಾಷ್ಟಧಾ ಜಪೇತ್ ।**
**ಪಾತಕಾದರ್ಧಮೇವ ಸ್ಯಾದುಪಪಾತಕಿನಾಂ ಸ್ಮೃತಂ ॥೧೬॥**

---

ಶುದ್ಧನಾಗುವನು. ಇಲ್ಲಿ ದಾನವೆಂದರೆ, ದೇವತೆ, ಅತಿಥಿ ಬ್ರಾಹ್ಮಣರುಗಳಿಗೆ ಅನ್ನ ದಾನವೆಂದು ಅಭಿಪ್ರಾಯವು.

೧೨. ಬ್ರಾಹ್ಮಣನ ವಸ್ತುವನ್ನೂ, ಚಿನ್ನವನ್ನೂ ಕದ್ದ ನೀಚಮನುಷ್ಯನು ಮನಸ್ಸಿನಲ್ಲಿಯೇ ಒಂದು ಲಕ್ಷ ಅಘೋರ ಮಂತ್ರವನ್ನು ಜಪಿಸಿ ಆ ಪಾಪದಿಂದ ಬಿಡುಗಡೆ ಹೊಂದುವನು.

೧೩–೧೪. ಗುರುಪತ್ನಿಯ ಸಂಗವನ್ನು ಮಾಡಿದವನೂ, ತಾಯಿಯನ್ನು ಕೊಂದವನೂ, ಬ್ರಾಹ್ಮಣನನ್ನು ಕೊಂದವನೂ, ಆದ ನೀಚ ಮನುಷ್ಯನೂ ಇದೇ ರೀತಿಯಾಗಿ, ಮನಸ್ಸಿನಲ್ಲಿಯೇ ಒಂದು ಲಕ್ಷ ಮಂತ್ರ ಜಪವನ್ನು ಮಾಡಬೇಕು. ಎಲೈ ಬ್ರಹ್ಮನೇ, ಪಾಪಕಾರ್ಯವನ್ನು ಮಾಡಿದವರ ಸಹವಾಸದಿಂದ ಅವರಿಗೂ, ಅದಕ್ಕೆ ಸಮವಾದ ಪಾಪವೇ ಬರುವುದು.

೧೫. ಹಾಗಾದರೂ ಹತ್ತುಸಾವಿರ ಮಂತ್ರಜಪಮಾಡಿದರೆ, ಆ ಪಾಪವು ಬಿಡುಗಡೆ ಯಾಗುವುದು. ಮನಃಪೂರ್ವಕವಾಗಿ ಆ ದುಷ್ಟರ ಸಹವಾಸವನ್ನು ಮಾಡಿದರೆ ಮನಸ್ಸಿನಲ್ಲಿಯೇ ಒಂದು ಲಕ್ಷ ಜಪವನ್ನೂ, ಮೆಲ್ಲಗೆ ಮಂತ್ರೋಚ್ಚಾರಣೆ ಮಾಡಿದರೆ ನಾಲ್ಕರಷ್ಟನ್ನೂ ಗಟ್ಟಿಯಾಗಿ ಉಚ್ಚರಿಸಿದರೆ ಎಂಟರಷ್ಟನ್ನೂ ಜಪಮಾಡಬೇಕು.

೧೬. ಮಹಾಪಾಪಗಳಿಗೆ ಎಷ್ಟು ಸಂಖ್ಯೆಯ ಜಪವನ್ನು ಹೇಳಿದೆಯೋ ಅದರ ಅರ್ಧಸಂಖ್ಯೆಯು ಉಪಪಾತಕಗಳಿಗೂ, ಇದರಲ್ಲಿ ಅರ್ಧಸಂಖ್ಯೆಯು

ತದರ್ಥಂ ಕೇವಲೇ ಪಾಪೇ ನಾತ್ರ ಕಾರ್ಯಾ ವಿಚಾರಣಾ ।
ಬ್ರಹ್ಮಹತ್ಯಾ ಸುರಾಪಾನಂ ಸುವರ್ಣಸ್ತೇಯಮೇವ ಚ ॥೧೭॥
ಕೃತ್ವಾ ಚ ಗುರುತಲ್ಪಂ ಚ ಪಾಪಕೃದ್ಬ್ರಾಹ್ಮಣೋ ಯದಿ ।
ರುದ್ರಗಾಯತ್ರಿಯಾ ಗ್ರಾಹ್ಯಂ ಗೋಮೂತ್ರಂ ಕಪಿಲಂ ದ್ವಿಜಾಃ ॥
ಗಂಧದ್ವಾರೇತಿ ತಸ್ಯಾ ವೈ ಗೋಮಯಂ ಖಸ್ಥಮಾಹರೇತ್ ।
ತೇಜೋಽಸಿ ಶುಕ್ರಮಿತ್ಯಾಜ್ಯಂ ಕಾಪಿಲಂ ಸಂಹರೇದ್ಬುಧಃ ॥೧೯॥
ಆಪ್ಯಾಯಸ್ವೇತಿ ಚಕ್ಷೀರಂ ದಧಿಕ್ರಾವ್ಣೇತಿ ಚಾಹರೇತ್ ।
ಗವ್ಯಂ ದಧಿ ನವಂ ಸಾಕ್ಷಾತ್ಕಾಪಿಲಂ ವೈ ಪಿತಾಮಹ ॥೨೦॥
ದೇವಸ್ಯತ್ವೇತಿ ಮಂತ್ರೇಣ ಸಂಗ್ರಹೇದ್ವೈ ಕುಶೋದಕಂ ।
ಏಕಸ್ಥಂ ಹೇಮಪಾತ್ರೇ ವಾ ಕೃತ್ವಾಘೋರೇಣ ರಾಜತೇ ॥೨೧॥
ತಾಮ್ರೇ ವಾ ಪದ್ಮಪತ್ರೇವಾ ಪಾಲಾಶೇ ವಾ ದಲೇ ಶುಭೇ ।
ಸಕೂರ್ಚಂ ಸರ್ವರತ್ನಾಢ್ಯಂ ಕ್ಷಿಪ್ತ್ವಾ ತತ್ರೈವ ಕಾಂಚನಂ ॥೨೨॥

---

ಬುದ್ಧಿಪೂರ್ವಕವಲ್ಲದೆ ಅಕಸ್ಮಾತ್ತಾಗಿ ಮಾಡಿದವರಿಗೂ, ವಿಹಿತವಾಗಿ ಇರುವುದು.

೧೭-೨೦. ಎಲೈ ಬ್ರಹ್ಮನೇ, ಬ್ರಾಹ್ಮಣನು ಬ್ರಹ್ಮಹತ್ಯೆ, ಸುವರ್ಣ ಸ್ತೇಯ, ಸುರಾಪಾನ, ಗುರುಪತ್ನೀಗಮನ ಎಂಬ ಮಹಾಪಾಪಗಳನ್ನು ಮಾಡಿದರೆ, ಕಪಿಲವರ್ಣದ ಹಸುವಿನ ಮೂತ್ರವನ್ನು ರುದ್ರಗಾಯತ್ರಿ ಯಾದ, ತತ್ಪುರುಷಾಯ ಎಂಬ ಮಂತ್ರದಿಂದಲೂ, ಆಗತಾನೆ ಬೀಳುತ್ತಿ ರುವ ಗೋಮಯವನ್ನು ಆಕಾಶದಲ್ಲಿಯೇ, ಗಂಧದ್ವಾರಾಂ, ಎಂಬ ಮಂತ್ರದಿಂದಲೂ, ತುಪ್ಪವನ್ನು ಶುಕ್ರಮಸಿ ಎಂಬ ಮಂತ್ರದಿಂದಲೂ, ಮೊಸರನ್ನು ದಧಿಕ್ರಾವ್ಣ ಎಂಬ ಮಂತ್ರದಿಂದಲೂ, ಕುಶೋದಕವನ್ನು, ದೇವಸ್ಯತ್ವಾ ಎಂಬ ಮಂತ್ರದಿಂದಲೂ ಗ್ರಹಣಮಾಡಬೇಕು.

೨೧-೨೪. ಇವೆಲ್ಲವನ್ನೂ, ಚಿನ್ನ, ಬೆಳ್ಳಿ, ತಾಮ್ರದ ಪಾತ್ರೆಗಳಲ್ಲಿ ಯಾಗಲಿ, ಕಮಲದ ಎಲೆಯಲ್ಲಾಗಲಿ, ಮುತ್ತುಗದ ಎಲೆಯಲ್ಲಾಗಲಿ ಹಾಕಿ, ಅಘೋರ ಮಂತ್ರದಿಂದ ಒಟ್ಟು ಕೂಡಿಸಿ, ದರ್ಭೆಯ ಕೂರ್ಚವನ್ನೂ, ಸಕಲರತ್ನಗಳಿಂದ ಕೂಡಿದ ಸುವರ್ಣವನ್ನೂ, ಅದರಲ್ಲಿ ಹಾಕಿ ಒಂದು ಲಕ್ಷ ಅಘೋರ ಮಂತ್ರಜಪವನ್ನು, ಮಾಡಿ, ತುಪ್ಪ, ಚರು, ಸಮಿತ್ತು,

ಜಪೇಲ್ಲಕ್ಷಮಘೋರಾಖ್ಯಂ ಹುತ್ವಾ ಚೈವ ಘೃತಾದಿಭಿಃ ।
ಘೃತೇನ ಚರುಣಾ ಚೈವ ಸಮಿದ್ಭಿಶ್ಚ ತಿಲೈಸ್ತಥಾ ॥೨೩॥
ಯವೈಶ್ಚ ವ್ರೀಹಿಭಿಶ್ಚೈವ ಜುಹುಯಾದ್ವೈ ಪೃಥಕ್ ಪೃಥಕ್ ।
ಪ್ರತ್ಯೇಕಂ ಸಪ್ತವಾರಂ ತು ದ್ರವ್ಯಾಲಾಭೇ ಘೃತೇನ ತು ॥೨೪॥
ಹುತ್ವಾಽಘೋರೇಣ ದೇವೇಶಂ ಸ್ನಾತ್ವಾಽಘೋರೇಣ ವೈ ದ್ವಿಜಾಃ ।
ಅಷ್ಟದ್ರೋಣಘೃತೇನೈವ ಸ್ನಾಪ್ಯ ಪಶ್ಚಾದ್ವಿಶೋಧ್ಯ ಚ ॥೨೫॥
ಅಹೋರಾತ್ರೋಷಿತಃ ಸ್ನಾತಃ ಪಿಬೇತ್ಕೂರ್ಚಂ ಶಿವಾಗ್ರತಃ ।
ಬ್ರಾಹ್ಮಂ ಬ್ರಹ್ಮಜಪಂ ಕುರ್ಯಾದಾಚಮ್ಯ ಚ ಯಥಾವಿಧಿ ॥೨೬॥
ಏವಂ ಕೃತ್ವಾ ಕೃತಘ್ನೋಽಪಿ ಬ್ರಹ್ಮಹಾ ಭ್ರೂಣಹಾ ತಥಾ ।
ವೀರಹಾ ಗುರುಘಾತೀ ಚ ಮಿತ್ರವಿಶ್ವಾಸ ಘಾತಕಃ ॥೨೭॥
ಸ್ತೇಯೀ ಸುವರ್ಣಸ್ತೇಯೀ ಚ ಗುರುತಲ್ಪರತಃ ಸದಾ ।
ಮದ್ಯಪೋ ವೃಷಲೀಸಕ್ತಃ ಪರದಾರ ವಿಧರ್ಷಕಃ ॥೨೮॥

---

ಎಳ್ಳು, ಗೋಧಿ, ಬತ್ತ ಈ ಪದಾರ್ಥಗಳಿಂದ ಬೇರೆಬೇರೆಯಾಗಿ, ಅಗ್ನಿಯಲ್ಲಿ ಏಳೇಳು ಸಂಖ್ಯೆಯ ಹೋಮವನ್ನು ಮಾಡಬೇಕು. ಈ ದ್ರವ್ಯಗಳು ದೊರೆಯದಿದ್ದರೆ, ಬರಿಯ ತುಪ್ಪದಿಂದಲೇ ಅಷ್ಟು ಸಂಖ್ಯೆಯ ಹೋಮವನ್ನು ಮಾಡಬೇಕು.

೨೫–೨೬. ಶಿವನನ್ನು ಉದ್ದೇಶಿಸಿ, ಅಘೋರ ಮಂತ್ರಗಳಿಂದ ಹೋಮಗಳನ್ನು ಮಾಡಿ. ಅದೇ ಮಂತ್ರದಿಂದ ಸ್ನಾನ ಮಾಡಿದತರುವಾಯ ಎಂಟು ದ್ರೋಣಪರಿಮಾಣದ ತುಪ್ಪದಿಂದ ಶಿವಲಿಂಗಕ್ಕೆ ಅಭಿಷೇಕ ಮಾಡಿ (ದ್ರೋಣವೆಂದರೆ ಇಪ್ಪತ್ತು ಪಲಗಳಿಗೆ ಒಂದು ಪ್ರಸ್ಥ, ಹದಿನಾರು ಪ್ರಸ್ಥಗಳಿಗೆ ಒಂದು ದ್ರೋಣ) ಒಂದುದಿನ ಉಪವಾಸವಿದ್ದು, ಬಳಿಕ ಸ್ನಾನಮಾಡಿ, ಶಿವಲಿಂಗದ ಎದುರಿಗೆ ಕೂರ್ಚಸಹಿತವಾದ ಪಂಚಗವ್ಯವನ್ನು ಪಾನಮಾಡಿ ಆಚಮನವನ್ನು ಮಾಡಿ ಬ್ರಹ್ಮಗಾಯತ್ರೀ ಮಂತ್ರಜಪವನ್ನು ಮಾಡಬೇಕು.

೨೭–೩೦. ಈರೀತಿಯಲ್ಲಿ ಪ್ರಾಯಚಿತ್ತವನ್ನು ಮಾಡಿದರೆ, ಬ್ರಹ್ಮಹತ್ಯೆ, ಭ್ರೂಣಹತ್ಯೆ, ವೀರಹತ್ಯೆ, ಗುರುಹತ್ಯೆ, ವಿಶ್ವಾಸಘಾತನ, ಕಳ್ಳತನ, ಚಿನ್ನವನ್ನು ಕದಿಯುವುದು, ಗುರುಪತ್ನೀಗಮನ, ಮದ್ಯಪಾನ, ಶೂದ್ರ

ಯತ್ಕಿಂಚಿದಸ್ಯ ದುರಿತಂ ತತ್ಕ್ಷಿಪ್ತಂ ಬಡಬಾನಲೇ ।
ಬ್ರಹ್ಮಾ ರುದ್ರೋ ವಸುಃ ಸ್ಕಂದೋ ವಿಷ್ಣುಃ ಶಕ್ರೋ ಹುತಾಶನಃ ॥೩೩॥

ರಕ್ಷಂತು ಸರ್ವೇ ದುಷ್ಟೇಭ್ಯೋ ವರದಾಃ ಸಂತು ಸರ್ವದಾ ।
ಏವಮಾದೀನಿ ವಾಕ್ಯಾನಿ ವದಂತಂ ಪೂಜಯೇದ್ಗುರುಂ ॥೩೪॥

ಶಕ್ತಿತಃ ಕಪಿಲಾಂ ದದ್ಯಾತ್ಪ್ರಣಮ್ಯ ಚ ವಿಸರ್ಜಯೇತ್ ।
ಚರುಂ ಚ ಪುತ್ರಸಹಿತಾ ಪ್ರಣಮ್ಯ ರವಿಶಂಕರೌ ॥ ॥೩೫॥

ಹುತಶೇಷಂ ತದಾಽಶ್ನೀಯಾದಾದಿತ್ಯಾಯ ನಮೋಽಸ್ತ್ವಿತಿ ।
ಇದಮೇವಾದ್ಭುತೋದ್ವೇಗದುಸ್ಸ್ವಪ್ನೇಷು ಪ್ರಶಸ್ಯತೇ ॥೩೬॥

ಕರ್ತುರ್ಜನ್ಮದಿನರ್ಕ್ಷಂ ಚ ತ್ಯಕ್ತ್ವಾ ಸಂಪೂಜಯೇತ್ಸದಾ ।
ಶಾಂತ್ಯರ್ಥಂ ಶುಕ್ಲಸಪ್ತಮ್ಯಾಮೇತತ್ಕುರ್ವನ್ನ ಸೀದತಿ ॥೩೭॥

ಸದಾನೇನ ವಿಧಾನೇನ ದೀರ್ಘಾಯುರಭವನ್ನರಃ ।
ಸಂವತ್ಸರಾಣಾಮಯುತಂ ಶಶಾಸ ಪೃಥಿವೀಮಿಮಾಂ ॥೩೮॥

---

೩೩-೩೪. ಇವನ ಪಾಪವೇನಾದರೂ ಇದ್ದರೆ ಅದು ಬಡಬಾಗ್ನಿಯಲ್ಲಿ ಬಿದ್ದು ಬೆಂದುಹೋಗಲಿ. ಬ್ರಹ್ಮ, ರುದ್ರ, ವಸು, ಷಣ್ಮುಖ, ವಿಷ್ಣು, ಇಂದ್ರ ಅಗ್ನಿ ಇವರೆಲ್ಲರೂ ದುಷ್ಟರಿಂದ ಬಾಧೆ ಬರದಂತೆ ಇವನನ್ನು ಸದಾ ಸಂರಕ್ಷಿಸಿ ವರಗಳನ್ನೀಯಲಿ'' ಇತ್ಯಾದಿ ವಾಕ್ಯಗಳನ್ನುಚ್ಚರಿಸುವ ಗುರುವನ್ನು ಸತ್ಕರಿಸಬೇಕು.

೩೫-೩೬. ಶಕ್ತಿಗೆ ತಕ್ಕಂತೆ ಗೋವನ್ನೂ ದಾನಮಾಡಿ ನಮಸ್ಕಾರಪೂರ್ವಕವಾಗಿ ಗುರುವನ್ನು ಬೀಳ್ಕೊಡಬೇಕು. ಸೂರ್ಯನನ್ನೂ ಶಂಕರನನ್ನೂ ನಮಿಸಿ, ಆದಿತ್ಯನಿಗೆ ನಮಸ್ಕಾರವೆಂದು ಹೇಳಿ, ಹೋಮಮಾಡಿ, ಉಳಿದ ಚರುವನ್ನು ಮಗನೊಡನೆ ಭುಂಜಿಸಬೇಕು. ಅತ್ಯಾಶ್ಚರ್ಯ, ಉದ್ವೇಗ, ದುಃಸ್ವಪ್ನ ಇವು ಆದಾಗಲೂ ಇದೇ ಶಾಂತಿ ಕರ್ಮವನ್ನು ನೆರವೇರಿಸುವುದೊಳ್ಳೆಯದು.

೩೭. ಯಜಮಾನನ ಜನ್ಮದಿನವನ್ನೂ ಜನ್ಮನಕ್ಷತ್ರವನ್ನೂ ಬಿಟ್ಟು ಉಳಿದ ದಿವಸಗಳಲ್ಲಿ ಈ ಕರ್ಮವನ್ನು ನಡೆಸಬೇಕು. ಶುಕ್ಲಪಕ್ಷದ ಸಪ್ತಮಿಯ ದಿನ ಶಾಂತಿಗಾಗಿ ಈ ಕರ್ಮವನ್ನು ಮಾಡತಕ್ಕವನಿಗೆಂದಿಗೂ ಹಾನಿಯಿಲ್ಲ.

೩೮. ಅನವರತವೂ ಈ ಶಾಂತಿಕರ್ಮವಿಧಾನದಿಂದ ಕಾರ್ತವೀರ್ಯಾರ್ಜುನನು ದೀರ್ಘಾಯುವಾದನು. ಹತ್ತುಸಾವಿರ ವರ್ಷಗಳ ಕಾಲ ಈ ಭೂಮಿಯನ್ನು ಆಳಿದನು.

## ಅಥ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ಷೋಡಶೋಽಧ್ಯಾಯಃ

**ಷೋಡಶೇ ವರ್ಣ್ಯತೇ ಚಾಸ್ಮಿನ್ನೀಶಾನಸ್ಯ ಸಮುದ್ಭವಃ ।**
**ಪಂಚಬ್ರಹ್ಮಾತ್ಮಕಸ್ತೋತ್ರಂ ಗಾಯತ್ರ್ಯಾ ಮಹಿಮಾಽದ್ಭುತಃ ॥**

**ಅಥಾಽನ್ಯೋ ಬ್ರಹ್ಮಣಃ ಕಲ್ಪೋ ವರ್ತತೇ ಮುನಿಪುಂಗವಾಃ ।**
**ವಿಶ್ವರೂಪ ಇತಿ ಖ್ಯಾತೋ ನಾಮತಃ ಪರಮಾದ್ಭುತಃ ॥ ೧ ॥**

**ವಿನಿವೃತ್ತೇ ತು ಸಂಹಾರೇ ಪುನಃ ಸೃಷ್ಟೇ ಚರಾಚರೇ ॥**
**ಬ್ರಹ್ಮಣಃ ಪುತ್ರಕಾಮಸ್ಯ ಧ್ಯಾಯತಃ ಪರಮೇಷ್ಠಿನಃ ॥ ೨ ॥**

**ಪ್ರಾದುರ್ಭೂತಾ ಮಹಾನಾದಾ ವಿಶ್ವರೂಪಾ ಸರಸ್ವತೀ ।**
**ವಿಶ್ವಮಾಲ್ಯಾಂಬರಧರಾ ವಿಶ್ವಯಜ್ಞೋಪವೀತಿನೀ ॥ ೩ ॥**

---

### ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಹದಿನಾರನೆಯ ಅಧ್ಯಾಯವು

(ಈ ಹದಿನಾರನೆಯ ಅಧ್ಯಾಯದಲ್ಲಿ, ಈಶಾನಮೂರ್ತಿಯ ಅವತಾರವೂ, ಪಂಚಬ್ರಹ್ಮರ ಸ್ತೋತ್ರವೂ, ಆಶ್ಚರ್ಯಕರವಾದ ಗಾಯತ್ರೀ ಮಂತ್ರದ ಮಹಿಮೆಯೂ, ಇವನ್ನು ಹೇಳಲಾಗುವುದು.)

೧. ಸೂತನು ಹೇಳಿದನು, ಎಲೈ ಋಷಿಶ್ರೇಷ್ಠರೆ, ಕೇಳಿರಿ, ಕೃಷ್ಣ ಕಲ್ಪವು ಕಳೆದ ಮೇಲೆ ವಿಶ್ವರೂಪವೆಂಬ ಮತ್ತೊಂದು ಆಶ್ಚರ್ಯಕರವಾದ ಕಲ್ಪವು ಪ್ರಾರಂಭವಾಯಿತು.

೨. ಹಿಂದಿನ ಕಲ್ಪದ ಸಂಹಾರ ಕಾರ್ಯವು ಪೂರ್ಣವಾಗಿ, ಮುಂದಿನ ಕಲ್ಪ ಪ್ರಾರಂಭದಲ್ಲಿ ಚರಾಚರ ಸೃಷ್ಟಿಯ ಕೆಲಸವನ್ನು ಪ್ರಾರಂಭಿಸಿದ ಬ್ರಹ್ಮನು ಪುತ್ರಕಾಮನೆಯಿಂದ, ಧ್ಯಾನಮಾಡುತ್ತಿರಲು, ದೊಡ್ಡ ಧ್ವನಿಯಿಂದ ಕೂಡಿದ ವಾಙ್ಮಯ ಪ್ರಪಂಚ ಸ್ವರೂಪವಾದ ಒಂದು ವಾಕ್ಕು ಉತ್ಪತ್ತಿಯಾಯಿತು.

೩–೪. ಆ ದೊಡ್ಡ ವಿಶ್ವರೂಪಕ್ಕೆ ಪ್ರಪಂಚಗಳೇ ಹೂವಿನ ಹಾರಗಳಾಗಿಯೂ, ವಸ್ತ್ರ, ಯಜ್ಞೋಪವೀತ, ತಲೆಯ ಪಾಗು, ಗಂಧ ಇವುಗಳಾಗಿಯೂ, ಇದ್ದುವು. ಅನೇಕ ಪ್ರಪಂಚಗಳು ಅದರಿಂದ ಹುಟ್ಟುತ್ತಿದ್ದು

ವಿಶ್ವೋಽಕ್ಷೀಽಪಾ ವಿಶ್ವಗಂಧಾ ವಿಶ್ವಮಾತಾ ಮಹೋಽಕ್ಷಿಕಾ ।
ತಥಾವಿಧಂ ಸ ಭಗವಾನೀಶಾನಂ ಪರಮೇಶ್ವರಂ ॥ ೪ ॥

ಶುದ್ಧಸ್ಫಟಿಕಸಂಕಾಶಂ ಸರ್ವಾಭರಣಭೂಷಿತಂ ।
ಅಥ ತಂ ಮನಸಾ ಧ್ಯಾತ್ವಾ ಯುಕ್ತಾತ್ಮಾ ವೈ ಪಿತಾಮಹಃ ॥ ೫ ॥

ವವಂದೇ ದೇವಮೀಶಾನಂ ಸರ್ವೇಶಂ ಸರ್ವಗಂ ಪ್ರಭುಂ ।
ಓಮೀಶಾನ ನಮಸ್ತೇಽಸ್ತು ಮಹಾದೇವ ನಮೋಽಸ್ತು ತೇ ॥ ೬ ॥

ನಮೋಽಸ್ತು ಸರ್ವವಿದ್ಯಾನಾಮೀಶಾನ ಪರಮೇಶ್ವರ ।
ನಮೋಽಸ್ತು ಸರ್ವಭೂತಾನಾಮೀಶಾನ ವೃಷವಾಹನ ॥ ೭ ॥

ಬ್ರಹ್ಮಣೋಽಧಿಪತೇ ತುಭ್ಯಂ ಬ್ರಹ್ಮಣೇ ಬ್ರಹ್ಮರೂಪಿಣೇ ।
ನಮೋ ಬ್ರಹ್ಮಾಧಿಪತಯೇ ಶಿವಂ ಮೇಽಸ್ತು ಸದಾಶಿವ ॥ ೮ ॥

ಓಂಕಾರಮೂರ್ತೇ ದೇವೇಶ ಸದ್ಯೋಜಾತ ನಮೋ ನಮಃ ।
ಪ್ರಪದ್ಯೇ ತ್ವಾಂ ಪ್ರಪನ್ನೋಽಸ್ಮಿ ಸದ್ಯೋಜಾತಾಯ ವೈ ನಮಃ ॥

---

ದರಿಂದ, ಆ ಪ್ರಪಂಚಗಳಿಗೆಲ್ಲಕ್ಕೂ ಆ ವಿಶ್ವರೂಪವು ತಾಯಿಯಾಗಿದ್ದಿತು. ಆ ರೀತಿಯಾದ ಈಶಾನನೆಂಬ ಪರಮೇಶ್ವರನು, ಸಕಲಾಭರಣಗಳಿಂದ ಕೂಡಿ, ಸ್ಫಟಿಕಮಣಿಯಂತೆ ಕಾಂತಿಯುಕ್ತನಾಗಿರುವುದನ್ನು ಬ್ರಹ್ಮನು ನೋಡಿದನು.

೫. ಆ ಬಳಿಕ ಬ್ರಹ್ಮನು ಆ ಈಶಾನಮೂರ್ತಿಯನ್ನು ಮನಸ್ಸಿನಲ್ಲಿ ಧ್ಯಾನಮಾಡುತ್ತ, ಸರ್ವವ್ಯಾಪಿಯೂ, ಸರ್ವೇಶ್ವರನೂ, ಆದ ಆ ದೇವನಿಗೆ ನಮಸ್ಕಾರಮಾಡಿದನು.

೬–೮. ಆ ಮೇಲೆ ಪಂಚಬ್ರಹ್ಮಮಂತ್ರಾರ್ಥವನ್ನು ಅನುವಾದ ಮಾಡುತ್ತಾ, ಓಂಕಾರ ಪೂರ್ವಕವಾಗಿ ಸ್ತೋತ್ರಮಾಡಿದನು. ಓ ಈಶಾನ ದೇವನೇ, ನೀನು ಸಕಲ ವಿದ್ಯೆಗಳಿಗೂ ಒಡೆಯನು. ಸಮಸ್ತಪ್ರಾಣಿ ಗಳಿಗೂ ಅಧಿಪತಿಯು. ಬ್ರಹ್ಮನಿಗೂ, ಅಧಿಪತಿಯು. ಪರಬ್ರಹ್ಮಸ್ವರೂ ಪಿಯು. ಮಂಗಳಸ್ವರೂಪನು, ನನಗೆ ಮಂಗಳವನ್ನು ಕೊಡು.

೯. ಓಂಕಾರಸ್ವರೂಪನೇ, ದೇವತೆಗಳಿಗೆಲ್ಲರಿಗೂ ಒಡೆಯನೇ, ಸದ್ಯೋಜಾತನೇ, ನಿನ್ನನ್ನು ಶರಣುಹೊಂದಿರುವೆನು, ಸದ್ಯೋಜಾತನಾದ ನಿನಗೆ ನಮಸ್ಕಾರವು.

ಅಭವೇ ಚ ಭವೇ ತುಭ್ಯಂ ತಥಾ ನಾತಿ ಭವೇ ನಮಃ ।
ಭವೋದ್ಭವ ಭವೇಶಾನ ಮಾಂ ಭಜಸ್ವ ಮಹಾದ್ಯುತೇ ॥೧೦॥
ವಾಸುದೇವ ನಮಸ್ತುಭ್ಯಂ ಜ್ಯೇಷ್ಠಾಯ ವರದಾಯ ಚ ।
ನಮೋ ರುದ್ರಾಯ ಕಾಲಾಯ ಕಲನಾಯ ನಮೋ ನಮಃ ॥೧೧॥
ನಮೋ ವಿಕರಣಾಯೈವ ಕಾಲವರ್ಣಾಯ ವರ್ಣಿನೇ ।
ಬಲಾಯ ಬಲಿನಾಂ ನಿತ್ಯಂ ಸದಾ ವಿಕರಣಾಯ ತೇ ॥೧೨॥
ಬಲಪ್ರಮಥನಾಯೈವ ಬಲಿನೇ ಬ್ರಹ್ಮರೂಪಿಣೇ ।
ಸರ್ವಭೂತೇಶ್ವರೇಶಾಯ ಭೂತಾನಾಂ ದಮನಾಯ ಚ ॥೧೩॥
ಮನೋನ್ಮನಾಯ ದೇವಾಯ ನಮಸ್ತುಭ್ಯಂ ಮಹಾದ್ಯುತೇ ।

---

೧೦. ಜನನಮರಣಾದಿ ಸಂಸಾರವಿಲ್ಲದವನಾದರೂ, ಪ್ರಪಂಚರೂಪನಾಗಿ, ವ್ಯಕ್ತನಾಗಿ, ಆ ಪ್ರಪಂಚಕ್ಕಿಂತಮೀರಿದ, ಪ್ರಪಂಚೋತ್ಪತ್ತಿಗೆ, ಕಾರಣನಾದ, ಮಹಾತೇಜಶ್ಶಾಲಿಯಾದ ನೀನು ನನಗೆ ದರ್ಶನವನ್ನು ಕೊಡು.

೧೧. ಎಲ್ಲರಿಗಿಂತಲೂ, ದೊಡ್ಡವನೂ, ವರವನ್ನು ಕೊಡುವವನೂ, ದುಷ್ಟರಿಗೆ ಭಯಂಕರನೂ, ಸಜ್ಜನರಿಗೆ ಸುಂದರನಾದ ದೇವನೂ, ಕಾಲ, ಸಂಖ್ಯಾಸ್ವರೂಪನೂ, ಆದ ನಿನಗೆ ನಮಸ್ಕಾರವು.

೧೨. ಇಂದ್ರಿಯಗಳಿಲ್ಲದವನೂ, ಅಂದರೆ ನಿರಾಕಾರನೂ, ಕಾಲಸ್ವರೂಪನೂ ಬಲಸ್ವರೂಪನೂ, ಸಮಸ್ತಶಕ್ತಿಗಳುಳ್ಳವನೂ, ತನಗಿಂತಲೂ ಬೇರೆಯದಾದ ಸಾಧನಗಳಿಲ್ಲದವನೂ, ಆದ ನಿನಗೆ ಯಾವಾಗಲೂ ನಮಸ್ಕಾರಮಾಡುವೆನು.

೧೩. ಪ್ರಳಯ ಕಾಲದಲ್ಲಿ ಸಮಸ್ತಪ್ರಪಂಚಗಳ ಶಕ್ತಿಯನ್ನೂ ನಾಶಮಾಡತಕ್ಕವನೂ, ಸಕಲ ಶಕ್ತಿಯಿಂದ ಕೂಡಿದ ಪರಬ್ರಹ್ಮಸ್ವರೂಪನೂ, ಸಕಲಪ್ರಾಣಿಗಳಿಗೂ ಅಧಿಪತಿಯೂ, ಪ್ರಾಣಿಗಳು ಸನ್ಮಾರ್ಗದಲ್ಲಿ ನಡೆಯುವಂತೆ ಶಿಕ್ಷಿಸತಕ್ಕವನೂ, ಮನಸ್ಸಿನ ಕಾರ್ಯವನ್ನು ಮೀರಿದವನೂ, ಮಾಯೆಯಿಂದ ಕ್ರೀಡಿಸತಕ್ಕವನೂ, ಮಹಾತೇಜಸ್ವಿಯೂ ಆದ ನಿನಗೆ ನಮಸ್ಕಾರವು.

ವಾಸುದೇವಾಯ ವಾಮಾಯ ನಮಸ್ತುಭ್ಯಂ ಮಹಾತ್ಮನೇ ॥೧೪॥
ಜ್ಯೇಷ್ಠಾಯ ಚೈವ ಶ್ರೇಷ್ಠಾಯ ರುದ್ರಾಯ ವರದಾಯ ಚ ।
ಕಾಲಹಂತ್ರೇ ನಮಸ್ತುಭ್ಯಂ ನಮಸ್ತುಭ್ಯಂ ಮಹಾತ್ಮನೇ ॥೧೫॥
ಇತಿ ಸ್ತವೇನ ದೇವೇಶಂ ನನಾಮ ವೃಷಭಧ್ವಜಂ ।
ಯಃ ಪಠೇತ್ಸಕೃದೇವೇಹ ಬ್ರಹ್ಮಲೋಕಂ ಗಮಿಷ್ಯತಿ ॥೧೬॥
ಶ್ರಾವಯೇದ್ವಾ ದ್ವಿಜಾನ್ ಶ್ರಾದ್ಧೇ ಸ ಯಾತಿ ಪರಮಾಂ ಗತಿಂ ।
ಏವಂ ಧ್ಯಾನಗತಂ ತತ್ರ ಪ್ರಣಿಪತ್ಯ ಪಿತಾಮಹಂ ॥೧೭॥
ಉವಾಚ ಭಗವಾನೀಶಃ ಪ್ರೀತೋಽಹಂ ತೇ ಕಿಮಿಚ್ಛಸಿ ।
ತತಸ್ತು ಪ್ರಣತೋ ಭೂತ್ವಾ ವಾಗ್ವಿಶುದ್ಧಂ ಮಹೇಶ್ವರಂ ॥೧೮॥
ಉವಾಚ ಭಗವಾನ್ರುದ್ರಂ ಪ್ರೀತಂ ಪ್ರೀತೇನ ಚೇತಸಾ ।

---

೧೪–೧೫. ಸುಂದರನೂ, ಮಹಾಮಹಿಮನೂ, ಎಲ್ಲರಿಗಿಂತಲೂ ದೊಡ್ಡವನೂ, ಅತ್ಯಂತ ಪರಿಶುದ್ಧನೂ, ಭಯಂಕರನೂ, ಯಮನನ್ನು ನಾಶಮಾಡಿದವನೂ, ವರವನ್ನು ಕೊಡುವವನೂ ಆದ ನಿನಗೆ ನಮಸ್ಕಾರವು.

೧೬. ಹೀಗೆಂದು ಬ್ರಹ್ಮನು ದೇವತೆಗಳಿಗೆಲ್ಲರಿಗೂ ಸ್ವಾಮಿಯಾದ ಶಿವನನ್ನು ಸ್ತೋತ್ರಮಾಡಿ, ನಮಸ್ಕಾರಮಾಡಿದನು. ಯಾರು ಈ ಸ್ತೋತ್ರವನ್ನು ಒಂದಾವೃತ್ತಿ ಹೇಳಿದರೂ, ಶ್ರಾದ್ಧಕಾಲದಲ್ಲಿ ಬ್ರಾಹ್ಮಣರ ಎದುರಿಗೆ ಹೇಳಿದರೂ, ಬ್ರಹ್ಮ ಲೋಕಕ್ಕೆ ಹೋಗಿ ಬಳಿಕ ಮೋಕ್ಷವನ್ನು ಹೊಂದುವರು.

೧೭. ಈರೀತಿಯಲ್ಲಿ ಧ್ಯಾನಾಸಕ್ತನಾಗಿ, ನಮಸ್ಕಾರಮಾಡುತ್ತಿರುವ ಬ್ರಹ್ಮನನ್ನು ಕುರಿತು ಈಶ್ವರನು, ಎಲೈ ಬ್ರಹ್ಮನೇ, ನಿನ್ನ ಸ್ತೋತ್ರಕ್ಕೆ ನಾನು ಸಂತೋಷಪಟ್ಟೆನು. ನೀನು ಏನನ್ನು ಅಪೇಕ್ಷಿಸುವೆ? ಎಂದು ಹೇಳಿದನು.

೧೮. ಆಮೇಲೆ ಬ್ರಹ್ಮನು ಪರಿಶುದ್ಧವಾದ ವಾಕ್ಸ್ವರೂಪನಾದ ಮಹೇಶ್ವರನಿಗೆ ನಮಸ್ಕಾರಮಾಡಿ, ಸಂತುಷ್ಟನಾದ ಆ ರುದ್ರನನ್ನು ಕುರಿತು ಸಂತೋಷದಿಂದ ಹೇಳಿದನು.

ಯದಿದಂ ವಿಶ್ವರೂಪಂ ತೇ ವಿಶ್ವಗೌಃ ಶ್ರೇಯಸೀಶ್ವರೀ ॥೧೯॥
ಏತದ್ವೇದಿತು ಮಿಚ್ಛಾಮಿ ಯಥೇಯಂ ಪರಮೇಶ್ವರ।
ಕೈಷಾ ಭಗವತೀ ದೇವೀ ಚತುಷ್ಪಾದಾ ಚತುರ್ಮುಖೀ ॥೨೦॥
ಚತುಃಶೃಂಗೀ ಚತುರ್ವಕ್ತ್ರಾ ಚತುರ್ದಂಷ್ಟ್ರಾ ಚತುಃಸ್ತನೀ।
ಚತುರ್ಹಸ್ತಾ ಚತುರ್ನೇತ್ರಾ ವಿಶ್ವರೂಪಾ ಕಥಂ ಸ್ಮೃತಾ ॥೨೧॥
ಕಿಂ ನಾಮ ಗೋತ್ರಾ ಕನ್ಯೇಯಂ ಕಿಂವೀರ್ಯಾ ಚಾಪಿ ಕರ್ಮತಃ।
ತಸ್ಯ ತದ್ವಚನಂ ಶ್ರುತ್ವಾ ದೇವದೇವೋ ವೃಷಧ್ವಜಃ ॥೨೨॥
ಪ್ರಾಹ ದೇವವೃಷಂ ಬ್ರಹ್ಮ ಬ್ರಹ್ಮಾಣಂ ಚಾತ್ಮಸಂಭವಂ।
ರಹಸ್ಯಂ ಸರ್ವಮಂತ್ರಾಣಾಂ ಪಾವನಂ ಪುಷ್ಟಿವರ್ಧನಂ ॥೨೩॥
ಶೃಣುಷ್ವೈತತ್ಪರಂ ಗುಹ್ಯಮಾದಿಸರ್ಗೇ ಯಥಾ ತಥಾ।
ಏವಂ ಯೋ ವರ್ತತೇ ಕಲ್ಪೋ ವಿಶ್ವರೂಪಸ್ತ್ವಸೌ ಮತಃ ॥೨೪॥

---

೧೯–೨೧ ಓ ಪರಮೇಶ್ವರನೇ, ನಿನ್ನ ವಿಶ್ವರೂಪವು ಗೋವಿನ ರೂಪವಾಗಿರುವುದಷ್ಟೆ. ಈ ಮಹಾಮಹಿಮಳಾದ, ನಾಲ್ಕುಕಾಲುಗಳೂ, ನಾಲ್ಕು ಮುಖಗಳೂ, ನಾಲ್ಕು ಕೊಂಬುಗಳೂ, ನಾಲ್ಕುಹಲ್ಲುಗಳೂ, ಬಾಯಿಗಳೂ, ಮೊಲೆಗಳೂ, ಕೈಗಳೂ, ಕಣ್ಣುಗಳೂ, ನಾಲ್ಕು ನಾಲ್ಕು ಸಂಖ್ಯೆಯುಳ್ಳ ಈ ದೇವಿಯಾರು? ಇವಳಿಗೆ ವಿಶ್ವರೂಪಳೆಂದು ಹೇಗೆ ಹೆಸರುಬಂದಿತು? ಇವಳು ಯಾರ ಮಗಳು? ಇವಳ ಗೋತ್ರವಾವುದು? ಇವಳ ಕ್ರಿಯಾಶಕ್ತಿಏನು? ಇವುಗಳ್ನು ತಿಳಿಯಬೇಕೆಂದು ಬಯಸುವೆನು. ಎಂದನು.

೨೨–೨೩. ಅವನ ಮಾತನ್ನು ಕೇಳಿ ದೇವತೆಗಳಿಗೆಲ್ಲರಿಗೂ ದೇವನೂ, ಧ್ವಜದಲ್ಲಿ ಎತ್ತಿನ ಚಿನ್ಹೆಯುಳ್ಳವನೂ, ಅಥವಾ ಎತ್ತೇ ವಾಹನವುಳ್ಳವನೂ ಆದ ಪರಬ್ರಹ್ಮಸ್ವರೂಪನಾದ ಶಿವನು ತನ್ನ ಪುತ್ರನಾದ ದೇವಶ್ರೇಷ್ಠನಾದ ಬ್ರಹ್ಮನನ್ನು ಕುರಿತು ಸಮಸ್ತಮಂತ್ರಗಳ ನಡುವೆ ಅತ್ಯಂತ ಗುಟ್ಟಾದ ಪರಿಶುದ್ಧವಾದ ಶಕ್ತಿಯನ್ನುಂಟುಮಾಡತಕ್ಕ ಮಾತನ್ನು ಹೇಳಿದನು.

೨೪–೨೫. ಎಲೈ ಬ್ರಹ್ಮನೇ, ಗುಟ್ಟಾದ ಈ ವಿಷಯವನ್ನು ಕೇಳು. ಹಿಂದಿನ ಸೃಷ್ಟಿಯಂತೆಯೇ, ಈಗ ನಡೆಯುತ್ತಿರುವ ಕಲ್ಪಕ್ಕೆ ವಿಶ್ವರೂಪ

ಬ್ರಹ್ಮಸ್ಥಾನಮಿದಂ ಚಾऽಪಿ ಯತ್ರ ಪ್ರಾಪ್ತಂ ತ್ವಯಾ ಪ್ರಭೋ ।
ತ್ವತ್ತಃ ಪರತರಂ ದೇವ ವಿಷ್ಣುನಾ ತತ್ಪದಂ ಶುಭಂ ॥೨೫॥

ವೈಕುಂಠೇನ ವಿಶುದ್ಧೇನ ಮಮ ವಾಮಾಂಗಜೇನ ವೈ ।
ತದಾಪ್ರಭೃತಿ ಕಲ್ಪಶ್ಚ ತ್ರಯಸ್ತ್ರಿಂಶತ್ತಮೋ ಹ್ಯಯಂ ॥೨೬॥

ಶತಂ ಶತಸಹಸ್ರಾಣಾಮತೀತಾ ಯೇ ಸ್ವಯಂಭುವಃ ।
ಪುರಸ್ತಾತ್ತವ ದೇವೇಶ ತಚ್ಛೃಣುಷ್ವ ಮಹಾಮತೇ ॥೨೭॥

ಆನಂದಸ್ತು ಸ ವಿಜ್ಞೇಯೋ ಆನಂದತ್ವೇ ವ್ಯವಸ್ಥಿತಃ ।
ಮಾಂಡವ್ಯಗೋತ್ರಸ್ತಪಸಾ ಮಮ ಪುತ್ರತ್ವಮಾಗತಃ ॥೨೮॥

ತ್ವಯಿ ಯೋಗಂ ಚ ಸಾಂಖ್ಯಂ ಚ ತಪೋವಿದ್ಯಾವಿಧಿಕ್ರಿಯಾಃ ।
ಋತಂ ಸತ್ಯಂ ದಯಾ ಬ್ರಹ್ಮ ಅಹಿಂಸಾ ಸನ್ಮತಿಃ ಕ್ಷಮಾ ॥೨೯॥

---

ಕಲ್ಪವೆಂದು ಹೆಸರು. ಈಕಲ್ಪದಲ್ಲಿ ನೀನು ಬ್ರಹ್ಮನ ಅಧಿಕಾರವನ್ನು ಪಡೆದಿರುವೆ. ನಿನಗಿಂತಲೂ, ಶ್ರೇಷ್ಠನಾದ ವಿಷ್ಣುವು ಮಂಗಳಕರವಾದ ಅವನ ಅಧಿಕಾರವನ್ನು ಪಡೆದಿರುವನು.

೨೬–೨೭. ನನ್ನ ಎಡಭಾಗದ ಅವಯವದಲ್ಲಿ ಹುಟ್ಟಿದ, ಪರಿಶುದ್ಧನಾದ, ವಿಷ್ಣುವು ವೈಕುಂಠಲೋಕದಲ್ಲಿ ತನ್ನ ಅಧಿಕಾರವನ್ನು ಹೊಂದಿರುವನು. ಅವನ ಅಧಿಕಾರ ಪ್ರಾರಂಭದಿಂದ ಈಕಲ್ಪವು ಮೂವತ್ತುಮೂರನೆಯದಾಗಿರುವುದು. ನಿನ್ನ ಹಿಂದೆ ನೂರಾರು ಸಾವಿರ ಬ್ರಹ್ಮರ ಅಧಿಕಾರವು ಕಳೆದು ಹೋಗಿರುವುದು.

೨೮. ಮಾಂಡವ್ಯಗೋತ್ರದ ನೀನು ತಪಸ್ಸಿನಿಂದ ನನಗೆ ಪುತ್ರನಾಗಿರುವೆ. ಆನಂದಸ್ವರೂಪನಾಗಿರುವ ನೀನು, ಆ ಬ್ರಹ್ಮಾನಂದವೇ ಎಂದು ತಿಳಿ.

೨೯–೩೧. ನಿನ್ನಲ್ಲಿ ೧. ಯೋಗವೆಂಬ ಚಿತ್ತವೃತ್ತಿನಿರೋಧವೂ, ೨. ಸಾಂಖ್ಯವೆಂಬ ತತ್ವಜ್ಞಾನವೂ, ೩. ತಪಸ್ಸು, ೪. ವಿದ್ಯೆಯೂ, ೫. ನಿಯಮವೂ, ೬. ಕ್ರಿಯೆಯೂ, ೭. ಪ್ರಿಯವಾಗಿ ಮಾತನಾಡುವುದೂ, ೮. ನಿಜವನ್ನು ಹೇಳುವುದೂ, ೯. ದಯೆಯೂ, ೧೦. ವೇದಾಧ್ಯಯನವೂ, ೧೧. ಅಹಿಂಸೆಯೂ, ೧೨. ಒಳ್ಳೆಯ ಬುದ್ಧಿಯೂ, ೧೩. ಕ್ಷಮೆಯೂ,

ಧ್ಯಾನಂ ಧ್ಯೇಯಂ ದಮಃ ಶಾಂತಿರ್ವಿದ್ಯಾಽವಿದ್ಯಾ ಮತಿರ್ಧೃತಿಃ।
ಕಾಂತಿರ್ನೀತಿಃ ಪ್ರಥಾ ಮೇಧಾ ಲಜ್ಜಾ ದೃಷ್ಟಿಃ ಸರಸ್ವತೀ ॥೩೦॥

ತುಷ್ಟಿಃ ಪುಷ್ಟಿಃ ಕ್ರಿಯಾ ಚೈವ ಪ್ರಸಾದಶ್ಚ ಪ್ರತಿಷ್ಠಿತಾಃ।
ದ್ವಾತ್ರಿಂಶತ್ಸುಗುಣಾ ಹ್ಯೇಷಾ ದ್ವಾತ್ರಿಂಶಾಕ್ಷರ ಸಂಜ್ಞಯಾ ॥೩೧॥

ಪ್ರಕೃತಿರ್ವಿಹಿತಾ ಬ್ರಹ್ಮಂಸ್ತ್ವತ್ಪ್ರಸೂತಿರ್ಮಹೇಶ್ವರೀ।
ವಿಷ್ಣೋರ್ಭಗವತಶ್ಚಾಪಿ ತಥಾಽನ್ಯೇಷಾಮಪಿ ಪ್ರಭೋ ॥೩೨॥

ಸೈಷಾ ಭಗವತೀ ದೇವೀ ಮತ್ಪ್ರಸೂತಿಃ ಪ್ರತಿಷ್ಠಿತಾ।
ಚತುರ್ಮುಖೀ ಜಗದ್ಯೋನಿಃ ಪ್ರಕೃತಿರ್ಗೌಃ ಪ್ರತಿಷ್ಠಿತಾ ॥೩೩॥

ಗೌರೀ ಮಾಯಾ ಚ ವಿದ್ಯಾ ಚ ಕೃಷ್ಣಾ ಹೈಮವತೀತಿ ಚ।
ಪ್ರಧಾನಂ ಪ್ರಕೃತಿಶ್ಚೈವ ಯಾಮಾಹುಸ್ತತ್ತ್ವಚಿಂತಕಾಃ ॥೩೪॥

---

೧೪. ಏಕಾಗ್ರಚಿತ್ತವೂ, ೧೫. ಈಶ್ವರಸಾನ್ನಿಧ್ಯವೂ, ೧೬. ಇಂದ್ರಿಯ ನಿಗ್ರಹವೂ, ೧೭. ಶಾಂತಿಯೂ, ೧೮. ಜ್ಞಾನವೂ, ೧೯. ಮಾಯೆಯೂ, ೨೦. ಬುದ್ಧಿಯೂ, ೨೧. ಧೈರ್ಯವೂ, ೨೨. ತೇಜಸ್ಸೂ, ೨೩. ನ್ಯಾಯವೂ ೨೪. ಕೀರ್ತಿಯೂ, ೨೫. ಧಾರಣಾಶಕ್ತಿಯೂ, ೨೬. ನಾಚಿಕೆಯೂ, ೨೭. ದಿವ್ಯಜ್ಞಾನವೂ, ೨೮. ನಿರ್ದುಷ್ಟವಾದ ಮಾತೂ, ೨೯. ಸಂತೋಷವೂ, ೩೦. ಇಂದ್ರಿಯಪಾಟವವೂ, ೩೧. ವೇದೋಕ್ತ ಕರ್ಮವೂ, ೩೨. ಪ್ರಸನ್ನತೆಯೂ, ಈ ಮೂವತ್ತೆರಡು ಗುಣಗಳು ಕಕಾರಾದಿಯಾದ ಮೂವತ್ತೆರಡು ಅಕ್ಷರಗಳ ಸಂಜ್ಞೆಯಿಂದ ನೆಲೆಯಾಗಿರುವುವು.

೩೨. ಎಲೈ ಬ್ರಹ್ಮನೇ, ನಾನು ಪ್ರಕೃತಿಯನ್ನು ಸೃಷ್ಟಿಸಿದೆನು. ಆ ಮಹಾಮಹಿಮೆಯುಳ್ಳ ಪ್ರಕೃತಿಯೇ ನಿನಗೂ, ಷಡ್ಗುಣೈಶ್ವರ್ಯ ಸಂಪನ್ನನಾದ, ವಿಷ್ಣುವಿಗೂ, ದೇವತೆಗಳಿಗೂ ತಾಯಿಯಾಗಿರುವಳು.

೩೩. ನಾಲ್ಕು ಮುಖವುಳ್ಳವಳೂ, ಗೋವಿನ ಆಕಾರವುಳ್ಳವಳೂ, ಆದ ಪ್ರಕೃತಿದೇವಿಯು ನನ್ನ ಸನ್ನಿಧಾನ ಬಲದಿಂದ ಪ್ರಪಂಚವನ್ನು ಸೃಷ್ಟಿಮಾಡುವಳು. ರುದ್ರಾದಿರೂಪನಾದ ನನಗೂ ತಾಯಿಯಾಗಿರುವಳು.

೩೪. ಆ ಪ್ರಕೃತಿಗೆ ಗೌರೀ, ಮಾಯಾ, ವಿದ್ಯಾ, ಕೃಷ್ಣಾ, ಹೈಮವತೀ ಎಂಬ ಹೆಸರುಗಳಿರುವುವು. ಸಾಂಖ್ಯಶಾಸ್ತ್ರಜ್ಞರು, ಪ್ರಧಾನ, ಪ್ರಕೃತಿ, ಎಂಬುದಾಗಿ ಇಪ್ಪತ್ತುನಾಲ್ಕು ತತ್ವಗಳನ್ನು ಹೇಳುವರು.

ಅಜಾಮೇಕಾಂ ಲೋಹಿತ ಶುಕ್ಲ ಕೃಷ್ಣಾಂ ।
ವಿಶ್ವಪ್ರಜಾಂ ಸೃಜಮಾನಾಂ ಸರೂಪಾಂ ॥

ಅಜೋಽಹಂ ಮಾಂ ವಿದ್ಧಿ ತಾಂ ವಿಶ್ವರೂಪಂ
ಗಾಯತ್ರೀಂ ಗಾಂ ವಿಶ್ವರೂಪಾಂ ಹಿ ಬುದ್ಧ್ವಾ ॥೩೫॥

ಏವಮುಕ್ತ್ವಾ ಮಹಾದೇವಃ ಸಸರ್ಜ ಪರಮೇಶ್ವರಃ ।
ತತಶ್ಚ ಪಾರ್ಶ್ವಗಾ ದೇವ್ಯಾಃ ಸರ್ವರೂಪಕುಮಾರಕಾಃ ॥೩೬॥

ಜಟೀ ಮುಂಡೀ ಶಿಖಂಡೀ ಚ ಅರ್ಧಮುಂಡಶ್ಚ ಜಜ್ಞಿರೇ ।
ತತಸ್ತೇನ ಯಥೋಕ್ತೇನ ಯೋಗೇನ ಸುಮಹೌಜಸಃ ॥೩೭॥

ದಿವ್ಯವರ್ಷಸಹಸ್ರಾಂತೇ ಉಪಾಸಿತ್ವಾ ಮಹೇಶ್ವರಂ ।

---

೩೫. ಒಬ್ಬಳೇ ಆಗಿ ಉತ್ಪತ್ತಿಯಿಲ್ಲದವಳಾದ ಆ ಪ್ರಕೃತಿಯು, ಕೆಂಪು, ಬಿಳುಪು, ಕಪ್ಪು ಬಣ್ಣಗಳೆನಿಸಿಕೊಳ್ಳುವ, ರಜಸ್ಸು, ಸತ್ವ, ತಮಸ್ಸು ಗಳೆಂಬ ಮೂರುಗುಣಗಳಿಂದ ಕೂಡಿ, ಆ ಗುಣಗಳಿಂದಲೇ ಪ್ರಪಂಚ ವನ್ನು ಸೃಷ್ಟಿಮಾಡುತ್ತಾ, ಪ್ರಪಂಚಸ್ವರೂಪಳಾಗಿರುವಳು. ಹಿಂದೆ ಹೇಳಿದ ಗೋ ರೂಪವಾದ ಆ ಪ್ರಕೃತಿಯನ್ನೇ ಗಾಯತ್ರೀದೇವಿಯನ್ನಾಗಿ ತಿಳಿ. ನಾನು ನಿರ್ವಿಕಾರನಾದ ಉತ್ಪತ್ತಿರಹಿತನಾದ ಪರಬ್ರಹ್ಮ ನೆಂಬುದಾಗಿ ತಿಳಿ.

೩೬. ಆ ಮಹಾದೇವನಾದ ಪರಮೇಶ್ವರನು ಹೀಗೆಂದುಹೇಳಿ ನಾಲ್ಕು ಜನ ಶಿಷ್ಯರನ್ನು ಸೃಷ್ಟಿಮಾಡಿದನು. ಆ ಪ್ರಕೃತಿದೇವಿಯ ಪಾರ್ಶ್ವಗಳಲ್ಲಿ, ಜಟೀ, ಮುಂಡೀ, ಶಿಖಂಡೀ, ಅರ್ಧಮುಂಡೀ, ಎಂಬ ಹೆಸರುಳ್ಳವರಾಗಿ, ಸಮಸ್ತಲಕ್ಷಣಗಳಿಂದ ಕೂಡಿದ ಆ ಕುಮಾರರು ಪ್ರಕಾಶಿಸುತ್ತಿದ್ದರು.

೩೭–೩೯. ಆಮೇಲೆ, ಆ ಉತ್ತಮವಾದ ತೇಜಸ್ಸುಳ್ಳ ಶಿಷ್ಯರು ಈಶಾನ ದೇವಗುರು ಹೇಳಿಕೊಟ್ಟ ಯೋಗದಿಂದ ಮಹೇಶ್ವರನ ಉಪಾಸ

ಧರ್ಮೋಪದೇಶಮಖಿಲಂ ಕೃತ್ವಾ ಯೋಗಮಯಂ ಧೃಢಂ ॥೩೮॥
ಶಿಷ್ಯಾಶ್ಚ ನಿಯತಾತ್ಮಾನಃ ಪ್ರವಿಷ್ಟಾ ರುದ್ರಮೀಶ್ವರಂ ॥೩೯॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
ಈಶಾನಮಾಹಾತ್ಮ್ಯಕಥನಂ ನಾಮ ಷೋಡಶೋಽಧ್ಯಾಯಃ

---

ನೆಯನ್ನು ಮಾಡಿ ಲೋಕಕ್ಕೆ ಸಮಸ್ತ ಧರ್ಮೋಪದೇಶವನ್ನು ಮಾಡಿ, ದೇವಮಾನದ ಸಾವಿರವರ್ಷಗಳು ಕಳೆದಮೇಲೆ ಆತ್ಮಜ್ಞಾನವುಳ್ಳವರಾಗಿ, ಈಶ್ವರಸ್ವರೂಪನಾದ ಪರಮೇಶ್ವರನಲ್ಲಿ ಐಕ್ಯರಾದರು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಈಶಾನಮೂರ್ತಿಯ ಮಹಿಮೆಯ ವರ್ಣನೆ ಎಂಬ ಹದಿನಾರನೆಯ ಅಧ್ಯಾಯವು ಮುಗಿದುದು.



## ಅಥ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ
## ಸಪ್ತದಶೋಽಧ್ಯಾಯಃ

**ವರ್ಣ್ಯತೇ ಸಪ್ತದಶಕೇ ಸದ್ಯಾದಿ ಮಹಿಮಾಽದ್ಭುತಃ ।**
**ಬ್ರಹ್ಮ ವಿಷ್ಣು ವಿವಾದಸ್ಯ ಶಾಂತ್ಯೈಲಿಂಗಸ್ಯ ಚೋದ್ಭವಃ॥**

**॥ ಸೂತ ಉವಾಚ॥**

**ಏವಂ ಸಂಕ್ಷೇಪತಃಪ್ರೋಕ್ತಃ ಸದ್ಯಾದೀನಾಂ ಸಮುದ್ಭವಃ ।**
**ಯಃ ಪಠೇ ಚ್ಛೃಣುಯಾದ್ವಾಽಪಿ ಶ್ರಾವಯೇದ್ವಾ ದ್ವಿಜೋತ್ತಮಾನ್**
**ಸ ಯಾತಿ ಬ್ರಹ್ಮಸಾಯುಜ್ಯಂ ಪ್ರಸಾದಾತ್ಪರಮೇಷ್ಠಿನಃ ।**

**॥ ಋಷಯ ಊಚುಃ ॥**

**ಕಥಂ ಲಿಂಗ ಮಭೂಲ್ಲಿಂಗೇ ಸಮಭ್ಯರ್ಚ್ಯಃ ಸ ಶಂಕರಃ ॥ ೨ ॥**

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಹದಿನೇಳನೆಯ ಅಧ್ಯಾಯವು

ಈ ಹದಿನೇಳನೆಯ ಅಧ್ಯಾಯದಲ್ಲಿ ಸದ್ಯೋಜಾತಾದಿ ಪಂಚ ಬ್ರಹ್ಮರ ಮಹಿಮೆಯೂ ಬ್ರಹ್ಮ ವಿಷ್ಣುಗಳ ವಿವಾದವನ್ನು ಶಾಂತಿ ಪಡಿಸುವುದ ಕ್ಕಾಗಿ ಲಿಂಗೋತ್ಪತ್ತಿಯಾದ ಬಗೆಯೂ, ಇವನ್ನು ವರ್ಣಿಸಲಾಗುವುದು.

೧. ಸೂತನು ಹೇಳಿದನು: ಈರೀತಿಯಲ್ಲಿ ಸದ್ಯೋಜಾತಾದಿಪಂಚ ಬ್ರಹ್ಮಮೂರ್ತಿಗಳ ಅವತಾರದ ವಿಷಯವನ್ನು ಸಂಗ್ರಹವಾಗಿ ಹೇಳಲಾಯಿತು. ಇದನ್ನು ಯಾರು ಓದುವರೋ ಕೇಳುವರೋ ಅಥವಾ ಮತ್ತೊಬ್ಬ ಬ್ರಾಹ್ಮಣಶ್ರೇಷ್ಠರಿಗೆ ಹೇಳುವರೋ ಅವರು ಬ್ರಹ್ಮನ ಅನುಗ್ರಹದಿಂದ ಪರಮೇಶ್ವರನ ಸಾಯುಜ್ಯವನ್ನು ಪಡೆವರು, ಎಂದನು.

೨. ಎಲೈ ಸೂತನೇ, ಶಂಕರನನ್ನು ಲಿಂಗರೂಪದಲ್ಲಿ ಯಾವ ಕ್ರಮದಿಂದ ಪೂಜಿಸಬೇಕು? ಲಿಂಗವೆಂದರೇನು? ಲಿಂಗಿಯಾದವನು ಯಾರು? ಇವುಗಳನ್ನು ವಿಸ್ತಾರವಾಗಿ ಹೇಳು, ಎಂದು ಶೌನಕಾದಿ ಋಷಿಗಳು ಕೇಳಿದರು.

ಕಿಂ ಲಿಂಗಂ ಕಸ್ತಥಾ ಲಿಂಗೀ ಸೂತಮಿಹಾಹಸ್ತಿ ಕುವ ।
॥ ರೋಮಹರ್ಷಣ ಉವಾಚ ॥
ಏವಂ ದೇವಾಶ್ಚ ಋಷಯಃ ಪ್ರಣಿಪತ್ಯ ಪಿತಾಮಹಂ ॥ ೩ ॥
ಅಪೃಚ್ಛನ್ ಭಗವಲ್ಲಿಂಗಂ ಕಥಾಮಾಸೀದಿತಿ ಸ್ವಯಂ ।
ಲಿಂಗೇ ಮಹೇಶ್ವರೋ ರುದ್ರಃ ಸಮಭ್ಯರ್ಚ್ಯಃ ಕಥಂ ತ್ವಿತಿ ॥ ೪ ॥
ಕಿಂ ಲಿಂಗಂ ಕಸ್ತಥಾ ಲಿಂಗೀ ಸೋಽಪ್ಯಾಹ ಚ ಪಿತಾಮಹಃ ।
॥ ಪಿತಾಮಹ ಉವಾಚ ॥
ಪ್ರಧಾನಂ ಲಿಂಗಮಾಖ್ಯಾತಂ ಲಿಂಗೀಚ ಪರಮೇಶ್ವರಃ ॥ ೫ ॥
ರಕ್ಷಾರ್ಥ ಮಂಬುಧೌ ಮಹ್ಯಂ ವಿಷ್ಣೋಽಸ್ತ್ವಾಸೀತ್ಸುರೋತ್ತಮಾಃ ।
ವೈಮಾನಿಕೇ ಗತೇ ಸರ್ಗೇ ಜನಲೋಕಂ ಸಹರ್ಷಿಭಿಃ ॥ ೬ ॥
ಸ್ಥಿತಿಕಾಲೇ ತದಾ ಪೂರ್ಣೇತತಃ ಪ್ರತ್ಯಾಹೃತೇ ತಥಾ ।
ಚತುರ್ಯುಗಸಹಸ್ರಾಂತೇ ಸತ್ಯಲೋಕಂ ಗತೇ ಸುರಾಃ ॥ ೭ ॥

---

೩–೪. ಸೂತನು ಉತ್ತರವನ್ನು ಹೇಳಿದನು. ನೀವು ಕೇಳಿದಂತೆಯೇ ದೇವತೆಗಳೂ, ಋಷಿಗಳೂ, ಬ್ರಹ್ಮನಿಗೆ ನಮಸ್ಕಾರ ಮಾಡಿ ಎಲೈ ಮಹಾಮಹಿಮನೇ. ಲಿಂಗವು ಹೇಗೆ ಉಂಟಾಯಿತು? ಆ ಲಿಂಗದಲ್ಲಿ ಮಹೇಶ್ವರನಾದ ರುದ್ರನನ್ನು ಹೇಗೆ ಪೂಜಿಸಬೇಕು? ಲಿಂಗವೆಂದರೇನು? ಲಿಂಗಿಯು ಯಾರು? ಎಂಬುದಾಗಿ ಹಿಂದೆ ಪ್ರಶ್ನೆಮಾಡಿದರು. ಆ ಬ್ರಹ್ಮನು ಅವರಿಗೆ ಉತ್ತರವನ್ನು ಹೀಗೆ ಹೇಳಿದನು.

೫. ಎಲೈ ದೇವತೆಗಳೇ, ಲಿಂಗವೆಂದರೆ ಪ್ರಕೃತಿಯು. ಲಿಂಗಿಯು ಪರಮೇಶ್ವರನು. ಇದನ್ನು ವಿಸ್ತರಿಸುವೆನು, ಕೇಳಿರಿ. ಹಿಂದೆ ನನಗೂ ವಿಷ್ಣುವಿಗೂ, ಪ್ರಳಯಕಾಲದ ಸಮುದ್ರ ಮಧ್ಯದಲ್ಲಿ ಪರಸ್ಪರ ಯುದ್ಧವು ಸಂಭವಿಸಿತು. ಹೇಗೆಂದರೆ,

೬–೭. ಎಲೈ ದೇವತೆಗಳೇ, ನಾನು ಸೃಷ್ಟಿಮಾಡಿದ ದೇವತೆಗಳ ಸ್ಥಿತಿಕಾಲವಾದ ಸಾವಿರ ಚತುರ್ಯುಗಗಳು ಪೂರ್ಣವಾಗಿ ಕಳೆಯುತ್ತಲು ದೇವತೆಗಳೆಲ್ಲರೂ ಋಷಿಗಳೊಡನೆ ಜನೋಲೋಕಕ್ಕೆ ಹೊರಟುಹೋದರು.

ನಾನು ಸತ್ಯಲೋಕದಲ್ಲಿರಲಾಗಿ ದೇವತೆಗಳೆಲ್ಲರೂ ತಂತಮ್ಮ ಅಧಿಕಾರಗಳನ್ನು ಬಿಟ್ಟು ಆ ಲಯಕಾಲದಲ್ಲಿ ನನ್ನಸಾಮ್ಯಭಾವವನ್ನು

ವಿನಾಽಽಧಿಪತ್ಯಂ ಸಮತಾಂ ಗತೇಽಂತೇ ಬ್ರಹ್ಮಣೋ ಮುನು ।
ಶುಷ್ಕೇ ಚ ಸ್ಥಾವರೇ ಸರ್ವೇ ತ್ವನಾವೃಷ್ಟ್ಯಾ ಚ ಸರ್ವಶಃ ॥ ೮ ॥
ಪಶವೋ ಮಾನುಷಾ ವೃಕ್ಷಾಃ ಪಿಶಾಚಾಃ ಪಿಶಿತಾಶನಾಃ ।
ಗಂಧರ್ವಾದ್ಯಾಃ ಕ್ರಮೇಣೈವ ನಿರ್ದಗ್ಧಾ ಭಾನು ಭಾನುಭಿಃ ॥ ೯ ॥
ಏಕಾರ್ಣವೇ ಮಹಾಘೋರೇ ತಮೋಭೂತೇ ಸಮಂತತಃ ।
ಸುಷ್ವಾಪಾಂಭಸಿ ಯೋಗಾತ್ಮಾ ನಿರ್ಮಲೋ ನಿರುಪಪ್ಲವಃ ॥೧೦॥
ಸಹಸ್ರ ಶೀರ್ಷಾ ವಿಶ್ವಾತ್ಮಾ ಸಹಸ್ರಾಕ್ಷಃಸಹಸ್ರಪಾತ್ ।
ಸಹಸ್ರ ಬಾಹುಃ ಸರ್ವಜ್ಞಃ ಸರ್ವದೇವಭವೋದ್ಭವಃ ॥೧೧॥
ಹಿರಣ್ಯಗರ್ಭೋ ರಜಸಾ ತಮಸಾ ಶಂಕರಃ ಸ್ವಯಂ ।
ಸತ್ವೇನ ಸರ್ಗಗೋ ವಿಷ್ಣುಃ ಸರ್ವಾತ್ಮತ್ವೇ ಮಹೇಶ್ವರಃ ॥೧೨॥

---

ಹೊಂದಿದರು. ಅಂಪರೆ ನನ್ನಂತೆ ಯಾವ ಕಾರ್ಯವನ್ನೂ ಮಾಡದೇ ಸುಮ್ಮನಿದ್ದರು.

೮–೯. ಆ ಲಯಕಾಲದಲ್ಲಿ ಮಳೆಯಿಲ್ಲದುದರಿಂದ ಎಲ್ಲ ಮರಗಳೂ, ಒಣಗಿಹೋದುವು. ಪಶುಗಳೂ, ಮನುಷ್ಯರೂ, ಮರಗಳೂ, ಪಿಶಾಚಿಗಳೂ, ಮಾಂಸಾಹಾರಿಗಳಾದ ಪ್ರಾಣಿಗಳೂ, ಗಂಧರ್ವರೇ ಮೊದಲಾದವರು, ಕ್ರಮವಾಗಿ ಸೂರ್ಯನ ಕಿರಣಗಳಿಂದ ಸುಟ್ಟುಹೋದರು.

೧೦–೧೨. ಆ ಪ್ರಳಯದಲ್ಲಿ ಪ್ರಪಂಚವೆಲ್ಲವೂ ಒಂದು ಭಯಂಕರವಾದ ಸಮುದ್ರವಾಗಿ ಕತ್ತಲೆಯಿಂದ ತುಂಬಿದ್ದಿತು. ಆ ಸಮುದ್ರದ ನೀರಿನಲ್ಲಿ ಪರಿಶುದ್ಧನೂ, ಯೋಗಿಯೂ, ಯಾವ ಬಾಧೆಯೂ ಇಲ್ಲದವನೂ, ಅನೇಕ ತಲೆಗಳೂ, ಕಣ್ಣುಗಳೂ, ಕಾಲುಗಳೂ, ತೋಳುಗಳೂ, ಉಳ್ಳ ಸಮಸ್ತವನ್ನೂ ತಿಳಿದಿರುವ ಪ್ರಪಂಚ ಸ್ವರೂಪನೂ, ಸಕಲ ದೇವತೆಗಳಿಗೂ, ಉತ್ಪತ್ತಿಕಾರಣನೂ, ರಜೋಗುಣದಿಂದ ಬ್ರಹ್ಮನೂ, ತಮೋಗುಣದಿಂದ ಶಂಕರನೂ, ಸತ್ವಗುಣದಿಂದ ವಿಷ್ಣುವೂ, ಸಮಸ್ತರಿಗೂ ಆತ್ಮಸ್ವರೂಪನಾದುದರಿಂದ ಮಹೇಶ್ವರನೂ, ಕಾಲಸ್ವರೂಪನೂ, ಕಾಲಕಾರಣನೂ, ಪ್ರಕೃತಿಯ ಗುಣಗಳಿಂದ ಬಿಳುಪು ಮತ್ತು ಕಪ್ಪು ಬಣ್ಣ

**ಕಾಲಾತ್ಮಾ ಕಾಲನಾಭಸ್ತು ಶುಕ್ಲಃ ಕೃಷ್ಣಸ್ತು ನಿರ್ಗುಣಃ ।**
**ನಾರಾಯಣೋ ಮಹಾಬಾಹುಃ ಸರ್ವಾತ್ಮಾ ಸದಸನ್ಮಯಃ ॥೧೩॥**

**ತಥಾ ಭೂತ ಮಹಂ ದೃಷ್ಟ್ವಾ ಶಯಾನಂ ಪಂಕಜೇಕ್ಷಣಂ ।**
**ಮಾಯಯಾ ಮೋಹಿತಸ್ತಸ್ಯ ತಮವೋಚ ಮಮರ್ಷಿತಃ ॥೧೪॥**

**ಕಸ್ತ್ವಂ ವದೇತಿ ಹಸ್ತೇನ ಸಮುತ್ಥಾಪ್ಯ ಸನಾತನಂ ।**
**ತದಾ ಹಸ್ತಪ್ರಹಾರೇಣ ತೀವ್ರೇಣ ಸ ದೃಢೇನ ತು ॥೧೫॥**

**ಪ್ರಬುದ್ಧೋಽಹೀಯಶಯನಾ ತ್ಸಮಾಸೀನಃ ಕ್ಷಣಂ ವಶೀ ।**
**ದದರ್ಶ ನಿದ್ರಾವಿಕ್ಲಿನ್ನ ನೀರಜಾಮಲ ಲೋಚನಃ ॥೧೬॥**

**ಮಾಮಗ್ರೇ ಸಂಸ್ಥಿತಂ ಭಾಸಾ ಧ್ಯಾಸಿತೋ ಭಗವಾನ್ ಹರಿಃ ।**
**ಆಹ ಚೋತ್ಥಾಯ ಭಗವಾನ್ ಹಸನ್ ಮಾಂ ಮಧುರಂ ಸಕೃತ್ ॥**

**ಸ್ವಾಗತಂ ಸ್ವಾಗತಂ ವತ್ಸ ಪಿತಾಮಹ ಮಹಾದ್ಯುತೇ ।**

---

ಗಳುಳ್ಳವನೂ, ಸ್ವತಃ ನಿರ್ಗುಣನೂ, ಸಮಸ್ತಕ್ಕೂ ಆತ್ಮಸ್ವರೂಪನೂ, ನಿರ್ವಿಕಾರನಾಗಿ ಸದ್ರೂಪನೂ, ಪ್ರಪಂಚಾಕಾರದಿಂದ ಅಸದ್ರೂಪನೂ, ಮಹಾಬಲಶಾಲಿಯೂ ಆದ ನಾರಾಯಣನೂ ಮಲಗಿದ್ದನು.

೧೪. ಹಾಗೆ ಮಲಗಿರುವ ಕಮಲಾಕ್ಷನಾದ ವಿಷ್ಣುವನ್ನು ನಾನು ನೋಡಿ ಅವನ ಮಾಯೆಯಿಂದ ಮೋಹಿತ (ಭ್ರಾಂತ) ನಾಗಿ ಕೋಪ ದಿಂದ ಅವನನ್ನು ಕೈತಟ್ಟಿ ಎಬ್ಬಿಸಿ ನೀನು ಯಾರು? ಹೇಳು! ಎಂದು ಆ ಅನಾದಿ ಪುರುಷನನ್ನು ಕೇಳಿದೆನು.

೧೫–೧೬. ಆಗ ಬಲವಾದ ಮತ್ತು ಗಟ್ಟಿಯಾದ ನನ್ನ ಕೈಯ್ಯಿನ ಏಟಿನಿಂದ ಎಚ್ಚರವನ್ನು ಹೊಂದಿ ಶಾಂತನಾಗಿ ಹಾವಿನ ಹಾಸಿಗೆಯಿಂದ ಎದ್ದು ಕುಳಿತು ನಿದ್ರೆಯಿಂದ ಬಾಡಿದ ಕಮಲಗಳಂತೆ ಕಣ್ಣುಗಳುಳ್ಳ ಆ ದೇವನು ಕ್ಷಣಕಾಲ ನನ್ನನ್ನು ನೋಡಿದನು.

೧೭. ಮಹಾತ್ಮನಾದ ಆ ಹರಿಯು ತನ್ನ ಮುಂದೆ ನಿಂತಿರುವ ನನ್ನನ್ನು ತನ್ನ ಪ್ರಕಾಶದಿಂದ ಆವರಿಸುತ್ತಾ ನಗುತ್ತಾ ಎದ್ದು ನನ್ನನ್ನು ಕುರಿತು ಮಹಾತೇಜಸ್ವಿಯಾದ ಎಲೈ ಮಗನೇ, ಬ್ರಹ್ಮನೇ, ನಿನಗೆ ಸುಖಾಗಮನವೇ? ಎಂಬುದಾಗಿ ಮೃದುವಾಗಿ ಒಂದುಬಾರಿ ಹೇಳಿದನು.

ತಸ್ಯ ತದ್ವಚನಂ ಶ್ರುತ್ವಾ ಸ್ಮಿತಪೂರ್ವಂ ಸುರರ್ಷಭಾಃ ॥೧೮॥
ರಜಸಾ ಬದ್ಧವೈರಶ್ಚ ತಮುವೋಚಂ ಜನಾರ್ದನಂ ।
ಭಾಷಸೇ ವತ್ಸವತ್ಸೇತಿ ಸರ್ಗಸಂಹಾರ ಕಾರಣಂ ॥೧೯॥
ಮಾಮಿಹಾಂತಃ ಸ್ಮಿತಂಕೃತ್ವಾ ಗುರುಃ ಶಿಷ್ಯಮಿಹಾನಘ ।
ಕರ್ತಾರಂ ಜಗತಾಂ ಸಾಕ್ಷಾತ್ಪ್ರಕೃತೇಶ್ಚ ಪ್ರವರ್ತಕಂ ॥೨೦॥
ಸನಾತನ ಮಜಂ ವಿಷ್ಣುಂ ವಿರಿಂಚಿಂ ವಿಶ್ವಸಂಭವಂ ।
ವಿಶ್ವಾತ್ಮಾನಂ ವಿಧಾತಾರಂ ಧಾತಾರಂ ಪಂಕಜೇಕ್ಷಣಂ ॥೨೧॥
ಕಿಮರ್ಥಂ ಭಾಷಸೇ ಮೋಹಾದ್ವಕ್ತುಮರ್ಹಸಿ ಸತ್ವರಂ ।
ಸೋಽಪಿ ಮಾಮಾಹ ಜಗತಾಂ ಕರ್ತಾಽಹಮಿತಿ ಲೋಕಯ ॥೨೨॥
ಭರ್ತಾ ಹರ್ತಾ ಭವಾನಂಗಾ ದವತೀರ್ಣೋ ಮಮಾವ್ಯಯಾತ್ ।
ವಿಸ್ಮೃತೋಽಸಿ ಜಗನ್ನಾಥ ನಾರಾಯಣಮನಾಮಯಂ ॥೨೩॥

---

೧೮. ಎಲೈ ದೇವಶ್ರೇಷ್ಠರೇ, ಕೇಳಿರಿ. ಆ ನಾರಾಯಣನು ನಗುತ್ತಾ ಹೇಳಿದ ಮಾತನ್ನು ಕೇಳಿ ನಾನು ರಜೋಗುಣದಿಂದ ದ್ವೇಷವುಳ್ಳವನಾಗಿ ದುಷ್ಟರನ್ನು ಶಿಕ್ಷಿಸುವ ಆ ಜನಾರ್ದನನನ್ನು ಕುರಿತು ಹೇಳಿದೆನು.

೧೯–೨೦. ಎಲೈ ನಿರ್ದುಷ್ಟನಾದ ಪುರುಷನೇ, ನೀನು ಒಳಗೊಳಗೇ ನಗುತ್ತಾ ಗುರುವು ಶಿಷ್ಯನಿಗೆ ಹೇಳುವಂತೆ ಈ ಪ್ರಪಂಚಸೃಷ್ಟಿಗೆ ಕಾರಣನೂ ಪ್ರಕೃತಿಯಿಂದ ಸಕಲ ಕಾರ್ಯಗಳನ್ನೂ ಮಾಡಿಸುವವನೂ ಕೊನೆಯಲ್ಲಿ ಪ್ರಪಂಚವನ್ನು ಸಂಹರಿಸುವವನೂ ಆದ ನನ್ನನ್ನು ವತ್ಸ ಎಂದು ಮಾತನಾಡಿಸುತ್ತಿರುವೆ.

೨೧. ಅನಾದಿ ಯಾದವನೂ, ಉತ್ಪತ್ತಿಯಿಲ್ಲದವನೂ, ಸರ್ವವ್ಯಾಪಿಯೂ ಪ್ರಪಂಚವನ್ನು ಸೃಷ್ಟಿಸಿದವನೂ, ಪ್ರಪಂಚಕ್ಕೆ ಆತ್ಮಸ್ವರೂಪನೂ, ವಿಧಿನಿಯಮಗಳನ್ನು ಮಾಡಿದವನೂ, ಕಮಲದಂತೆ ಕಣ್ಣುಳ್ಳವನೂ, ಆದ ನನ್ನನ್ನು ಅಜ್ಞಾನದಿಂದ ಹೀಗೇಕೆ ಮಾತನಾಡಿಸಿದೆ? ಬೇಗನೆ ಹೇಳು ಎಂದೆನು.

೨೨–೨೪. ಆ ನಾರಾಯಣನು ನನ್ನನ್ನು ಕುರಿತು, ಎಲೈ ಚತುರ್ಮುಖನೇ, ಲೋಕವನ್ನು ಸೃಷ್ಟಿಸುವವನೂ, ಪಾಲಿಸುವವನೂ,

ಪುರುಷಂ ಪರಮಾತ್ಮಾನಂ ಪುರುಹೂತಂ ಪುರುಷ್ಟುತಂ ।
ವಿಷ್ಣುಮಚ್ಯುತಮೀಶಾನಂ ವಿಶ್ವಸ್ಯ ಪ್ರಭವೋದ್ಭವಂ ॥೨೪॥
ತವಾಪರಾಧೋ ನಾಸ್ತ್ಯತ್ರ ಮಮ ಮಾಯಾಕೃತಂ ತ್ವಿದಂ ।
ಶೃಣು ಸತ್ಯಂ ಚತುರ್ವಕ್ತ್ರ ಸರ್ವದೇವೇಶ್ವರೋ ಹ್ಯಹಂ ॥೨೫॥
ಕರ್ತಾ ನೇತಾಚ ಹರ್ತಾಚ ನ ಮಯಾಸ್ತಿ ಸಮೋ ವಿಭುಃ ।
ಅಹಮೇವ ಪರಂಬ್ರಹ್ಮ ಪರಂ ತತ್ತ್ವಂ ಪಿತಾಮಹ ॥೨೬॥
ಅಹಮೇವ ಪರಂಜ್ಯೋತಿಃ ಪರಮಾತ್ಮಾ ತ್ವಹಂ ವಿಭುಃ ।
ಯದ್ಯ(ತ್)ದೃಷ್ಟಂ ಶ್ರುತಂ ಸರ್ವಂ ಜಗತ್ಯಸ್ಮಿಂಶ್ಚರಾಚರಂ ॥೨೭॥
ತತ್ತದ್ವಿದ್ಧಿ ಚತುರ್ವಕ್ತ್ರ ಸರ್ವಂ ಮನ್ಮಯಮಿತ್ಯಥ ।
ಮಯಾ ಸೃಷ್ಟಂ ಪುರಾಽವ್ಯಕ್ತಂ ಚತುರ್ವಿಂಶತಿಕಂ ಸ್ವಯಂ ॥೨೮॥

---

ನಾಶಮಾಡುವವನೂ, ನಾನೆಂದು ತಿಳಿ. ನೀನು ನಾಶರಹಿತನಾದ ನನ್ನ ನಾಭಿಯಿಂದ ಹುಟ್ಟಿದವನಾಗಿರುವೆ. ಲೋಕಗಳಿಗೆಲ್ಲಕ್ಕೂ ಒಡೆಯನೂ, ನೀತಿಯೇ ವಾಸಸ್ಥಾನವಾಗಿ ಉಳ್ಳವನೂ, ಸಂಸಾರ ದುಃಖವಿಲ್ಲದವನೂ, ಸರ್ವವ್ಯಾಪಿಯೂ, ಶರೀರಗಳಲ್ಲಿ ಗೋಚರನಾಗುವುದರಿಂದ ಪುರುಷ ನೆನಿಸಿಕೊಂಡಿರುವ ಪರಮಾತ್ಮನೂ, ಯಜ್ಞಗಳಲ್ಲಿ ಮೊದಲನೆಯ ಹವಿರ್ಭಾಗಕ್ಕೆ ಯೋಗ್ಯನೂ, ಮತ್ತು ಸ್ತೋತ್ರಕ್ಕೆ ಅರ್ಹನೂ, ನಾಶ ರಹಿತನೂ. ಈಶ್ವರನೂ, ಪ್ರಪಂಚದ ಉತ್ಪತ್ತಿಗೆ ಕಾರಣನೂ ಆದ ನನ್ನನ್ನು ನೀನು ಮರೆತಿರುವೆ.

೨೫–೨೬. ಎಲೈ ಚತುರ್ಮುಖನೇ, ಈ ವಿಷಯದಲ್ಲಿ ನಿನ್ನ ದೋಷ ವಿಲ್ಲ. ನಿನಗೆ ಬಂದಿರುವ ಈ ಮೋಹವು ನನ್ನ ಮಾಯಾ ಸಂಬಂಧವಾ ದುದು. ನಿಜವಾದುದನ್ನು ಹೇಳುವೆನು, ಕೇಳು. ಸಕಲ ದೇವತೆಗಳಿಗೂ ನಾನೇ ಅಧಿಪತಿಯು. ಅವರನ್ನೆಲ್ಲರನ್ನೂ ಸೃಷ್ಟಿಸಿ, ಪಾಲಿಸಿ, ಸಂಹರಿಸು ವವನು ನಾನೇ. ನನಗೆ ಸಮಾನನಾದ ಸರ್ವವ್ಯಾಪಿಯಾದ ಮತ್ತೊಬ್ಬ ನಿಲ್ಲ. ಎಲೈ ಪಿತಾಮಹನೇ, ನಾನೇ ಪರಬ್ರಹ್ಮನೂ, ಪರತತ್ವಸ್ವರೂ ಪನೂ, ಆಗಿರುವೆನು.

೨೭–೨೮. ನಾನೇ ಶ್ರೇಷ್ಟವಾದ ಪ್ರಕಾಶ ಸ್ವರೂಪನೂ ಸರ್ವ ವ್ಯಾಪಿಯಾದ ಪರಮಾತ್ಮನೂ, ನಾನೇ. ಈ ಪ್ರಪಂಚದಲ್ಲಿ ಯಾವಯಾವ

ನಿತ್ಯಾಂತಾ ಹ್ಯಣವೋ ಬದ್ಧಾಃ ಸೃಷ್ಟಾಃ ಕ್ರೋಧೋದ್ಭವಾದಯಃ।
ಪ್ರಸಾದಾದ್ಧಿ ಭವಾನಂಡಾ ನ್ಯನೇಕಾನೀಹ ಲೀಲಯಾ ॥೨೯॥
ಸೃಷ್ಟ್ವಾ ಬುದ್ಧಿ ರ್ಮಯಾ ತಸ್ಯಾಂ ಅಹಂಕಾರಸ್ತ್ರಿಧಾ ತತಃ।
ತನ್ಮಾತ್ರಾಪಂಚಕಂ ತಸ್ಮಾನ್ಮನಃ ಷಷ್ಠೇಂದ್ರಿಯಾಣಿ ಚ ॥೩೦॥
ಆಕಾಶಾದೀನಿ ಭೂತಾನಿ ಭೌತಿಕಾನಿ ಚ ಲೀಲಯಾ।
ಇತ್ಯುಕ್ತವತಿ ತಸ್ಮಿಂಶ್ಚ ಮಯಿ ಚಾಪಿ ವಚಸ್ತಥಾ ॥೩೧॥
ಆವಯೋಶ್ಚಾಭವದ್ಯುದ್ಧಂ ಸುಘೋರಂ ರೋಮಹರ್ಷಣಂ।
ಪ್ರಳಯಾರ್ಣವ ಮಧ್ಯೇತು ರಜಸಾ ಬದ್ಧವೈರಯೋಃ ॥೩೨॥
ಏತಸ್ಮಿನ್ನಂತರೇ ಲಿಂಗ ಮಭವಚ್ಚಾವಯೋಃ ಪುರಃ।
ವಿವಾದ ಶಮನಾರ್ಥಂ ಹಿ ಪ್ರಭೋಧಾರ್ಥಂ ಚ ಭಾಸ್ವರಂ ॥೩೩॥

---

ಚರಾಚರಪ್ರಾಣಿಗಳನ್ನು ನೋಡಿರುವೆಯೋ ಕೇಳಿರುವೆಯೋ ಅವುಗಳೆಲ್ಲವೂ ನನ್ನ ಸ್ವರೂಪವೆಂದು ತಿಳಿ. ನಾನು ಮೊದಲು ಅವ್ಯಕ್ತವೆಂಬ ಪ್ರಕೃತಿಯನ್ನು ಸೃಷ್ಟಿಸಿದೆನು. ಆ ಪ್ರಕೃತಿಯಿಂದ ಇಪ್ಪತ್ತು ನಾಲ್ಕು ತತ್ವಗಳು ಉಂಟಾದುವು.

೨೯–೩೦. ನಿತ್ಯವಾದ ಆತ್ಮತತ್ವಪರ್ಯಂತವಾಗಿ ಪ್ರಕೃತಿಯು ಸೃಷ್ಟಿ ಮಾಡಿದ ಸಕಲ ಅಣುಗಳೂ, ಕ್ರೋಧಾದಿಗುಣಗಳೂ, ಜನನ ಮರಣ ಪ್ರವಾಹಕ್ಕೆ ಸಿಲುಕಿ ಬದ್ಧಗಳೆನಿಸಿ ಕೊಂಡಿರುವುವು. ನನ್ನ ಅನುಗ್ರಹದಿಂದ ನೀನು ಲೀಲಾಮಾತ್ರದಿಂದ ಅನೇಕ ಬ್ರಹ್ಮಾಂಡಗಳನ್ನು ಸೃಷ್ಟಿಸಿರುವೆ. ನಾನು ನಿನಗೆ ಅಂತಹ ಬುದ್ಧಿಯನ್ನು ಕೊಟ್ಟಿರುವೆನು. ನೀನು ಮೂರು ವಿಧವಾದ ಅಹಂಕಾರಗಳನ್ನು ಸೃಷ್ಟಿಸಿವೆ. ಆ ಮೇಲೆ ಪಂಚ ತನ್ಮಾತ್ರಗಳನ್ನೂ, ಮನಸ್ಸೂ ಸೇರಿ ಆರು ಇಂದ್ರಿಯಗಳನ್ನೂ, ಆಕಾಶಾದಿ ಪಂಚಮಹಾಭೂತಗಳನ್ನೂ, ಆ ಭೂತಗಳಿಂದುಂಟಾದ ಪ್ರಾಣಿಗಳನ್ನೂ ಸೃಷ್ಟಿಸಿದೆ.

೩೧–೩೨. ಹೀಗೆ ಆ ನಾರಾಯಣನು ನನಗೆ ಹೇಳುತ್ತಿರಲು ರಜೋಗುಣದಿಂದ ನಮ್ಮಿಬ್ಬರಿಗೂ ವೈರವು ಹೆಚ್ಚಿ ಆ ಪ್ರಳಯ ಸಮುದ್ರದ ನಡುವೆ ಇಬ್ಬರಿಗೂ ಭಯಂಕರವಾದ ಯುದ್ಧವು ನೆಡೆಯಿತು.

೩೩. ಈ ಸಂದರ್ಭದಲ್ಲಿ ನಮ್ಮ ಯುದ್ಧವನ್ನು ಶಾಂತಿಮಾಡುವುದ

**ಜ್ವಾಲಾಮಾಲಾ ಸಹಸ್ರಾಢ್ಯಂ ಕಾಲಾನಲಶತೋಪಮಂ ।**
**ಕ್ಷಯವೃದ್ಧಿವಿನಿರ್ಮುಕ್ತ ಮಾದಿ ಮಧ್ಯಾಂತವರ್ಜಿತಂ ॥೩೪॥**
**ಅನೌಪಮ್ಯ ಮನಿರ್ದೇಶ್ಯ ಮವ್ಯಕ್ತಂ ವಿಶ್ವಶಂಭುವಂ ।**
**ತಸ್ಯಜ್ವಾಲಾಸಹಸ್ರೇಣ ಮೋಹಿತೋ ಭಗವಾನ್ ಹರಿಃ ॥೩೫॥**
**ಮೋಹಿತಂ ಪ್ರಾಹ ಮಾಮತ್ರ ಪರೀಕ್ಷ್ಯಾವೋಽಗ್ನಿಸಂಭವಂ ।**
**ಅಧೋ ಗಮಿಷ್ಯಾಮ್ಯನಲ ಸ್ತಂಭಸ್ಯಾನುಪ ಮಸ್ಯಚ ॥೩೬॥**
**ಭವಾನೂರ್ಧ್ವಂ ಪ್ರಯತ್ನೇನ ಗಂತುಮರ್ಹಸಿ ಸತ್ವರಂ ।**
**ಏವಂ ವ್ಯಾಹೃತ್ಯ ವಿಶ್ವಾತ್ಮಾ ಸ್ವರೂಪ ಮಕರೋತ್ತದಾ ॥೩೭॥**
**ವಾರಾಹಮಹಮಪ್ಯಾಶು ಹಂಸತ್ವಂ ಪ್ರಾಪ್ತವಾನ್ಸುರಾಃ ।**
**ತದಾ ಪ್ರಭೃತಿ ಮಾಮಾಹು ರ್ಹಂಸಂ ಹಂಸೋ ವಿರಾಡಿತಿ ॥೩೮॥**

---

ಕ್ಕಾಗಿಯೂ, ನಮಗೆ ತಿಳಿವಳಿಕೆಯನ್ನುಂಟುಮಾಡುವುದಕ್ಕಾಗಿಯೂ, ನಮ್ಮೆದುರಿಗೆ ಪ್ರಕಾಶಮಾನವಾದ ಒಂದು ಲಿಂಗವು ಉದ್ಭವಿಸಿತು.

೩೪. ಆ ಲಿಂಗವು ಅನೇಕ ಸಾವಿರ ಉರಿಗಳಿಂದ ಕೂಡಿದ್ದಿತು. ನೂರಾರು ಪ್ರಳಯಕಾಲದ ಅಗ್ನಿಗಳಿಗೆ ಸಮಾನವಾಗಿದ್ದಿತು. ಅದಕ್ಕೆ ಆದಿಮಧ್ಯಅಂತ್ಯಗಳಿರಲಿಲ್ಲ. ಆ ಉರಿಯು ಹೆಚ್ಚಲೂ ಇಲ್ಲ. ಕಡಿಮೆಯಾಗಲೂ ಇಲ್ಲ. ಅದನ್ನು ಇಂಥದೆಂದು ಹೇಳಲು ಸಾಧ್ಯವಾಗಲಿಲ್ಲ. ಅದಕ್ಕೆ ಸಮಾನವಾದುದನ್ನು ನಾನೆಂದೂ ನೋಡಿರಲಿಲ್ಲ.

೩೫-೩೭. ದೇವತೆಗಳೇ, ಕೇಳಿ: ಆ ಲಿಂಗದ ಸಾವಿರಾರು ಉರಿಗಳಿಂದ ಭ್ರಾಂತನಾದ ಹರಿಯು ಭ್ರಾಂತನಾದ ನನ್ನನ್ನು ಕುರಿತು ಈ ಅಗ್ನಿಯಿಂದುಂಟಾದ ಲಿಂಗವನ್ನು ಪರೀಕ್ಷಿಸೋಣ. ನಾನು ಅಸಮಾನವಾದ ಈ ಅಗ್ನಿಸ್ತಂಭದ ಕೆಳಭಾಗಕ್ಕೆ ಹೋಗುವೆನು. ನೀನು ಮೇಲು ಭಾಗಕ್ಕೆ ಹೋಗು. ಎಂದು ಹೇಳಿ ಆ ಪ್ರಪಂಚ ಸ್ವರೂಪವಾದ ವಿಷ್ಣುವು ಬೇಗನೆ ವರಾಹರೂಪವನ್ನು ಹೊಂದಿದನು. ನಾನೂ ಕೂಡ ಹಂಸ ರೂಪವನ್ನು ಹೊಂದಿದೆನು.

೩೮-೩೯. ಎಲೈ ದೇವತೆಗಳೇ: ಅದು ಮೊದಲುಗೊಂಡು ನನ್ನನ್ನು ಹಂಸನೆಂದೂ ವಿರಾಟ್‌ಪುರುಷನೆಂದೂ ಕರೆಯುವರು. ಹಂಸ ಹಂಸನೆಂದು ನನ್ನ ನಾಮಸ್ಮರಣೆ ಮಾಡಿದವರು ಹಂಸ ಸ್ವರೂಪರಾಗುವರು. ನಾನು

ಹಂಸಹಂಸೇತಿ ಯೋ ಬ್ರೂಯಾ ನ್ಮಾಂ ಹಂಸಃ ಸ ಭವಿಷ್ಯತಿ ।
ಸುಶ್ವೇತೋ ಹ್ಯನಲಾಕ್ಷಶ್ಚ ವಿಶ್ವತಃ ಪಕ್ಷಸಂಯುತಃ ॥೩೯॥
ಮನೋಽನಿಲಜವೋ ಭೂತ್ವಾ ಗತೋಽಹಂ ಚೋರ್ಧ್ವತಃ ಸುರಾಃ ।
ನಾರಾಯಣೋಽಪಿ ವಿಶ್ವಾತ್ಮಾ ನೀಲಾಂಜನ ಚಯೋಪಮಂ ॥೪೦॥
ದಶಯೋಜನ ವಿಸ್ತೀರ್ಣಂ ಶತಯೋಜನ ಮಾಯತಂ ।
ಮೇರುಪರ್ವತ ವರ್ಷ್ಮಾಣಂ ಗೌರತೀಕ್ಷ್ಣಾಗ್ರದಂಷ್ಟ್ರಿಣಂ ॥೪೧॥
ಕಾಲಾದಿತ್ಯ ಸಮಾಭಾಸಂ ದೀರ್ಘಘೋಣಂ ಮಹಾಸ್ವನಂ ।
ಹ್ರಸ್ವಪಾದಂ ವಿಚಿತ್ರಾಂಗಂ ಜೈತ್ರಂ ಧೃಢ ಮನೌಪಮಂ ॥೪೨॥
ವಾರಾಹಮಸಿತಂ ರೂಪ ಮಾಸ್ಥಾಯ ಗತವಾನಧಃ ।
ಏವಂ ವರ್ಷಸಹಸ್ರಂ ತು ತ್ವರನ್ವಿಷ್ಣು ರಧೋ ಗತಃ ॥೪೩॥
ನಾಪಶ್ಯದಲ್ಪಮಪ್ಯಸ್ಯ ಮೂಲಂ ಲಿಂಗಸ್ಯ ಸೂಕರಃ ।
ತಾವತ್ಕಾಲಂಗತೋ ಹ್ಯೂರ್ಧ್ವಂ ಅಹಮಪ್ಯರಿಸೂದನಃ ॥೪೪॥

---

ಬಿಳಿಯ ಬಣ್ಣದಿಂದಕೂಡಿ ಅಗ್ನಿಯಂತೆ ಕಣ್ಣುಗಳುಳ್ಳವನಾಗಿ ದೊಡ್ಡ ರೆಕ್ಕೆಗಳಿಂದ ಕೂಡಿ ವಾಯುವೇಗ ಮನೋವೇಗಗಳಿಂದ ಮೇಲು ಭಾಗಕ್ಕೆ ಹಾರಿ ಹೋದೆನು.

**೪೦–೪೨.** ನಾರಾಯಣನೂ ಕೂಡ ಹತ್ತುಯೋಜನ ಅಗಲದ ನೂರು ಯೋಜನ ಉದ್ದದ ಮೇರು ಪರ್ವತದಂತೆ ಶರೀರವುಳ್ಳ ಬೆಳ್ಳಗೆ ಹರಿತವಾದ ಕೋರೆಹಲ್ಲುಗಳಿಂದ ಕೂಡಿದ ಉದ್ದವಾದ ಮೂಗೂ ತುಂಡಾದ ಕಾಲು ಗಳೂ, ಉಳ್ಳ ವಿಚಿತ್ರವಾದ ಕರಿಯ ಹಂದಿಯ ರೂಪವನ್ನು ಹೊಂದಿ ಕೆಳಭಾಗಕ್ಕೆ ಹೋದನು. ಅವನ ತೇಜಸ್ಸು ಪ್ರಳಯಕಾಲದ ಸೂರ್ಯನ ತೇಜಸ್ಸಿನಂತೆ ಇದ್ದಿತು.

೪೩–೪೫. ಹೀಗೆ ಒಂದು ಸಾವಿರ ವರ್ಷಗಳವರೆಗೆ ವಿಷ್ಣುವು ಆತುರ ದಿಂದ ಕೆಳಭಾಗಕ್ಕೆ ಹೋದರೂ ಆ ಲಿಂಗದ ಬುಡವನ್ನು ಕಾಣಲೇಯಿಲ್ಲ. ನಾನೂಕೂಡ ಅಷ್ಟೇಕಾಲ ಮೇಲಕ್ಕೆ ಹಾರಿಹೋದರೂ ವೇಗವಾಗಿ ಆ

ಸತ್ವರಂ ಸರ್ವಯತ್ನೇನ ತಸ್ಯಾಂತಂ ಜ್ಞಾತುಮಿಚ್ಛಯಾ ।
ಶ್ರಾಂತೋ ಹ್ಯದೃಷ್ಟ್ವಾ ತಸ್ಯಾನ್ತ ಮಹಂಕಾರಾದಧೋ ಗತಃ ॥೪೫॥

ತಥೈವ ಭಗವಾನ್ವಿಷ್ಣುಃ ಶ್ರಾಂತಃ ಸಂತ್ರಸ್ತಲೋಚನಃ ।
ಸರ್ವದೇವ ಭವಸ್ತೂರ್ಣ ಮುತ್ಥಿತಃ ಸ ಮಹಾವಪುಃ ॥೪೬॥

ಸಮಾಗತೋ ಮಯಾ ಸಾರ್ಧಂ ಪ್ರಣಿಪತ್ಯ ಮಹಾಮನಾಃ ।
ಮಾಯಯಾ ಮೋಹಿತಃ ಶಂಭೋಸ್ತಸ್ಥೌ ಸಂವಿಗ್ನಮಾನಸಃ ॥೪೭॥

ಪೃಷ್ಠತಃ ಪಾರ್ಶ್ವತಶ್ಚೈವ ಚಾಗ್ರತಃ ಪರಮೇಶ್ವರಂ ।
ಪ್ರಣಿಪತ್ಯ ಮಯಾ ಸಾರ್ಧಂ ಸಸ್ಮಾರ ಕಿಮಿದಂ ತ್ವಿತಿ ॥೪೮॥

ತದಾ ಸಮಭವತ್ತತ್ರ ನಾದೋ ವೈ ಶಬ್ದಲಕ್ಷಣಃ ।
ಓಮೋಮಿತಿ ಸುರಶ್ರೇಷ್ಠಾಃ ಸುವ್ಯಕ್ತಃ ಪ್ಲುತಲಕ್ಷಣಃ ॥೪೯॥

ಕಿಮಿದಂ ತ್ವಿತಿ ಸಂಚಿಂತ್ಯ ಮಯಾತಿಷ್ಠನ್ಮಹಾಸ್ವನಂ ।
ಲಿಂಗಸ್ಯ ದಕ್ಷಿಣೇ ಭಾಗೇ ತದಾಽಪಶ್ಯತ್ಸನಾತನಂ ॥೫೦॥

---

ಲಿಂಗದ ತುದಿಯನ್ನು ತಿಳಿಯಬೇಕೆಂದು ಅಹಂಕಾರದಿಂದ ಪ್ರಯತ್ನಮಾಡಿ ಬಳಲಿ ಅದರ ಕೊನೆಯನ್ನು ಕಾಣದೆ ಕೆಳಭಾಗಕ್ಕೆ ಬಂದೆನು.

೪೬–೪೭. ಹಾಗೆಯೇ ಮಹಾತ್ಮನಾದ ವಿಷ್ಣುವು ಸಕಲ ದೇವತೆಗಳ ಉತ್ಪತ್ತಿಸ್ಥಾನನಾದರೂಕೂಡ ಬಳಲಿ ಕಣ್ಣುಗಳಲ್ಲಿ ಭಯವನ್ನು ಪ್ರಕಾಶ ಪಡಿಸುತ್ತಪಾತಾಳದಿಂದ ಎದ್ದುಬಂದು ನನ್ನೊಡನೆ ಆ ಲಿಂಗಕ್ಕೆ ನಮಸ್ಕರಿಸಿ ಶಿವನಮಾಯೆಯಿಂದ ಮೋಹಿತನಾಗಿ ಉದ್ವೇಗದಿಂದ ಕೂಡಿದ ಮನಸ್ಸುಳ್ಳವನಾಗಿ ನಿಂತುಕೊಂಡನು.

೪೮. ಆ ವಿಷ್ಣುವು ನನ್ನೊಡನೆ ಆ ಲಿಂಗರೂಪನಾದ ಪರಮೇಶ್ವರನಿಗೆ ಸಕಲ ದಿಕ್ಕುಗಳಲ್ಲಿಯೂ ನಮಸ್ಕರಿಸಿ, ಈ ಜ್ವಾಲಾಸ್ತಂಭವು ಏನೆಂದು ಯೋಚನೆ ಮಾಡಿದನು.

೪೯. ಓ ದೇವತೆಗಳಲ್ಲಿ ಶ್ರೇಷ್ಠರೇ, ಆಗ ಜ್ವಾಲಾಲಿಂಗದ ಬಲಭಾಗದ ಪ್ರದೇಶದಲ್ಲಿ ಒಂದರ್ಥವನ್ನು ತಿಳಿಸುವ ಓಂ, ಓಂ, ಎಂಬ ಸ್ಪಷ್ಟವಾದ ಪ್ಲುತಸ್ವರದಿಂದ ಕೂಡಿದ ಒಂದು ಧ್ವನಿಯು ಉತ್ಪನ್ನವಾಯಿತು.

೫೦–೫೧. ಈ ದೊಡ್ಡಧ್ವನಿಯು ಏನೆಂಬುದಾಗಿ ಆಲೋಚಿಸುತ್ತಾ ನಾನು ನಿಂತೆನು. ಆ ಲಿಂಗದ ಬಲಭಾಗದಲ್ಲಿ ಮೊದಲನೆಯ ಅ ವರ್ಣ

ಆದ್ಯವರ್ಣಮಕಾರಂ ತು ಉಕಾರಂ ಚೋತ್ತರೇ ತತಃ ।
ಮಕಾರಂ ಮಧ್ಯತಶ್ಚೈವ ನಾದಾಂತಂ ತಸ್ಯ ಚೋಮಿತಿ ॥೫೧॥
ಸೂರ್ಯಮಂಡಲವದ್ದೃಷ್ಟ್ವಾ ವರ್ಣಮಾದ್ಯಂ ತು ದಕ್ಷಿಣೇ ।
ಉತ್ತರೇ ಪಾವಕಪ್ರಖ್ಯ ಮುಕಾರಂ ಪುರುಷರ್ಷಭಃ ॥೫೨॥
ಶೀತಾಂಶು ಮಂಡಲಪ್ರಖ್ಯಂ ಮಕಾರಂ ಮಧ್ಯಮಂ ತಥಾ ।
ತಸ್ಯೋಪರಿ ತದಾಽಪಶ್ಯ ಚ್ಛುದ್ಧಸ್ಫಟಿಕವತ್ಪ್ರಭುಂ ॥೫೩॥
ತುರೀಯಾತೀತ ಮಮೃತಂ ನಿಷ್ಕಲಂ ನಿರುಪಪ್ಲವಂ ।
ನಿರ್ದ್ವಂದ್ವಂ ಕೇವಲಂ ಶೂನ್ಯಂ ಬಾಹ್ಯಾಭ್ಯಂತರವರ್ಜಿತಂ ॥೫೪॥
ಸಬಾಹ್ಯಾಭ್ಯಂತರಂ ಚೈವ ಸಬಾಹ್ಯಾಭ್ಯಂತರಸ್ಥಿತಂ ।
ಆದಿಮಧ್ಯಾಂತರಹಿತ ಮಾನಂದಸ್ಯಾಪಿ ಕಾರಣಂ ॥೫೫॥

---

ವನ್ನೂ ಆ ಮೇಲೆ ಉಕಾರವನ್ನೂ ನಡುವೆ ಮಕಾರವನ್ನೂ ಕೊನೆಯಲ್ಲಿ ನಾದವನ್ನೂ ಎಲ್ಲವೂಸೇರಿ ಒಂದು ಅವ್ಯಕ್ತವಾದ ಓಂ ಎಂಬ ಅನಾದಿಯಾದ ಧ್ವನಿಯನ್ನು ಕಂಡೆನು (ಕೇಳಿದೆನು).

೫೨–೫೩. ದಕ್ಷಿಣಭಾಗದಲ್ಲಿ ಆದಿವರ್ಣವಾದ ಅಕಾರವನ್ನು ಸೂರ್ಯಮಂಡಲದಂತೆಯೂ, ಉತ್ತರಭಾಗದಲ್ಲಿ ಉಕಾರವನ್ನು ಅಗ್ನಿ ಮಂಡಲದಂತೆಯೂ, ನಡುವೆ ಮಕಾರವನ್ನು ಚಂದ್ರಮಂಡಲದಂತೆಯೂ, ಕೊನೆಗೆ ನಾದವೂ ಇರುವುದನ್ನು ನೋಡಿ ಅದರ ಮೇಲೆ ಸ್ಫಟಿಕದಂತೆ ಪರಿಶುದ್ಧನಾದ ಶಿವನನ್ನು ಆ ಪುರುಷ ಶ್ರೇಷ್ಠನಾದ ವಿಷ್ಣುವು ನೋಡಿದನು.

೫೪–೫೫. ಆ ಶಿವನು ತುರೀಯನಾದುದರಿಂದ ಮೂರು ಗುಣಗಳಿಗೆ ಮೀರಿದವನು. ನಾಶವಿಲ್ಲದವನು. ಭಾಗವಿಲ್ಲದವನು. ಬಾಧಾರಹಿತನು. ಸುಖದುಃಖಾದಿಗಳಿಲ್ಲದವನು. ಏಕರೂಪನು. ಭೇದವಿಲ್ಲದವನು. ಅಳತೆಗೆ ಸಿಕ್ಕದವನು. ಮೊದಲು, ಮಧ್ಯ, ಕೊನೆ, ಇವುಗಳಿಲ್ಲದವನು. ಆನಂದವನ್ನು ಪ್ರಕಾಶಪಡಿಸತಕ್ಕವನು.

**ಮಾತ್ರಾಸ್ತಿಸ್ರಸ್ತ್ವರ್ಧಮಾತ್ರಂ ನಾದಾಖ್ಯಂ ಬ್ರಹ್ಮಸಂಜ್ಞಿತಂ ।**
**ಋಗ್ಯಜುಃ ಸಾಮವೇದಾ ವೈ ಮಾತ್ರಾರೂಪೇಣ ಮಾಧವಃ ॥೫೬॥**
**ವೇದ ಶಬ್ದೇಭ್ಯ ಏವೇಶಂ ವಿಶ್ವಾತ್ಮಾನ ಮಚಿಂತಯತ್ ।**
**ತದಾಽಭವದೃಷಿರ್ವೇದ ಋಷೇಃ ಸಾರತಮಂ ಶುಭಂ ॥೫೭॥**
**ತೇನೈವ ಋಷಿಣಾ ವಿಷ್ಣು ರ್ಜ್ಞಾತವಾನ್ ಪರಮೇಶ್ವರಂ ।**

**॥ ದೇವ ಉವಾಚ ॥**

**ಚಿಂತಯಾ ರಹಿತೋ ರುದ್ರೋ ವಾಚೋ ಯನ್ಮನಸಾ ಸಹ ॥೫೮॥**
**ಅಪ್ರಾಪ್ಯ ತಂ ನಿವರ್ತಂತೇ ವಾಚ್ಯಸ್ತ್ವೇಕಾಕ್ಷರೇಣ ಸಃ ।**
**ಏಕಾಕ್ಷರೇಣ ತದ್ವಾಚ್ಯ ಮೃತಂ ಪರಮಕಾರಣಂ ॥೫೯॥**

---

೫೬. ಅಕಾರ, ಉಕಾರ, ಮಕಾರ, ರೂಪವಾದ ಮೂರು ಮಾತ್ರೆಗಳೂ, ಅರ್ಧಮಾತ್ರೆಯೂ ಸೇರಿ ಓಂಕಾರ ರೂಪವಾಯಿತು. ಆ ಪ್ರಣವದ ಕೊನೆಯಲ್ಲಿ ಉಂಟಾಗುವ ಧ್ವನಿಗೆ ನಾದವೆಂದು ಹೆಸರು. ಅದನ್ನೇ ಬ್ರಹ್ಮನೆಂದು ಹೇಳುವರು. ವಿಷ್ಣುವು ಋಗ್ವೇದ, ಯಜುರ್ವೇದ, ಸಾಮವೇದಗಳನ್ನು ಮಾತ್ರಾರೂಪದಿಂದ ತಿಳಿದು, ಆ ವೇದಗಳ ಶಬ್ದಗಳಿಂದಲೇ ಪ್ರಪಂಚ ಸ್ವರೂಪನಾದ ಶಿವನನ್ನು ಧ್ಯಾನಿಸಿದನು.

೫೭. ಅದು ಮೊದಲುಗೊಂಡು ವೇದವು ಅತೀಂದ್ರಿಯವಾದ ವಿಷಯಗಳನ್ನು ತಿಳಿಸುವ ಸಾರವಾದ ಮಂಗಳಕರವಾದ ಶಬ್ದ ಸಮುದಾಯವಾಯಿತು. ಆ ವೇದವೆಂಬ ಋಷಿಯಿಂದಲೇ ವಿಷ್ಣುವು ಪರಮೇಶ್ವರನನ್ನು ತಿಳಿದುಕೊಂಡನು. ಹೇಗೆಂದರೆ;

೫೮-೫೯. ಬ್ರಹ್ಮನು ಹೇಳಿದನು: ಮನಸ್ಸಿನಿಂದೊಡಗೂಡಿದ ಮಾತು ಯಾವ ರುದ್ರನನ್ನು ತಿಳಿಸಲಾರದೇ ಹಿಂದಿರುಗುವುದೋ ಅಂತಹ ಮನೋವೃತ್ತಿರಹಿತನಾದ ರುದ್ರನು ಏಕಾಕ್ಷರವಾದ ಪ್ರಣವಕ್ಕೆ ಅರ್ಥ ಸ್ವರೂಪನಾಗಿರುವನು. ಆ ಸತ್ಯಸ್ವರೂಪನಾದ, ಸಮಸ್ತಕ್ಕೂ ಕಾರಣವಾದ, ಪರಬ್ರಹ್ಮವಸ್ತುವೂ, ಏಕಾಕ್ಷರವಾದ ಓಂಕಾರಕ್ಕೆ ಅರ್ಥ ಸ್ವರೂಪವಾದುದು. ಆದುದರಿಂದ ರುದ್ರನು ಪರಬ್ರಹ್ಮಸಮಾನನು. ಪತಂಜಲಿಯ ಯೋಗಸೂತ್ರದಲ್ಲಿ "ತಸ್ಯವಾಚಕಃ ಪ್ರಣವಃ" ಎಂದು ಹೇಳಿರುವರು. ಅದು ಸಂಗತವಾದಂತಾಯಿತು.

ಸತ್ಯ ಮಾನಂದಮಮೃತಂ ಪರಂ ಬ್ರಹ್ಮ ಪರಾತ್ಪರಂ ।
ಏಕಾಕ್ಷರಾ ದಕಾರಾಖ್ಯೋ ಭಗವಾನ್ಕನಕಾಂಡಜಃ ॥೬೦॥

ಏಕಾಕ್ಷರಾದುಕಾರಾಖ್ಯೋ ಹರಿಃ ಪರಮಕಾರಣಂ।
ಏಕಾಕ್ಷರಾನ್ಮಕಾರಾಖ್ಯೋ ಭಗವಾನ್ನೀಲಲೋಹಿತಃ ॥೬೧॥

ಸರ್ಗಕರ್ತಾ ತ್ವಕಾರಾಖ್ಯೋ ಹ್ಯುಕಾರಾಖ್ಯಸ್ತು ಮೋಹಕಃ ।
ಮಕಾರಾಖ್ಯ ಸ್ತಯೋ ರ್ನಿತ್ಯ ಮನುಗ್ರಹಕರೋಽಭವತ್ ॥೬೨॥

ಮಕಾರಾಖ್ಯೋ ವಿಭುರ್ಬೀಜೀ ಹ್ಯಕಾರೋ ಬೀಜಮುಚ್ಯತೇ ।
ಉಕಾರಾಖ್ಯೋ ಹರಿರ್ಯೋನಿಃ ಪ್ರಧಾನಪುರುಷೇಶ್ವರಃ ॥೬೩॥

ಬೀಜೀ ಚ ಬೀಜಂ ತದ್ಯೋನಿಃ ನಾದಾಖ್ಯಶ್ಚ ಮಹೇಶ್ವರಃ ।
ಬೀಜೀ ವಿಭಜ್ಯ ಚಾತ್ಮಾನಂ ಸ್ವೇಚ್ಛಯಾ ತು ವ್ಯವಸ್ಥಿತಃ ॥೬೪॥

---

೬೦–೬೧. ನಿತ್ಯವೂ, ಆನಂದಸ್ವರೂಪವೂ, ನಾಶರಹಿತವೂ, ಆದ ಪರಬ್ರಹ್ಮ ವಸ್ತುವೇ ಅತ್ಯಂತ ಶ್ರೇಷ್ಠವಾದುದು. ಏಕಾಕ್ಷರ ವಾಚ್ಯ ನಾದುದರಿಂದ ಹಿರಣ್ಯಗರ್ಭನು ಅಕಾರ ಸ್ವರೂಪನು. ಸಕಲ ಕಾರಣ ನಾದ ಹರಿಯು ಉಕಾರ ಸ್ವರೂಪನು. ಮಹಾಮಹಿಮನಾದ ರುದ್ರನು ಮಕಾರ ಸ್ವರೂಪನು.

೬೨. ಸೃಷ್ಟಿಕರ್ತನಾದ ಬ್ರಹ್ಮನು ಅ ಎಂಬ ಅಕ್ಷರದ ಹೆಸರುಳ್ಳ ವನು. ಉಕಾರದ ಹೆಸರುಳ್ಳ ವಿಷ್ಣುವು ಮಾಯೆಯಿಂದ ಸಕಲ ಪ್ರಪಂಚ ವನ್ನೂ ಭ್ರಾಂತಿಗೊಳಿಸುವನು. ಮಕಾರದ ಹೆಸರುಳ್ಳ ರುದ್ರನು ಆ ವಿಷ್ಣು ಬ್ರಹ್ಮರಿಗೆ ಯಾವಾಗಲೂ ಅನುಗ್ರಹವನ್ನು ಮಾಡತಕ್ಕವನಾದನು. ಈ ಮೂರು ಮಾತ್ರೆಗಳೂ, ನಾದದಿಂದ ಹೇಳಲ್ಪಡತಕ್ಕವಾದುದರಿಂದ ನಾದವೇ ಮಹೇಶ್ವರನು.

೬೩. ಮಕಾರ ಸ್ವರೂಪನಾದ ಸರ್ವವ್ಯಾಪಿಯಾದ ಶಿವನು ಬೀಜ ಕಾರಣನು. ಅಕಾರ ಸ್ವರೂಪವಾದ ಬ್ರಹ್ಮನು ಬೀಜಸ್ವರೂಪದವನು. ಉಕಾರ ಸ್ವರೂಪನಾದ ಹರಿಯು ಉತ್ಪತ್ತಿಸ್ವರೂಪವಾದ ಯೋನಿ ಸ್ವರೂಪನು.

೬೪–೬೫. ಬೀಜಕಾರಣ, ಬೀಜ, ಯೋನಿ, ಈ ಮೂರೂ ಸೇರಿ ಪ್ರಧಾನವೆಂಬ ಪ್ರಕೃತಿಗೂ, ಪುರುಷನಿಗೂ ಅಧಿಪತಿಯಾದ ನಾದಸ್ವರೂ

ಅಸ್ಯ ಲಿಂಗಾದಭೂದ್ಬೀಜ ಮಕಾರೋ ಬೀಜಿನಃ ಪ್ರಭೋಃ ।
ಉಕಾರಯೋನೌ ನಿಕ್ಷಿಪ್ತ ಮವರ್ಧತ ಸಮಂತತಃ ॥೬೫॥
ಸೌ ವರ್ಣಮ ಭವಚ್ಚಾಂಡ ಮಾವೇಷ್ಟ್ಯಾದ್ಯಂ ತದಕ್ಷರಂ ।
ಅನೇಕಾಬ್ದಂ ತಥಾ ಚಾಪ್ಸು ದಿವ್ಯಮಂಡಂ ವ್ಯವಸ್ಥಿತಂ ॥೬೬॥
ತತೋ ವರ್ಷ ಸಹಸ್ರಾಂತೇ ದ್ವಿಧಾ ಕೃತ ಮಜೋದ್ಭವಂ ।
ಅಂಡಮಪ್ಸುಸ್ಥಿತಂ ಸಾಕ್ಷಾದಾ ದ್ಯಾಖ್ಯೇನೇ ಶ್ವರೇಣ ತು ॥೬೭॥
ತಸ್ಯಾಂಡಸ್ಯ ಶುಭಂ ಹೈಮಂ ಕಪಾಲಂ ಚೋರ್ಧ್ವ ಸಂಸ್ಥಿತಂ ।
ಜಜ್ಞೇ ಯದ್ ದ್ಯೌಸ್ತದಪರಂ ಪೃಥಿವೀ ಪಂಚಲಕ್ಷಣಾ ॥೬೮॥

---

ಪನಾದ ಪರಮೇಶ್ವರನೆನಿಸಿಕೊಳ್ಳುವನು. ಬೀಜಕಾರಣನಾದ ಪರಮೇಶ್ವರನು ತನ್ನ ಇಚ್ಛೆಯಿಂದ ತನ್ನನ್ನೇ ಹೀಗೆ ವಿಭಾಗ ಮಾಡಿಕೊಂಡಿದ್ದನು. ಬೀಜಕಾರಣನಾದ ಪರಮೇಶ್ವರನ ಲಿಂಗದಿಂದ ಉಕಾರಯೋನಿಸ್ವರೂಪನಾದ ವಿಷ್ಣುವಿನಲ್ಲಿ ಇಡಲ್ಪಟ್ಟ ಅಕಾರ ಬೀಜವಾದ ಬ್ರಹ್ಮನು ಅಭಿವೃದ್ಧಿ ಹೊಂದಿದನು. ಎಂದರೆ ಬೀಜವು ಬ್ರಹ್ಮಾಂಡ ಕಾರಣವಾಯಿತು.

೬೬. ಆದಿಭೂತವಾದ ನಾಶರಹಿತವಾದ ಆ ಬೀಜವು ದೊಡ್ಡದಾದ ಚಿನ್ನದ ಮೊಟ್ಟೆಯಾಯಿತು. ಆ ದಿವ್ಯವಾದ ಅಂಡವು ಅನೇಕ ವರ್ಷಗಳ ವರೆಗೆ ನೀರಿನಲ್ಲಿದ್ದಿತು.

೬೭. ಆಮೇಲೆ ಸಾವಿರ ವರ್ಷಗಳ ಕೊನೆಯಲ್ಲಿ ಆ ನೀರಿನಲ್ಲಿದ್ದ ಬ್ರಹ್ಮಾಂಡವು ಆದಿಸ್ವರೂಪನಾದ ಈಶ್ವರನಿಂದ ಎರಡು ಭಾಗವಾಗಿ ಮಾಡಲ್ಪಟ್ಟಿತು.

೬೮. ಆ ಬ್ರಹ್ಮಾಂಡದ ಮಂಗಳಕರವಾದ ಚಿನ್ನದ ಹೋಳು ಮೇಲು ಭಾಗದಲ್ಲಿದ್ದ ಸ್ವರ್ಗವಾಯಿತು. ಮತ್ತೊಂದು ಹೋಳು ಪಂಚಭೂತ ಲಕ್ಷಣಗಳುಳ್ಳ ಭೂಮಿಯಾಯಿತು.

**ತಸ್ಮಾದಂಡೋ ದ್ಭವೋ ಜಜ್ಞೇ ತ್ವಕಾರಾಖ್ಯಶ್ಚತುರ್ಮುಖಃ ।**
**ಸ ಸ್ರಷ್ಟಾ ಸರ್ವಲೋಕಾನಾಂ ಸ ಏವ ತ್ರಿವಿಧಃ ಪ್ರಭುಃ ॥೬೯॥**
**ಏವ ಮೋಮೋಮಿತಿ ಪ್ರೋಕ್ತ ಮಿತ್ಯಾಹುರ್ಯಜುಷಾಂ ವರಾಃ ।**
**ಯಜುಷಾಂ ವಚನಂ ಶ್ರುತ್ವಾ ಋಚಃ ಸಾಮಾನಿ ಸಾದರಂ ॥೭೦॥**
**ಏವಮೇವ ಹರೇ ಬ್ರಹ್ಮನ್ನಿತ್ಯಾಹುಃ ಶ್ರುತಯಸ್ತದಾ ।**
**ತತೋ ವಿಜ್ಞಾಯ ದೇವೇಶಂ ಯಥಾವಚ್ಛ್ರುತಿ ಸಂಭವೈಃ ॥೭೧॥**
**ಮಂತ್ರೈರ್ಮಹೇಶ್ವರಂ ದೇವಂ ತುಷ್ಟಾವ ಸು ಮಹೋದಯಂ।**
**ಆವಯೋಃ ಸ್ತುತಿ ಸಂತುಷ್ಟೋ ಲಿಂಗೇ ತಸ್ಮಿನ್ನಿರಂಜನಃ ॥೭೨॥**

---

೬೯. ಆ ಅಂಡದ ದೆಸೆಯಿಂದ ಅಕಾರ ಸ್ವರೂಪನಾದ ಚತುರ್ಮುಖ ಬ್ರಹ್ಮನು ಹುಟ್ಟಿದನು. ಆ ಬ್ರಹ್ಮನೇ ಈ ಸಕಲ ಲೋಕಗಳನ್ನೂ ಸೃಷ್ಟಿಸಿದನು. ಅವನೇ ಸೃಷ್ಟಿ ಸ್ಥಿತಿ ಸಂಹಾರ ರೂಪವಾದ ಮೂರು ಕಾರ್ಯಗಳಿಗೂ ಒಡೆಯನು.

೭೦. ಈ ರೀತಿಯಲ್ಲಿ ಓಂಕಾರ ರೂಪನಾದ ಬ್ರಹ್ಮನನ್ನು ಯಜುರ್ವೇದದ ಉಪನಿಷತ್ತುಗಳು ಓಂ ಎಂಬುದಾಗಿ ಪ್ರಣವಮಂತ್ರದಿಂದ ಪ್ರತಿಪಾದ್ಯನೆಂದು ಹೇಳುವುವು. ಯಜುರ್ವೇದದ ಮಾತನ್ನೇ ಅನುಸರಿಸಿ ಋಗ್ವೇದದ ಮಂತ್ರಗಳೂ, ಸಾಮಗಳೂ, ಆದರದಿಂದ ಅದನ್ನು ಒಪ್ಪಿಕೊಂಡಿರುವುವು. ಆದುದರಿಂದ "ತಸ್ಯ ಯಜುರೇವ ಶಿರಃ" ಎಂಬ ಶ್ರುತಿಯಿಂದ ಯಜುರ್ವೇದಕ್ಕೆ ಪ್ರಾಧಾನ್ಯವು ಬಂದಂತಾಯಿತು.

೭೧. ಹೀಗೆಯೇ ವೇದಗಳೆಲ್ಲವೂ ಆ ಮಹಾಮಹಿಮನನ್ನು ಹರೇ ಬ್ರಹ್ಮನ್ ಎಂಬುದಾಗಿ ಹೇಳಿ ಸ್ತೋತ್ರಮಾಡಿದವು. ಆಮೇಲೆ ನಾವಿಬ್ಬರೂ ವೇದಮಂತ್ರಗಳಿಂದ ಆ ದೇವದೇವನಾದ ಮಹೇಶ್ವರನನ್ನು ತಿಳಿದುಕೊಂಡು ಆ ಮಂತ್ರಗಳಿಂದಲೇ ಅವನನ್ನು ಸ್ತೋತ್ರಮಾಡಿದೆವು.

೭೨. ನಮ್ಮ ಸ್ತೋತ್ರಗಳಿಂದ ಸಂತೋಷಗೊಂಡ ಮಾಯಾವರಣವಿಲ್ಲದ ಈಶ್ವರನು ಆ ಲಿಂಗದಲ್ಲಿ ದಿವ್ಯವಾದ ಶಬ್ದಬ್ರಹ್ಮರೂಪವನ್ನು ಹೊಂದಿ ನಗುತ್ತಲಿದ್ದನು. ಆ ಶಬ್ದಬ್ರಹ್ಮದಸ್ವರೂಪವು ಹೇಗಿತ್ತೆಂದರೆ:

ದಿವ್ಯಂ ಶಬ್ದಮಯಂ ರೂಪ ಮಾಸ್ಥಾಯ ಪ್ರಹಸನ್ ಸ್ಥಿತಃ ।
ಅಕಾರಸ್ತಸ್ಯ ಮೂರ್ಧಾ ತು ಲಲಾಟಂ ದೀರ್ಘ ಮುಚ್ಯತೇ ॥೭೩॥

ಇಕಾರೋ ದಕ್ಷಿಣಂ ನೇತ್ರ ಮೀಕಾರೋ ವಾಮಲೋಚನಂ ।
ಉಕಾರೋ ದಕ್ಷಿಣಂ ಶ್ರೋತ್ರ ಮೂಕಾರೋ ವಾಮ ಮುಚ್ಯತೇ ॥

ಋಕಾರೋ ದಕ್ಷಿಣಂ ತಸ್ಯ ಕಪೋಲಂ ಪರಮೇಷ್ಠಿನಃ ।
ವಾಮಂ ಕಪೋಲ ಮ್ಯೂಕಾರೋ ೞ ೞ ನಾಸಾಪುಟೇ ಉಭೇ ॥೭೫॥

ಏಕಾರ ಮೋಷ್ಠಮೂರ್ಧ್ವಶ್ಚ ಐಕಾರಸ್ತ್ವಧರೋ ವಿಭೋಃ ।
ಓಕಾರಶ್ಚ ತಥೌಕಾರೋ ದಂತಪಙ್ಕ್ತಿದ್ವಯಂ ಕ್ರಮಾತ್ ॥೭೬॥

ಅಮಸ್ತುತಾಲುನೀ ತಸ್ಯ ದೇವದೇವಸ್ಯ ಧೀಮತಃ ।
ಕಾದಿ ಪಂಚಾಕ್ಷರಾಣ್ಯಸ್ಯ ಪಂಚಹಸ್ತಾನಿ ದಕ್ಷಿಣೇ ॥೭೭॥

ಚಾದಿ ಪಂಚಾಕ್ಷರಾಣ್ಯೇವಂ ಪಂಚಹಸ್ತಾನಿ ವಾಮತಃ ।
ಟಾದಿ ಪಂಚಾಕ್ಷರಂ ಪಾದಸ್ತಾದಿ ಪಂಚಾಕ್ಷರಂ ತಥಾ ॥೭೮॥

ಪಕಾರ ಮುದರಂ ತಸ್ಯ ಫಕಾರಃ ಪಾರ್ಶ್ವಮುಚ್ಯತೇ ।
ಬಕಾರೋ ವಾಮಪಾರ್ಶ್ವಂ ವೈ ಭಕಾರಂ ಸ್ಕಂಧ ಮಸ್ಯ ತತ್ ॥

---

೭೩–೭೬. ಆ ಶಿವನ ಒಂದೊಂದು ಅವಯವಗಳೂ ಒಂದೊಂದು ಧ್ವನಿಯ ಸ್ವರೂಪವಾಗಿದ್ದಿತು. ಹೇಗೆಂದರೆ, ಅಕಾರವು ನೆತ್ತಿ, ಆಕಾರವು ಹಣೆ, ಹಾಗೆಯೇ ಇ, ಬಲಕಣ್ಣು, ಈ ಎಡಕಣ್ಣು, ಉ, ಬಲಗಿವಿ, ಊ ಎಡಕಿವಿ, ಋ, ಬಲದ ಕೆನ್ನೆ; ೠ, ಎಡದ ಕೆನ್ನೆ, ೞ, ೞ, ಎರಡೂ ಮೂಗಿನ ಹೊಳ್ಳೆಗಳು, ಏ, ಮೇಲಿನ ತುಟಿ, ಐ, ಕೆಳಗಿನ ತುಟಿ, ಓ ಔಗಳು ಹಲ್ಲುಗಳ ಸಾಲುಗಳು.

೭೭–೭೮. ಅನುಸ್ವಾರ ವಿಸರ್ಗಗಳು ಆ ದೇವನ ದವಡೆಗಳು. ಕಕಾರಾದಿಯಾದ ಐದು ಅಕ್ಷರಗಳು ಬಲಗೈಗಳು. ಚಕಾರಾದಿ ಐದಕ್ಷರಗಳು ಎಡಗೈಗಳು. ಟಕಾರಾದಿ ಐದಕ್ಷರಗಳು ಬಲಗಾಲು, ತಕಾರಾದಿ ಐದಕ್ಷರಗಳು ಎಡಗಾಲು.

೭೯–೮೦. ಪ, ಹೊಟ್ಟೆ, ಫ, ಬಲಪಾರ್ಶ್ವ. ಬ, ಎಡಪಾರ್ಶ್ವ. ಭ, ಹೆಗಲು. ಮ, ಹೃದಯ. ಯ, ರ, ಲ, ವ, ಶ, ಷ, ಸ, ಇವು ಸಪ್ತ

ಮಕಾರಂ ಹೃದಯಂ ಶಂಭೋರ್ಮಹಾದೇವಸ್ಯ ಯೋಗಿನಃ ।
ಯಕಾರಾದಿ ಸಕಾರಾಂತಾ ವಿಭೋರ್ವೈ ಸಪ್ತಧಾತವಃ ॥೮೦॥
ಹಕಾರ ಆತ್ಮರೂಪಂ ವೈ ಕ್ಷಕಾರಃ ಕ್ರೋಧ ಉಚ್ಯತೇ ।
ತಂ ದೃಷ್ಟ್ವಾ ಉಮಯಾ ಸಾರ್ಧಂ ಭಗವಂತಂ ಮಹೇಶ್ವರಂ ॥೮೧॥
ಪ್ರಣಮ್ಯ ಭಗವಾನ್ವಿಷ್ಣುಃ ಪುನಶ್ಚಾಪಶ್ಯದೂರ್ಧ್ವತಃ ।
ಓಂಕಾರಪ್ರಭವಂ ಮಂತ್ರಂ ಕಲಾಪಂಚಕ ಸಂಯುತಂ ॥೮೨॥
ಶುದ್ಧಸ್ಫಟಿಕಸಂಕಾಶಂ ಶುಭಾಷ್ಟತ್ರಿಂಶದಕ್ಷರಂ ।
ಮೇಧಾಕರಮಭೂದ್ಭೂಯಃ ಸರ್ವಧರ್ಮಾರ್ಥಸಾಧಕಂ ॥೮೩॥
ಗಾಯಿತ್ರೀಪ್ರಭವಂ ಮಂತ್ರಂ ಹರಿತಂ ವಶ್ಯಕಾರಕಂ ।
ಚತುರ್ವಿಂಶತಿವರ್ಣಾಢ್ಯಂ ಚತುಷ್ಕಲ ಮನುತ್ತಮಂ ॥೮೪॥

---

ಧಾತುಗಳು. ಹ, ಆತ್ಮಸ್ವರೂಪ. ಕ್ಷ, ಕ್ರೋಧ.

೮೧–೮೨. ಉಮಾದೇವೀ ಸಹಿತನಾದ ಅರ್ಧನಾರೀಶ್ವರ ಸ್ವರೂಪನಾದ ಷಡ್ಗುಣೈಶ್ವರ್ಯ ಸಂಪನ್ನನಾದ ಆ ಮಹೇಶ್ವರನನ್ನು ನೋಡಿ ವಿಷ್ಣುವು ನಮಸ್ಕರಿಸಿ ಮತ್ತೆ ಮೇಲು ಭಾಗಕ್ಕೆ ನೋಡಿದನು. ಓಂಕಾರದಿಂದ ಹುಟ್ಟಿದ ಐದು ಅವಯವಗಳಿಂದ ಕೂಡಿದ ಮಂತ್ರವನ್ನು ಕಂಡನು. ಆ ಮಂತ್ರಗಳಾವುವೆಂದರೆ:

೮೩. ಅತ್ಯಂತ ಪರಿಶುದ್ಧವಾದ ಮಂಗಳಕರವಾದ ಮೂವತ್ತೆಂಟು ಅಕ್ಷರಗಳಿಂದ ಕೂಡಿದ ಜ್ಞಾನದಾಯಕವಾದ ಸಕಲ ಧರ್ಮಾರ್ಥ ಸಾಧಕವಾದ, "ಈಶಾನಃ ಸರ್ವವಿದ್ಯಾನಾಂ" ಎಂಬ ಮಂತ್ರವೊಂದು ಶಿವರಹಸ್ಯದಲ್ಲಿ, "ಓಂಕಾರ ಬೀಜಪ್ರಭವಃ ಕಲಾಪಂಚಕ ಸಂಯುತಃ । ಶುದ್ಧ ಸ್ಫಟಿಕ ಸಂಕಾಶಃ ಶುಭಮೇಧಾ ವಿವರ್ಧನಃ ॥ ಸದಾಶಿವಾತ್ಮಾ ವ್ಯೋಮಸ್ಥ ಈಶಾನಃ ಪರಿಕೀರ್ತಿತಃ ॥" ಎಂದು ಹೇಳಿದೆ. ಉಪಾಸಕರು ಇವುಗಳನ್ನು ಅಲ್ಲಿಯೇ ತಿಳಿಯಬೇಕು.

೮೪. ಗಾಯತ್ರೀ ಮಂತ್ರಗಳಲ್ಲಿ ಮುಖ್ಯವಾದ ಹಳದಿಯ ಬಣ್ಣದ ವಶೀಕರಣ ಶಕ್ತಿಯುಳ್ಳ ಇಪ್ಪತ್ತುನಾಲ್ಕು ಅಕ್ಷರಗಳಿಂದ ಕೂಡಿದ, ನಾಲ್ಕುತಲೆಗಳಿಂದ ಕೂಡಿದ, ಶ್ರೇಷ್ಠವಾದ, "ತತ್ಪುರುಷ" ಮಂತ್ರವೊಂದು ಶಿವರಹಸ್ಯದಲ್ಲಿ "ಗಾಯತ್ರೀ ಪ್ರಭವೋಮಂತ್ರಃ ಸ್ವರ್ಣವರ್ಣ

**ಅಥರ್ವಮಸಿತಂ ಮಂತ್ರಂ ಕುಲಾಷ್ಟಕ ಸಮಾಯುತಂ ।**
**ಅಭಿಚಾರಿಕ ಮತ್ಯರ್ಥಂ ತ್ರಯ ಸ್ತ್ರಿಂಶಚ್ಛುಭಾಕ್ಷರಂ ॥೮೫॥**
**ಯಜುರ್ವೇದ ಸಮಾಯುಕ್ತಂ ಪಂಚತ್ರಿಂಶಚ್ಛುಭಾಕ್ಷರಂ ।**
**ಕಲಾಷ್ಟಕ ಸಮಾಯುಕ್ತಂ ಸುಶ್ವೇತಂ ಶಾಂತಿಕಂತಥಾ ॥೮೬॥**
**ತ್ರಯೋದಶ ಕಲಾಯುಕ್ತಂ ಬಾಲಾದ್ಯೈಃಸಹ ಲೋಹಿತಂ ।**
**ಸಾಮೋದ್ಭವಂ ಜಗತ್ಯಾದ್ಯಂ ವೃದ್ಧಿಸಂಹಾರ ಕಾರಣಂ ॥೮೭॥**
**ವರ್ಣಾಃ ಷಡಧಿಕಾಃ ಷಷ್ಟಿರಸ್ಯ ಮಂತ್ರವರಸ್ಯತು ।**
**ಪಂಚಮಂತ್ರಾಂಸ್ತಥಾ ಲಬ್ಧ್ವಾ ಜಜಾಪ ಭಗವಾನ್ ಹರಿಃ ॥೮೮॥**

---

ಶ್ಚತುಷ್ಕಲಃ । ವಶ್ಯಕೋಗಜ ವಾಹಸ್ಥ ಈಶ್ವರಃ ಪುರುಷಃ ಸ್ಮೃತಃ ॥ ತತ್ಪುರುಷಶ್ಚಂದ್ರ ಬಿಂಬಾಭೋ ಋಗ್ವೇದ ವದನೋಽಂಶುಮಾನ್ ॥ " ಎಂದು ಹೇಳಿದೆ.

೮೫. ಅಥರ್ವಣ ವೇದದಿಂದಕೂಡಿದ, ಕಪ್ಪುಬಣ್ಣದ "ಎಂಟು ತಲೆಗಳಿಂದಕೂಡಿದ, ಮುವ್ವತ್ತುಮೂರು ಅಕ್ಷರಗಳುಳ್ಳ" ಅಘೋರ ಮಂತ್ರವು ಆಭಿಚಾರಿಕ ಪ್ರಯೋಗೋಪಯುಕ್ತವಾದುದು. ರಹಸ್ಯದಲ್ಲಿ "ಅಥರ್ವಪ್ರಭವೋಮಂತ್ರಃ ಕಲಾಷ್ಟಕ ವಿಭೂಷಿತಃ। ಆಭಿಚಾರಿಕ ಇತ್ಯರ್ಥ ಮಂಜನಾದ್ರಿ ಸಮಪ್ರಭಃ ॥ ಅಶೇಷಾಘಹರಃ ಪುಂಸಾ ಮಘೋರೋರುದ್ರ ವಿಗ್ರಹಃ ॥" ಎಂದು ಹೇಳಿದೆ.

೮೬. ಯಜುರ್ವೇದದಿಂದ ಉಂಟಾದ ಮುವತ್ತೈದು ಅಕ್ಷರಗಳಿಂದ ಕೂಡಿದ ಎಂಟು ತಲೆಗಳುಳ್ಳ ಬಿಳಿಯ ಬಣ್ಣದ ಸದ್ಯೋಜಾತ ಮಂತ್ರವು ಶಾಂತಿ ಕರ್ಮಗಳಲ್ಲಿ ಉಪಯುಕ್ತವಾದುದು. ಈ ಮಂತ್ರದಲ್ಲಿ ಮೂವತ್ತೇಳು ಅಕ್ಷರಗಳಿರುವುವು. ನಮೋನಮಃ ಎಂದು ಎರಡಾವೃತ್ತಿ ನಮಃ ಶಬ್ದ ವಿರುವುದರಿಂದ ಒಂದು ಶಬ್ದದ ಎರಡಕ್ಷರಗಳನ್ನು ಬಿಟ್ಟು ಮುವತ್ತೈದು ಅಕ್ಷರಗಳಿಂದೂ ಬಿಳಿಯ ಬಣ್ಣವುಳ್ಳದೆಂದೂ ತಿಳಿಯಬೇಕು. "ಯಜುರ್ವೇದೋದ್ಭವೋಮಂತ್ರಃ ಕಲಾಷ್ಟಕ ಯುತಃಸ್ಥಿತಃ। ಶಾಂತಿ ಕೃತ್ಪೃಥಿವೀಸಂಸ್ಥಃ ಸದ್ಯೋಜಾತಃ ಪಿತಾಮಹಃ ॥" ಎಂದು ಶಿವರಹಸ್ಯದಲ್ಲಿ ಹೇಳಿದೆ.

೮೭–೮೮. ಸಾಮ ವೇದದಲ್ಲಿ ಹುಟ್ಟಿದ ಮೊದಲನೆಯ ಪಾದವು ಜಗತೀಛಂದಸ್ಸಾಗಿರುವ ಕೆಂಪುಬಣ್ಣದ ಬಾಲಾ ಮುಂತಾದ ಹದಿಮೂರು

ಅಥ ದೃಷ್ಟ್ವಾ ಕಲಾವರ್ಣ ಮೃಗ್ಯಜುಸ್ಸಾಮರೂಪಿಣಃ ।
ಈಶಾನ ಮೀಶಮುಕುಟಂ ಪುರುಷಾಸ್ಯಂ ಪುರಾತನಂ ॥೬೯॥
ಅಘೋರ ಹೃದಯಂ ಹೃದ್ಯಂ ವಾಮಗುಹ್ಯಂ ಸದಾಶಿವಂ ।
ಸದ್ಯಃ ಪಾದಂ ಮಹಾದೇವಂ ಮಹಾಭೋಗೀಂದ್ರ ಭೂಷಣಂ ॥೯೦॥
ವಿಶ್ವತಃ ಪಾದವದನಂ ವಿಶ್ವತೋಽಕ್ಷಿಕರಂ ಶಿವಂ ।
ಬ್ರಹ್ಮಣೋಽಧಿಪತಿಂ ಸರ್ಗ ಸ್ಥಿತಿ ಸಂಹಾರಕಾರಣಂ ॥೯೧॥
ತುಷ್ಟಾವ ಪುನರಿಷ್ಟಾಭಿ ರ್ವಾಗ್ಭಿ ರ್ವರದ ಮೀಶ್ವರಂ ॥೯೨॥

ಇತಿ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ಲಿಂಗೋದ್ಭವೋ ನಾಮ ಸಪ್ತದಶೋಽಧ್ಯಾಯಃ

---

ತಲೆಗಳಿಂದಕೂಡಿದ, ಅಭಿವೃದ್ಧಿಗೂ, ಸಂಹಾರಕ್ಕೂ ಕಾರಣವಾದ ಅರವತ್ತಾರು ಅಕ್ಷರಗಳುಳ್ಳ ವಾಮದೇವ ಮಂತ್ರವೊಂದು. ಈ ವಾಮದೇವ ಮಂತ್ರದಲ್ಲಿ ಎಪ್ಪತ್ತಾರು (೭೬) ಅಕ್ಷರಗಳಿವೆ. ಆಂಧ್ರ ಪಾಠದಂತೆ ಮೂರು ಮತ್ತು ಎಂಟನೆಯ ನಾಮಗಳಾದ ಶ್ರೇಷ್ಠಾಯನಮೋ ಬಲಾಯನಮೋ ಎಂಬುವುಗಳನ್ನು ಬಿಟ್ಟರೆ ಅರವತ್ತಾರು ಅಕ್ಷರಗಳು (೬೬) ಸರಿಯಾಗುವುವು. ಮಹಾಮಹಿಮನಾದ ಹರಿಯು ಈ ಐದು ಮಂತ್ರಗಳನ್ನೂ ಪಡೆದು ಜಪಮಾಡಿದನು.

೮೯–೯೨. ಅರವತ್ತುನಾಲ್ಕು ಕಲೆಗಳ ಕಾಂತಿಯಿಂದ ಕೂಡಿದ ಋಗ್ಯಜುಃ ಸಾಮವೆಂಬ ವೇದತ್ರಯ ಸ್ವರೂಪವಾದ ಈಶಾನ ಮಂತ್ರವೇ ಕಿರೀಟವಾಗಿಯೂ ತತ್ಪುರುಷ ಮಂತ್ರವೇ ಮುಖವಾಗಿಯೂ, ಅಘೋರ ಮಂತ್ರವೇ ಹೃದಯವಾಗಿಯೂ, ವಾಮದೇವ ಮಂತ್ರವೇ ಗುಹ್ಯಪ್ರದೇಶವಾಗಿಯೂ, ಸದ್ಯೋಜಾತ ಮಂತ್ರವೇ ಪಾದವಾಗಿಯೂ, ಇರುವ, ಯಾವಾಗಲೂ ಮಂಗಳ ಸ್ವರೂಪನಾದ, ಆದಿಶೇಷನೇ ಆಭರಣವಾಗಿರುವ, ಎಲ್ಲಕಡೆಗಳಲ್ಲಿಯೂ, ಪಾದಗಳು, ಮುಖ ಕಣ್ಣುಗಳು, ಕೈಗಳುಳ್ಳ ಬ್ರಹ್ಮನಿಗೂ, ಅಧಿಪತಿಯಾಗಿ ಸೃಷ್ಟಿಸ್ಥಿತಿ ಸಂಹಾರಗಳಿಗೆ ಕಾರಣನಾದ ವರಪ್ರದನಾದ ಈಶ್ವರನನ್ನು ಹರಿಯು ಮತ್ತೆ ತನಗೆ ಇಷ್ಟವಾದ ಮಾತುಗಳಿಂದ ಸ್ತೋತ್ರಮಾಡಿದನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಜ್ಯೋತಿರ್ಲಿಂಗದಉದ್ಭವವನ್ನು ವಿವರಿಸುವ ಹದಿನೇಳನೆಯ ಅಧ್ಯಾಯವು ಮುಗಿದುದು.

ಅಥ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ಅಷ್ಟಾದಶೋಽಧ್ಯಾಯಃ

ಲಿಂಗೇ ತ್ವಷ್ಟಾದಶಾಧ್ಯಾಯೇ ಮಹೇಶಸ್ತೋತ್ರ ಮುತ್ತಮಂ ।
ಫಲಶ್ರುತಿ ಸಮಾಯುಕ್ತಂ ವಿಷ್ಣುಪ್ರೋಕ್ತಂ ನಿರೂಪ್ಯತೇ ॥

॥ ವಿಷ್ಣುರುವಾಚ ॥

ಏಕಾಕ್ಷರಾಯ ರುದ್ರಾಯ ಅಕಾರಾಯಾತ್ಮರೂಪಿಣೇ ।
ಉಕಾರಾಯಾದಿ ದೇವಾಯ ವಿದ್ಯಾದೇಹಾಯ ವೈ ನಮಃ ॥ ೧ ॥

ತೃತೀಯಾಯ ಮಕಾರಾಯ ಶಿವಾಯ ಪರಮಾತ್ಮನೇ ।
ಸೂರ್ಯಾಗ್ನಿ ಸೋಮವರ್ಣಾಯ ಯಜಮಾನಾಯ ವೈ ನಮಃ ॥ ೨ ॥

ಅಗ್ನಯೇ ರುದ್ರರೂಪಾಯ ರುದ್ರಾಣಾಂ ಪತಯೇ ನಮಃ ।
ಶಿವಾಯ ಶಿವಮಂತ್ರಾಯ ಸದ್ಯೋಜಾತಾಯ ವೇಧಸೇ ॥ ೩ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಹದಿನೆಂಟನೆಯ ಅಧ್ಯಾಯವು

(ಲಿಂಗಪುರಾಣದ ಹದಿನೆಂಟನೆಯ ಅಧ್ಯಾಯದಲ್ಲಿ ಫಲಶ್ರುತಿಸಹಿತವಾದ, ವಿಷ್ಣುವು ಹೇಳಿದ ಉತ್ತಮವಾದ, ಮಹೇಶ್ವರನ ಸ್ತೋತ್ರವನ್ನು ಹೇಳಲಾಗುವುದು.)

೧. ಅದ್ವಿತೀಯನಾದುದರಿಂದ ಏಕನೂ, ನಾಶವಿಲ್ಲವಾದುದರಿಂದ ಅಕ್ಷರನೂ, ಅಥವಾ ಏಕಾಕ್ಷರವೆಂದರೆ ಪ್ರಣವ ಸ್ವರೂಪನೂ, ಭಯಂಕರನೂ, ಅಕಾರವಾದ ಆತ್ಮಸ್ವರೂಪನೂ, ಉಕಾರವಾದ ಆದಿದೇವನೂ, ಜ್ಞಾನಸ್ವರೂಪನೂ ಆದ ನಿನಗೆ ನಮಸ್ಕಾರವು.

೨. ಮೂರನೆಯದಾದ ಮಕಾರ ಸ್ವರೂಪನೂ, ಮಂಗಳಕರನೂ, ಪರಮಾತ್ಮನೂ, ಸೂರ್ಯ, ಚಂದ್ರ ಮತ್ತು ಅಗ್ನಿಯ ಕಾಂತಿಯುಳ್ಳವನೂ, ಯಜಮಾನಸ್ವರೂಪನೂ ಆದ ನಿನಗೆ ನಮಸ್ಕಾರವು.

೩–೪. ಅಗ್ನಿಸ್ವರೂಪದಿಂದ ಭಯಂಕರನೂ, ಏಕಾದಶ ರುದ್ರರಿಗೆ ಅಧಿಪತಿಯೂ, ಶುಭಸ್ವರೂಪನೂ, ಶುಭವಾದ ಮಂತ್ರಗಳಿಂದ ತಿಳಿಯತಕ್ಕವನೂ, ಸದ್ಯೋಜಾತನೆಂಬ ಹೆಸರುಳ್ಳವನೂ, ಸೃಷ್ಟಿಕರ್ತನೂ,

ವಾಮಾಯ ವಾಮದೇವಾಯ ವರದಾಯಾ ಮೃತಾಯ ತೇ ।
ಅಘೋರಾಯಾತಿ ಘೋರಾಯ ಸದ್ಯೋಜಾತಾಯರಂಹಸೇ ॥ ೪ ॥
ಈಶಾನಾಯ ಶ್ಮಶಾನಾಯ ಅತಿವೇಗಾಯ ವೇಗಿನೇ ।
ನಮೋಽಸ್ತು ಶ್ರುತಿ ಪಾದಾಯ ಊರ್ಧ್ವಲಿಂಗಾಯ ಲಿಂಗಿನೇ॥ ೫ ॥
ಹೇಮಲಿಂಗಾಯ ಹೇಮಾಯ ವಾರಿಲಿಂಗಾಯ ಚಾಂಭಸೇ ।
ಶಿವಾಯ ಶಿವಲಿಂಗಾಯ ವ್ಯಾಪಿನೇವ್ಯೋಮ ವ್ಯಾಪಿನೇ ॥ ೬ ॥
ವಾಯವೇ ವಾಯುವೇಗಾಯ ನಮಸ್ತೇ ವಾಯು ವ್ಯಾಪಿನೇ ।
ತೇಜಸೇ ತೇಜಸಾಂ ಭರ್ತ್ರೇ ನಮಸ್ತೇಜೋ ಧಿವ್ಯಾಪಿನೇ ॥ ೭ ॥
ಜಲಾಯ ಜಲಭೂತಾಯ ನಮಸ್ತೇ ಜಲವ್ಯಾಪಿನೇ ।
ಪೃಥಿವ್ಯೈಚಾಂತರಿಕ್ಷಾಯ ಪೃಥಿವೀ ವ್ಯಾಪಿನೇ ನಮಃ ॥ ೮ ॥

---

ಸುಂದರನಾದ ವಾಮದೇವನೂ, ವರವನ್ನು ಕೊಡತಕ್ಕವನೂ, ಮೋಕ್ಷ ಸ್ವರೂಪನೂ, ಅತ್ಯಂತ ಕರುಣಾಶಾಲಿಯೂ, ಭಯಂಕರನೂ, ವೇಗವುಳ್ಳವನೂ, ಈಶಾನನೆಂಬ ಹೆಸರುಳ್ಳವನೂ, ಶ್ಮಶಾನವಾದ ಕಾಶೀಕ್ಷೇತ್ರ ಸ್ವರೂಪನೂ, ಮಹಾವೇಗವುಳ್ಳವನೂ, ವೇದಗಳಿಂದ ತಿಳಿಯಲ್ಪಡತಕ್ಕವನೂ, ಬ್ರಹ್ಮನಿಗೂ ತಿಳಿಯಲಸಾಧ್ಯವಾದ ವಿಚಿತ್ರವಾದ ರೂಪವುಳ್ಳವನೂ, ಆದ ನಿನಗೆ ನಮಸ್ಕಾರವು.

೬–೭. ಚಿನ್ನದಲ್ಲಿ ಹೇಮಲಿಂಗ ಸ್ವರೂಪನೂ, ನೀರಿನಲ್ಲಿ ವಾರಿಲಿಂಗ ಸ್ವರೂಪನೂ. ಮಂಗಳಕಾರ್ಯಗಳಲ್ಲಿ ಶಿವಲಿಂಗ ಸ್ವರೂಪನೂ, ಸರ್ವವ್ಯಾಪಿಯಾಗಿ ಆಕಾಶಲಿಂಗ ಸ್ವರೂಪನೂ, ವಾಯುಸ್ವರೂಪನಾಗಿ, ವೇಗಶಾಲಿಯಾಗಿ ವಾಯುಲಿಂಗ ಸ್ವರೂಪನೂ, ತೇಜಸ್ಸಿಗೆ ಅಧಿಪತಿಯಾಗಿ ತೇಜೋಲಿಂಗರೂಪನೂ ಆದ ನಿನಗೆ ನಮಸ್ಕಾರವು.

೮. ನೀರಿನಲ್ಲಿ ವ್ಯಾಪಿಸಿರುವವನೂ, ನೀರಿನ ಸ್ವರೂಪನೂ, ಭೂಮಿಯಲ್ಲಿ ವ್ಯಾಪಿಸಿ ಭೂಮಿ ಸ್ವರೂಪವಾಗಿರುವವನೂ, ಅಂತರಿಕ್ಷಸ್ವರೂಪನೂ ಆದ ನಿನಗೆ ನಮಸ್ಕಾರವು.

ಶಬ್ದಸ್ಪರ್ಶಸ್ವರೂಪಾಯ ರಸಗಂಧಾಯ ಗಂಧಿನೇ ।
ಗಣಾಧಿ ಪತಯೇ ತುಭ್ಯಂ ಗುಹ್ಯಾದ್ಗುಹ್ಯ ತಮಾಯ ತೇ ॥ ೯ ॥

ಅನಂತಾಯ ವಿರೂಪಾಯ ಅನಂತಾನಾಮಯಾಯ ಚ ।
ಶಾಶ್ವತಾಯ ವರಿಷ್ಠಾಯ ವಾರಿಗರ್ಭಾಯ ಯೋಗಿನೇ ॥೧೦॥

ಸಂಸ್ಥಿತಾಯಾಂ ಭಸಾಂಮಧ್ಯೇ ಆವಯೋರ್ಮಧ್ಯವ ರ್ಚಸೇ ।
ಗೋಪ್ತ್ರೇ ಹರ್ತ್ರೇ ಸದಾಕರ್ತ್ರೇ ನಿಧನಾಯೇಶ್ವರಾಯ ಚ ॥೧೧॥

ಅಚೇತನಾಯ ಚಿಂತ್ಯಾಯ ಚೇತನಾಯಾಸಹಾರಿಣೇ ।
ಅರೂಪಾಯ ಸುರೂಪಾಯ ಅನಂಗಾಯಾಂಗಹಾರಿಣೇ ॥೧೨॥

ಭಸ್ಮದಿಗ್ಧ ಶರೀರಾಯ ಭಾನುಸೋಮಾಗ್ನಿ ಹೇತವೇ ।
ಶ್ವೇತಾಯ ಶ್ವೇತವರ್ಣಾಯ ತುಹಿನಾದ್ರಿ ಚರಾಯ ಚ ॥೧೩॥

---

೯. ಶಬ್ದ, ಸ್ಪರ್ಶ, ರೂಪ,ರಸ, ಗಂಧ, ಎಂಬತನ್ಮಾತ್ರಸ್ವರೂಪನೂ ಅತ್ಯಂತ ಗೋಪ್ಯನಾದವನೂ, ಸಮಸ್ತ ದೇವಗಣಗಳಿಗೂ ಒಡೆಯನೂ ಆದ ನಿನಗೆ ನಮಸ್ಕಾರವು.

೧೦. ಆದಿಶೇಷನ ಸ್ವರೂಪನೂ, ಗರುಡಸ್ವರೂಪನೂ, ಅನೇಕ ಬ್ರಾಹ್ಮಂಡಗಳಿಗೆ ಆಶ್ರಯಸ್ಥಾನನೂ, ಯಾವಾಗಲೂ ಇರತಕ್ಕವನೂ, ಅತ್ಯಂತ ದೊಡ್ಡವನೂ, ಮೇಘಸ್ವರೂಪನೂ, ಯೋಗಿಯೂ ಆದ ನಿನಗೆ ನಮಸ್ಕಾರವು.

೧೧. ಸಮುದ್ರಮಧ್ಯದಲ್ಲಿ ಬ್ರಹ್ಮ ವಿಷ್ಣುಗಳಾದ ನಮ್ಮಿಬ್ಬರ ನಡುವೆ ಪ್ರಕಾಶಿಸುತ್ತಿರುವ, ಸೃಷ್ಟಿ, ಸ್ಥಿತಿ, ಸಂಹಾರ ಕಾರ್ಯಗಳನ್ನು ಮಾಡುವ, ಪರಮೇಶ್ವರನಿಗೆ ನಮಸ್ಕಾರವು.

೧೨. ಚಿತ್ತಜನ್ಯ ಜ್ಞಾನವಲ್ಲದ ಮನೋವೃತ್ತಿಯಿಂದ ತಿಳಿಯತಕ್ಕ, ಜೀವರುಗಳ ಜನ್ಮಮರಣ ರೂಪವಾದ ಆಯಾಸವನ್ನು ನಾಶಮಾಡುವ, ಯಾವ ರೂಪವೂ ಇಲ್ಲದ ಭಕ್ತಾನುಗ್ರಹಾರ್ಥವಾಗಿ ಸುಂದರವಾದ ರೂಪವುಳ್ಳ, ಮನ್ಮಥಸ್ವರೂಪನಾದ ಆ ಮನ್ಮಥನ ಅಂಗವನ್ನು ನಾಶಮಾಡಿದ ನಿನಗೆ ನಮಸ್ಕಾರವು.

೧೩–೧೪. ಭಸ್ಮವನ್ನು ಬಳಿದ ಶರೀರವುಳ್ಳವನೂ, ಸೂರ್ಯ, ಚಂದ್ರ, ಅಗ್ನಿ, ಇವರುಗಳಿಗೆ ಕಾರಣನೂ, ಬಿಳಿಯ ಬಣ್ಣಉಳ್ಳವನೂ,

ಸುಶ್ವೇತಾಯ ಸುವಕ್ತ್ರಾಯ ನಮಃ ಶ್ವೇತ ಶಿಖಾಯ ಚ ।
ಶ್ವೇತಾಸ್ಯಾಯ ಮಹಾಸ್ಯಾಯ ನಮಸ್ತೇ ಶ್ವೇತಲೋಹಿತ ॥೧೪॥
ಸುತಾರಾಯ ವಿಶಿಷ್ಟಾಯ ನಮೋ ದುಂದಭಿನೇ ಹರ ।
ಶತರೂಪ ವಿರೂಪಾಯ ನಮಃ ಕೇತುಮತೇ ಸದಾ ॥೧೫॥
ಋದ್ಧಿಶೋಕ ವಿಶೋಕಾಯ ಪಿನಾಕಾಯ ಕಪರ್ದಿನೇ ।
ವಿಪಾಶಾಯ ಸುಪಾಶಾಯ ನಮಸ್ತೇ ಪಾಶನಾಶಿನೇ ॥೧೬॥
ಸುಹೋತ್ರಾಯ ಹವಿಷ್ಯಾಯ ಸುಬ್ರಹ್ಮಣ್ಯಾಯ ಸೂರಿಣೇ ।
ಸುಮುಖಾಯ ಸುವಕ್ತ್ರಾಯ ದುರ್ದಮಾಯ ದಮಾಯ ಚ ॥೧೭॥

---

ಹಿಮವತ್ಪರ್ವತದಲ್ಲಿ ಸಂಚರಿಸುವವನೂ, ಪರಿಶುದ್ಧನೂ, ಸುಂದರವಾದ ಮುಖವುಳ್ಳವನೂ, ಬೆಳ್ಳಗಿರುವ ಕೂದಲುಗಳುಳ್ಳವನೂ, ವಿಸ್ತಾರವಾದ ನಗುಮುಖವುಳ್ಳವನೂ, ಆದ ಓ ಶ್ವೇತಲೋಹಿತನೇ, ನಿನಗೆ ನಮಸ್ಕಾರವು.

೧೫. ಒಳ್ಳೆಯ ದಯಾಮಯವಾದ ನೋಟವುಳ್ಳವನೂ, ದುಂದುಭಿ ಎಂಬ ವಾದ್ಯದಂತೆ ಗಂಭೀರವಾದ ಧ್ವನಿಯುಳ್ಳವನೂ, ಪಾಪನಾಶಕನೂ, ಅನೇಕ ರೂಪವುಳ್ಳವನೂ, ತತ್ವಸ್ವರೂಪದಿಂದ ರೂಪವಿಲ್ಲದವನೂ, ಯಾವಾಗಲೂ ವಿಜಯಧ್ವಜ ಚಿಹ್ನೆಯುಳ್ಳವನೂ, ಆದ ನಿನಗೆ ನಮಸ್ಕಾರವು.

೧೬. ಭಕ್ತರ ಅಭಿವೃದ್ಧಿಯುಳ್ಳವನೂ, ಅವರ ದುಃಖವನ್ನು ನಾಶ ಪಡಿಸತಕ್ಕವನೂ, ಪಿನಾಕವೆಂಬ ಧನುಸ್ಸನ್ನು ಹಿಡಿದವನೂ, ಕಪರ್ದವೆಂಬ ಜಟೆಯುಳ್ಳವನೂ, ನಿರ್ಬಂಧವಿಲ್ಲದವನೂ, ಅನುಕೂಲವಾದ ಧರ್ಮಾದಿಗಳ ನಿರ್ಬಂಧವಿರುವವನೂ, ಪಾಪಪರಿಹಾರಕನೂ, ಆದ ನಿನಗೆ ನಮಸ್ಕಾರವು.

೧೭. ಉತ್ತಮವಾದ ಯಜ್ಞಗಳುಳ್ಳವನೂ, ಹವಿರ್ಭಾಗವುಳ್ಳವನೂ, ಸುಬ್ರಹ್ಮಣ್ಯ ಶಬ್ದದಿಂದ ಹೊಗಳಿಸಿಕೊಳ್ಳತಕ್ಕವನೂ, ವಿದ್ವಾಂಸನಾದವನೂ, ಗಣೇಶರೂಪನೂ, ಸುಂದರವಾದ ಮುಖವುಳ್ಳವನೂ, ಇತರರಿಂದ ನಿಗ್ರಹಿಸಲಸಾಧ್ಯನೂ, ಸಕಲರನ್ನೂ ನಿಗ್ರಹಿಸುವವನೂ, ಆದ ನಿನಗೆ ನಮಸ್ಕಾರವು.

**ಕಂಕಾಯ ಕಂಕರೂಪಾಯ ಕಂಕಣೀಕೃತ ಪನ್ನಗ ।**
**ಸನಕಾಯ ನಮಸ್ತುಭ್ಯಂ ಸನಾತನ ಸನಂದನ ॥೧೮॥**

**ಸನತ್ಕುಮಾರ ಸಾರಂಗ ಮಾರಣಾಯ ಮಹಾತ್ಮನೇ ।**
**ಲೋಕಾಕ್ಷಿಣೇ ತ್ರಿಧಾಮಾಯ ನಮೋ ವಿರಜಸೇ ಸದಾ ॥೧೯॥**

**ಶಂಖಪಾಲಾಯ ಶಂಖಾಯ ರಜಸೇ ತಮಸೇ ನಮಃ ।**
**ಸಾರಸ್ವತಾಯ ಮೇಘಾಯ ಮೇಘವಾಹನ ತೇ ನಮಃ ॥೨೦॥**

**ಸುವಾಹಾಯ ವಿವಾಹಾಯ ವಿವಾದ ವರದಾಯ ಚ ।**
**ನಮಃ ಶಿವಾಯ ರುದ್ರಾಯ ಪ್ರಧಾನಾಯ ನಮೋ ನಮಃ ॥೨೧॥**

**ತ್ರಿಗುಣಾಯ ನಮಸ್ತುಭ್ಯಂ ಚತುರ್ವ್ಯೂಹಾತ್ಮನೇ ನಮಃ ।**
**ಸಂಸಾರಾಯ ನಮಸ್ತುಭ್ಯಂ ನಮಃ ಸಂಸಾರ ಹೇತವೇ ॥೨೨॥**

---

೧೮–೧೯. ಕಪಟದ್ವಿಜಸ್ವರೂಪನೂ, ಯಮಸ್ವರೂಪನೂ, ಹಾವನ್ನು ಕಂಕಣವನ್ನಾಗಿ ಮಾಡಿಕೊಂಡಿರುವವನೂ, ಸನಕ ಸನಂದನ, ಸನಾತನ, ಸನತ್ಕುಮಾರ, ಇವರ ಸ್ವರೂಪನೂ, ಕಿರಾತ ವೇಷದಿಂದ ಸಾರಂಗವೆಂಬ ಮೃಗ ಪಕ್ಷಿಗಳನ್ನು ಕೊಂದವನೂ, ಮಹಾಮಹಿಮನೂ, ಜನಗಳಿಗೆ ಕಣ್ಣಿನಂತೆ ಮುಖ್ಯವಾದವನೂ, ಸ್ವರ್ಗಸ್ವರೂಪನೂ, ರಜೋಗುಣವಿಲ್ಲದವನೂ, ಆದ ನಿನಗೆ ನಮಸ್ಕಾರವು.

೨೦–೨೧. ಶಂಖ, ಶಂಖಪಾಲರೆಂಬ ಸರ್ಪಸ್ವರೂಪನೂ, ರಜೋಗುಣ ತಮೋಗುಣ ಸ್ವರೂಪನೂ, ವಿದ್ಯಾಸ್ವರೂಪನೂ, ಮೇಘ ಮತ್ತು ದೇವೇಂದ್ರಸ್ವರೂಪನೂ, ಉತ್ತಮವಾದ ವಾಹನವುಳ್ಳವನೂ, ವಾಹನವಿಲ್ಲದೇ ಸಂಚರಿಸುವವನೂ, ಪಾದವಿಲ್ಲದವನೂ, ವರವನ್ನು ಕೊಡತಕ್ಕವನೂ, ಮಂಗಳಸ್ವರೂಪನೂ, (ದುಷ್ಟರ ವಿಷಯದಲ್ಲಿ) ಕ್ರೂರನೂ, ಮುಖ್ಯನೂ ಆದ ನಿನಗೆ ನಮಸ್ಕಾರವು.

೨೨–೨೪. ತ್ರಿಗುಣ ಸ್ವರೂಪನೂ, ಚತುರ್‌ವ್ಯೂಹವೆಂಬ ಅರ್ಚಾವತಾರಸ್ವರೂಪನೂ, ಜನನ ಮರಣ ಸ್ವರೂಪನೂ, ಇವುಗಳಿಗೆ ಕಾರಣನೂ, ಮೋಕ್ಷಸ್ವರೂಪನಾಗಿ ಮೋಕ್ಷವನ್ನು ಕೊಡತಕ್ಕವನೂ, ಆತ್ಮಸ್ವರೂಪನೂ, ವೇದಮಂತ್ರ ಸ್ವರೂಪನೂ, ಲೋಕಕ್ಕೆಲ್ಲಕ್ಕೂ ಒಡೆಯನೂ, ಸರ್ವ

ಮೋಕ್ಷಾಯ ಮೋಕ್ಷರೂಪಾಯ ಮೋಕ್ಷಕರ್ತ್ರೇ ನಮೋ ನಮಃ।
ಆತ್ಮನೇ ಋಷಯೇ ತುಭ್ಯಂ ಸ್ವಾಮಿನೇ ವಿಷ್ಣವೇ ನಮಃ ॥೨೩॥
ನಮೋ ಭಗವತೇ ತುಭ್ಯಂ ನಾಗಾನಾಂ ಪತಯೇ ನಮಃ ।
ಓಂಕಾರಾಯ ನಮಸ್ತುಭ್ಯಂ ಸರ್ವಜ್ಞಾಯ ನಮೋ ನಮಃ ॥೨೪॥
ಸರ್ವಾಯ ಚ ನಮಸ್ತುಭ್ಯಂ ನಮೋ ನಾರಾಯಣಾಯ ಚ ।
ನಮೋ ಹಿರಣ್ಯ ಗರ್ಭಾಯ ಆದಿ ದೇವಾಯ ತೇ ನಮಃ ॥೨೫॥
ನಮೋಸ್ತ್ವಜಾಯ ಪತಯೇ ಪ್ರಜಾನಾಂ ವ್ಯೂಹ ಹೇತವೇ ।
ಮಹಾದೇವಾಯ ದೇವಾನಾ ಮೀಶ್ವರಾಯ ನಮೋನಮಃ ॥೨೬॥
ಶರ್ವಾಯ ಚ ನಮಸ್ತುಭ್ಯಂ ಸತ್ಯಾಯ ಶಮನಾಯ ಚ ।
ಬ್ರಹ್ಮಣೇ ಚೈವ ಭೂತಾನಾಂ ಸರ್ವಜ್ಞಾಯ ನಮೋನಮಃ ॥೨೭॥
ಮಹಾತ್ಮನೇ ನಮಸ್ತುಭ್ಯಂ ಪ್ರಜ್ಞಾರೂಪಾಯ ವೈನಮಃ ।
ಚಿತಯೇ ಚಿತಿರೂಪಾಯ ಸ್ಮೃತಿರೂಪಾಯ ವೈನಮಃ ॥೨೮॥
ಜ್ಞಾನಾಯ ಜ್ಞಾನಗಮ್ಯಾಯ ನಮಸ್ತೇ ಸಂವಿದೇ ಸದಾ ।
ಶಿಖರಾಯ ನಮಸ್ತುಭ್ಯಂ ನೀಲಕಂಠಾಯ ವೈನಮಃ ॥೨೯॥

---

ವ್ಯಾಪಿಯೂ, ಸಮಸ್ತ ಸಂಪತ್ತುಗಳುಳ್ಳವನೂ, ನಾಗಗಳಿಗೆಲ್ಲಕ್ಕೂ ಅಧಿಪತಿಯೂ, ಪ್ರಣವ ಸ್ವರೂಪನೂ, ಸರ್ವಜ್ಞನೂ, ಆದ ನಿನಗೆ ನಮಸ್ಕಾರವು.

೨೫–೨೭. ಸಕಲ ವಸ್ತುಸ್ವರೂಪನೂ, ನೀರೇ ವಾಸಸ್ಥಾನವಾಗಿರುವವನೂ, ಹಿರಣ್ಯಗರ್ಭರೂಪನೂ, ಆದಿದೇವತೆಗಳಿಗೆಲ್ಲರಿಗೂ ಒಡೆಯನೂ ಬ್ರಹ್ಮನೂ ಪ್ರಜಾಪತಿಯೂ ದೇವತೆಗಳಲ್ಲಿ ದೊಡ್ಡವನೂ ಆ ದೇವತೆಗಳಿಗೆಲ್ಲರಿಗೂ ಒಡೆಯನೂ, ಸರ್ವನೂ, ಸತ್ಯಸ್ವರೂಪನೂ, ಯಮಸ್ವರೂಪನೂ, ಜೀವರುಗಳನ್ನು ಸೃಷ್ಟಿಸುವವನೂ, ಸರ್ವಜ್ಞನೂ ಆದ ನಿನಗೆ ನಮಸ್ಕಾರವು.

೨೮–೩೦. ಮಹಾಮಹಿಮನೂ, ಪ್ರಜ್ಞಾ, ಚಿತ್ತ, ಸ್ಮೃತಿಜ್ಞಾನ, ಮುಂತಾದ ಮನೋವೃತ್ತಿ ಸ್ವರೂಪನೂ, ನೀಲಕಂಠನೂ, ಅರ್ಧನಾರೀ ಶರೀರನೂ, ಇತರರಿಗೆ ತಿಳಿಯಲಸಾಧ್ಯನೂ, ಹನ್ನೊಂದು ಬಗೆಯ ರುದ್ರ

ಅರ್ಧನಾರೀ ಶರೀರಾಯ ಅವ್ಯಕ್ತಾಯ ನಮೋನಮಃ ।
ಏಕಾದಶ ವಿಭೇದಾಯ ಸ್ಥಾಣವೇ ತೇ ನಮಃ ಸದಾ ॥೩೦॥

ನಮಃ ಸೋಮಾಯ ಸೂರ್ಯಾಯ ಭವಾಯ ಭವಹಾರಿಣೇ ।
ಯಶಸ್ಕರಾಯ ದೇವಾಯ ಶಂಕರಾ ಯೇಶ್ವರಾಯ ಚ ॥೩೧॥

ನಮೋಽಂಬಿಕಾಧಿಪತಯೇ ಉಮಾಯಾಃ ಪತಯೇ ನಮಃ ।
ಹಿರಣ್ಯ ಬಾಹವೇ ತುಭ್ಯಂ ನಮಸ್ತೇ ಹೇಮರೇತಸೇ ॥೩೨॥

ನೀಲ ಕೇಶಾಯ ವಿತ್ತಾಯ ಶಿತಿಕಂಠಾಯ ವೈ ನಮಃ ।
ಕಪರ್ದಿನೇ ನಮಸ್ತುಭ್ಯಂ ನಾಗಾಂಗಾಭರಣಾಯಚ ॥೩೩॥

ವೃಷಾರೂಢಾಯ ಸರ್ವಸ್ಯ ಹರ್ತ್ರೇ ಕರ್ತ್ರೇ ನಮೋನಮಃ ।
ವೀರರಾಮಾತಿರಾಮಾಯ ರಾಮನಾಥಾಯ ತೇ ವಿಭೋ ॥೩೪॥

ನಮೋ ರಾಜಾಧಿರಾಜಾಯ ರಾಜ್ಞಾಮಧಿಗತಾಯ ತೇ ।
ನಮಃ ಪಾಲಾಧಿ ಪತಯೆ ಪಾಲಾಶಾಕೃಂತತೇ ನಮಃ ॥೩೫॥

ನಮಃ ಕೇಯೂರಭೂಷಾಯ ಗೋಪತೇ ತೇ ನಮೋನಮಃ ।
ನಮಃ ಶ್ರೀಕಂಠನಾಥಾಯ ನಮೋ ಲಿಕುಚಪಾಣಯೇ ॥೩೬॥

---

ಮೂರ್ತಿಯಾದವನೂ, ಚಾಂಚಲ್ಯ ವಿಲ್ಲದವನೂ, ಆದ ನಿನಗೆ ನಮಸ್ಕಾರವು.

೩೧-೩೩. ಭಕ್ತ್ಯತಿಶಯದಿಂದ ಹಿಂದೆ ಹೇಳಿದ ಅರ್ಥಗಳುಳ್ಳ ವೇದೋಕ್ತವಾದ ಶಬ್ದಗಳಿಂದ, ಸೋಮ, ಸೂರ್ಯ, ಭವ, ಭವಹರ, ಯಶಸ್ಕರ, ದೇವ, ಶಂಕರ, ಈಶ್ವರ, ಅಂಬಿಕಾಪತಿ, ಉಮಾಪತಿ, ಹಿರಣ್ಯಬಾಹು, ಹೇಮರೇತಸ್, ನೀಲಕೇಶ, ವಿತ್ತ, ಶಿತಿಕಂಠ, ಕಪರ್ದಿ, ನಾಗಾಂಗಾಭರಣ, ಎಂದು ಹೇಳಿಸಿಕೊಳ್ಳುವ ನಿನಗೆ ನಮಸ್ಕಾರವು, ಎಂದನು.

೩೪-೩೬. ವೃಷಾರೂಢ, ಸರ್ವಹರ್ತಾ, ಸರ್ವಕರ್ತಾ, ವೀರರಾಮ, ಅತಿರಾಮ, ರಾಮನಾಥ, ವಿಭು, ರಾಜಾಧಿರಾಜ, ರಾಜ್ಞಾಮಧಿಗತ, ಪಾಲಾಧಿಪತಿ, ಪಾಲಾಶಾಕೃಂತನ, ಕೇಯೂರ ಭೂಷ, ಗೋಪತಿ, ಶ್ರೀಕಂಠನಾಥ, ಲಿಕುಚ ಪಾಣಿ, ಎಂಬ ಹೆಸರುಳ್ಳ ನಿನಗೆ ನಮಸ್ಕಾರವು.

ಭುವನೇಶಾಯದೇವಾಯ ವೇದಶಾಸ್ತ್ರ ನಮೋಽಸ್ತು ತೇ।
ಸಾರಂಗಾಯ ನಮಸ್ತುಭ್ಯಂ ರಾಜ ಹಂಸಾಯ ತೇ ನಮಃ ॥೩೭॥
ಕನಕಾಂಗದ ಹಾರಾಯ ನಮಃ ಸರ್ಪೋಪವೀತಿನೇ।
ಸರ್ಪಕುಂಡಲ ಮಾಲಾಯ ಕಟಿಸೂತ್ರೀ ಕೃತಾಹಿನೇ ॥೩೮॥
ವೇದ ಗರ್ಭಾಯ ಗರ್ಭಾಯ ವಿಶ್ವಗರ್ಭಾಯ ತೇ ಶಿವ।

॥ ಬ್ರಹ್ಮೋವಾಚ ॥

ವಿರರಾಮೇತಿ ಸಂಸ್ತುತ್ವಾ ಬ್ರಹ್ಮಣಾ ಸಹಿತೋ ಹರಿಃ ॥೩೯॥
ಏತತ್‌ಸ್ತೋತ್ರವರಂ ಪುಣ್ಯಂ ಸರ್ವಪಾಪ ಪ್ರಣಾಶನಂ।
ಯಃ ಪಠೇಚ್ಛ್ರಾವಯೇದ್ವಾಽಪಿ ಬ್ರಾಹ್ಮಣಾನ್ವೇದ ಪಾರಗಾನ್ ॥
ಸ ಯಾತಿ ಬ್ರಹ್ಮಣೋ ಲೋಕೇ ಪಾಪ ಕರ್ಮ ರತೋಽಪಿ ವೈ।
ತಸ್ಮಾಜ್ಜಪೇತ್ಪಠೇನ್ನಿತ್ಯಂ ಶ್ರಾವಯೇದ್ಬ್ರಾಹ್ಮಣಾನ್‌ಶುಭಾನ್॥೪೧॥

---

೩೭–೩೮. ಭುವನೇಶ, ದೇವ, ವೇದ, ಶಾಸ್ತ್ರ, ಸಾರಂಗ, ರಾಜಹಂಸ ಕನಕಾಂಗದ, ಕನಕಹಾರ, ಸರ್ಪೋಪವೀತೀ, ಸರ್ಪಕುಂಡಲ, ಸರ್ಪ ಮಾಲ, ಕಟಿಸೂತ್ರೀಕೃತಾಹಿ, ವೇದಗರ್ಭ, ಗರ್ಭ, ವಿಶ್ವಗರ್ಭ ಎಂಬ ಹೆಸರುಳ್ಳ ಶಿವನೇ, ನಿನಗೆ ನಮಸ್ಕಾರವು.

೩೯–೪೦. ಬ್ರಹ್ಮನು ಹೇಳಿದನು: ಹರಿಯು ಬ್ರಹ್ಮನೊಡನೆ ಈ ರೀತಿಯಲ್ಲಿ ಸ್ತೋತ್ರಮಾಡಿ ಸುಮ್ಮನಾದನು. ಈ ಶ್ರೇಷ್ಠವಾದ ಸ್ತೋತ್ರವು ಪುಣ್ಯಕರವಾದುದು. ಸಮಸ್ತ ಪಾಪಗಳನ್ನು ನಾಶಮಾಡುವುದು. ಯಾರು ಇದನ್ನು ಹೇಳುವರೋ, ವೇದವನ್ನು ತಿಳಿದ ಬ್ರಾಹ್ಮಣರಿಗೆ ಕೇಳಿಸುವರೋ, ಅವರು ಅನೇಕ ಪಾಪ ಕರ್ಮಗಳಲ್ಲಿ ಆಸಕ್ತರಾಗಿದ್ದರೂ, ಇದರ ಪುಣ್ಯದಿಂದ ಬ್ರಹ್ಮಲೋಕಕ್ಕೆ ಹೋಗುವರು.

೪೧–೪೨. ಆದುದರಿಂದ ವಿಷ್ಣುವು ಹೇಳಿದ ಈ ಸ್ತೋತ್ರವನ್ನು ಪ್ರತಿದಿನವೂ ಹೇಳಬೇಕು, ಮತ್ತು ಒಳ್ಳೆಯಗುಣವಂತರಾದ ಬ್ರಾಹ್ಮಣ

**ಸರ್ವಪಾಪ ವಿಶುದ್ಧ್ಯರ್ಥಂ ವಿಷ್ಣುನಾ ಪರಿಭಾಷಿತಂ ॥೪೨॥**

**ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ವಿಷ್ಣುಸ್ತವೋ ನಾಮ ಅಷ್ಟಾದಶೋಽಧ್ಯಾಯಃ**

---

ರಿಗೆ ಹೇಳಬೇಕು. ಇದರಿಂದ ಹೇಳಿದವರ ಮತ್ತು ಕೇಳಿದವರ ಸಮಸ್ತ ಪಾಪಗಳೂ ನಾಶವಾಗುವುವು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ವಿಷ್ಣು ಮಾಡಿದ ಶಿವಸ್ತುತಿ ಎಂಬ ಹದಿನೆಂಟನೆಯ ಅಧ್ಯಾಯವು ಮುಗಿದುದು.



## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಏಕೋನವಿಂಶೋಽಧ್ಯಾಯಃ

**ಏಕೋನವಿಂಶೇ ಹ್ಯಧ್ಯಾಯೇ ಸ್ತುತ್ವಾ ಪ್ರೀತಾನ್ಮಹೇಶ್ವರಾತ್ ।**
**ಬ್ರಹ್ಮವಿಷ್ಣ್ವೋರ್ವರಪ್ರಾಪ್ತಿರ್ಮೋಹನಾಶಶ್ಚ ವರ್ಣ್ಯತೇ ॥**

**॥ ಸೂತ ಉವಾಚ ॥**

**ಅಥೋವಾಚ ಮಹಾದೇವಃ ಪ್ರೀತೋಽಹಂ ಸುರಸತ್ತಮೌ ।**
**ಪಶ್ಯತಾಂ ಮಾಂ ಮಹಾದೇವಂ ಭಯಂ ಸರ್ವಂ ವಿಮುಚ್ಯತಾಂ ॥**

**ಯುವಾಂ ಪ್ರಸೂತೌ ಗಾತ್ರಾಭ್ಯಾಂ ಮಮ ಪೂರ್ವಂ ಮಹಾಬಲೌ ।**
**ಅಯಂ ಮೇ ದಕ್ಷಿಣೇ ಪಾರ್ಶ್ವೇ ಬ್ರಹ್ಮಾ ಲೋಕಪಿತಾಮಹಃ ॥ ೨ ॥**

---

### ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಹತ್ತೊಂಬತ್ತನೆಯ ಅಧ್ಯಾಯವು

ಈ ಹತ್ತೊಂಬತ್ತನೆಯ ಅಧ್ಯಾಯದಲ್ಲಿ ಬ್ರಹ್ಮನೂ ವಿಷ್ಣುವೂ ಸ್ತೋತ್ರ ಮಾಡಿದುದರಿಂದ, ಸಂತೋಷವನ್ನು ಹೊಂದಿದ ಮಹೇಶ್ವರನು ಅವರಿಗೆ ವರವನ್ನು ಕೊಟ್ಟುದನ್ನೂ ಅವರ ಭ್ರಾಂತಿಯು ನಾಶವಾದ ಬಗೆಯನ್ನೂ ವರ್ಣಿಸಲಾಗುವುದು.

೧. ಸೂತನು ಹೇಳಿದನು: ವಿಷ್ಣು ಬ್ರಹ್ಮರು ಸ್ತೋತ್ರಮಾಡಿದ ಮೇಲೆ ಮಹಾದೇವನು ಬ್ರಹ್ಮವಿಷ್ಣುಗಳನ್ನು ಕುರಿತು ಎಲೈ ದೇವಶ್ರೇಷ್ಠರೇ, ನಾನು ನಿಮ್ಮ ಸ್ತೋತ್ರಕ್ಕೆ ಸಂತೋಷಪಟ್ಟೆನು. ನನ್ನನ್ನು ಮಹಾದೇವನೆಂಬುದಾಗಿ ತಿಳಿಯಿರಿ. ನಿಮಗಿರುವ ಸಕಲಭಯಗಳನ್ನೂ ಬಿಟ್ಟು ಬಿಡಿರಿ.

೨-೩. ಮಹಾಬಲಶಾಲಿಗಳಾದ ನೀವಿಬ್ಬರೂ, ಮೊದಲು ನನ್ನ ಶರೀರದಿಂದಲೇ ಹುಟ್ಟಿದಿರಿ. ಲೋಕವನ್ನೆಲ್ಲವನ್ನೂ ಸೃಷ್ಟಿಸಿದ ಈ ಬ್ರಹ್ಮನು ನನ್ನ ಬಲಭಾಗದಿಂದ ಹುಟ್ಟಿದನು. ಪ್ರಪಂಚಸ್ವರೂಪನಾದ

ವಾಮೇ ಪಾರ್ಶ್ವೇ ಚ ಮೇ ವಿಷ್ಣುರ್ವಿಶ್ವಾತ್ಮಾ ಹೃದಯೋದ್ಭವಃ ।
ಪ್ರೀತೋಽಹಂ ಯುವಯೋಃ ಸಮ್ಯಗ್ವರಂ ದದ್ಮಿ ಯಥೇಪ್ಸಿತಂ ॥

ಏವ ಮುಕ್ತ್ವಾ ತು ತಂ ವಿಷ್ಣುಂ ಕರಾಭ್ಯಾಂ ಪರಮೇಶ್ವರಃ ।
ಪಸ್ಪರ್ಶ ಸುಭಗಾಭ್ಯಾಂ ತು ಕೃಪಯಾ ತು ಕೃಪಾನಿಧಿಃ ॥ ೪ ॥

ತತಃ ಪ್ರಹೃಷ್ಟಮನಸಾ ಪ್ರಣಿಪತ್ಯ ಮಹೇಶ್ವರಂ ।
ಪ್ರಾಹ ನಾರಾಯಣೋ ನಾಥಂ ಲಿಂಗಸ್ಥಂ ಲಿಂಗವರ್ಜಿತಂ ॥ ೫ ॥

ಯದಿ ಪ್ರೀತಿಃ ಸಮುತ್ಪನ್ನಾ ಯದಿ ದೇಯೋ ವರಶ್ಚ ನೌ ।
ಭಕ್ತಿರ್ಭವತು ನೌ ನಿತ್ಯಂ ತ್ವಯಿ ಚಾವ್ಯಭಿ ಚಾರಿಣೀ ॥ ೬ ॥

ದೇವಃ ಪ್ರದತ್ತವಾನ್ದೇವಾಃ ಸ್ವಾತ್ಮನ್ಯವ್ಯಭಿ ಚಾರಿಣೀಂ ।
ಬ್ರಹ್ಮಣೇ ವಿಷ್ಣವೇ ಚೈವ ಶ್ರದ್ಧಾಂ ಶೀತಾಂಶುಭೂಷಣಃ ॥ ೭ ॥

---

ವಿಷ್ಣುವು ನನ್ನ ಎಡಭಾಗದಿಂದ ಹುಟ್ಟಿದನು. ನಿಮ್ಮಿಬ್ಬರ ಸ್ತೋತ್ರಗಳಿಂದ ನಾನು ಸಂತೋಷಪಟ್ಟೆನು. ನಿಮಗೆ ಇಷ್ಟವಾದ ವರವನ್ನು ಕೊಡುವೆನು.

೪. ಹೀಗೆಂದು ಹೇಳಿ ದಯಾನಿಧಿಯಾದ ಪರಮೇಶ್ವರನು ದಯೆಯನ್ನು ತೋರಿಸುತ್ತಾ, ಸಂಪದ್ಯುಕ್ತವಾದ ತನ್ನ ಕೈಗಳಿಂದ ವಿಷ್ಣುವನ್ನು ಮುಟ್ಟಿದನು.

೫. ಆಮೇಲೆ ನಾರಾಯಣನು ಸಂತೋಷದಿಂದ ಕೂಡಿದ ಮನಸ್ಸುಳ್ಳವನಾಗಿ ಆ ಜ್ಯೋತಿರ್ಲಿಂಗದಲ್ಲಿರುವ ಲಿಂಗದೇಹವಿಲ್ಲದ ಪರಮೇಶ್ವರನಿಗೆ ನಮಸ್ಕರಿಸಿ ಮುಂದೆ ಹೇಳುವಂತೆ ಮಾತನಾಡಿದನು.

೬. ನಿನಗೆ ನಮ್ಮಲ್ಲಿ ಪ್ರೀತಿಯಿದ್ದರೆ, ನಮಗೆ ವರವನ್ನು ಕೊಡಬೇಕೆಂಬ ಅಪೇಕ್ಷೆಯಿದ್ದರೆ, ನಮ್ಮಿಬ್ಬರಿಗೂ ನಿನ್ನಲ್ಲಿ ಯಾವಾಗಲೂ, ನಿರ್ದುಷ್ಟವಾದ ಕಡಿಮೆಯಾಗದಿರತಕ್ಕ ಭಕ್ತಿಯುಂಟಾಗಲಿ.

೭, ಎಲೈ ದೇವತೆಗಳೇ, ಕೇಳಿರಿ. ಆಸ್ವಾಮಿಯಾದ ತಣ್ಣಗಿರುವ ಚಂದ್ರನನ್ನು ಆಭರಣವನ್ನಾಗಿ ಧರಿಸಿದ ಪರಮೇಶ್ವರನು, ವಿಷ್ಣು ಬ್ರಹ್ಮರಿಗೆ ನಿರ್ದುಷ್ಟವಾದ ಅಚಂಚಲವಾದ ಭಕ್ತಿಯನ್ನುಂಟುಮಾಡಿದನು.

ಜಾನುಭ್ಯಾಮವನೀಂ ಗತ್ವಾ ಪುನರ್ನಾರಾಯಣಃ ಸ್ವಯಂ ।
ಪ್ರಣಿಪತ್ಯ ಚ ವಿಶ್ವೇಶಂ ಪ್ರಾಹ ಮಂದತರಂ ವಶೀ ॥ ೮ ॥

ಆವಯೋರ್ದೇವದೇವೇಶ ವಿವಾದಮತಿ ಶೋಭನಂ ।
ಇಹಾಗತೋ ಭವಾನ್ ಯಸ್ಮಾದ್ವಿವಾದಶಮನಾಯ ನೌ ॥ ೯ ॥

ತಸ್ಯ ತದ್ವಚನಂ ಶ್ರುತ್ವಾ ಪುನಃ ಪ್ರಾಹ ಹರೋ ಹರಿಂ ।
ಪಣಿಪತ್ಯ ಸ್ಥಿತಂ ಮೂರ್ಧ್ನಾ ಕೃತಾಂಜಲಿಪುಟಂ ಸ್ಮಯನ್ ॥೧೦॥

॥ ಶ್ರೀ ಮಹಾದೇವ ಉವಾಚ ॥

ಪ್ರಳಯಸ್ಥಿತಿಸರ್ಗಾಣಾಂ ಕರ್ತಾ ತ್ವಂ ಧರಣೀಪತೇ ।
ವತ್ಸ ವತ್ಸ ಹರೇ ವಿಷ್ಣೋ ಪಾಲಯೈತಚ್ಚರಾಚರಂ ॥೧೧॥

---

ಮತ್ತೆ ನಾರಾಯಣನು ತನ್ನ ಮಂಡಿಗಳನ್ನು ಭೂಮಿಯಲ್ಲಿ ಊರಿಕೊಂಡು, ಆ ವಿಶ್ವೇಶ್ವರನಿಗೆ ನಮಸ್ಕಾರವನ್ನು ಮಾಡಿ, ಸಮಾಧಾನ ಚಿತ್ತದಿಂದ ಮೆಲ್ಲಗೆ ಮಾತನಾಡಿದನು.

೯. ಓ ದೇವತೆಗಳಿಗೆಲ್ಲರಿಗೂ ಒಡೆಯನಾದ ಪರಮೇಶ್ವರನೇ, ನಮ್ಮಿಬ್ಬರ ಜಗಳವನ್ನು ತೀರಿಸುವುದಕ್ಕಾಗಿ, ನೀನೂ ಇಲ್ಲಿಗೆ ಬಂದುದರಿಂದ, ನಮ್ಮಿಬ್ಬರ ಜಗಳವು ಅತ್ಯಂತ ಮಂಗಳಕರವಾದುದಾಯಿತು. ನಾವಿಬ್ಬರೂ ಸಮಾನವಾದ ಬಲವುಳ್ಳವರೆಂದು ಅಭಿಪ್ರಾಯವು.

೧೦. ಮತ್ತೆ ಹರನು ವಿಷ್ಣುವಿನ ಮಾತನ್ನು ಕೇಳಿ, ನಮಸ್ಕಾರ ಮಾಡಿ ತಲೆಯಮೇಲೆ ಕೈ ಜೋಡಿಸಿಕೊಂಡು ನಿಂತಿರುವ ಆ ಹರಿಯನ್ನು ಕುರಿತು ನಗುತ್ತ ಹೇಳಿದನು.

೧೧. ಮಹಾದೇವನು ಹೇಳಿದನು :—ಧರಣೀದೇವಿಯ ಪತಿಯಾದ ವಿಷ್ಣುವೇ, ನೀನು ಸೃಷ್ಟಿ ಸ್ಥಿತಿ ಸಂಹಾರಗಳನ್ನು ಮಾಡುವ ಶಕ್ತಿಯುಳ್ಳವನು. ಆದರೂ ಪ್ರೀತಿಪಾತ್ರನಾದ ನೀನು ಈ ಚರಾಚರ ರೂಪವಾದ ಪ್ರಪಂಚವನ್ನು ರಕ್ಷಣೆಮಾಡು.

ತ್ರಿಧಾ ಭಿನ್ನೋ ಹ್ಯಹಂ ವಿಷ್ಣೋ ಬ್ರಹ್ಮ ವಿಷ್ಣುಭವಾಖ್ಯಯಾ ।
ಸರ್ಗ ರಕ್ಷಾಲಯ ಗುಣೈರ್ನಿಷ್ಕಲಃ ಪರಮೇಶ್ವರಃ ॥೧೨॥

ಸಂಮೋಹಂ ತ್ಯಜ ಭೋ ವಿಷ್ಣೋ ಪಾಲಯೈನಂ ಪಿತಾಮಹಂ ।
ಪಾದ್ಮೇ ಭವಿಷ್ಯತಿ ಸುತಃ ಕಲ್ಪೇ ತವ ಪಿತಾಮಹಃ ॥೧೩॥

ತದಾ ದ್ರಕ್ಷ್ಯಸಿ ಮಾಂ ಚೈವಂ ಸೋಽಪಿ ದ್ರಕ್ಷ್ಯತಿ ಪದ್ಮಜಃ ।
ಏವಮುಕ್ತ್ವಾ ಸ ಭಗವಾಂಸ್ತತ್ರೈವಾಂತರಧೀಯತ ॥೧೪॥

ತದಾಪ್ರಭೃತಿ ಲೋಕೇಷು ಲಿಂಗಾರ್ಚಾ ಸುಪ್ರತಿಷ್ಠಿತಾ ।
ಲಿಂಗವೇದೀ ಮಹಾದೇವೀ ಲಿಂಗಂ ಸಾಕ್ಷಾನ್ಮಹೇಶ್ವರಃ ॥೧೫॥

ಲಯನಾಲ್ಲಿಂಗಮಿತ್ಯುಕ್ತಂ ತತ್ರೈವ ನಿಖಿಲಂ ಸುರಾಃ ।
ಯಸ್ತು ಲೈಂಗಂ ಪಠೇನ್ನಿತ್ಯಮಾಖ್ಯಾನಂ ಲಿಂಗಸನ್ನಿಧೌ ॥೧೬॥

---

೧೨. ನಿರ್ಗುಣನಾದ ಪರಮೇಶ್ವರನಾದ ನಾನು ಸೃಷ್ಟಿಸ್ಥಿತಿ ಸಂಹಾರ ರೂಪವಾದ ಗುಣಗಳಿಂದ ಬ್ರಹ್ಮ ವಿಷ್ಣು ಮಹೇಶ್ವರನೆಂಬ ಹೆಸರಿನಿಂದ ಮೂರು ಭಾಗವಾಗಿರುವೆನು.

೧೩. ಎಲೈ ವಿಷ್ಣುವೇ, ಭ್ರಾಂತಿಯನ್ನು ಬಿಡು; ಈ ಬ್ರಹ್ಮನನ್ನು ರಕ್ಷಣೆ ಮಾಡು; ಈ ಬ್ರಹ್ಮನು ಪದ್ಮಕಲ್ಪದಲ್ಲಿ ನಿನ್ನ ಮಗನಾಗುವನು.

೧೪. ಆಗ ನೀನು ನನ್ನನ್ನು ಈ ರೀತಿಯಲ್ಲಿ ಎಂದರೆ ಲಿಂಗ ರೂಪದಿಂದ ನೋಡುವೆ. ಬ್ರಹ್ಮನೂ ನೋಡುವನು; ಎಂದು ಹೇಳಿ ಆ ಭಗವಂತನಾದ ಶಿವನು ಅಲ್ಲಿಯೇ ಮರೆಯಾದನು.

೧೫–೧೬. ದೇವತೆಗಳೇ, ಕೇಳಿರಿ. ಅದು ಮೊದಲುಗೊಂಡು ಲೋಕದಲ್ಲಿ ಲಿಂಗಪೂಜೆಯು ಹರಡಿತು. ಲಿಂಗವೇದೀ ಎಂದರೆ, ಲಿಂಗಕ್ಕೆ ಆಧಾರವಾದ ಪಾಣಿಪೀಠಿಕೆ ಯೆಂಬ ಲಿಂಗಾವಯವವು. ಆ ವೇದಿಯು ಉಮಾದೇವಿಯು, ಲಿಂಗವು ಮಹೇಶ್ವರನು; ಆ ಲಿಂಗಾಕೃತಿಯಲ್ಲಿಯೇ, ಸಮಸ್ತ ಪ್ರಪಂಚವೂ, ಲಯವನ್ನು ಹೊಂದಿ ಮರೆಯಾಗುವುದರಿಂದ, ಅದಕ್ಕೆ ಲಿಂಗವೆಂದು ಹೆಸರು ಬಂದಿರುವುದು.

**ಸ ಯಾತಿ ಶಿವತಾಂ ವಿಪ್ರೋ ನಾತ್ರ ಕಾರ್ಯಾ ವಿಚಾರಣಾ ॥೧೭॥**

**ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ**
**ವಿಷ್ಣುಪ್ರಬೋಧೋ ನಾಮ ಏಕೋನವಿಂಶೋಽಧ್ಯಾಯಃ ಸಮಾಪ್ತಃ**

---

೧೭. ಯಾವ ಬ್ರಾಹ್ಮಣನು ಪ್ರತಿದಿನವೂ ಲಿಂಗ ಸಮೀಪದಲ್ಲಿ ಈ ಲಿಂಗ ಪುರಾಣವನ್ನು ಪಾರಾಯಣ ಮಾಡುವನೋ ಅವನು ಶಿವಸ್ವರೂಪನಾಗುವನು. ಈ ವಿಷಯದಲ್ಲಿ ಸಂದೇಹವಿಲ್ಲವು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ
ಹತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ವಿಂಶೋಽಧ್ಯಾಯಃ

**ವಿಂಶೇ ತು ವರ್ಣ್ಯತೇ ಚಾಸ್ಮಿನ್ ಬ್ರಹ್ಮಣಃ ಪರಮೇಷ್ಠಿನಃ ।**
**ಶ್ರೀವಿಷ್ಣುನಾಭಿಕಮಲಾದುದ್ಭವೋ ರುದ್ರದರ್ಶನಂ ॥**

**ಋಷಯ ಊಚುः**

**ಕಥಂ ಪಾದ್ಮೇ ಪುರಾ ಕಲ್ಪೇ ಬ್ರಹ್ಮಾ ಪದ್ಮೋದ್ಭವೋಽಭವತ್ ।**
**ಭವಂ ಚ ದೃಷ್ಟವಾಂಸ್ತೇನ ಬ್ರಹ್ಮಣಾ ಪುರುಷೋತ್ತಮಃ ॥ ೧ ॥**
**ಏತತ್ಸರ್ವಂ ವಿಶೇಷೇಣ ಸಾಂಪ್ರತಂ ವಕ್ತುಮರ್ಹಸಿ ।**

**॥ ಸೂತ ಉವಾಚ ॥**

**ಆಸೀದೇಕಾರ್ಣವಂ ಘೋರಮವಿಭಾಗಂ ತಮೋಮಯಂ ॥ ೨ ॥**
**ಮಧ್ಯೇಚೈಕಾರ್ಣವೇ ತಸ್ಮಿನ್ ಶಂಖಚಕ್ರಗದಾಧರಃ ।**
**ಜೀಮೂತಾಭೋಽಂಬುಜಾಕ್ಷಶ್ಚ ಕಿರೀಟೀ ಶ್ರೀಪತಿರ್ಹರಿಃ ॥ ೩ ॥**

---

### ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಇಪ್ಪತ್ತನೆಯ ಅಧ್ಯಾಯವು

(ಈ ಲಿಂಗಪುರಾಣದ ಇಪ್ಪತ್ತನೆಯ ಅಧ್ಯಾಯದಲ್ಲಿ, ಉತ್ತಮವಾದ ಯಜ್ಞಗಳನ್ನು ಮಾಡಿದ ಬ್ರಹ್ಮನು, ವಿಷ್ಣುವಿನ ನಾಭಿಕಮಲದಲ್ಲಿ ಪುಟ್ಟಿದುದೂ, ಅವನಿಗೆ ಆದ ಶಿವ ದರ್ಶನವೂ, ಇವನ್ನು ವರ್ಣಿಸಿದೆ.

೧. ಋಷಿಗಳು ಹೇಳಿದರು: ಓ ಸೂತನೇ, ಹಿಂದೆ ಪದ್ಮಕಲ್ಪದಲ್ಲಿ, ಬ್ರಹ್ಮನು ಹೇಗೆ ಕಮಲದಲ್ಲಿ ಹುಟ್ಟಿದನು? ಆ ಪುರುಷಶ್ರೇಷ್ಠನಾದ ವಿಷ್ಣುವು, ಬ್ರಹ್ಮನೊಡನೆ ಹೇಗೆ ಶಿವನ ದರ್ಶನವನ್ನು ಮಾಡಿದನು? ಇದನ್ನೆಲ್ಲವನ್ನೂ ಈಗ ನಮಗೆ ವಿಸ್ತಾರವಾಗಿ ಹೇಳಬೇಕು.

೨–೩. ಸೂತನು ಹೇಳಿದನು: ಹಿಂದೆ ಒಂದು ಪ್ರಳಯಕಾಲದಲ್ಲಿ ಪ್ರಪಂಚವೆಲ್ಲವೂ, ಸಮುದ್ರಮಯವಾಗಿ, ಭಯಂಕರವಾದ ಕತ್ತಲೆಯಿಂದ ತುಂಬಿದ್ದಿತು. ಆ ಏಕಾರ್ಣವದ ನಡುವೆ, ಶಂಖ, ಚಕ್ರ, ಗದೆ, ಇವುಗಳನ್ನು ಧರಿಸಿದ, ಮೇಘಕ್ಕೆ ಸಮಾನವಾದ ಶರೀರದ ಕಾಂತಿಯಿಂದ ಕೂಡಿದ, ಕಮಲದಂತೆ ಕಣ್ಣುಗಳುಳ್ಳ, ಕಿರೀಟವನ್ನು ಧರಿಸಿದ, ಲಕ್ಷ್ಮೀಪತಿಯಾದ ಹರಿಯು ಇದ್ದನು. ("ನೀಲ ಜೀಮೂತ ಸಂಕಾಶಃ" ಎಂದು ಆಂಧ್ರಲಿಪಿಯಲ್ಲಿರುವ ಗ್ರಂಥದಲ್ಲಿ ಪಾಠಭೇದವಿದೆ.)

ನಾರಾಯಣ ಮುಖೋದ್ಗೀರ್ಣಸರ್ವಾತ್ಮಾ ಪುರುಷೋತ್ತಮಃ ।
ಅಷ್ಟಬಾಹುರ್ಮಹಾವಕ್ಷಾ ಲೋಕಾನಾಂ ಯೋನಿರುಚ್ಯತೇ ॥ ೪ ॥
ಕಿಮಪ್ಯಚಿಂತ್ಯಂ ಯೋಗಾತ್ಮಾ ಯೋಗಮಾಸ್ಥಾಯ ಯೋಗವಿತ್ ।
ಫಣಾಸಹಸ್ರಕಲಿತಂ ತಮಪ್ರತಿಮ ವರ್ಚಸಂ ॥ ೫ ॥
ಮಹಾಭೋಗಪತೇರ್ಭೋಗಂ ಸಾಧ್ವಾಸ್ತೀರ್ಯಮಹೋಚ್ಛ್ರಯಂ
ತಸ್ಮಿನ್ಮಹತಿ ಪರ್ಯಂಕೇ ಶೇತೇ ಚೈಕಾರ್ಣವೇ ಪ್ರಭುಃ ॥ ೬ ॥
ಏವಂ ತತ್ರ ಶಯಾನೇನ ವಿಷ್ಣುನಾ ಪ್ರಭವಿಷ್ಣುನಾ ।
ಆತ್ಮಾರಾಮೇಣ ಕ್ರೀಡಾರ್ಥಂ ಲೀಲಯಾ ಕ್ಲಿಷ್ಟಕರ್ಮಣಾ ॥ ೭ ॥
ಶತಯೋಜನವಿಸ್ತೀರ್ಣಂ ತರುಣಾದಿತ್ಯಸನ್ನಿಭಂ ।
ವಜ್ರದಂಡಂ ಮಹೋತ್ಸೇಧಂ ನಾಭ್ಯಾಂ ಸೃಷ್ಟಂ ತು ಪುಷ್ಕರಂ ॥ ೮ ॥

---

೪. ಆ ಹರಿಯು ನೀರಿನಲ್ಲಿ ವಾಸಮಾಡುತ್ತಿರುವುದರಿಂದ, ನಾರಾಯಣನೆಂಬ ಹೆಸರನ್ನು ಹೊಂದಿ, ಪ್ರಳಯಕಾಲವಾದುದರಿಂದ, ಸಕಲಜೀವರುಗಳನ್ನೂ ತನ್ನ ಬಾಯಿಯಿಂದ ನುಂಗಿ, ಸರ್ವಾತ್ಮನೆಂದು, ಪುರುಷಶ್ರೇಷ್ಠನೆಂದೂ, ಎನ್ನಿಸಿಕೊಂಡು, ಎಂಟು ತೋಳುಗಳೂ, ವಿಸ್ತಾರವಾದ ಎದೆಯೂ ಉಳ್ಳವನಾಗಿ, ಪ್ರಪಂಚಕ್ಕೆ ಕಾರಣನೆನಿಸಿಕೊಂಡಿರುವನು.

೫–೬. ಯೋಗಗಳನ್ನು ತಿಳಿದ, ಆ ನಾರಾಯಣನು, ಊಹಿಸುವುದಕ್ಕಾಗದ ಯಾವುದೋ ಒಂದು ಯೋಗವನ್ನಾಶ್ರಯಿಸಿ, ಸಾವಿರ ಹೆಡೆಗಳುಳ್ಳ, ಅಸಮಾನವಾದ ತೇಜಸ್ಸಿನಿಂದ ಹೊಳೆಯುತ್ತಿರುವ, ಆದಿಶೇಷನೆಂಬ ಸರ್ಪಾಧಿಪತಿಯ, ಅತ್ಯಂತ ಎತ್ತರವಾದ ಶರೀರವನ್ನು, ಚನ್ನಾಗಿ ಹಾಸಿಕೊಂಡು, ಆ ದೊಡ್ಡ ಮಂಚದಲ್ಲಿ ಆ ದೇವನು, ಆ ಏಕಾರ್ಣವದಲ್ಲಿ ಮಲಗಿರುವನು.

೭–೮. ಹೀಗೆ ಅಲ್ಲಿ ಮಲಗಿದ್ದ, ಸರ್ವಶಕ್ತನೂ, ಆತ್ಮಾನಂದವನ್ನು ಅನುಭವಿಸುವವನೂ, ಆದ ವಿಷ್ಣುವು, ಆಟವಾಡುವಂತೆ ಅತ್ಯಂತ ಸುಲಭವಾಗಿ, ನೂರುಗಾವುದ ವಿಸ್ತಾರವಾದ, ಬಾಲಸೂರ್ಯನ ಕಾಂತಿಗೆ ಸಮಾನವಾದ ಕಾಂತಿಯುಳ್ಳ ಅತ್ಯಂತ ಎತ್ತರವಾದ, ವಜ್ರದನಾಳವುಳ್ಳ ಕಮಲವನ್ನು ತನ್ನ ಹೊಕ್ಕುಳಿನಲ್ಲಿ ಸೃಷ್ಟಿಮಾಡಿದನು.

ತಸ್ಯೈವಂ ಕ್ರೀಡಮಾನಸ್ಯ ಸಮೀಪಂ ದೇವಮೀಢುಷಃ ।
ಹೇಮಗರ್ಭಾಂಡಜೋ ಬ್ರಹ್ಮಾ ರುಕ್ಮವರ್ಣೋ ಹ್ಯತೀಂದ್ರಿಯಃ ॥
ಚತುರ್ವಕ್ತ್ರೋ ವಿಶಾಲಾಕ್ಷಃ ಸಮಾಗಮ್ಯ ಯದೃಚ್ಛಯಾ ।
ಶ್ರಿಯಾ ಯುಕ್ತೇನ ದಿವ್ಯೇನ ಸುಶೋಭೇನ ಸುಗಂಧಿನಾ ॥೧೦॥
ಕ್ರೀಡಮಾನಂ ಚ ಪದ್ಮೇನ ದೃಷ್ಟ್ವಾ ಬ್ರಹ್ಮಾ ಶುಭೇಕ್ಷಣಂ ।
ಸ ವಿಸ್ಮಯಮಥಾಗಮ್ಯ ಸೌಮ್ಯಸಂಪನ್ನಯಾ ಗಿರಾ ॥೧೧॥
ಪ್ರೋವಾಚ ಭಗವಾನ್ ಶೇತೇ ಹ್ಯಾಶ್ರಿತೋ ಮಧ್ಯಮಂಭಸಾಂ ।
ಅಥ ತಸ್ಯಾಚ್ಯುತಃ ಶ್ರುತ್ವಾ ಬ್ರಹ್ಮಣಸ್ತು ಶುಭಂ ವಚಃ ॥೧೨॥
ಉದತಿಷ್ಠತ ಪರ್ಯಂಕಾದ್ವಿಸ್ಮಯೋತ್ಫುಲ್ಲಲೋಚನಃ ।
ಪ್ರತ್ಯುವಾಚೋತ್ತರಂ ಚೈವ ಕಲ್ಪೇ ಕಲ್ಪೇ ಪ್ರತಿಶ್ರಯಃ ॥೧೩॥

---

೯. ಈರೀತಿಯಲ್ಲಿ ಆಟವಾಡುತ್ತಿರುವ, ಆ ದೇವಶ್ರೇಷ್ಠನ ಸಮೀಪಕ್ಕೆ, ಸ್ಥೂಲವಾದ ಇಂದ್ರಿಯಗಳಿಗೆ ಗೋಚರನಾಗದ, ನಾಲ್ಕು ಮುಖಗಳೂ, ವಿಸ್ತಾರವಾದ ಕಣ್ಣುಗಳೂ ಉಳ್ಳ, ಚಿನ್ನದಂತೆ ಬಣ್ಣವುಳ್ಳ, ಹಿರಣ್ಯಗರ್ಭಬ್ರಹ್ಮನು ಅಕಸ್ಮಾತ್ತಾಗಿ ಬಂದನು.

೧೦–೧೧. ಕಾಂತಿಯುಕ್ತವಾಗಿಯೂ, ಸುಗಂಧವಾಗಿಯೂ, ಶ್ರೇಷ್ಠವೂ, ಮಂಗಳಕರವೂ ಆದ, ಕಮಲವನ್ನು ಹಿಡಿದು ಕ್ರೀಡಿಸುತ್ತಿರುವ ನಾರಾಯಣನನ್ನು ನೋಡಿ ಬ್ರಹ್ಮನು ಆಶ್ಚರ್ಯದಿಂದ ಕೂಡಿ, ಅವನ ಸಮೀಪಕ್ಕೆ ಬಂದು ಮೃದುವಾದ ಮಾತಿನಿಂದ ಈ ನೀರಿನ ಮಧ್ಯವನ್ನಾಶ್ರಯಿಸಿ, ಮಲಗಿರುವ ನೀನು ಯಾರು? ಎಂದು ಪ್ರಶ್ನೆಮಾಡಿದನು.

೧೨–೧೩. ಬ್ರಹ್ಮನು ಹೇಳಿದ ಮಂಗಳಕರವಾದ ಮಾತನ್ನು ಆ ನಾಶರಹಿತನಾದ ನಾರಾಯಣನು ಕೇಳಿ, ಆಶ್ಚರ್ಯದಿಂದ ಅರಳಿದ ಕಣ್ಣುಗಳ್ಳುಳ್ಳವನಾಗಿ, ಆ ಆದಿಶೇಷನ ಮಂಚದಿಂದೆದ್ದು, ಪ್ರತಿಯೊಂದು ಕಲ್ಪದಲ್ಲಿಯೂ, ಜಗತ್ತಿಗೆ ನಿವಾಸಸ್ಥಾನನು ನಾನು, ಎಂದು ಉತ್ತರವನ್ನು ಹೇಳಿದನು.

ಕರ್ತವ್ಯಂ ಚ ಕೃತಂ ಚೈವ ಕ್ರಿಯತೇ ಯಚ್ಚ ಕಿಂಚನ ।
ದ್ಯೌರಂತರಿಕ್ಷಂ ಭೂಶ್ಚೈವ ಪರಂ ಪದಮಹಂ ಭುವಃ ॥೧೪॥

ತಮೇವಮುಕ್ತ್ವಾ ಭಗವಾನ್ ವಿಷ್ಣುಃ ಪುನರಥಾ ಬ್ರವೀತ್ ।
ಕಸ್ತ್ವಂ ಖಲು ಸಮಾಯಾತಃ ಸಮೀಪಂ ಭಗವಾನ್ಕುತಃ ॥೧೫॥

ಕ್ವ ವಾ ಭೂಯಶ್ಚ ಗಂತವ್ಯಂ ಕಶ್ಚ ವಾ ತೇ ಪ್ರತಿಶ್ರಯಃ ।
ಕೋ ಭವಾನ್ವಿಶ್ವಮೂರ್ತಿರ್ವೈ ಕರ್ತವ್ಯಂ ಕಿಂ ಚ ತೇ ಮಯಾ ॥೧೬॥

ಏವಂ ಬ್ರುವಂತಂ ವೈಕುಂಠಂ ಪ್ರತ್ಯುವಾಚ ಪಿತಾಮಹಃ ।
ಮಾಯಯಾ ಮೋಹಿತಃ ಶಂಭೋರವಿಜ್ಞಾಯ ಜನಾರ್ದನಂ ॥೧೭॥

ಮಾಯಯಾ ಮೋಹಿತಂ ದೇವಮವಿಜ್ಞಾತಂ ಮಹಾತ್ಮನಃ ।
ಯಥಾ ಭವಾಂಸ್ತಥೈವಾಽಹಮಾದಿಕರ್ತಾ ಪ್ರಜಾಪತಿಃ ॥೧೮॥

---

೧೪. ಸ್ವರ್ಗಲೋಕದಲ್ಲಿಯೂ, ಅಂತರಿಕ್ಷಲೋಕದಲ್ಲಿಯೂ, ಭೂಲೋಕದಲ್ಲಿಯೂ, ಮಾಡಬೇಕಾದುದೂ, ಮಾಡಿದುದೂ, ಮಾಡುತ್ತಿರುವುದೂ, ಇವುಗಳಿಗೆಲ್ಲಕ್ಕೂ, ನಾನೇ ಆಶ್ರಯನಾದವನು, ನಾನು ಈ ಲೋಕಗಳ ಸ್ವರೂಪನಾಗಿಯೂ, ಇರುವೆನು.

೧೫–೧೬. ಹೀಗೆಂದು ಹೇಳಿ ಆ ಮಹಾತ್ಮನಾದ ವಿಷ್ಣುವು, ಬ್ರಹ್ಮನನ್ನು ಕುರಿತು ಮತ್ತೆ ಹೇಳಿದನು. ನೀನು ಯಾರು? ಏತಕ್ಕೆ ನನ್ನ ಸಮೀಪಕ್ಕೆ ಬಂದೆ? ಮತ್ತೆಲ್ಲಿಗೆ ಹೋಗಬೇಕು? ನಿನ್ನ ಆಶ್ರಯಸ್ಥಾನ ವಾವುದು? ನಿನಗೆ ನನ್ನಿಂದ ಆಗಬೇಕಾದುದೇನು?

೧೭. ಹೀಗೆಂದು ಹೇಳುತ್ತಿರುವ ನಾರಾಯಣನಿಗೆ, ಶಿವನ ಮಾಯೆಯಿಂದ, ಆ ಜನಾರ್ದನನ ಸ್ವರೂಪವನ್ನು ತಿಳಿಯದ ಬ್ರಹ್ಮನು ಪ್ರತ್ಯುತ್ತರವನ್ನು ಹೇಳಿದನು.

೧೮. ಮಹಾತ್ಮನಾದ ಶಿವನ ಮಾಯೆಯಿಂದ ಭ್ರಾಂತಿಹೊಂದಿದುದರಿಂದಲೇ, ನಾರಾಯಣನ ಸ್ವರೂಪವನ್ನು ತಿಳಿಯದೆ ಬ್ರಹ್ಮನೂ, ನಿನ್ನಂತೆಯೇ ನಾನೂ, ಈ ಪ್ರಪಂಚದ ಸೃಷ್ಟಿಗೆ ಕರ್ತೃವಾದವನು. ಪ್ರಜಾಪತಿ ಎಂದು ನನ್ನ ಹೆಸರು. ಎಂದನು.

ಸವಿಸ್ಮಯಂ ವಚಃ ಶ್ರುತ್ವಾ ಬ್ರಹ್ಮಣೋ ಲೋಕತಂತ್ರಿಣಃ ।
ಅನುಜ್ಞಾತಶ್ಚ ತೇನಾಥ ವೈಕುಂಠೋ ವಿಶ್ವಸಂಭವಃ ॥೧೯॥
ಕೌತೂಹಲಾನ್ಮಹಾಯೋಗೀ ಪ್ರವಿಷ್ಟೋ ಬ್ರಹ್ಮಣೋ ಮುಖಂ ।
ಇಮಾನಷ್ಟಾದಶ ದ್ವೀಪಾನ್ಸಸಮುದ್ರಾನ್ಸಪರ್ವತಾನ್ ॥೨೦॥
ಪ್ರವಿಶ್ಯ ಸುಮಹಾತೇಜಾ ಶ್ಚಾತುರ್ವರ್ಣ್ಯ ಸಮಾಕುಲಾನ್ ।
ಬ್ರಹ್ಮಣಸ್ತಂಬ ಪರ್ಯಂತಂ ಸಪ್ತ ಲೋಕಾನ್ಸನಾತನಾನ್ ॥೨೧॥
ಬ್ರಹ್ಮಣಸ್ಸೂದರೇ ದೃಷ್ಟ್ವಾ ಸರ್ವಾ ನ್ವಿಷ್ಣುರ್ಮಹಾಭುಜಃ ।
ಅಹೋಽಸ್ಯ ತಪಸೋ ವೀರ್ಯಮಿತ್ಯುಕ್ತ್ವಾ ಚ ಪುನಃ ಪುನಃ ॥೨೨॥
ಅಟಿತ್ವಾ ವಿವಿಧಾನ್ ಲೋಕಾನ್ವಿಷ್ಣುರ್ನಾನಾವಿಧಾಶ್ರಯಾನ್ ।
ತತೋ ವರ್ಷಸಹಸ್ರಾಂತೇ ನಾಂತಂ ಹಿ ದದೃಶೇ ಯದಾ ॥೨೩॥
ತದಾಸ್ಯ ವಕ್ತ್ರಾನ್ನಿಷ್ಕ್ರಮ್ಯ ಪನ್ನಗೇಂದ್ರನಿಕೇತನಃ ।
ನಾರಾಯಣೋ ಜಗದ್ಧಾತಾ ಪಿತಾಮಹಮಥಾಽಬ್ರವೀತ್ ॥೨೪॥

---

೧೯. ಪ್ರಪಂಚದ ಸೃಷ್ಟಿಕಾರ್ಯವನ್ನು ಮಾಡುವ, ಬ್ರಹ್ಮನ ಆಶ್ಚರ್ಯಕರವಾದ ಮಾತನ್ನು ಕೇಳಿ, ಮಹಾಯೋನಿಯೂ, ಅನೇಕ ಪ್ರಪಂಚಗಳಿಗೆ ಉತ್ಪತ್ತಿಸ್ಥಾನನೂ, ಆದ ನಾರಾಯಣನು ಬ್ರಹ್ಮನ ಒಪ್ಪಿಗೆಯನ್ನು ತೆಗೆದುಕೊಂಡು, ಕುತೂಹಲದಿಂದ ಅವನ ಬಾಯಿಯ ಒಳಗೆ ಪ್ರವೇಶಮಾಡಿದನು.

೨೦-೨೨. ಆ ಬ್ರಹ್ಮನ ಹೊಟ್ಟೆಯೊಳಗೆ, ಸಮುದ್ರಗಳು, ಪರ್ವತಗಳು, ಹದಿನೆಂಟು ದೊಡ್ಡ ದ್ವೀಪಗಳು, ನಾಲ್ಕು ವರ್ಣಗಳಿಂದ ಕೂಡಿದ ದೇಶಗಳು, ಬ್ರಹ್ಮನೇ ಮೊದಲುಗೊಂಡು ಒಂದು ಸಣ್ಣ ಕ್ರಿಮಿಯವರೆಗೆ ಸಕಲಜೀವರಾಶಿಗಳು, ಏಳು ಲೋಕಗಳು ಇವುಗಳನ್ನೆಲ್ಲವನ್ನೂ ನೋಡಿ ಆ ವಿಷ್ಣುವು ಇವನ ತಪಸ್ಸಿನ ಮಹಿಮೆಯು, ಆಶ್ಚರ್ಯಕರವಾದುದೆಂದು ಮತ್ತೆ ಮತ್ತೆ ಹೇಳಿದನು.

೨೩-೨೪. ಆವಿಷ್ಣುವು, ಬ್ರಹ್ಮನ ಶರೀರದೊಳಗೆ ಬಗೆ ಬಗೆಯ ಆಶ್ರಯಸ್ಥಾನಗಳನ್ನು ಹೊಂದಿದ ಅನೇಕ ಲೋಕಗಳಲ್ಲಿ ತಿರುಗಿ, ಅದರ ಕೊನೆಯನ್ನು ಕಾಣದೆ, ಸಾವಿರಾರುವರ್ಷಗಳ ಮೇಲೆ, ಅವನ ಬಾಯಿಯಿಂದ ಹೊರಗೆ ಬಂದು ಆ ಬ್ರಹ್ಮನನ್ನು ಕುರಿತು ಹೇಳಿದನು.

ಭಗವಾನಾದಿರಂತಶ್ಚ ಮಧ್ಯಂ ಕಾಲೋ ದಿಶೋ ನಮಃ ।
ನಾಹಮಂತಂ ಪ್ರಪಶ್ಯಾಮಿ ಉದರಸ್ಯ ತವಾಽನಘ ॥೨೫॥
ಏವಮುಕ್ತ್ವಾಽಬ್ರವೀದ್ಭೂಯಃ ಪಿತಾಮಹಮಿದಂ ಹರಿಃ ।
ಭಗವಾನೇವಮೇವಾಹಂ ಶಾಶ್ವತಂ ಹಿ ಮಮೋದರಂ ॥೨೬॥
ಪ್ರವಿಶ್ಯ ಲೋಕಾನ್ಪಶ್ಯೈತಾನನೌಪಮ್ಯಾನ್ಸುರೋತ್ತಮ ।
ತತಃ ಪ್ರಹ್ಲಾದಿನೀಂ ವಾಣೀಂ ಶ್ರುತ್ವಾ ತಸ್ಯಾಭಿನಂದ್ಯ ಚ ॥೨೭॥
ಶ್ರೀಪತೇರುದರಂ ಭೂಯಃ ಪ್ರವಿವೇಶ ಪಿತಾಮಹಃ ।
ತಾನೇವ ಲೋಕಾನ್ಗರ್ಭಸ್ಥಾನ ಪಶ್ಯತ್ಸತ್ಯವಿಕ್ರಮಃ ॥೨೮॥
ಪರ್ಯಟಿತ್ವಾ ತು ದೇವಸ್ಯ ದದೃಶೇಽಂತಂ ನ ವೈ ಹರೇಃ ।
ಜ್ಞಾತ್ವಾ ಗತಿಂ ತಸ್ಯ ಪಿತಾಮಹಸ್ಯ
ದ್ವಾರಾಣಿ ಸರ್ವಾಣಿ ಪಿಧಾಯ ವಿಷ್ಣುಃ ।
ವಿಭುರ್ಜನಾರ್ದನಃ ಕರ್ತುಮಿಯೇಷ ಚಾಶು
ಸುಖಂ ಪ್ರಸುಪ್ತೋಽಹಮಿತಿ ಪ್ರಚಿಂತ್ಯ ॥೨೯॥

---

೨೫–೨೬. ಓ ಬ್ರಹ್ಮನೇ, ನೀನು ಆದಿ, ಮಧ್ಯ, ಅಂತ್ಯ ರೂಪವಾದ ದೇಶಸ್ವರೂಪನೂ, ಕಾಲಸ್ವರೂಪನೂ, ದಿಕ್ಕಿನ ಸ್ವರೂಪನೂ, ಆಗಿರುವೆ. ನಿನಗೆ ನಮಸ್ಕಾರವು. ನಿನ್ನ ಶರೀರದ ಕೊನೆಯನ್ನು ನಾನು ತಿಳಿಯಲಾರೆನು. ಎಂದು ಹೇಳಿ ಮತ್ತೆ ಹರಿಯು ಓ ಬ್ರಹ್ಮನೇ, ನಿನ್ನಂತೆಯೇ ನನ್ನ ಶರೀರವೂ, ಶಾಶ್ವತವಾದುದು. ನೀನೂ, ನನ್ನ ಶರೀರದೊಳಗೆ ಪ್ರವೇಶಿಸಿ, ಅಸಮಾನವಾದ ಅನೇಕ ಲೋಕಗಳನ್ನು ನೋಡು. ಎಂದು ಹೇಳಿದನು.

೨೭–೨೮. ಬ್ರಹ್ಮನು ಸಂತೋಷವನ್ನುಂಟುಮಾಡುವ, ಆ ವಿಷ್ಣುವಿನ ಮಾತನ್ನು ಕೇಳಿ, ಶ್ಲಾಘಿಸಿ ಆ ಲಕ್ಷ್ಮೀಪತಿಯಾದ, ನಾರಾಯಣನ, ಶರೀರದೊಳಗೆ ಪ್ರವೇಶಮಾಡಿದನು. ಸತ್ಯಪರಾಕ್ರಮಿಯಾದ ಬ್ರಹ್ಮನು, ಆ ನಾರಾಯಣನ ಹೊಟ್ಟೆಯೊಳಗೆ ಅನೇಕ ಲೋಕಗಳನ್ನು ನೋಡಿ, ಅಲ್ಲೆಲ್ಲ ತಿರುಗಿ ಆ ಲೋಕಗಳ ಕೊನೆಯನ್ನು ನೋಡಲಾರದೇ ಹೋದನು.

೨೯. ವಿಷ್ಣುವು ಆ ಬ್ರಹ್ಮನ ಸ್ಥಿತಿಯನ್ನು ತಿಳಿದು, ತನ್ನ ಶರೀರದ ಸಮಸ್ತರಂಧ್ರಗಳನ್ನೂ ಬೇಗನೆ ಮುಚ್ಚಿ, ನಾನು ಸುಖವಾಗಿ ನಿದ್ರಿಸುತ್ತಿದ್ದೇನೆಂದು ಆಲೋಚಿಸುತ್ತ, ಅಭಿಲಾಷಾತಿಶಯವನ್ನು ಮಾಡಬೇಕೆಂದುಅಪೇಕ್ಷಿಸಿದನು.

**ತತೋ ದ್ವಾರಾಣಿ ಸರ್ವಾಣಿ ಪಿಹಿತಾನಿ ಸಮೀಕ್ಷ್ಯ ವೈ ।**
**ಸೂಕ್ಷ್ಮಂ ಕೃತ್ವಾ ತನೋ ರೂಪಂ ನಾಭ್ಯಾಂ ದ್ವಾರಮವಿಂದತ॥೩೦॥**
**ಪದ್ಮಸೂತ್ರಾನುಸಾರೇಣ ಚಾನ್ವಪಶ್ಯತ್ಪಿತಾಮಹಃ ।**
**ಉಜ್ಜಹಾರಾತ್ಮನೋ ರೂಪಂ ಪುಷ್ಕರಾಚ್ಚತುರಾನನಃ ॥೩೧॥**
**ವಿರರಾಜಾರವಿಂದಸ್ಥಃ ಪದ್ಮಗರ್ಭಸಮದ್ಯುತಿಃ ।**
**ಬ್ರಹ್ಮಾ ಸ್ವಯಂಭೂರ್ಭಗವಾನ್ ಜಗದ್ಯೋನಿಃ ಪಿತಾಮಹಃ ॥೩೨॥**
**ಏತಸ್ಮಿನ್ನಂತರೇ ನಾಭ್ಯಾಮೇಕ್ಯೈಕಸ್ಯ ತು ಕೃತ್ಸ್ನಶಃ ।**
**ವರ್ತಮಾನೇ ತು ಸಂಘರ್ಷೇ ಮಧ್ಯೇ ತಸ್ಯಾರ್ಣವಸ್ಯ ತು ॥೩೩॥**
**ಕುತೋಽಪ್ಯಪರಿಮೇಯಾತ್ಮಾ ಭೂತಾನಾಂ ಪ್ರಭುರೀಶ್ವರಃ ।**
**ಶೂಲಪಾಣಿರ್ಮಹಾದೇವೋ ಹೇಮಚೀರಾಂಬರಚ್ಛದಃ ॥೩೪॥**

---

೩೦. ಬ್ರಹ್ಮನು ವಿಷ್ಣುವಿನ ಶರೀರದ ಸಮಸ್ತರಂಧ್ರಗಳೂ ಮುಚ್ಚಿರುವುದನ್ನು ನೋಡಿ ತನ್ನ ರೂಪವನ್ನು ಸೂಕ್ಷ್ಮವಾಗಿ ಮಾಡಿಕೊಂಡು ನೋಡಲು, ನಾಭಿಯಲ್ಲಿ ರಂಧ್ರವಿರುವುದನ್ನು ಕಂಡನು.

೩೧–೩೨. ಬ್ರಹ್ಮನು ವಿಷ್ಣುವಿನ ನಾಭಿಕಮಲದ ದಂಟಿನ ಒಂದು ಎಳೆಯನ್ನನುಸರಿಸಿ ಹೊರಗೆ ಬಂದು ಕಮಲದಲ್ಲಿ ತನ್ನ ರೂಪವನ್ನು ಪ್ರಕಾಶಪಡಿಸಿದನು. ಮಹಾಮಹಿಮನಾದ ಆ ಬ್ರಹ್ಮನು ಪ್ರಪಂಚೋತ್ಪತ್ತಿಗೆ ಕಾರಣನಾಗಿ, ಕಮಲದ ಕಾಂತಿಯಿಂದ ಕೂಡಿದ, ನಾಲ್ಕುಮುಖವುಳ್ಳವನಾಗಿ, ವ್ಯಕ್ತನಾಗಿ ಆ ಕಮಲದಲ್ಲಿ ಕುಳಿತು ಪ್ರಕಾಶಿಸುತ್ತಿದ್ದನು.

೩೩–೩೪. ಈ ಸಂದರ್ಭದಲ್ಲಿ ಆ ಸಮುದ್ರದ ಮಧ್ಯದಲ್ಲಿ ಪದ್ಮಪತ್ರಗಳಲ್ಲಿ ಒಂದೊಂದರೊಡನೆ ಮತ್ತೊಂದಕ್ಕೆ ಘರ್ಷಣೆಯುಂಟಾಗುತ್ತಿರಲು, ಸಮಸ್ತಜೀವರಿಗೂ ಒಡೆಯನಾದ, ತಿಳಿಯಲಸಾಧ್ಯವಾದ ಸ್ವರೂಪವುಳ್ಳ, ಈಶ್ವರನು, ಶೂಲಾಯುಧವನ್ನೂ, ಶ್ರೇಷ್ಠವಾದ ಜರತಾರಿಯ ವಸ್ತ್ರವನ್ನೂ ಧರಿಸಿ, ಎಲ್ಲಿಂದಲೋ ಶೇಷಶಯನನಾದ ಹರಿಯು ಇದ್ದೆಡೆಗೆ ಬಂದನು.

ಆಗಚ್ಛದ್ಯತ್ರ ಸೋಽನಂತೋ ನಾಗಭೋಗಪತಿರ್ಹರಿಃ ।
ಶೀಘ್ರಂ ವಿಕ್ರಮತಸ್ತಸ್ಯ ಪದ್ಭ್ಯಾಮಾಕ್ರಾಂತಪೀಡಿತಾಃ ॥೩೫॥
ಉದ್ಭೂತಾಸ್ತೂರ್ಣಮಾಕಾಶೇ ಪೃಥುಲಾಸ್ತೋಯಬಿಂದವಃ ।
ಅತ್ಯುಷ್ಣಶ್ಚಾತಿಶೀತಶ್ಚ ವಾಯುಸ್ತತ್ರ ವವೌ ಪುನಃ ॥೩೬॥
ತದ್ದೃಷ್ಟ್ವಾ ಮಹದಾಶ್ಚರ್ಯಂ ಬ್ರಹ್ಮಾ ವಿಷ್ಣುಮಭಾಷತ ।
ಅಬ್ಬಿಂದವಶ್ಚ ಶೀತೋಷ್ಣಾಃ ಕಂಪಯಂತ್ಯಂಬುಜಂ ಭೃಶಂ ॥೩೭॥
ಏತನ್ಮೇ ಸಂಶಯಂ ಬ್ರೂಹಿ ಕಿಂವಾ ತ್ವನ್ಯಚ್ಚಿಕೀರ್ಷಸಿ ।
ಏತದೇವಂ ವಿಧಂ ವಾಕ್ಯಂ ಪಿತಾಮಹಮುಖೋದ್ಗತಂ ॥೩೮॥
ಶ್ರುತ್ವಾಽಪ್ರತಿಮಕರ್ಮಾ ಹಿ ಭಗವಾನಸುರಾಂತಕೃತ್ ।
ಕಿನ್ನು ಖಲ್ವತ್ರ ಮೇ ನಾಭ್ಯಾಂ ಭೂತಮನ್ಯತ್ಕೃತಾಲಯಂ ॥೩೯॥
ವದತಿ ಪ್ರಿಯಮತ್ಯರ್ಥಂ ಮನ್ಯುಶ್ಚಾಸ್ಯ ಮಯಾ ಕೃತಃ ।
ಇತ್ಯೇವಂ ಮನಸಾ ಧ್ಯಾತ್ವಾ ಪ್ರತ್ಯುವಾಚೇದಮುತ್ತರಂ ॥೪೦॥

---

೩೫–೩೬. ಈಶ್ವರನು ಅತಿ ವೇಗವಾಗಿ ನಡೆದು ಬರುತ್ತಿರಲು ಅವನ ಕಾಲಿನ ತುಳಿತದಿಂದ ಆಕಾಶದಲ್ಲಿ ಅತ್ಯಂತ ಬಿಸಿಯೂ, ತಣ್ಣಗೂ ಆದ ನೀರಿನ ದಪ್ಪಹನಿಗಳು ಉಂಟಾದುವು. ಮತ್ತೂ, ಅತಿಬಿಸಿಯೂ ಅತಿತಣ್ಣಗೂ ಆದ ಗಾಳಿಯು ಬೀಸಿತು. ಈ ಅತ್ಯಾಶ್ಚರ್ಯವನ್ನು ನೋಡಿ ಬ್ರಹ್ಮನು ವಿಷ್ಣುವನ್ನು ಕುರಿತು ಹೇಳಿದನು.

೩೭. ಬಿಸಿಯೂ ತಣ್ಣಗೂ ಆದ ನೀರಿನ ಹನಿಗಳು ಕಮಲವನ್ನು ವಿಶೇಷವಾಗಿ ನಡುಗುವಂತೆ ಮಾಡಿವೆ. ಇದಕ್ಕೆ ಕಾರಣವನ್ನು ಹೇಳಿ ನನ್ನ ಸಂದೇಹವನ್ನು ನಿವಾರಣೆ ಮಾಡು. ಅಥವಾ ಮತ್ತೇನನ್ನು ಮಾಡ ಬೇಕೆಂದು ಅಪೇಕ್ಷಿಪಡುವೆ? ಅದನ್ನಾದರೂ ಹೇಳು.

೩೮–೪೦. ಬ್ರಹ್ಮನ ಬಾಯಿಯಿಂದ ಹೊರಟ ಈ ವಿಧವಾದ ಮಾತನ್ನು ಕೇಳಿ ಅಸುರಸಂಹಾರಕನೂ, ಮಹಾಮಹಿಮನೂ, ಆದ ವಿಷ್ಣುವು, ಇದೇನು? ನನ್ನ ಹೊಕ್ಕುಳಿನಲ್ಲಿ ಮತ್ತೊಂದು ಪ್ರಾಣಿಯು ನೆಲೆಸಿ, ಹಿತವಾದ ಮಾತನ್ನಾಡುತ್ತಿದೆ! ನಾನು ಆ ಬ್ರಹ್ಮನ ಮೇಲೆ ಕೋಪವನ್ನು ಮಾಡಿಕೊಂಡೆನು! ಎಂದು ಮನಸ್ಸಿನಲ್ಲಿಯೇ ಯೋಚಿಸಿ ಉತ್ತರವನ್ನು ಹೇಳಿದನು.

ಕಿಮತ್ರ ಭಗವಾನದ್ಯ ಪ್ರುಷ್ಕರೇ ಜಾತಸಂಭ್ರಮಃ ।
ಕಿಂ ಮಯಾ ಚ ಕೃತಂ ದೇವ ಯನ್ಮಾಂ ಪ್ರಿಯಮನುತ್ತಮಂ ॥೪೧॥
ಭಾಷಸೇ ಪುರುಷಶ್ರೇಷ್ಠ ಕಿಮರ್ಥಂ ಬ್ರೂಹಿ ತತ್ವತಃ ॥
ಏವಂ ಬ್ರುವಾಣಂ ದೇವೇಶಂ ಲೋಕಯಾತ್ರಾನುಗಂ ತತಃ ॥೪೨॥
ಪ್ರತ್ಯುವಾಚಾಂಬುಜಾಭಾಕ್ಷಂ ಬ್ರಹ್ಮಾ ವೇದನಿಧಿಃ ಪ್ರಭುಃ ।
ಯೋಽಸೌ ತವೋದರಂ ಪೂರ್ವಂ ಪ್ರವಿಷ್ಟೋಽಹಂ ತ್ವದಿಚ್ಛಯಾ ॥
ಯಥಾ ಮಮೋದರೇ ಲೋಕಾಃ ಸರ್ವೇ ದೃಷ್ಟಾಃತ್ವಯಾ ಪ್ರಭೋ ।
ತಥೈವ ದೃಷ್ಟಾಃ ಕಾರ್ತ್ಸ್ನ್ಯೇನ ಮಯಾ ಲೋಕಾಸ್ತವೋದರೇ ॥೪೪॥
ತತೋ ವರ್ಷಸಹಸ್ರಾತ್ತು ಉಪಾವೃತ್ತಸ್ಯ ಮೇಽನಘ ।
ತ್ವಯಾ ಮತ್ಸರಭಾವೇನ ಮಾಂ ವಶೀಕರ್ತುಮಿಚ್ಛತಃ ॥೪೫॥

---

೪೧. ಓ ದೇವನೇ, ನೀನು ಈಗ ಈ ಕಮಲದಲ್ಲಿ ಸಂಭ್ರಮದಿಂದಿರಲು ಕಾರಣವೇನು? ನಾನು ಮಾಡಿದುದೇನು? ಪುರುಷಶ್ರೇಷ್ಠನಾದ ನೀನು ಕೋಪದ ಧ್ವನಿಯಿಂದ ಕೂಡಿದ, ಪ್ರಿಯವಾದ ಮಾತನ್ನಾಡುತ್ತಿರುವೆ! ಇದರ ನಿಜವಾದ ಕಾರಣವನ್ನು ನನಗೆ ಹೇಳು. ಎಂದನು.

೪೨. ಬಳಿಕ ಲೋಕದ ಜನರ ಸ್ವಭಾವನ್ನನುಸರಿಸಿ, ಈ ರೀತಿಯಾಗಿ ಮಾತನಾಡಿದ ಕಮಲಾಕ್ಷನಾದ ವಿಷ್ಣುವನ್ನು ಕುರಿತು ವೇದಗಳಿಗೆ ಆಶ್ರಯನಾದ ಬ್ರಹ್ಮನು ಉತ್ತರವನ್ನು ಹೇಳಿದನು.

೪೩–೪೪. ಎಲೈ ದೇವನೇ, ನಾನು ನಿನ್ನ ಅಭಿಪ್ರಾಯದಂತೆ, ನಿನ್ನ ಶರೀರದೊಳಗೆ ಪ್ರವೇಶಿಸಿ, ನೀನು ನನ್ನ ಶರೀರದೊಳಗೆ ಸಕಲ ಲೋಕಗಳನ್ನೂ ನೋಡಿದಂತೆ, ನಿನ್ನ ಶರೀರದೊಳಗೂ ಸಕಲ ಲೋಕಗಳನ್ನೂ ಸಂಪೂರ್ಣವಾಗಿ ನೋಡಿದೆನು.

೪೫. ಆಮೇಲೆ ಸಾವಿರ ವರ್ಷಗಳು ಕಳೆದ ಮೇಲೆ, ನಾನು ಹಿಂತಿರುಗಿ ಬರಲು ಪ್ರಯತ್ನ ಮಾಡಿದೆನು. ನೀನು ಮಾತ್ಸರ್ಯದಿಂದ ನನ್ನನ್ನು ನಿನ್ನಧೀನ ಮಾಡಿಕೊಳ್ಳಬೇಕೆಂದು, ಬೇಗನೆ ನಿನ್ನಶರೀರದ ಸಮಸ್ತರಂಧ್ರಗಳನ್ನೂ ಮುಚ್ಚಿಬಿಟ್ಟಿದ್ದೆ!

ಆಶು ದ್ವಾರಾಣಿ ಸರ್ವಾಣಿ ಪಿಹಿತಾನಿ ಸಮಂತತಃ ।
ತತೋ ಮಯಾ ಮಹಾಭಾಗ ಸಂಚಿಂತ್ಯ ಸ್ವೇನ ತೇಜಸಾ ॥೪೬॥
ಲಬ್ಧೋ ನಾಭಿಪ್ರದೇಶೇನ ಪದ್ಮಸೂತ್ರಾದ್ವಿನಿರ್ಗಮಃ ।
ಮಾಭೂತ್ತೇ ಮನಸೋಽಲ್ಪೇಽಪಿ ವ್ಯಾಘಾತೋಽಯಂ ಕಥಂಚನ ॥
ಇತ್ಯೇಷಾನುಗತಿರ್ವಿಷ್ಣೋ ಕಾರ್ಯಾಣಾಮೌಪಸರ್ಪಿಣೀ ।
ಯನ್ಮಯಾನಂತರಂ ಕಾರ್ಯಂ ಬ್ರೂಹಿ ಕಿಂ ಕರವಾಣ್ಯಹಂ ॥೪೮॥
ತತಃ ಪರಮಮೇಯಾತ್ಮಾ ಹಿರಣ್ಯಕಶಿಪೋ ರಿಪುಃ ।
ಅನವದ್ಯಾಂ ಪ್ರಿಯಾಮಿಷ್ಟಾಂ ಶಿವಾಂ ವಾಣೀಂ ಪಿತಾಮಹಾತ್ ॥
ಶ್ರುತ್ವಾ ವಿಗತಮಾತ್ಸರ್ಯಂ ವಾಕ್ಯಮಸ್ಮೈ ದದೌ ಹರಿಃ ।
ನ ಹ್ಯೇವಮೀದೃಶಂ ಕಾರ್ಯಂ ಮಯಾಽಧ್ಯವಸಿತಂ ತವ ॥೫೦॥
ತ್ವಾಂ ಬೋಧಯಿತು ಕಾಮೇನ ಕ್ರೀಡಾಪೂರ್ವಂ ಯದೃಚ್ಛಯಾ ।
ಆಶು ದ್ವಾರಾಣಿ ಸರ್ವಾಣಿ ಘಟಿತಾನಿ ಮಯಾಽಽತ್ಮನಃ ॥೫೧॥

---

೪೬. ಒಳಿಕ ನಾನು ಆತ್ಮತೇಜಸ್ಸಿನಿಂದ ಕೂಡಿ, ಆಲೋಚಿಸಿ, ಹೊಕ್ಕುಳಿನಲ್ಲಿರುವ ಕಮಲದ ದಂಟಿನ ಒಂದು ನೂಲಿನ ಮಾರ್ಗವಾಗಿ ಹೊರಗೆ ಬಂದೆನು.

೪೭–೪೮. ಎಲೈ ವಿಷ್ಣುವೇ, ನಿನ್ನ ಮನಸ್ಸಿನಲ್ಲಿ ಸ್ವಲ್ಪವಾದರೂ ವಿರುದ್ಧಭಾವವನ್ನು ಮಾಡಿಕೊಳ್ಳಬೇಡ. ಇದು ನಿನ್ನ ಅಭಿಪ್ರಾಯವನ್ನನು ಸರಿಸಿದ ಕಾರ್ಯಾನುಕೂಲವಾದ ನನ್ನ ಆಗಮನವು. ಇನ್ನು ಮುಂದೆ ನಾನು ಮಾಡಬೇಕಾದ ಕಾರ್ಯವನ್ನು ಹೇಳು. ಎಂದನು.

೪೯. ಆನೇಲೆ ಹಿರಣ್ಯಕಶಿಪುವೆಂಬ ರಾಕ್ಷಸನಿಗೆ ಶತ್ರುವಾದ, ಯಾವ ಪ್ರಮಾಣಗಳಿಂದಲೂ ತಿಳಿಯಲಸಾಧ್ಯವಾದ ಸ್ವರೂಪವುಳ್ಳ, ವಿಷ್ಣುವು, ಬ್ರಹ್ಮನು ಹೇಳಿದ ನಿರ್ದುಷ್ಟವೂ, ಹಿತವೂ, ಮಂಗಳಕರವೂ, ಆದ ಮಾತನ್ನು ಕೇಳಿ, ಮಾತ್ಸರ್ಯವಿಲ್ಲದ ಮಾತನ್ನು ಅವನಿಗೆ ಉತ್ತರವನ್ನಾಗಿ ಹೇಳಿದನು.

೫೦–೫೧. ಎಲೈ ಬ್ರಹ್ಮನೇ, ನಾನು ನಿನಗೆ ಹೀಗೆ ನಾಭಿಕಮಲದಲ್ಲಿ ಹುಟ್ಟುವಂತೆ ಮಾಡಬೇಕೆಂದು ನಿಶ್ಚಯಿಸಲಿಲ್ಲ. ನಿನಗೆ ತಿಳಿವಳಿಕೆ

**ನ ತೇಽನ್ಯಥಾಽವಗಂತವ್ಯಂ ಮಾನ್ಯಃ ಪೂಜ್ಯಶ್ಚ ಮೇ ಭವಾನ್ ।**
**ಸರ್ವಂ ಮರ್ಷಯ ಕಲ್ಯಾಣ ಯನ್ಮಯಾಽಪಕೃತಂ ತವ ॥೫೨॥**

**ಅಸ್ಮಾನ್ಮಯೋಽಹ್ಯಮಾನಸ್ತ್ವಂ ಪದ್ಮಾದವತರ ಪ್ರಭೋ ।**
**ನಾಹಂ ಭವಂತಂ ಶಕ್ನೋಮಿ ಸೋಢುಂ ತೇಜೋಮಯಂ ಗುರುಂ॥**

**ಸ ಹೋವಾಚ ವರಂ ಬ್ರೂಹಿ ಪದ್ಮಾದವತರ ಪ್ರಭೋ ।**
**ಪುತ್ರೋ ಭವ ಮಮಾರಿಘ್ನ ಮುದಂ ಪ್ರಾಪ್ಸ್ಯಸಿ ಶೋಭನಾಂ ॥೫೪॥**

**ಸದ್ಭಾವವಚನಂ ಬ್ರೂಹಿ ಪದ್ಮಾದವತರ ಪ್ರಭೋ ।**
**ಸತ್ವಂ ಚ ನೋ ಮಹಾಯೋಗೀ ತ್ವಮೀಡ್ಯಃ ಪ್ರಣವಾತ್ಮಕ ॥೫೫॥**

---

ಯುಂಟುಮಾಡಬೇಕೆಂಬ ಉದ್ದೇಶದಿಂದ ಆಟಕ್ಕಾಗಿ, ಅಕಸ್ಮಾತ್ತಾಗಿ ಶರೀರದ ಸಮಸ್ತರಂಧ್ರಗಳನ್ನೂ ಮುಚ್ಚಿದೆನು. ನೀನು ಬೇರೆವಿಧವಾಗಿ ಭಾವಿಸಬೇಡ. ನನಗೆ ನೀನು ಪೂಜ್ಯನೂ, ಗೌರವಾರ್ಹನೂ, ಆಗಿರುವೆ. ಆ ನಾನು ನಿನಗೆ ಮಾಡಿದ ಅಪರಾಧಗಳನ್ನೆಲ್ಲವನ್ನೂ, ಮಂಗಳಕರನಾದ ನೀನು ಕ್ಷಮಿಸುವವನಾಗು.

೫೩. ಓ ದೇವನೇ, ತೇಜೋರೂಪನಾಗಿ, ಅತ್ಯಂತಭಾರವಾಗಿರುವ ನಿನ್ನನ್ನು ನಾನು ಹೊತ್ತಿರಲಾರೆನು. ನನ್ನ ನಾಭಿಯಿಂದ ಹೊರಟಿರುವ ಈ ಕಮಲದ ದೆಸೆಯಿಂದ ನೀನು ಇಳಿ. ಎಂದನು.

೫೪-೫೫. ಆ ಬ್ರಹ್ಮನು ಎಲೈ ವಿಷ್ಣುವೇ, ನೀನೇ ನನ್ನನ್ನು ಕಮಲದಿಂದಿಳಿಸಿ ಭೂಮಿಯಲ್ಲಿ ಸ್ಥಾಪಿಸು, ಮತ್ತೂ ವರವನ್ನು ಕೇಳು. ಎಂದು ಹೇಳಿದನು. ಎಲೈ ಶತ್ರು ಸಂಹಾರಕನಾದ ಬ್ರಹ್ಮನೇ, ನೀನು ನನ್ನ ಪುತ್ರನಾಗು, ಮಂಗಳಕರವಾದ ಸಂತೋಷವನ್ನು ಹೊಂದುವೆ, ಎಂದು ವಿಷ್ಣುವು ಹೇಳಿದನು. ಎಲೈ ಬ್ರಹ್ಮನೇ, ನೀನು ಮಹಾ ಯೋಗಿಯಾದವನು. ಈ ಕಮಲದಿಂದ ಹೊರಗೆ ಬಾ, ನನ್ನೊಡನೆ ಕೃತ್ರಿಮವಿಲ್ಲದ ಮಾತನ್ನಾಡು, ನೀನು ಪ್ರಣವಸ್ವರೂಪನಾಗಿರುವುದರಿಂದ ನಾನೂ ನಿನ್ನನ್ನು ಸ್ತೋತ್ರಮಾಡಬೇಕಾಗಿರುವುದು.

ಅದ್ಯ ಪ್ರಭೃತಿ ಸರ್ವೇಶಃ ಶ್ವೇತೋಷ್ಣೀಷವಿಭೂಷಿತಃ ।
ಪದ್ಮಯೋನಿರಿತಿ ಹ್ಯೇವಂ ಖ್ಯಾತೋ ನಾಮ್ನಾ ಭವಿಷ್ಯಸಿ ॥೫೬॥
ಪುತ್ರೋ ಮೇ ತ್ವಂ ಭವ ಬ್ರಹ್ಮನ್ ಸಪ್ತಲೋಕಾಧಿಪಃ ಪ್ರಭೋ।
ತತಃ ಸ ಭಗವಾನ್ದೇವೋ ವರಂ ದತ್ವಾ ಕಿರೀಟಿನೇ ॥೫೭॥
ಏವಂ ಭವತು ಚೇತ್ಯುಕ್ತ್ವಾ ಪ್ರೀತಾತ್ಮಾ ಗತಮತ್ಸರಃ ।
ಪ್ರತ್ಯಾಸನ್ನಮಥಾಯಾಂತಂ ಬಾಲಾರ್ಕಾಭಂ ಮಹಾನನಂ ॥೫೮॥
ಭಯಮತ್ಯದ್ಭುತಂ ದೃಷ್ಟ್ವಾ ನಾರಾಯಣ ಮಥಾಽಬ್ರವೀತ್ ।
ಅಪ್ರಮೇಯೋ ಮಹಾವಕ್ತ್ರೋ ದಂಷ್ಟ್ರೀ ಧ್ವಸ್ತಶಿರೋರುಹಃ ॥
ದಶಬಾಹುಸ್ತ್ರಿಶೂಲಾಂಕೋ ನಯನೈರ್ವಿಶ್ವತಃ ಸ್ಥಿತಃ ।
ಲೋಕಪ್ರಭುಃ ಸ್ವಯಂ ಸಾಕ್ಷಾದ್ವಿಕೃತೋ ಮುಂಜಮೇಖಲೀ ॥

---

೫೬. ಎಲೈ ಬ್ರಹ್ಮನೇ, ನೀನು ಈ ದಿನ ಮೊದಲುಗೊಂಡು, ಸರ್ವೇಶ್ವರನಾಗಿ, ಬಿಳಿಯ ಪಾಗನ್ನು ತಲೆಯಲ್ಲಿ ಧರಿಸಿಕೊಂಡು ಪದ್ಮಜನೆಂಬ ಹೆಸರಿನಿಂದ ಪ್ರಸಿದ್ಧನಾಗಿರುವೆ. ನನ್ನ ಪುತ್ರನಾಗಿ ಸಪ್ತಲೋಕಗಳಿಗೆ ಅಧಿಪತಿಯಾಗು.

೫೭–೫೮. ಹೀಗೆಂದು ವಿಷ್ಣುವು ಹೇಳುತ್ತಿರಲು ಬ್ರಹ್ಮನು ಹಾಗೆಯೇ ಆಗಲೆಂದು ವಿಷ್ಣುವಿಗೆ ವರವನ್ನು ಕೊಟ್ಟು, ಸಂತೋಷದಿಂದ ಮಾತ್ಸರ್ಯವಿಲ್ಲದವನಾದನು. ಆ ಬಳಿಕ ಅತ್ಯಂತ ಸಮೀಪದಲ್ಲಿಯೇ, ಬರುತ್ತಿರುವ, ಬಾಲಸೂರ್ಯನ ಕಾಂತಿಗೆ ಸಮಾನವಾದ ಕಾಂತಿಯುಳ್ಳ ವಿಸ್ತಾರವಾದ ಮುಖವುಳ್ಳ, ಆಶ್ಚರ್ಯವನ್ನುಂಟು ಮಾಡುತ್ತಿರುವ ಶಿವನನ್ನು ನೋಡಿ, ನಾರಾಯಣನನ್ನು ಕುರಿತು ಹೇಳಿದನು.

೫೯–೬೧. ಓ ವಿಷ್ಣುವೇ, ಈ ಪುರುಷನು ವಿಸ್ತಾರವಾದ ಮುಖವುಳ್ಳವನೂ, ಕೆದರಿದ ತಲೆಯ ಕೂದಲುಳ್ಳವನೂ, ಹಂದಿಯ ಕೋರೆಯ ಹಲ್ಲುಗಳನ್ನು ಆಭರಣಗಳಾಗಿ ಧರಿಸಿ ಅನೇಕ ಕಣ್ಣುಗಳೂ, ಹತ್ತು ತೋಳುಗಳೂ, ಉಳ್ಳವನಾಗಿ, ತ್ರಿಶೂಲವನ್ನು ಹಿಡಿದು ಮುಂಜವೆಂಬ ಹುಲ್ಲಿನ ಉಡಿದಾರವನ್ನು ಕಟ್ಟಿಕೊಂಡು, ಭಯಂಕರಾಕಾರನಾಗಿ ಉದ್ದವಾಗಿಯೂ, ದಪ್ಪವಾಗಿಯೂ, ಇರುವ, ಲಿಂಗದಿಂದ ಕೂಡಿ, ಭಯಂಕರ

ಮೇಢ್ರೇಣೋರ್ಧ್ವೇನ ಮಹತಾ ನರ್ದಮಾನೋಽತಿ ಭೈರವಂ ।
ಕಃ ಖಲ್ವೇಷ ಪುಮಾನ್ವಿಷ್ಣೋ ತೇಜೋರಾಶಿರ್ಮಹಾದ್ಯುತಿಃ ॥೬೧॥

ವ್ಯಾಪ್ಯ ಸರ್ವಾ ದಿಶೋ ದ್ಯಾಂ ಚ ಇತ ಏವಾಭಿವರ್ತತೇ ।
ತೇನೈವಮುಕ್ತೋ ಭಗವಾನ್ವಿಷ್ಣುಃ ಬ್ರಹ್ಮಾಣಮಬ್ರವೀತ್ ॥೬೨॥

ಪದ್ಭ್ಯಾಂ ತಲನಿಪಾತೇನ ಯಸ್ಯ ವಿಕ್ರಮತೋಽರ್ಣವೇ ।
ವೇಗೇನ ಮಹತಾಽಽಕಾಶೇ ವೃತ್ತಿತಾಶ್ಚ ಜಲಾಶಯಾಃ ॥೬೩॥

ಸ್ಥೂಲಾದ್ಭಿ ರ್ನಿಶ್ವತೋಽತ್ಯರ್ಥಂ ಸಿಚ್ಯತೇ ಪದ್ಮಸಂಭವ ।
ಘ್ರಾಣಜೇನ ಚ ವಾತೇನ ಕಂಪ್ಯಮಾನಂ ತ್ವಯಾ ಸಹ ॥೬೪॥

ದೋಧೂಯತೇ ಮಹಾಪದ್ಮಂ ಸ್ವಚ್ಛಂದಂ ಮಮ ನಾಭಿಜಂ ।
ಸಮಾಗತೋ ಭವಾನೀಶೋ ಹ್ಯನಾದಿಶ್ಚಾಂತಕೃತ್ಪ್ರಭುಃ ॥೬೫॥

ಭವಾನಹಂ ಚ ಸ್ತೋತ್ರೇಣ ಉಪತಿಷ್ಠಾವ ಗೋಧ್ವಜಂ ।
ತತಃ ಕ್ರುದ್ಧೋಽಂಬುಜಾಭಾಕ್ಷಂ ಬ್ರಹ್ಮಾ ಪ್ರೋವಾಚ ಕೇಶವಂ ॥

---

ವಾದ ಧ್ವನಿಯನ್ನು ಮಾಡುತ್ತ, ಸಮಸ್ತದಿಕ್ಕುಗಳಲ್ಲಿಯೂ ವ್ಯಾಪಿಸಿದ, ಪ್ರಕಾಶವಾದ ತೇಜಸ್ಸುಳ್ಳವನಾಗಿ, ಈ ಕಡೆಯೇ ಬರುತ್ತಿರುವನು! ಇವನಾರು? ಎಂದು ಕೇಳಿದನು.

೬೨-೬೫. ಬ್ರಹ್ಮನು ಹೀಗೆ ಹೇಳುತ್ತಲು, ವಿಷ್ಣುವು ಬ್ರಹ್ಮನನ್ನು ಕುರಿತು ಹೇಳಿದನು. ಆ ಈಶ್ವರನು ಸಮುದ್ರದಲ್ಲಿ ನಡೆದು ಬರುವ ವೇಗದಿಂದ ಕಾಲನ್ನು ಇಟ್ಟಾಗ ಆಕಾಶಕ್ಕೆ ಹಾರಿದ ಒಂದೊಂದು ಹನಿಯೂ, ಒಂದೊಂದು ಜಲಾಶಯವಾಗಿ, ನೀರಿನಿಂದ ತುಂಬಿರುವುದು. ಅವನ ಮೂಗಿನಿಂದ ಬರುವ ಗಾಳಿಯಿಂದ ನನ್ನ ನಾಭಿ ಕಮಲದಲ್ಲಿ ಹುಟ್ಟಿದ ಕಮಲವು ನಿನ್ನೊಡನೆ ವಿಶೇಷವಾಗಿ ತೂಗಾಡಿತು. ಅನಾದಿಯಾದವನೂ, ಪ್ರಳಯವನ್ನುಂಟು ಮಾಡುವವನೂ ಆದ ಭವಾನೀ ಪತಿಯಾದ ಈಶ್ವರನು ಬಂದನು. ನಾನೂ ನೀನೂ ಕೂಡಿ ವೃಷಭಧ್ವಜನಾದ ಅವನನ್ನು ಸ್ತೋತ್ರಗಳಿಂದ ಪ್ರಾರ್ಥಿಸೋಣ. ಎಂದನು.

೬೬-೬೮. ಆಮೇಲೆ ಬ್ರಹ್ಮನು ಕೋಪದಿಂದ ಹರಿಯನ್ನು ಕುರಿತು, ನೀನೇ ಲೋಕಗಳಿಗೆಲ್ಲಕ್ಕೂ ಒಡೆಯನೆಂದು ತಿಳಿದಿಲ್ಲವೇ? ಇದಲ್ಲದೆ ಸಕಲ

ಭವಾನ್ನನೂನಮಾತ್ಮಾನಂ ವೇತ್ತಿ ಲೋಕಪ್ರಭುಂ ವಿಭುಂ ।
ಬ್ರಹ್ಮಾಣಂ ಲೋಕಕರ್ತಾರಂ ಮಾಂ ನ ವೇತ್ಸಿ ಸನಾತನಂ ॥೬೭॥
ಕೋ ಹ್ಯಸೌ ಶಂಕರೋ ನಾಮ ಆವಯೋರ್ವ್ಯತಿರಿಚ್ಯತೇ ।
ತಸ್ಯ ತತ್ಕ್ರೋಧಜಂ ವಾಕ್ಯಂ ಶ್ರುತ್ವಾ ಹರಿರಭಾಷತ ॥೬೮॥
ಮಾ ಮೈವಂ ವದ ಕಲ್ಯಾಣ ಪರಿವಾದಂ ಮಹಾತ್ಮನಃ ।
ಮಹಾಯೋಗೇಂಧನೋ ಧರ್ಮೋ ದುರಾಧರ್ಷೋ ವರಪ್ರದಃ ॥
ಹೇತುರಸ್ಯಾಥ ಜಗತಃ ಪುರಾಣಪುರುಷೋಽವ್ಯಯಃ ।
ಬೀಜೀ ಖಲ್ವೇಷ ಬೀಜಾನಾಂ ಜ್ಯೋತಿರೇಕಃ ಪ್ರಕಾಶತೇ ॥೭೦॥
ಬಾಲಕ್ರೀಡನಕೈರ್ದೇವಃ ಕ್ರೀಡತೇ ಶಂಕರಃ ಸ್ವಯಂ ।
ಪ್ರಧಾನಮವ್ಯಯೋ ಯೋನಿರವ್ಯಕ್ತಂ ಪ್ರಕೃತಿಸ್ತಮಃ ॥೭೧॥

---

ಲೋಕಗಳನ್ನೂ ಸೃಷ್ಟಿಸುವ ನಾನು ಅನಾದಿಯಾದವನೆಂದು ತಿಳಿದಿಲ್ಲವೇ? ನಮ್ಮಿಬ್ಬರಿಗಿಂತಲೂ ಬೇರೆಯವನಾದ ಶಂಕರನೆಂಬವನಾರು? ಎಂದು ಹೇಳಲು ಅವನ ಕೋಪದ ಮಾತನ್ನು ಕೇಳಿ ಹರಿಯು ಉತ್ತರವನ್ನು ಹೇಳಿದನು.

೬೯. ಎಲೈ ಮಂಗಳಸ್ವರೂಪನಾದ ಬ್ರಹ್ಮನೇ, ನನ್ನೊಡನೆ ರುದ್ರನ ವಿಷಯವಾಗಿ ಈ ರೀತಿಯಾದ ನಿಂದೆಯ ಮಾತನ್ನಾಡಬಾರದು. ಆ ದೇವನು ಮಹಾಯೋಗಿಯು, ಧರ್ಮಸ್ವರೂಪನು, ಇತರರು ಯಾರೂ, ಅವನನ್ನು ತಿರಸ್ಕರಿಸಲಾರರು. ಭಕ್ತರಿಗೆ ಇಷ್ಟಾರ್ಥಗಳನ್ನು ಕೊಡ ತಕ್ಕವನು.

೭೦. ಈ ಜಗತ್ತಿಗೆ ಕಾರಣನು, ಅನಾದಿಯಾದವನು, ನಾಶರಹಿತನು, ಸಮಸ್ತಕಾರಣಗಳಿಗೂ ಇವನೇ ಆಶ್ರಯನು, ಇವನೊಬ್ಬನೇ ಪ್ರಕಾಶಸ್ವರೂಪನಾಗಿ ಕಂಗೊಳಿಸುತ್ತಿರುವನು.

೭೧ ಸುಖವನ್ನುಂಟುಮಾಡುವ ದೇವನಾದ ಈಶ್ವರನು ತಾನು ಹುಡುಗರು ಆಟವಾಡುವಂತೆ, ಆಟವಾಡುತ್ತಿರುವನು. ಇವನು ನಾಶರಹಿತನು, ಸಕಲ ಕಾರಣನು. ಪ್ರಧಾನ, ಪ್ರಕೃತಿ, ಅವ್ಯಕ್ತ, ತಮಸ್ಸುಗಳೆಂಬ ಹೆಸರುಗಳುಳ್ಳವನು.

**ಮಮ ಚೈತಾನಿ ನಾಮಾನಿ ನಿತ್ಯಂ ಪ್ರಸವಧರ್ಮಿಣಃ ।**
**ಯಃ ಕಃ ಸ ಇತಿ ದುಃಖಾರ್ತೈರ್ದೃಶ್ಯತೇ ಯತಿಭಿಃ ಶಿವಃ ॥೭೨॥**

**ಏಷ ಬೀಜೀ ಭವಾನ್ಬೀಜ ಮಹಂ ಯೋನಿಃ ಸನಾತನಃ ।**
**ಸ ಏವಮುಕ್ತೋ ವಿಶ್ವಾತ್ಮಾ ಬ್ರಹ್ಮಾ ವಿಷ್ಣುಮಪೃಚ್ಛತ ॥೭೩॥**

**ಭವಾನ್ ಯೋನಿರಹಂ ಬೀಜಂ ಕಥಂ ಬೀಜೀ ಮಹೇಶ್ವರಃ ।**
**ಏತನ್ಮೇ ಸೂಕ್ಷ್ಮಮವ್ಯಕ್ತಂ ಸಂಶಯಂ ಛೇತ್ತುಮರ್ಹಸಿ ॥೭೪॥**

**ಜ್ಞಾತ್ವಾ ಚ ವಿವಿಧೋತ್ಪತ್ತಿಂ ಬ್ರಹ್ಮಣೋ ಲೋಕತಂತ್ರಿಣಃ ।**
**ಇಮಂ ಪರಮಸಾದೃಶ್ಯಂ ಪ್ರಶ್ನಮಭ್ಯವದದ್ಧರಿಃ ॥೭೫॥**

---

೭೨. ಯಾವಾಗಲೂ, ಪ್ರಪಂಚವನ್ನು ಸೃಷ್ಟಿಸುವ ಕೆಲಸವುಳ್ಳವನಾದ, ನನಗೂ ಈ ಹೆಸರುಗಳಿರುವುವು. ನೀನು ಪ್ರಶ್ನೆಮಾಡಿದ ಆ ಶಿವನನ್ನು, ಜನನ ಮರಣ ರೂಪವಾದ ಸಂಸಾರ ದುಃಖವನ್ನು ಹೊಂದಿ ವೈರಾಗ್ಯದಿಂದ ಜ್ಞಾನವನ್ನು ಪಡೆದಿರುವ ವಿರಕ್ತರು ದರ್ಶನ ಮಾಡುವರು.

೭೩. ಅನಾದಿಯಾದ ಶಿವನು ಬೀಜಕ್ಕೆ ಆಶ್ರಯನು. ಅಥವಾ ಬೀಜಪ್ರದಾತನು, ನೀನು ಬೀಜಸ್ವರೂಪನು, ನಾನು ಬೀಜೋತ್ಪತ್ತಿಸ್ಥಾನನು. ಹೀಗೆಂದು ಹೇಳುತ್ತಲು ಪ್ರಪಂಚಸ್ವರೂಪನಾದ, ಬ್ರಹ್ಮನು ವಿಷ್ಣುವನ್ನು ಪ್ರಶ್ನೆಮಾಡಿದನು.

೭೪. ನೀನು ಬೀಜೋತ್ಪತ್ತಿಸ್ಥಾನವಾದ ಯೋನಿಸ್ವರೂಪನೆಂದೂ, ನಾನು ಬೀಜವೆಂದೂ, ಶಿವನು ಬೀಜಿಯೆಂದೂ, ಹೇಳಿದೆಯಷ್ಟೆ. ಅದು ಹೇಗೆ? ಇದು ನನಗೆ ಚನ್ನಾಗಿ ತಿಳಿಯಲಿಲ್ಲ. ಸೂಕ್ಷ್ಮವಿಷಯವಾದುದರಿಂದ ಸಂದೇಹಾಸ್ಪದವಾಗಿದೆ. ಈ ಸಂದೇಹವನ್ನು ನೀನು ನಿವಾರಣೆ ಮಾಡಬೇಕು.

೭೫. ಸೃಷ್ಟಿಕರ್ತನಾದ ಬ್ರಹ್ಮನ ಪ್ರಾದುರ್ಭಾವವು ಅನೇಕ ಬಗೆಯಾಗಿರುವುದನ್ನು ತಿಳಿದು, ಹರಿಯು ಈ ಬ್ರಹ್ಮನ ಪ್ರಶ್ನೆಯು ಅಸದೃಶವಾದುದೆಂದು ಉತ್ತರವನ್ನು ಹೇಳುವುದಕ್ಕೆ ಪ್ರಾರಂಭಿಸಿದನು.

ಅಸ್ಮಾನ್ಮಹತ್ತರಂ ಭೂತಂ ಗುಹ್ಯಮನ್ಯನ್ನವಿದ್ಯತೇ ।
ಮಹತಃ ಪರಮಂ ಧಾಮ ಶಿವಮಧ್ಯಾತ್ಮಿನಾಂ ಪದಂ ॥೭೬॥

ದ್ವಿವಿಧಂ ಚೈವಮಾತ್ಮಾನಂ ಪ್ರವಿಭಜ್ಯ ವ್ಯವಸ್ಥಿತಃ ।
ನಿಷ್ಕಲಸ್ತತ್ರ ಯೋಽವ್ಯಕ್ತಃ ಸಕಲಶ್ಚ ಮಹೇಶ್ವರಃ ॥೭೭॥

ಯಸ್ಯ ಮಾಯಾವಿಧಿಜ್ಞಸ್ಯ ಅಗಮ್ಯಗಹನಸ್ಯ ಚ ।
ಪುರಾ ಲಿಂಗೋದ್ಭವಂ ಬೀಜಂ ಪ್ರಥಮಂ ತ್ವಾದಿಸರ್ಗಿಕಂ ॥೭೮॥

ಮಮ ಯೋನೌ ಸಮಾಯುಕ್ತಂ ತದ್ಬೀಜಂ ಕಾಲಪರ್ಯಯಾತ್।
ಹಿರಣ್ಮಯಮಕೂಪಾರೇ ಯೋನ್ಯಾಮಂಡಮಜಾಯತ ॥೭೯॥

ಶತಾನಿ ದಶವರ್ಷಾಣಾಮಂಡಮಪ್ಸು ಪ್ರತಿಷ್ಠಿತಂ ।
ಅಂತೇ ವರ್ಷಸಹಸ್ರಸ್ಯ ವಾಯುನಾ ತದ್ದ್ವಿಧಾ ಕೃತಂ ॥೮೦॥

---

೭೬. ಎಲೈ ಬ್ರಹ್ಮನೇ, ಈ ಮಹೇಶ್ವರತತ್ವಕ್ಕಿಂತಲೂ, ದೊಡ್ಡದಾದ, ಗೋಪ್ಯವಾದ ಮತ್ತೊಂದು ತತ್ವವಿರುವುದಿಲ್ಲ. ಈ ತತ್ವವು ಮಹತ್ತತ್ವಕ್ಕೆ ಶ್ರೇಷ್ಠವಾದ ಆಶ್ರಯಸ್ಥಾನವು, ಮಂಗಳಕರವಾದುದು. ಅಧ್ಯಾತ್ಮ ಜ್ಞಾನಿಗಳಿಗೆ ಗಮ್ಯಸ್ಥಾನವು.

೭೭. ಆ ಮಹೇಶ್ವರನು ತನ್ನನ್ನು ಎರಡು ಭಾಗವನ್ನಾಗಿ ಮಾಡಿಕೊಂಡಿರುವನು. ಒಂದು ಭಾಗವು ಯಾರಿಗೂ ಗೋಚರವಾಗದ ನಿರಾಕಾರಸ್ವರೂಪವು, ಮತ್ತೊಂದು ಸಗುಣವಾದ ಮಹೇಶ್ವರಸ್ವರೂಪವು.

೭೮–೭೯. ಮಾಯಾಕಾರ್ಯವನ್ನು ಚನ್ನಾಗಿ ತಿಳಿದಿರುವ, ಇತರರಿಗೆ ತಿಳಿಯಲಸಾಧ್ಯನಾದ, ಶಿವನ ಲಿಂಗದಲ್ಲಿ ಉತ್ಪತ್ತಿಯಾದ, ಬೀಜವು ಆದಿಸೃಷ್ಟಿಯಲ್ಲಿ, ಯೋನಿಸ್ವರೂಪನಾದ ನನ್ನಲ್ಲಿ ಸೇರಿತು. ಕೆಲವು ಕಾಲದಮೇಲೆ ಆ ಬೀಜವು ಯೋನಿರೂಪವಾದ ಸಮುದ್ರದಲ್ಲಿ ಚಿನ್ನದ ಒಂದು ದೊಡ್ಡ ಅಂಡ [ಮೊಟ್ಟೆ]ವಾಯಿತು.

೮೦. ಆ ಅಂಡವು ಒಂದು ಸಾವಿರವರ್ಷಗಳವರೆಗೆ ನೀರಿನಲ್ಲಿಯೇ ಇದ್ದಿತು. ಕೊನೆಯಲ್ಲಿ ಅದು ಗಾಳಿಯಿಂದ ಎರಡು ಹೋಳಾಯಿತು.

ಕಪಾಲಮೇಕಂ ದ್ಯೌರ್ಜಜ್ಞೇ ಕಪಾಲಮಪರಂ ಕ್ಷಿತಿಃ ।
ಉಲ್ಬಂ ತಸ್ಯ ಮಹೋತ್ಸೇಧೋ ಯೋಽಸೌ ಕನಕಪರ್ವತಃ ॥೮೧॥

ತತಶ್ಚ ಪ್ರತಿಸಂಧ್ಯಾತ್ಮಾ ದೇವದೇವೋ ವರಃ ಪ್ರಭುಃ ।
ಹಿರಣ್ಯಗರ್ಭೋ ಭಗವಾಂಸ್ತ್ವಭಿಜಜ್ಞೇ ಚತುರ್ಮುಖಃ ॥೮೨॥

ಅತಾರಾರ್ಕೇಂದುನಕ್ಷತ್ರಂ ಶೂನ್ಯಂ ಲೋಕಮವೇಕ್ಷ್ಯ ಚ ।
ಕೋಽಹ ಮಿತ್ಯಪಿ ಚ ಧ್ಯಾತೇ ಕುಮಾರಾಸ್ತೇಽಭವಂಸ್ತದಾ ॥೮೩॥

ಪ್ರಿಯದರ್ಶನಾಸ್ತು ಯತಯೋ ಯತೀನಾಂ ಪೂರ್ವಜಾಸ್ತ್ವ ।
ಭೂಯೋ ವರ್ಷಸಹಸ್ರಾಂತೇ ತತ ಏವಾತ್ಮಜಾಸ್ತ್ವ ॥೮೪॥

ಭುವನಾನಲಸಂಕಾಶಾಃ ಪದ್ಮಪತ್ರಾಯತೇಕ್ಷಣಾಃ ।
ಶ್ರೀಮಾನ್ಸನತ್ಕುಮಾರಶ್ಚ ಋಭುಶ್ಚೈವೋರ್ಧ್ವರೇತಸೌ ॥೮೫॥

ಸನಕಃ ಸನಾತನಶ್ಚೈವ ತಥೈವ ಚ ಸನಂದನಃ ।
ಉತ್ಪನ್ನಾಃ ಸಮಕಾಲಂ ತೇ ಬುದ್ಧ್ಯಾಽತೀಂದ್ರಿಯದರ್ಶನಾಃ ॥೮೬॥

---

೮೧. ಆ ಅಂಡದ ಒಂದು ಹೋಳು ದ್ಯುಲೋಕವಾಯಿತು. ಮತ್ತೊಂದು ಭೂಮಿಯಾಯಿತು. ಎರಡನೆಯ ಹೋಳಿಗೆ, ಎತ್ತರವಾದ ಮೇರುಪರ್ವತವು ಗರ್ಭಾವರಣವಾಯಿತು.

೮೨–೮೬. ಆ ಒಡೆದುಹೋದ ಅಂಡದದೆಸೆಯಿಂದ, ದೇವತೆಗಳಿಗೆಲ್ಲ ರಿಗೂದೇವನೂ, ಮಹಾಮಹಿಮನೂ, ಶ್ರೇಷ್ಠನೂ, ಆದ ಹಿರಣ್ಯಗರ್ಭನೆಂಬ ಚತುರ್ಮುಖನು ಉತ್ಪನ್ನನಾದನು. ಆ ಬ್ರಹ್ಮನು ಸೂರ್ಯ ಚಂದ್ರ ನಕ್ಷತ್ರಗಳಿಲ್ಲದೇ, ಕತ್ತಲೆಯಿಂದ ತುಂಬಿದ ಲೋಕವನ್ನು ಕಂಡು, ನಾನು ಯಾರು? ಎಂದು ಯೋಚನೆಮಾಡಿದನು. ಆಮೇಲೆ ಆ ಬ್ರಹ್ಮನಿಗೆ ಕೌಮಾರ ವಯಸ್ಸಿನಿಂದ ಕೂಡಿ, ಸುಂದರರಾಗಿರುವ, ಪ್ರಯತ್ನಪರರಾದ ಯತಿಗಳಿಗೆ ಮೊದಲನೆಯವರಾದ, ಅಗ್ನಿಯಂತೆ ತೇಜಸ್ಸುಳ್ಳವರಾದ ಸನತ್ಕುಮಾರ, ಋಭು, ಸನಕ, ಸನಾತನ, ಸನಂದನ ಎಂಬ ಮಕ್ಕಳು ಸೂಕ್ಷ್ಮ ಬುದ್ಧಿಯಿಂದ ಅತೀಂದ್ರಿಯವಾದ ವಸ್ತುಗಳನ್ನು ನೋಡುವ ಶಕ್ತಿಯುಳ್ಳವರಾಗಿ ಏಕಕಾಲದಲ್ಲಿ ಉತ್ಪನ್ನರಾದರು.

ಉತ್ಪನ್ನಾಃ ಪ್ರತಿಭಾತ್ಮಾನೋ ಜಗತಾಂ ಸ್ಥಿತಿಹೇತವಃ ।
ನಾರಪ್ಸ್ಯಂತೇ ಚ ಕರ್ಮಾಣಿ ತಾಪತ್ರಯವಿವರ್ಜಿತಾಃ ॥೮೭॥

ಅಲ್ಪಸೌಖ್ಯಂ ಬಹುಕ್ಲೇಶಂ ಜರಾಶೋಕಸಮನ್ವಿತಂ ।
ಜೀವನಂ ಮರಣಂ ಚೈವ ಸಂಭವಶ್ಚ ಪುನಃ ಪುನಃ ॥೮೮॥

ಅಲ್ಪಭೂತಂ ಸುಖಂ ಸ್ವರ್ಗೇ ದುಃಖಾನಿ ನರಕೇ ಯಥಾ ।
ವಿದಿತ್ವಾ ಚಾಗಮಂ ಸರ್ವಮವಶ್ಯಂ ಭವಿತವ್ಯತಾಂ ॥೮೯॥

ಋಭುಂ ಸನತ್ಕುಮಾರಂ ಚ ದೃಷ್ಟ್ವಾ ತವ ವಶೇ ಸ್ಥಿತೌ ।
ತ್ರಯಸ್ತು ತ್ರೀನ್ಗುಣಾನ್ ಹಿತ್ವಾ ಚಾತ್ಮಜಾಃ ಸನಕಾದಯಃ ॥೯೦॥

ವೈವರ್ತೇನ ತು ಜ್ಞಾನೇನ ಪ್ರವೃತ್ತಾಸ್ತೇ ಮಹೌಜಸಃ ।
ತತಸ್ತೇಷು ಪ್ರವೃತ್ತೇಷು ಸನಕಾದಿಷು ವೈ ತ್ರಿಷು ॥೯೧॥

---

೮೭. ಆ ಸನತ್ಕುಮಾರನೇ ಮೊದಲಾದವರು ಮಹಾಪ್ರತಿಭಾಶಾಲಿಗಳು, ಎಂದರೆ ಜ್ಞಾನಿಗಳು. ಪ್ರಪಂಚವು ಇರುವುದಕ್ಕೆ ಕಾರಣರಾದನರು. ಅವರಿಗೆ ತಾಪತ್ರಯಗಳಿಲ್ಲ. ಯಾವ ಕರ್ಮಗಳನ್ನೂ ಮಾಡತಕ್ಕವರಾಗಲಿಲ್ಲ.

೮೮–೯೦. ಎಲೈ ಬ್ರಹ್ಮನೇ, ಋಭು, ಸನತ್ಕುಮಾರ ಇವರಿಬ್ಬರೂ, ನಿನ್ನ ವಶದಲ್ಲಿರುವರೆಂದು ತಿಳಿದು ಮಿಕ್ಕ ಮೂವರೂ, ಮುಂದೆ ಬರುವ ಅದೃಷ್ಟಾನುಭವವನ್ನನುಸರಿಸಿದ, ಅಲ್ಪವಾದ ಸುಖವೂ, ಹೆಚ್ಚುಕ್ಲೇಶವೂ, ಮುಪ್ಪು ಮತ್ತೂ ನಾನಾಬಗೆಯಾದ ದುಃಖಗಳೂ, ಹುಟ್ಟುಸಾವುಗಳೂ, ಸ್ವರ್ಗದಲ್ಲಿ ಸ್ವಲ್ಪಸುಖವೂ, ನರಕದಲ್ಲಿ ಹೆಚ್ಚು ದುಃಖವೂ, ಉಳ್ಳ ಸಂಸಾರದ ಸ್ವರೂಪವನ್ನು ತಿಳಿದು, ಸತ್ವರಜಸ್ತಮೋಗುಣಗಳನ್ನು ಬಿಟ್ಟು ವಿವರ್ತ ಕಾರಣ ರೂಪನಾದ, ಆತ್ಮನಜ್ಞಾನದಿಂದ ಮಹಾತೇಜಶ್ಶಾಲಿಗಳಾಗಿದ್ದರು.

೯೧. ಎಲೈ ಬ್ರಹ್ಮನೇ, ಸನಕಾದಿಮೂವರು ಮಕ್ಕಳು ಜ್ಞಾನಮಾರ್ಗಾಸಕ್ತರಾಗಿರುತ್ತಿರಲು, ನೀನು ಶಂಕರನ ಮಾಯೆಯಿಂದ ಅಜ್ಞಾನಿಯಾಗಿರುತ್ತೀಯೆ.

ಭವಿಷ್ಯಸಿ ವಿಮೂಢಸ್ತ್ವಂ ಮಾಯಯಾ ಶಂಕರಸ್ಯ ತು ।
ಏವಂ ಕಲ್ಪೇ ತು ವೈ ವೃತ್ತೇ ಸಂಜ್ಞಾನಶ್ಯತಿ ತೇಽನಘ ॥೯೨॥

ಕಲ್ಪೇ ಶೇಷಾಣಿ ಭೂತಾನಿ ಸೂಕ್ಷ್ಮಾಣಿ ಪಾರ್ಥಿವಾನಿ ಚ ।
ಸರ್ವೇಷಾಂ ಹ್ಯೈಶ್ವರೀ ಮಾಯಾ ಜಾಗ್ರತಿಃ ಸಮುದಾಹೃತಾ ॥೯೩॥

ಯಥೈವ ಪರ್ವತೋ ಮೇರು ರ್ದೇವಲೋಕೋ ಹ್ಯುದಾಹೃತಃ ।
ತಸ್ಯ ಚೇದಂ ಹಿ ಮಾಹಾತ್ಮ್ಯಂ ವಿದ್ಧಿ ದೇವವರಸ್ಯ ಹ ॥೯೪॥

ಜ್ಞಾತ್ವಾ ಚೇಶ್ವರಸದ್ಭಾವಂ ಜ್ಞಾತ್ವಾ ಮಾಮಂಬುಜೇಕ್ಷಣಂ ।
ಮಹಾದೇವಂ ಮಹಾಭೂತಂ ಭೂತಾನಾಂ ವರದಂ ಪ್ರಭುಂ ॥೯೫॥

ಪ್ರಣವೇನಾಥ ಸಾಮ್ನಾ ತು ನಮಸ್ಕೃತ್ಯ ಜಗದ್ಗುರುಂ ।
ತ್ವಾಂ ಚ ಮಾಂ ಚೈವ ಸಂಕ್ರುದ್ಧೋ ನಿಃಶ್ವಾಸಾನ್ನಿರ್ದಹೇದಯಂ ॥

---

೯೨–೯೩. ಹೀಗೆ ಕಲ್ಪವು ಕಳೆಯುತ್ತಿರಲಾಗಿ, ನಿನ್ನ ಆ ಜ್ಞಾನವು ನಾಶವಾಗುವುದು. ಆ ಕಲ್ಪದಲ್ಲಿ ಮಿಕ್ಕ ಸೂಕ್ಷ್ಮಲೋಕದ ಪ್ರಾಣಿಗಳೂ, ಭೂಲೋಕದ ಪ್ರಾಣಿಗಳೂ, ಇವೆಲ್ಲಕ್ಕೂ, ಈಶ್ವರ ಸಂಬಂಧವಾದ, ಮಾಯಾವರಣವು ಇದ್ದೇ ಇರುವುದು. ಅದೇ ಪ್ರಾಣಿಗಳಿಗೆ ಜಾಗ್ರದವಸ್ಥೆಯು.

೯೪. ಮೇರುಪರ್ವತವನ್ನು ದೇವಲೋಕವೆಂದು ಹೇಳುವಂತೆ ದೇವೋತ್ತಮನಾದ ಶಿವನನ್ನು ಮಹಾಮಹಿಮನೆಂದು ತಿಳಿ.

೯೫–೯೬. ಈ ಸಮಸ್ತ ಪ್ರಪಂಚಕ್ಕೂ ಒಡೆಯನಾದ ಈಶ್ವರನೊಬ್ಬನಿರುವನು, ಎಂದು ತಿಳಿದು ಕಮಲಾಕ್ಷನಾದ ನನ್ನನ್ನು ವಿಷ್ಣುವೆಂದು ತಿಳಿದು, ಮಹಾದೇವನೇ ಸಕಲದೇವತೆಗಳಿಗಿಂತಲೂ ದೊಡ್ಡವನು, ಸಮಸ್ತರಿಗೂ ವರವನ್ನು ಕೊಡುವವನು, ಎಂದು ಭಾವಿಸಿ, ಲೋಕಕ್ಕೆಲ್ಲಕ್ಕೂ ಗುರುವಾದ ಅವನನ್ನು ವಂದಿಸಿ, ಎದ್ದುನಿಲ್ಲು. ಆ ಮಹಾದೇವನು ಕೋಪಗೊಂಡರೆ ನಿನ್ನನ್ನೂ ನನ್ನನ್ನೂ ನಿಶ್ವಾಸದ ಗಾಳಿಯಿಂದಲೇ ಸುಟ್ಟುಬಿಡುವನು.

ಏವಂ ಜ್ಞಾತ್ವಾ ಮಹಾಯೋಗಮಭ್ಯುತ್ತಿಷ್ಠನ್ಮಹಾಬಲಂ ।
ಅಹಂ ತ್ವಾಮಗ್ರತಃ ಕೃತ್ವಾ ಸ್ತೋಷ್ಯಾಮ್ಯನಲಸಪ್ರಭಂ ॥೯೭॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಬ್ರಹ್ಮ ಪ್ರಬೋಧನಂ ನಾಮ ವಿಂಶೋಽಧ್ಯಾಯಃ

---

೯೭. ಹೀಗೆ ಮಹಾದೇವನ ಮಹಾಯೋಗವನ್ನೂ, ಮಹಾಬಲವನ್ನೂ ತಿಳಿದು ನಾನು ಎದ್ದು ನಿನ್ನನ್ನು ಮುಂದುಮಾಡಿಕೊಂಡು, ಅಗ್ನಿಗೆ ಸಮಾನವಾದ ಕಾಂತಿಯುಳ್ಳ ಅವನನ್ನು ಇದಿರಿಗೆ ಸ್ತೋತ್ರ ಮಾಡುವೆನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಇಪ್ಪತ್ತನೆಯ ಅಧ್ಯಾಯವು ಮುಗಿದುದು.



ಅಥ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ಏಕವಿಂಶೋಽಧ್ಯಾಯಃ

**ಏಕವಿಂಶೇ ಮಹೇಶಸ್ಯ ಬೃಹದ್ರೂಪಸಮನ್ವಿತಃ ।**
**ನಾಮಭಿರ್ಗುಣಸಂ ಯುಕ್ತೈರ್ಬ್ರಹ್ಮವಿಷ್ಣುಕೃತ ಸ್ತವಃ ॥**

**॥ ಸೂತ ಉವಾಚ ॥**

**ಬ್ರಹ್ಮಾಣಮಗ್ರತಃ ಕೃತ್ವಾ ತತಃ ಸ ಗರುಡಧ್ವಜಃ ।**
**ಅತೀತೈಶ್ಚ ಭವಿಷ್ಯೈಶ್ಚ ವರ್ತಮಾನೈಸ್ತಥೈವ ಚ ॥ ೧ ॥**
**ನಾಮಭಿಶ್ಛಾಂದಸೈಶ್ಚೈವ ಇದಂ ಸ್ತೋತ್ರಮುದೀರಯೇತ್ ।**

**॥ ವಿಷ್ಣುರುವಾಚ ॥**

**ನಮಸ್ತುಭ್ಯಂ ಭಗವತೇ ಸುವ್ರತಾನಂತ ತೇಜಸೇ ॥ ೨ ॥**
**ನಮಃ ಕ್ಷೇತ್ರಾಧಿಪತಯೇ ಬೀಜಿನೇ ಶೂಲಿನೇ ನಮಃ ।**
**ಸುಮೇಢ್ರಾಯಾ ಚ್ಯಮೇಢ್ರಾಯ ದಂಡಿನೇ ರೂಕ್ಷರೇತಸೇ ॥**

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಇಪ್ಪತ್ತೊಂದನೆಯ ಅಧ್ಯಾಯವು

[ಇಪ್ಪತ್ತೊಂದನೆಯ ಅಧ್ಯಾಯದಲ್ಲಿ ಮಹೇಶ್ವರನ ದೊಡ್ಡ ಆಕಾರವೂ, ಗುಣಗಳಿಂದ ಕೂಡಿದ ನಾಮಗಳಿಂದ, ಬ್ರಹ್ಮ ವಿಷ್ಣುಗಳು ಮಾಡಿದ ಸ್ತೋತ್ರವೂ ಇವನ್ನು ಹೇಳಲಾಗುವುದು.]

೧. ಸೂತನು ಹೇಳಿದನು: ಆಮೇಲೆ ಗರುಡಧ್ವಜನಾದ ವಿಷ್ಣುವು ಬ್ರಹ್ಮನನ್ನು ಮುಂದಿಟ್ಟುಕೊಂಡು, ಹಿಂದಿನ ಕಲ್ಪದಲ್ಲಿ ಕಳೆದುಹೋದ, ಮುಂದಿನ ಕಲ್ಪದಲ್ಲಿ ನಡೆಯುವ, ಈ ಕಲ್ಪದಲ್ಲಿ ನಡೆಯುತ್ತಿರುವ, ವೇದೋಕ್ತವಾದ ಶಿವನ ಮಹಿಮೆಯನ್ನು ಪ್ರಕಾಶಪಡಿಸುವ, ನಾಮಗಳಿಂದ ಈ ಸ್ತೋತ್ರವನ್ನು ಹೇಳಿದನು.

೨–೪. ಒಳ್ಳೆಯ ವ್ರತವನ್ನು ಮಾಡಿದವರಿಗೆ ನಾಶರಹಿತವಾದ ತೇಜಸ್ಸನ್ನು ಕೊಡತಕ್ಕ, ಕ್ಷೇತ್ರಕ್ಕೆ ಅಧಿಪತಿಯಾದ, ಪ್ರಪಂಚೋತ್ಪತ್ತಿಗೆ ಕಾರಣವಾದ ಬೀಜವುಳ್ಳ, ಶೂಲಾಯುಧವನ್ನು ಧರಿಸಿದ, ಒಳ್ಳೆಯ ಮತ್ತು ಪೂಜಾಯೋಗ್ಯವಾದ ಲಿಂಗವುಳ್ಳವನಾದ, ಯತಿಸ್ವರೂಪನಾದ, ಕ್ರೂರವಾದ ರೇತಸ್ಸುಳ್ಳ, ದೊಡ್ಡವನೂ, ಶ್ರೇಷ್ಠನೂ ಆದ, ಸಕಲ

ನಮೋ ಜ್ಯೇಷ್ಠಾಯ ಶ್ರೇಷ್ಠಾಯ ಪೂರ್ವಾಯ ಪ್ರಥಮಾಯ ಚ।
ನಮೋ ಮಾನ್ಯಾಯ ಪೂಜ್ಯಾಯ ಸದ್ಯೋಜಾತಾಯ ವೈ ನಮಃ ॥
ಗಹ್ವರಾಯ ಘಟೇಶಾಯ ವ್ಯೋಮಚೀರಾಂಬರಾಯ ಚ ।
ನಮಸ್ತೇ ಹ್ಯಸ್ಮದಾದೀನಾಂ ಭೂತಾನಾಂ ಪ್ರಭವೇ ನಮಃ ॥ ೫ ॥
ವೇದಾನಾಂ ಪ್ರಭವೇ ಚೈವ ಸ್ಮೃತೀನಾಂ ಪ್ರಭವೇ ನಮಃ ।
ಪ್ರಭವೇ ಕರ್ಮದಾನಾನಾಂ ದ್ರವ್ಯಾಣಾಂ ಪ್ರಭವೇ ನಮಃ ॥ ೬ ॥
ನಮೋ ಯೋಗಸ್ಯ ಪ್ರಭವೇ ಸಾಂಖ್ಯಸ್ಯ ಪ್ರಭವೇ ನಮಃ ।
ನಮೋ ಧ್ರುವನಿಬದ್ಧಾನಾಂ ಋಷೀಣಾಂ ಪ್ರಭವೇ ನಮಃ ॥ ೭ ॥
ಋಕ್ಷಾಣಾಂ ಪ್ರಭವೇ ತುಭ್ಯಂ ಗ್ರಹಾಣಾಂ ಪ್ರಭವೇ ನಮಃ ।
ವೈದ್ಯುತಾಶನಿಮೇಘಾನಾಂ ಗರ್ಜಿತಪ್ರಭವೇ ನಮಃ ॥ ೮ ॥
ಮಹೋದಧೀನಾಂ ಪ್ರಭವೇ ದ್ವೀಪಾನಾಂ ಪ್ರಭವೇ ನಮಃ ।
ಅದ್ರೀಣಾಂ ಪ್ರಭವೇ ಚೈವ ವರ್ಷಾಣಾಂ ಪ್ರಭವೇ ನಮಃ ॥ ೯ ॥
ನಮೋ ನದೀನಾಂ ಪ್ರಭವೇ ನದಾನಾಂ ಪ್ರಭವೇ ನಮಃ ।
ಮಹೌಷಧೀನಾಂ ಪ್ರಭವೇ ವೃಕ್ಷಾಣಾಂ ಪ್ರಭವೇ ನಮಃ ॥೧೦॥

---

ಪ್ರಪಂಚಕ್ಕೂ ಮೊದಲನೆಯವನಾದ ಮರ್ಯಾದೆಗೆ ಯೋಗ್ಯನೂ ಪೂಜ್ಯನೂ ಆದ, ಸದ್ಯೋಜಾತ ಮೂರ್ತಿಗೆ ನಮಸ್ಕಾರವು.

೫–೬. ಹೊಂದಲಸಾಧ್ಯವಾದ, ಜೀವರಿಗೆಲ್ಲರಿಗೂ ಒಡೆಯನಾದ, ಆಕಾಶವೇ ವಸ್ತ್ರವಾಗಿ ಉಳ್ಳ, ವಿಷ್ಣುವೇ ಮೊದಲಾದ ದೇವತೆಗಳಿಗೆ ಅಧಿಪತಿಯಾದ, ವೇದಗಳು, ಸ್ಮೃತಿಗಳು, ಕರ್ಮಗಳು, ದಾನಗಳು, ದ್ರವ್ಯಗಳು ಇವುಗಳಿಗೆಲ್ಲಕ್ಕೂ ಅಧಿಪತಿಯಾದ ನಿನಗೆ ನಮಸ್ಕಾರವು.

೭–೮. ಯೋಗ ಮತ್ತು ಸಾಂಖ್ಯಶಾಸ್ತ್ರಗಳಿಗೆ ಅಧಿಪತಿಯಾದ, ಧ್ರುವಮಂಡಲವನ್ನನುಸರಿಸಿದ, ಸಪ್ತಋಷಿಮಂಡಲಗಳಿಗೆ ಅಧಿಪತಿಯಾದ, ನಕ್ಷತ್ರಗಳಿಗೂ, ಗ್ರಹಗಳಿಗೂ, ಮಿಂಚುಗಳಿಗೂ, ಮೇಘಗರ್ಜನೆಗಳಿಗೂ, ಅಧಿಪತಿಯಾದ ನಿನಗೆ ನಮಸ್ಕಾರವು.

೯–೧೦. ದೊಡ್ಡ ಸಾಗರಗಳು, ದ್ವೀಪಗಳು, ಪರ್ವತಗಳು, ಭಾರತಾದಿವರ್ಷಗಳು, ನದನದಿಗಳು, ಓಷಧಿಗಳು, ಮರಗಳು, ಇವುಗಳಿಗೆ ಅಧಿಪತಿಯಾದ ನಿನಗೆ ನಮಸ್ಕಾರವು.

ಧರ್ಮವೃಕ್ಷಾಯ ಧರ್ಮಾಯ ಸ್ಥಿತೀನಾಂ ಪ್ರಭವೇ ನಮಃ ।
ಪ್ರಭವೇ ಚ ಪರಾರ್ಧಸ್ಯ ಪರಸ್ಯ ಪ್ರಭವೇ ನಮಃ ॥೧೧॥

ನಮೋ ರಸಾನಾಂ ಪ್ರಭವೇ ರತ್ನಾನಾಂ ಪ್ರಭವೇ ನಮಃ ।
ಕ್ಷಣಾನಾಂ ಪ್ರಭವೇ ಚೈವ ಲವಾನಾಂ ಪ್ರಭವೇ ನಮಃ ॥೧೨॥

ಅಹೋರಾತ್ರಾರ್ಧಮಾಸಾನಾಂ ಮಾಸಾನಾಂ ಪ್ರಭವೇ ನಮಃ ।
ಋತೂನಾಂ ಪ್ರಭವೇ ತುಭ್ಯಂ ಸಂಖ್ಯಾಯಾಃ ಪ್ರಭವೇ ನಮಃ ॥

ಪ್ರಭವೇ ಚಾಪರಾರ್ಧಸ್ಯ ಪರಾರ್ಧಪ್ರಭವೇ ನಮಃ ।
ನಮಃ ಪುರಾಣಪ್ರಭವೇ ಸರ್ಗಾಣಾಂ ಪ್ರಭವೇ ನಮಃ ॥೧೪॥

ಮನ್ವಂತರಾಣಾಂ ಪ್ರಭವೇ ಯೋಗಸ್ಯ ಪ್ರಭವೇ ನಮಃ ।
ಚತುರ್ವಿಧಸ್ಯ ಸರ್ಗಸ್ಯ ಪ್ರಭವೇಽನಂತ ಚಕ್ಷುಷೇ ॥೧೫॥

ಕಲ್ಪೋದಯನಿಬಂಧಾನಾಂ ವಾರ್ತಾನಾಂ ಪ್ರಭವೇ ನಮಃ ।
ನಮೋ ವಿಶ್ವಸ್ಯ ಪ್ರಭವೇ ಬ್ರಹ್ಮಾಧಿಪತಯೇ ನಮಃ ॥೧೬॥

ವಿದ್ಯಾನಾಂ ಪ್ರಭವೇ ಚೈವ ವಿದ್ಯಾಧಿಪತಯೇ ನಮಃ ।
ನಮೋ ವ್ರತಾಧಿಪತಯೇ ವ್ರತಾನಾಂ ಪ್ರಭವೇ ನಮಃ ॥೧೭॥

ಮಂತ್ರಾಣಾಂ ಪ್ರಭವೇ ತುಭ್ಯಂ ಮಂತ್ರಾಧಿಪತಯೇ ನಮಃ ।
ಪಿತ್ರೂಣಾಂ ಪತಯೇ ಚೈವ ಪಶೂನಾಂ ಪತಯೇ ನಮಃ ॥೧೮॥

---

೧೧–೧೪. ಅನೇಕ ವಿಧ ಧರ್ಮಕಾರಣನಾದ, ಧರ್ಮಸ್ವರೂಪನಾದ, ಸ್ಥಿತಿಗೆ ಒಡೆಯನಾದ, ಅರ್ಧನಾರೀಸ್ವರೂಪನಾದ, ರಸಗಳು, ರತ್ನಗಳು, ಕ್ಷಣ, ಲವ, ಅಹಸ್ಸು, ರಾತ್ರಿ, ಪಕ್ಷ, ಮಾಸ, ಋತು, ಸಂಖ್ಯೆ, ಪರಾರ್ಧ, ಅಪರಾರ್ಧ, ಪರಗಳೆಂಬ ಬ್ರಹ್ಮನ ದಿನಗಳು, ಪುರಾಣಗಳು ಸೃಷ್ಟಿಗಳು ಇವುಗಳಿಗೆ ಅಧಿಪತಿಯಾದ ನಿನಗೆ ನಮಸ್ಕಾರವು.

೧೫–೧೮. ಮನ್ವಂತರಗಳು, ಯೋಗಗಳು, ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜಗಳೆಂಬ ನಾಲ್ಕು ಸೃಷ್ಟಿಗಳು, ಕಲ್ಪಗಳು, ಧರ್ಮಶಾಸ್ತ್ರಗಳು, ಜೀವನಗಳು, ಪ್ರಪಂಚ, ಬ್ರಹ್ಮ, ವಿದ್ಯೆ, ವ್ರತ, ಮಂತ್ರಗಳು, ಪಿತೃದೇವತೆಗಳು, ಜೀವರುಗಳು ಇವರುಗಳಿಗೆ' ಅಧಿಪತಿಯಾದ ಅನೇಕ ಕಣ್ಣುಗಳುಳ್ಳ ನಿನಗೆ ನಮಸ್ಕಾರವು.

ವಾಗ್ವೃಷಾಯಚ ನಮಸ್ತುಭ್ಯಂ ಪುರಾಣವೃಷಭಾಯ ಚ ।
ನಮಃ ಪಶೂನಾಂ ಪತಯೇ ಗೋವೃಷೇಂದ್ರಧ್ವಜಾಯ ಚ ॥೧೯॥
ಪ್ರಜಾಪತೀನಾಂ ಪತಯೇ ಸಿದ್ಧೀನಾಂ ಪತಯೇ ನಮಃ ।
ದೈತ್ಯದಾನವಸಂಘಾನಾಂ ರಕ್ಷಸಾಂ ಪತಯೇ ನಮಃ ॥೨೦॥
ಗಂಧರ್ವಾಣಾಂ ಚ ಪತಯೇ ಯಕ್ಷಾಣಾಂ ಪತಯೇ ನಮಃ ।
ಗರುಡೋರಗಸರ್ಪಾಣಾಂ ಪಕ್ಷಿಣಾಂ ಪತಯೇ ನಮಃ ॥೨೧॥
ಸರ್ವಗುಹ್ಯಪಿಶಾಚಾನಾಂ ಗುಹ್ಯಾಧಿಪತಯೇ ನಮಃ ।
ಗೋಕರ್ಣಾಯ ಚ ಗೋಪ್ತ್ರೇ ಚ ಶಂಕುಕರ್ಣಾಯ ವೈ ನಮಃ ॥
ವರಾಹಾಯಾಪ್ರಮೇಯಾಯ ಯಕ್ಷಾಯ ವಿರಜಾಯ ಚ ।
ನಮೋ(ಽ) ಸುರಾಣಾಂ ಪತಯೇ ಗಣಾನಾಂ ಪತಯೇ ನಮಃ॥೨೩॥
ಅಂಭಸಾಂ ಪತಯೇ ಚೈವ ಓಜಸಾಂ ಪತಯೇ ನಮಃ ।
ನಮೋಽಸ್ತು ಲಕ್ಷ್ಮೀಪತಯೇ ಶ್ರೀಪಾಯ ಕ್ಷಿತಿಪಾಯ ಚ ॥೨೪॥
ಬಲಾಬಲಸಮೂಹಾಯ ಅಕ್ಷೋಭ್ಯಕ್ಷೋಭಣಾಯ ಚ ।
ದೀಪ್ತಶೃಂಗೈಕ ಶೃಂಗಾಯ ವೃಷಭಾಯ ಕಕುದ್ಮಿನೇ ॥೨೫॥

---

೧೯–೨೨. ಧರ್ಮಸ್ವರೂಪನಾದ, ಹತ್ತು ಪುರಾಣಗಳಲ್ಲಿ, ಹೊಗಳಿಸಿಕೊಳ್ಳುವ, ಪಶುಗಳಿಗೆ ಅಧಿಪತಿಯಾದ, ವೃಷಭಧ್ವಜನಾದ, ಪ್ರಜಾಪತಿಗಳು, ಸಿದ್ಧಿಗಳು, ದೈತ್ಯರು, ದಾನವರು, ರಾಕ್ಷಸರು, ಗಂಧರ್ವರು, ಯಕ್ಷರು, ಗರುಡನು, ಸರ್ಪಗಳು, ಪಕ್ಷಿಗಳು, ಗುಹ್ಯಕರು, ಪಿಶಾಚಿಗಳು, ಇವುಗಳಿಗೆ, ಅಧಿಪತಿಯಾದ, ಸಕಲರನ್ನೂ ಕಾಪಾಡುವ, ಗೋಕರ್ಣ, ಶಂಕುಕರ್ಣನೆಂಬ ಹೆಸರನ್ನು ಹೊಂದಿದ ನಿನಗೆ ನಮಸ್ಕಾರವು.

೨೩–೨೭. ವರಾಹಸ್ವರೂಪನಾದ, ಅಳತೆಗೆ ಸಿಕ್ಕದಿರುವ, ಕರಡಿಯ ಸ್ವರೂಪನಾದ, ರಜೋಗುಣವಿಲ್ಲದ, ದೇವತೆಗಳು, ರುದ್ರಗಣಗಳು, ನೀರು, ತೇಜಸ್ಸು, ಸಂಪತ್ತು, ರಾಜರು, ಇವುಗಳಿಗೆ ಅಧಿಪತಿಯಾದ, ಬಲಾಬಲಸ್ವರೂಪನೂ, ಅಚಲನಚಲನರೂಪನೂ, ಪ್ರಕಾಶ

**ನಮಃ ಸ್ಥೈರ್ಯಾಯ ವಪುಷೇ ತೇಜಸಾನುವ್ರತಾಯ ಚ ।**
**ಅತೀತಾಯ ಭವಿಷ್ಯಾಯ ವರ್ತಮಾನಾಯ ವೈ ನಮಃ ॥೨೬॥**

**ಸುವರ್ಚಸೇ ಚ ವೀರ್ಯಾಯ ಶೂರಾಯ ಹ್ಯಜಿತಾಯ ಚ ।**
**ವರದಾಯ ವರೇಣ್ಯಾಯ ಪುರುಷಾಯ ಮಹಾತ್ಮನೇ ॥೨೭॥**

**ನಮೋ ಭೂತಾಯ ಭವ್ಯಾಯ ಮಹತೇ ಪ್ರಭವಾಯ ಚ ।**
**ಜನಾಯ ಚ ನಮಸ್ತುಭ್ಯಂ ತಪಸೇ ವರದಾಯ ಚ ॥೨೮॥**

**ಅಣವೇ ಮಹತೇ ಚೈವ ನಮಃ ಸರ್ವಗತಾಯ ಚ ।**
**ನಮೋ ಬಂಧಾಯ ಮೋಕ್ಷಾಯ ಸ್ವರ್ಗಾಯ ನರಕಾಯ ಚ॥೨೯॥**

**ನಮೋ ಭವಾಯ ದೇವಾಯ ಇಜ್ಯಾಯ ಯಾಜಕಾಯ ಚ ।**
**ಪ್ರತ್ಯುದೀರ್ಣಾಯ ದೀಪ್ತಾಯ ತತ್ವಾಯಾತಿಗುಣಾಯ ಚ ॥೩೦॥**

**ನಮಃ ಪಾಶಾಯ ಶಸ್ತ್ರಾಯ ನಮಸ್ತ್ವಾಭರಣಾಯ ಚ**
**ಹುತಾಯ ಉಪಹೂತಾಯ ಪ್ರಹುತ ಪ್ರಾಶಿತಾಯ ಚ ॥೩೧॥**

---

ವಾದ ಮತ್ತೂ ಒಂದು ಕೊಂಬುಳ್ಳ ವೃಷಭನ ಸ್ವರೂಪನೂ, ಆದ, ಸ್ಥಿರವಾದ ಶರೀರವುಳ್ಳ, ತೇಜಶ್ಶಾಲಿಯಾದ, ಭೂತಭವಿಷ್ಯದ್ವರ್ತಮಾನ ಕಾಲತ್ರಯರೂಪನಾದ, ಶೂರನೂ, ಜಯಿಸಲಸಾಧ್ಯನೂ, ಪರಾಕ್ರಮಿಯೂ, ತೇಜಸ್ವಿಯೂ, ಆದ, ವರವನ್ನು ಕೊಡುವ, ಶ್ರೇಷ್ಠನೂ, ಮಹಾಮಹಿಮನೂ ಆದ ನಿನಗೆ ನಮಸ್ಕಾರವು.

೨೮–೩೦. ಕಳೆದುಹೋದ ಮತ್ತೂ ಬರುವ ಕಾಲಸ್ವರೂಪನಾದ, ಮಹತ್ತತ್ವರೂಪನಾಗಿ ವ್ಯಕ್ತನಾಗತಕ್ಕ ಪ್ರಜೆಗಳ ರೂಪನೂ, ತಪಸ್ಸಿನ ರೂಪನೂ, ವರವನ್ನು ಕೊಡುವವನೂ ಆದ, ಅಣುವಾಗಿಯೂ, ಮಹತ್ತಾಗಿಯೂ, ಸರ್ವಗತನಾದ, ಬಂಧಮೋಕ್ಷಸ್ವರ್ಗನರಕಸ್ವರೂಪನಾದ, ಜನ್ಮಸ್ವರೂಪನೂ, ಯಾಗಸ್ವರೂಪನೂ, ದೇವತಾಸ್ವರೂಪನೂ, ಯಜಮಾನಸ್ವರೂಪನೂ, ಆದ, ಪ್ರಕಾಶಸ್ವರೂಪನಾಗಿ, ಗುಣಾತೀತವಾದ ತತ್ವರೂಪನಾದ ನಿನಗೆ ನಮಸ್ಕಾರವು.

೩೧–೩೨. ಯಜ್ಞಗಳಲ್ಲಿ ಉಪಯೋಗಿಸುವ, ಪಾಶ, ಶಸ್ತ್ರ, ಆಭರಣ, ಹೋಮದ್ರವ್ಯ, ಆಹ್ವಾನಿಸಿದದೇವತೆ, ಭಕ್ತಿಯಿಂದಮಾಡಿದಹೋಮ, ಹವಿಸ್ಸಿನಭಕ್ಷಣೆ, ಯಜ್ಞಯಾಗಗಳು, ಕೆರೆ, ತೋಪು, ಗಳನಿರ್ಮಾಣ, ಅಗ್ನಿ

ನಮೋಽಸ್ತ್ವಿಷ್ಟಾಯ ಪೂರ್ತಾಯ ಅಗ್ನಿಷ್ಟೋಮದ್ವಿಜಾಯ ಚ।
ಸದಸ್ಯಾಯ ನಮಶ್ಚೈವ ದಕ್ಷಿಣಾಽವ ಭೃತಾಯ ಚ ॥೩೨॥

ಅಹಿಂಸಾಯಾಪ್ರಲೋಭಾಯ ಪಶುಮಂತ್ರೌಷಧಾಯ ಚ ।
ನಮಃ ಪುಷ್ಟಿಪ್ರದಾನಾಯ ಸುಶೀಲಾಯ ಸುಶೀಲಿನೇ ॥೩೩॥

ಅತೀತಾಯ ಭವಿಷ್ಯಾಯ ವರ್ತಮಾನಾಯ ತೇ ನಮಃ ।
ಸುವರ್ಚಸೇ ಚ ವೀರ್ಯಾಯ ಶೂರಾಯ ಹ್ಯಜಿತಾಯ ಚ ॥೩೪॥

ವರದಾಯ ವರೇಣ್ಯಾಯ ಪುರುಷಾಯ ಮಹಾತ್ಮನೇ ।
ನಮೋ ಭೂತಾಯ ಭವ್ಯಾಯ ಮಹತೇ ಚಾ ಭಯಾಯಚ ॥೩೫॥

ಜರಾಽಸಿದ್ಧ ನಮಸ್ತುಭ್ಯಮಯಸೇ ವರದಾಯ ಚ।
ಅಧರೇ ಮಹತೇ ಚೈವ ನಮಃ ಸಸ್ತು ಪತಾಯ ಚ ॥೩೬॥

ನಮಶ್ಚೇಂದ್ರಿಯಪತ್ರಾಣಾಂ ಲೇಲಿಹಾನಾಯ ಸ್ರಗ್ವಿಣೇ ।
ವಿಶ್ವಾಯ ವಿಶ್ವರೂಪಾಯ ವಿಶ್ವತಃ ಶಿರಸೇ ನಮಃ ॥೩೭॥

---

ಷ್ಟೋಮಯಾಗ, ದ್ವಿಜ, ಸದಸ್ಯ, ದಕ್ಷಿಣಾ, ಅವಭೃಥಸ್ನಾನ, ಇವುಗಳ ಸ್ವರೂಪನಾದ ನಿನಗೆ ನಮಸ್ಕಾರವು.

೩೩-೩೫. ಅಹಿಂಸೆ, ಆಶಾರಾಹಿತ್ಯ, ಪಶು, ಮಂತ್ರ, ಔಷಧ ಇವುಗಳಸ್ವರೂಪನೂ, ಪ್ರಾಣಿಗಳಿಗೆ ಬಲವನ್ನು ಕೊಡುವವನೂ, ಒಳ್ಳೆಯ ನಡತೆಯ ಸ್ವರೂಪನೂ, ಕಾಲತ್ರಯದಲ್ಲಿಯೂ ಇರತಕ್ಕವನೂ, ಒಳ್ಳೆಯ ತೇಜಸ್ಸುಳ್ಳವನೂ, ಶೂರತನದ ಪರಾಕ್ರಮದಿಂದ ಜಯಿಸಲಸಾಧ್ಯನೂ, ವರವನ್ನು ಕೊಡುವ ಶ್ರೇಷ್ಠನಾದ ಮಹಾಪುರುಷನೂ, ಮಹಾಮಹಿಮನೂ, ಅಭಯಸ್ವರೂಪನೂ ಆದ ನಿನಗೆ ನಮಸ್ಕಾರವು.

೩೬-೩೮. ಮುಪ್ಪಿಲ್ಲದ, ಸುವರ್ಣಸ್ವರೂಪನಾದ, ವರದನೂ, ಅಧೋಲೋಕ, ಮಹರ್ಲೋಕ ಸ್ವರೂಪನೂ, ನಿದ್ರಿಸುವತೈಜಸರಿಗೆ ಅಧಿಪತಿಯಾದವನೂ, ಐದು ಇಂದ್ರಿಯಗಳೆಂಬ ವಾಹನಗಳಿಂದ, ಜೀವರೂಪನಾಗಿ ಸುಖದುಃಖಾನುಭವಗಳನ್ನು ಮಾಡುವ, ಹಾರವನ್ನು ಧರಿಸಿರುವ,

**ಸರ್ವತಃ ಪಾಣಿಪಾದಾಯ ರುದ್ರಾಯಾಪ್ರತಿಮಾಯ ಚ ।**
**ನಮೋ ಹವ್ಯಾಯ ಕವ್ಯಾಯ ಹವ್ಯವಾಹಾಯ ವೈನಮಃ ॥೩೮॥**

**ನಮಃ ಸಿದ್ಧಾಯ ಮೇಧ್ಯಾಯ ಇಷ್ಟಾಯೇಜ್ಯಾಪರಾಯ ಚ ।**
**ಸುವೀರಾಯ ಸುಘೋರಾಯ ಅಕ್ಷೋಭ್ಯಕ್ಷೋಭಣಾಯ ಚ ॥**

**ಸುಪ್ರಜಾಯ ಸುಮೇಧಾಯ ದೀಪ್ತಾಯ ಭಾಸ್ಕರಾಯ ಚ ।**
**ನಮೋ ಬುದ್ಧಾಯ ಶುದ್ಧಾಯ ವಿಸ್ತೃತಾಯ ಮತಾಯ ಚ ॥೪೦॥**

**ನಮಃ ಸ್ಥೂಲಾಯ ಸೂಕ್ಷ್ಮಾಯ ದೃಶ್ಯಾದೃಶ್ಯಾಯ ಸರ್ವಶಃ ।**
**ವರ್ಷತೇ ಜ್ವಲತೇ ಚೈವ ವಾಯವೇ ಶಿಶಿರಾಯ ಚ ॥೪೧॥**

**ನಮಸ್ತೇ ವಕ್ರಕೇಶಾಯ ಉರುವಕ್ಷಃ ಶಿಖಾಯ ಚ ।**
**ನಮೋ ನಮಃ ಸುವರ್ಣಾಯ ತಪನೀಯನಿಭಾಯ ಚ ॥೪೨॥**

**ವಿರೂಪಾಕ್ಷಾಯ ಲಿಂಗಾಯ ಪಿಂಗಲಾಯ ಮಹೌಜಸೇ ।**
**ವೃಷ್ಟಿಘ್ನಾಯ ನಮಶ್ಚೈವ ನಮಃ ಸೌಮ್ಯೇಕ್ಷಣಾಯ ಚ ॥೪೩॥**

---

ಪ್ರಪಂಚಸ್ವರೂಪನೂ, ಎಲ್ಲಾ ಕಡೆಗಳಲ್ಲಿಯೂ, ತಲೆ ಕೈ ಕಾಲುಗಳುಳ್ಳವನೂ, ಕ್ರೂರನೂ, ಅಸಮಾನನೂ, ಹವ್ಯ ಕವ್ಯ ಸ್ವರೂಪನೂ, ಅಗ್ನಿಸ್ವರೂಪನೂ, ಆದ ನಿನಗೆ ನಮಸ್ಕಾರವು.

೩೯-೪೨. ಸಿದ್ಧನಾದ, ಪರಿಶುದ್ಧನೂ, ಯಜ್ಞರೂಪನೂ, ಯಾಗಾಸಕ್ತನೂ, ಶೂರನೂ, ಭಯಂಕರನೂ, ತಾನು ಚಲಿಸದೇ ಇತರರನ್ನು ಚಲಿಸುವಂತೆ ಮಾಡುವವನೂ, ಸುಪುತ್ರರುಳ್ಳವನೂ, ಬುದ್ಧಿವಂತನೂ, ಪ್ರಕಾಶಸ್ವರೂಪನೂ, ಸೂರ್ಯರೂಪನೂ, ಜ್ಞಾನ ಸ್ವರೂಪನೂ, ಕಶ್ಮಲಸಂಪರ್ಕವಿಲ್ಲದವನೂ, ಸರ್ವವ್ಯಾಪಿಯೂ ಸಕಲರಿಗೂ ಇಷ್ಟನಾದವನೂ, ಸ್ಥೂಲ ಸೂಕ್ಷ್ಮ ದೃಶ್ಯಾದೃಶ್ಯ ವಸ್ತುಸ್ವರೂಪನೂ, ಮಳೆ, ಅಗ್ನಿ, ಗಾಳಿ, ಚಳಿ, ಇವುಗಳ ಸ್ವರೂಪನೂ, ವಕ್ರವಾದ ತಲೆಯ ಗುಂಗುರು ಕೂದಲುಳ್ಳವನೂ, ವಿಸ್ತಾರವಾದ ಎದೆಯುಳ್ಳವನೂ, ಚಿನ್ನದಂತೆ ಕಾಂತಿಯುಳ್ಳವನೂ, ಆದ ನಿನಗೆ ನಮಸ್ಕಾರವು.

೪೩-೪೫. ಅಸಮಾನವಾದ ಕಣ್ಣುಳ್ಳವನೂ, ಲಿಂಗರೂಪನೂ, ಚಿತ್ರಕಾಂತಿ, ಶಕ್ತಿಯುಳ್ಳವನೂ, ಅತಿಮಳೆಯನ್ನು ನಾಶಮಾಡತಕ್ಕವನೂ,

ನಮೋ ಧೂಮ್ರಾಯ ಶ್ವೇತಾಯ ಕೃಷ್ಣಾಯ ಲೋಹಿತಾಯ ಚ ।
ಪಿಶಿತಾಯ ಪಿಶಂಗಾಯ ಪೀತಾಯ ಚ ನಿಷಂಗಿಣೇ ॥೪೪॥

ನಮಸ್ತೇ ಸವಿಶೇಷಾಯ ನಿರ್ವಿಶೇಷಾಯ ವೈ ನಮಃ ।
ನಮ ಈಜ್ಯಾಯ ಪೂಜ್ಯಾಯ ಉಪಜೀವ್ಯಾಯ ವೈ ನಮಃ ॥೪೫॥

ನಮಃ ಕ್ಷೇಮ್ಯಾಯ ವೃದ್ಧಾಯ ವತ್ಸಲಾಯ ನಮೋ ನಮಃ ।
ನಮೋ ಭೂತಾಯ ಸತ್ಯಾಯ ಸತ್ಯಾಸತ್ಯಾಯ ವೈ ನಮಃ ॥೪೬॥

ನಮೋ ವೈ ಪದ್ಮವರ್ಣಾಯ ಮೃತ್ಯುಘ್ನಾಯ ಚ ಮೃತ್ಯವೇ ।
ನಮೋ ಗೌರಾಯ ಶ್ಯಾಮಾಯ ಕದ್ರವೇ ಲೋಹಿತಾಯ ಚ ॥

ಮಹಾಸಂಧ್ಯಾಭ್ರವರ್ಣಾಯ ಚಾರುದೀಪ್ತಾಯ ದೀಕ್ಷಿಣೇ ।
ನಮಃ ಕಮಲಹಸ್ತಾಯ ದಿಗ್ವಾಸಾಯ ಕಪರ್ದಿನೇ ॥೪೮॥

ಅಪ್ರಮಾಣಾಯ ಸರ್ವಾಯ ಅವ್ಯಯಾಯಾಮರಾಯ ಚ ।
ನಮೋ ರೂಪಾಯ ಗಂಧಾಯ ಶಾಶ್ವತಾಯಾಕ್ಷಯಾಯ ಚ ॥

---

ಶಾಂತವಾದ ನೋಟವುಳ್ಳವನೂ, ಧೂಮ್ರ, ಶ್ವೇತ, ಕೃಷ್ಣ, ಲೋಹಿತ, ಕಪಿಶ, ಪಿಶಂಗ, ಪೀತ, ಎಂಬ ಬಣ್ಣಗಳುಳ್ಳವನೂ, ಬತ್ತಳಿಕೆಯುಳ್ಳವನೂ, ಸವಿಶೇಷ ನಿರ್ವಿಶೇಷ ಸ್ವರೂಪನೂ, ಸಮಸ್ತ ದಾನಯೋಗ್ಯನೂ, ಪೂಜ್ಯನೂ, ಶ್ಲಾಘ್ಯನೂ, ಉಪಜೀವನವುಳ್ಳವನೂ, ಆದ ನಿನಗೆ ನಮಸ್ಕಾರವು.

೪೬–೪೮. ಕ್ಷೇಮವನ್ನುಂಟು ಮಾಡುವವನೂ, ಅನೇಕ ಕಾಲದ ಅಭಿವೃದ್ಧಿಯುಳ್ಳವನೂ, ಭಕ್ತರಲ್ಲಿ ಪ್ರೀತಿಯುಳ್ಳವನೂ, ಸತ್ಯ (ಆತ್ಮ) ಸ್ವರೂಪನೂ, ಅಸತ್ಯಪ್ರಪಂಚ ಸ್ವರೂಪನೂ, ಕಮಲದ ಬಣ್ಣವುಳ್ಳವನೂ ಯಮನನ್ನು ನಿಗ್ರಹಮಾಡಿದವನೂ, ಮೃತ್ಯುಸ್ವರೂಪನೂ, ಗೌರ, ಶ್ಯಾಮ, ಕದ್ರು, ಲೋಹಿತ, ಎಂಬ ಬಣ್ಣವುಳ್ಳವನೂ, ಸಂಧ್ಯಾಕಾಲದ ದೊಡ್ಡ ಮೇಘದ ಬಣ್ಣವುಳ್ಳವನೂ, ಮಹಾಪ್ರಕಾಶವುಳ್ಳವನೂ, ಕಮಲವನ್ನು ಕೈಯಲ್ಲಿಹಿಡಿದವನೂ, ದಿಗಂಬರನೂ, ಜಟಾಧಾರಿಯೂ, ಆದ ನಿನಗೆ ನಮಸ್ಕಾರವು.

ಪುರಸ್ತಾದ್ಬೃಹತೇ ಚೈವ ವಿಭ್ರಾಂತಾಯ ಕೃತಾಯ ಚ ।
ದುರ್ಗಮಾಯ ಮಹೇಶಾಯ ಕ್ರೋಧಾಯ ಕಪಿಲಾಯ ಚ ॥೫೦॥

ತರ್ಕ್ಯಾತರ್ಕ್ಯಶರೀರಾಯ ಬಲಿನೇ ರಂಹಸಾಯ ಚ ।
ಸಿಕತ್ಯಾಯ ಪ್ರವಾಹ್ಯಾಯ ಸ್ಥಿತಾಯ ಪ್ರಸೃತಾಯ ಚ ॥೫೧॥

ಸುಮೇಧಸೇ ಕುಲಾಲಾಯ ನಮಸ್ತೇ ಶಶಿಖಂಡಿನೇ ।
ಚಿತ್ರಾಯ ಚಿತ್ರವೇಷಾಯ ಚಿತ್ರವರ್ಣಾಯ ಮೇಧಸೇ ॥೫೨॥

ಚೇಕಿತಾನಾಯ ತುಷ್ಟಾಯ ನಮಸ್ತೇ ನಿಹಿತಾಯ ಚ ।
ನಮಃ ಕ್ಷಾಂತಾಯ ದಾಂತಾಯ ವಜ್ರಸಂಹನನಾಯ ಚ ॥೫೩॥

ರಕ್ಷೋಘ್ನಾಯ ವಿಷಘ್ನಾಯ ಶಿತಿಕಂಠೋರ್ಧ್ವಮನ್ಯವೇ ।
ಲೇಲಿಹಾಯ ಕೃತಾಂತಾಯ ತಿಗ್ಮಾಯುಧ ಧರಾಯ ಚ ॥೫೪॥

ಪ್ರಮೋದಾಯ ಸಮ್ಮೋದಾಯ ಯತಿವೇದ್ಯಾಯ ತೇ ನಮಃ ।
ಅನಾಮಯಾಯ ಸರ್ವಾಯ ಮಹಾಕಾಲಾಯ ವೈ ನಮಃ ॥೫೫॥

---

೪೯–೫೨. ಅಳತೆಗೆ ಸಿಕ್ಕದವನೂ, ಸರ್ವಸ್ವರೂಪನೂ, ನಾಶರಹಿತನೂ, ರೂಪಗಂಧಾದಿಸ್ವರೂಪನೂ, ಶಾಶ್ವತನೂ, ಅತ್ಯಂತದೊಡ್ಡವನೂ, ಭ್ರಾಂತನಂತಿರುವವನೂ, ಸಕಲಕಾರ್ಯಗಳನ್ನೂ ಮಾಡಿದವನೂ, ತಿಳಿಯಲಸಾಧ್ಯನೂ, ಈಶ್ವರನೂ, ಕ್ರೋಧಸ್ವರೂಪನೂ, ಕಪಿಲವರ್ಣದವನೂ, ತಿಳಿಯಬಹುದಾದ ಮತ್ತೂ, ವಿಚಾರಮಾಡಲಸಾಧ್ಯವಾದ ಶರೀರ ವುಳ್ಳವನೂ, ಬಲ ಮತ್ತು ವೇಗವುಳ್ಳವನೂ, ಮರಳು, ಪ್ರವಾಹ, ಒಂದೆ ಡೆವಾಸ, ಎಲ್ಲೆಡೆಯಲ್ಲಿಯೂ ಪ್ರಸರಿಸಿರುವುದು, ಈಸ್ವರೂಪವುಳ್ಳವನೂ, ಒಳ್ಳೆಯ ಬುದ್ಧಿಯುಳ್ಳವನೂ, ಕುಂಬಾರನಂತಿರುವವನೂ, ಅಥವಾ ಭೂಮಿಯನ್ನು ಸಂತೋಷಪಡಿಸುವವನೂ, ಚಂದ್ರನನ್ನು ಧರಿಸಿದವನೂ ಚಿತ್ರತರವಾದ ವೇಷ ಮತ್ತೂ ಬಣ್ಣಗಳುಳ್ಳ ಬುದ್ಧಿವಂತನಾದ, ನಿನಗೆ, ನಮಸ್ಕಾರವು.

೫೩–೫೬. ತೃಪ್ತಿಯುಳ್ಳವನೂ, ಅತ್ಯಂತ ಹಿತವನ್ನು ಮಾಡುವವನೂ, ಕ್ಷಮಾಗುಣವುಳ್ಳವನೂ, ಇಂದ್ರಿಯನಿಗ್ರಹವುಳ್ಳವನೂ, ವಜ್ರ ದಂತೆ ಶರೀರವುಳ್ಳವನೂ, ರಾಕ್ಷಸರನ್ನೂ, ವಿಷವನ್ನೂ, ನಾಶಮಾಡುವವನೂ, ಶುದ್ಧವಾದ ಕಂಠವುಳ್ಳವನೂ, ಹೊರಗೆ ಕೋಪವನ್ನು

ಪ್ರಣವ ಪ್ರಣವೇಶಾಯ ಭಗನೇತ್ರಾಂತಕಾಯ ಚ ।
ಮೃಗವ್ಯಾಧಾಯ ದಕ್ಷಾಯ ದಕ್ಷಯಜ್ಞಾಂತಕಾಯ ಚ ॥೫೬॥

ಸರ್ವಭೂತಾತ್ಮಭೂತಾಯ ಸರ್ವೇಶಾತಿಶಯಾಯ ಚ ।
ಪುರಘ್ನಾಯ ಸುಶಸ್ತ್ರಾಯ ಧನ್ವಿನೇಽಥ ಪರಶ್ವಥೇ ॥೫೭॥

ಪೂಷದಂತವಿನಾಶಾಯ ಭಗನೇತ್ರಾಂತಕಾಯ ಚ ।
ಕಾಮದಾಯ ವರಿಷ್ಠಾಯ ಕಾಮಾಂಗ ದಹನಾಯ ಚ ॥೫೮॥

ರಂಗೇ ಕರಾಲವಕ್ತ್ರಾಯ ನಾಗೇಂದ್ರವದನಾಯ ಚ ।
ದೈತ್ಯಾನಾಮಂತ ಕೇಶಾಯ ದೈತ್ಯಾಕ್ರಂದಕರಾಯ ಚ ॥೫೯॥

ಹಿಮಘ್ನಾಯ ಚ ತೀಕ್ಷ್ಣಾಯ ಆರ್ದ್ರಚರ್ಮಧರಾಯ ಚ ।
ಶ್ಮಶಾನರತಿನಿತ್ಯಾಯ ನಮೋಽಸ್ತೂಲ್ಮುಕಧಾರಿಣೇ ॥೬೦॥

---

ತೋರಿಸುವವನೂ, ಸರ್ವಸ್ವರೂಪನೂ, ಸಂಹಾರಕರ್ತನೂ, ಕ್ರೂರವಾದ ಆಯುಧವನ್ನು ಧರಿಸಿದವನೂ, ಅತ್ಯಂತವಾದ ಸಂತೋಷವುಳ್ಳವನೂ, ಯತಿಗಳಿಗೂ ತಿಳಿಯಲಸಾಧ್ಯನೂ, ರೋಗವಿಲ್ಲದವನೂ, ಪ್ರಪಂಚಸ್ವರೂಪನೂ, ಕಾಲಸ್ವರೂಪನೂ, ಪ್ರಣವಮಂತ್ರಸ್ವರೂಪನೂ, ಭಗನೆಂಬ ಸೂರ್ಯನ ನೇತ್ರಗಳನ್ನು ನಾಶಮಾಡಿದವನೂ, ಬ್ರಹ್ಮಸ್ವರೂಪವಾದ ಮೃಗವನ್ನು ಹೊಡೆಯತಕ್ಕವನೂ, ಶೂರನೂ, ದಕ್ಷಯಜ್ಞನಾಶಕನೂ, ಆದ ನಿನಗೆ ನಮಸ್ಕಾರವು.

೫೭–೬೦. ಸಮಸ್ತಪ್ರಾಣಿಗಳಿಗೂ ಆತ್ಮಸ್ವರೂಪನಾದ, ಸರ್ವೇಶ್ವರನಿಗಿಂತಲೂ ಶ್ರೇಷ್ಠನಾದ, ತ್ರಿಪುರವನ್ನು ನಾಶಮಾಡಿದ, ಒಳ್ಳೆಯ ಆಯುಧವುಳ್ಳ, ಧನುಸ್ಸನ್ನೂ, ಕೊಡಲಿಯನ್ನೂ, ಆಯುಧವಾಗಿ ಧರಿಸಿದ, ಪೂಷನೆಂಬ ಸೂರ್ಯನ ಹಲ್ಲನ್ನು ನಾಶಮಾಡಿದ, ಭಗನೆಂಬ ಸೂರ್ಯನ ಕಣ್ಣುಗಳನ್ನು ನಾಶಮಾಡಿದ, ಇಷ್ಟಾರ್ಥವನ್ನು ಕೊಡತಕ್ಕ, ಮನ್ಮಥನನ್ನು ದಹನಮಾಡಿದ, ಯುದ್ಧರಂಗದಲ್ಲಿ ಕ್ರೂರವಾದ ಮುಖವುಳ್ಳ, ಆನೆಯ ಮುಖದ ರೂಪವುಳ್ಳವನಾದ, ದೈತ್ಯನಾಶಕನಾದ, ವಿಷ್ಣುವೇ ಮುಂತಾದವರಿಗೆ ಒಡೆಯನಾದ, ಹಿಮವನ್ನು ನಾಶಮಾಡುವ, ಹಸಿಯ ಚರ್ಮವನ್ನು ಹೊದೆದುಕೊಂಡಿರುವ, ಶ್ಮಶಾನವಾಸದಲ್ಲಿ ಪ್ರೀತಿಯುಳ್ಳ, ಕೊಳ್ಳಿಯನ್ನು ಧರಿಸಿದ ನಿನಗೆ ನಮಸ್ಕಾರವು.

ನಮಸ್ತೇ ಪ್ರಾಣಪಾಲಾಯ ಮುಂಡಮಾಲಾಧರಾಯ ಚ ।
ಪ್ರಹೀಣಶೋಕೈರ್ವಿವಿಧೈರ್ಭೂತೈಃ ಪರಿವೃತಾಯ ಚ ॥೬೧॥

ನರನಾರೀ ಶರೀರಾಯ ದೇವ್ಯಾಃ ಪ್ರಿಯಕರಾಯ ಚ ।
ಜಟಿನೇ ಮುಂಡಿನೇ ಚೈವ ವ್ಯಾಲಯಜ್ಞೋಪವೀತಿನೇ ॥೬೨॥

ನಮೋಽಸ್ತು ನೃತ್ಯಶೀಲಾಯ ಉಪನೃತ್ಯಪ್ರಿಯಾಯ ಚ ।
ಮನ್ಯವೇ ಗೀತಶೀಲಾಯ ಮುನಿಭಿರ್ಗಾಯತೇ ನಮಃ ॥೬೩॥

ಕಟಂಕಟಾಯ ತಿಗ್ಮಾಯ ಅಪ್ರಿಯಾಯ ಪ್ರಿಯಾಯ ಚ ।
ವಿಭೀಷಣಾಯ ಭೀಷ್ಮಾಯ ಭಗಪ್ರಮಥನಾಯ ಚ ॥೬೪॥

ಸಿದ್ಧಸಂಘಾನುಗೀತಾಯ ಮಹಾಭಾಗಾಯ ವೈ ನಮಃ ।
ನಮೋ ಮುಕ್ತಾಟ್ಟಹಾಸಾಯ ಕ್ಷ್ವೇಡಿತಾಸ್ಫೋಟಿತಾಯ ಚ ॥೬೫॥

ನರ್ದತೇ ಕೂರ್ದತೇ ಚೈವ ನಮಃ ಪ್ರಮುದಿತಾತ್ಮನೇ ।
ನಮೋ ಮೃಡಾಯ ಶ್ವಸತೇ ಧಾವತೇಽಧಿಷ್ಠಿತೇ ನಮಃ ॥೬೬॥

---

೬೧–೬೪. ಸಕಲಜೀವಿಗಳ ಪ್ರಾಣಗಳನ್ನೂ ಕಾಪಾಡತಕ್ಕ, ತಲೆ ಬುರುಡೆಗಳನ್ನು ಮಾಲೆಯಾಗಿ ಧರಿಸಿರುವ, ದುಃಖವಿಲ್ಲದ, ಅನೇಕ ಭೂತಗಳಿಂದ ಸ್ತುತಿಸಲ್ಪಟ್ಟ, ಪುರುಷಸ್ತ್ರೀ ಉಭಯ ರೂಪದ ಶರೀರವನ್ನು ಧರಿಸಿದ, ಉಮಾದೇವಿಗೆ ಪ್ರೀತಿಯನ್ನುಂಟುಮಾಡುವ, ಜಟೆಯನ್ನು ಧರಿಸಿರುವ, ಸನ್ಯಾಸಿಯಂತಿರುವ, ಸರ್ಪವನ್ನೇ ಯಜ್ಞೋಪವಿತವಾಗಿ ಧರಿಸಿದ, ನರ್ತನದಲ್ಲಾಸಕ್ತನಾದ, ಉಪನರ್ತನಗಳಲ್ಲಿ ಪ್ರೀತಿಯುಳ್ಳವನಾದ, ಕೋಪದಸ್ವಭಾವವುಳ್ಳ, ಸಂಗೀತದಲ್ಲಾಸಕ್ತನಾದ, ಮುನಿಗಳ ಗಾನವನ್ನು ಕೇಳುತ್ತಿರುವ, ಆನೆಯ ಕುಂಭಸ್ಥಳವನ್ನು ಸೀಳುವ ಸಿಂಹಸ್ವರೂಪನಾದ, ಕ್ರೂರರೂಪನೂ, ಶಿಷ್ಟರಿಗೆ ಮತ್ತು ದುಷ್ಟರಿಗೆ ಪ್ರಿಯಾಪ್ರಿಯ ಸ್ವರೂಪನೂ, ಭಯಸ್ವರೂಪನೂ, ಭಗನೆಂಬ ಸೂರ್ಯನನ್ನು ಜಯಿಸಿದವನೂ, ಆದ ನಿನಗೆ ನಮಸ್ಕಾರವು.

೬೫–೬೮. ಸಿದ್ಧರ ಗಾನದಿಂದ ಹೊಗಳಿಸಿಕೊಳ್ಳುವ, ಮಹಾಪುಣ್ಯವಂತನಾದ, ವಿಶೇಷವಾಗಿ ನಗುತ್ತಿರುವ, ಅಣಕಿಸಿ ಗಟ್ಟಿಯಾಗಿ ಧ್ವನಿ ಮಾಡುವ, ಗರ್ಜಿಸುತ್ತ ಸಂತೋಷಪಡುತ್ತಿರುವ, ಮರಣಧರ್ಮವನ್ನುಂಟುಮಾಡುವ, ಉಸಿರನ್ನು ಬಿಡುತ್ತಿರುವ, ಓಡುವಸಮಸ್ತಕ್ಕೂ

ಧ್ಯಾಯತೇ ಜೃಂಭತೇ ಚೈವ ರುದತೇ ದ್ರವತೇ ನಮಃ ।
ವಲ್ಗತೇ ಕ್ರೀಡತೇ ಚೈವ ಲಂಬೋದರ ಶರೀರಿಣೇ ॥೬೭॥

ನಮೋಽಕೃತ್ಯಾಯ ಕೃತ್ಯಾಯ ಮುಂಡಾಯ ವಿಕಟಾಯ ಚ ।
ನಮ ಉನ್ಮತ್ತದೇಹಾಯ ಕಿಂಕಿಣೀಕಾಯ ವೈ ನಮಃ ॥೬೮॥

ನಮೋ ವಿಕೃತವೇಷಾಯ ಕ್ರೂರಾಯಾಮರ್ಷಣಾಯ ಚ ।
ಅಪ್ರಮೇಯಾಯ ಗೋಪ್ತ್ರೇ ಚ ದೀಪ್ತಾಯಾನಿರ್ಗುಣಾಯ ಚ ॥

ವಾಮಪ್ರಿಯಾಯ ವಾಮಾಯ ಚೂಡಾಮಣಿಧರಾಯ ಚ ।
ನಮಸ್ತೋಕಾಯ ತನವೇ ಗುಣೈರಪ್ರಮಿತಾಯ ಚ ॥೭೦॥

ನಮೋ ಗುಣ್ಯಾಯ ಗುಹ್ಯಾಯ ಅಗಮ್ಯ ಗಮನಾಯ ಚ ।
ಲೋಕಧಾತ್ರೀ ತ್ವಿಯಂ ಭೂಮಿಃ ಪಾದೌ ಸಜ್ಜನಸೇವಿತೌ ॥೭೧॥

ಸರ್ವೇಷಾಂ ಸಿದ್ಧಿಯೋಗಾನಾಮಧಿಷ್ಠಾನಂ ತವೋದರಂ ।
ಮಧ್ಯೇಽಂತರಿಕ್ಷಂ ವಿಸ್ತೀರ್ಣಂ ತಾರಾಗಣವಿಭೂಷಿತಂ ॥೭೨॥

---

ಆಶ್ರಯನಾದ, ಧ್ಯಾನಾಸಕ್ತನಾದ, ಆಕಳಿಸುವ, ಅಳುವ, ಕರುಣವನ್ನು ತೋರಿಸುವ, ಚಲಿಸುವ, ಆಟವಾಡುವ, ಗಣಪತಿಯ ಶರೀರವನ್ನು ಧರಿಸಿದ, ಯಾವ ಕಾರ್ಯವೂ, ಇಲ್ಲದವನಾದರೂ ಭಕ್ತಾನುಗ್ರಹಕ್ಕಾಗಿ ಕಾರ್ಯಾಸಕ್ತನಾದ, ವಿಕಾರವಾದ ಸ್ವರೂಪವುಳ್ಳವನಾದ, ಹುಚ್ಚನಂತಿರುವ ಶರೀರವುಳ್ಳ, ಗೆಜ್ಜೆಗಳನ್ನು ಕಟ್ಟಿಕೊಂಡಿರುವ ನಿನಗೆ ನಮಸ್ಕಾರವು.

೬೯–೭೦. ವಿಕಾರವಾದ ವೇಷವನ್ನು ಧರಿಸಿದ, ಕ್ರೂರವಾದ ದ್ವೇಷ ಸ್ವರೂಪನಾದ, ಅಳತೆಗೆ ಸಿಕ್ಕದವನಾದ, ಸಮಸ್ತವನ್ನೂ ರಕ್ಷಿಸುವ, ಪ್ರಕಾಶಸ್ವರೂಪನಾದ, ನಿರ್ಗುಣನಾದ, ಗೌರೀದೇವಿಗೆ ಪ್ರಿಯನೂ, ಸುಂದರನೂ ಆದ, ಚೂಡಾಮಣಿ ಎಂಬ ಆಭರಣವನ್ನು ಧರಿಸಿದ, ಅತ್ಯಂತ ದೊಡ್ಡ ಶರೀರವುಳ್ಳ, ಗುಣಗಳಿಂದ ಅಳತೆಮಾಡಲಸಾಧ್ಯವಾದ, ಅನೇಕ ಸದ್ಗುಣಗಳಿಂದ ಕೂಡಿದ, ಗೋಪ್ಯನಾದ, ತಿಳಿಯಲಸಾಧ್ಯವಾದ ನಡೆವಳಿಕೆಯುಳ್ಳ ನಿನಗೆ ನಮಸ್ಕಾರವು.

೭೧–೭೨. ಇಲ್ಲಿಂದ ಮುಂದೆ ವಿರಾಟ್ಸ್ವರೂಪವನ್ನು ವರ್ಣಿಸುವನು. ಎಲೈ ಶಿವನೇ, ಜನರಿಗೆಲ್ಲರಿಗೂ ತಾಯಿಯಾದ ಈ ಭೂಮಿಯು ಸಜ್ಜನರು ಸೇವಿಸುವ ನಿನ್ನ ಪಾದಗಳಾಗಿರುವುದು. ನಿನ್ನ ಹೊಟ್ಟೆಯು ಸಕಲಸಿದ್ಧಿಗ

ಸ್ವಾತೇಃ ಪಥ ಇವಾಭಾತಿ ಶ್ರೀಮಾನ್ ಹಾರಸ್ತವೋರಸಿ ।
ದಿಶೋ ದಶ ಭುಜಾಸ್ತುಭ್ಯಂ ಕೇಯೂರಾಂಗದ ಭೂಷಿತಾಃ ॥೭೩॥
ವಿಸ್ತೀರ್ಣಪರಿಣಾಹಶ್ಚ ನೀಲಾಂಜನ ಚಯೋಪಮಃ ।
ಕಂಠಸ್ತೇ ಶೋಭತೇ ಶ್ರೀಮಾನ್ ಹೇಮಸೂತ್ರವಿಭೂಷಿತಃ ॥೭೪॥
ದಂಷ್ಟ್ರಾಕರಾಲಂ ದುರ್ಧರ್ಷಮನೌಪಮ್ಯಂ ಮುಖಂ ತಥಾ ।
ಪದ್ಮಮಾಲಾಕೃತೋಷ್ಣೀಷಂ ಶಿರೋ ದ್ಯೌಃ ಶೋಭತೇಽಧಿಕಂ ॥
ದೀಪ್ತಿಃ ಸೂರ್ಯೇ ವಪುಶ್ಚಂದ್ರೇ ಸ್ಥೈರ್ಯಂ ಶೈಲೇಽನಿಲೇ ಬಲಂ।
ಔಷ್ಣ್ಯಮಗ್ನೌ ತಥಾ ಶೈತ್ಯಮಪ್ಸು ಶಬ್ದೋಽಂಬರೇ ತಥಾ ॥೭೬॥
ಅಕ್ಷರಾಂತರನಿಷ್ಪಂದಾದ್ಗುಣಾನೇತಾನ್ವಿದುರ್ಬುಧಾಃ ।
ಜಪೋ ಜಪ್ಯೋ ಮಹಾದೇವೋ ಮಹಾಯೋಗೋ ಮಹೇಶ್ವರಃ ॥

---

ಳಿಗೂ, ಆಶ್ರಯಸ್ಥಾನವಾಗಿರುವುದು. ಸ್ವಾತೀಮುಂತಾದ ನಕ್ಷತ್ರಗಳ ಸಾಲಿನ ಮಾರ್ಗವೇ ನಿನ್ನ ಎದೆಯಲ್ಲಿ ಕಾಂತಿಯುಕ್ತವಾದ ಹಾರವಾಗಿರುವುದು. ಹತ್ತುದಿಕ್ಕುಗಳೂ ತೋಳಬಂದಿ ಮತ್ತು ಭುಜ ಕೀರ್ತಿಗಳಿಂದ ಕೂಡಿದ, ಹತ್ತು ತೋಳುಗಳಾಗಿಯೂ, ಭುಜಗಳಾಗಿಯೂ, ಇರುವುವು.

೭೪–೭೬. ವಿಸ್ತಾರವಾಗಿಯೂ, ದಪ್ಪವಾಗಿಯೂ, ಕಾಡಿಗೆಯ ಗುಡ್ಡದಂತಿರುವ ನಿನ್ನ ಕುತ್ತಿಗೆಯು ಪ್ರಕಾಶಮಾನವಾಗಿ, ಚಿನ್ನದ ಹಾರ ಮತ್ತು ಯಜ್ಞೋಪವೀತದಿಂದ, ಅಲಂಕೃತವಾಗಿರುವುದು. ನಿನ್ನ ಬಾಯಿಯು ಕೋರೆಯ ಹಲ್ಲುಗಳಿಂದ ಭಯಂಕರವಾಗಿ, ಅಸಮಾನವಾಗಿರುವುದು. ನಿನ್ನ ತಲೆಯು ಕಮಲಗಳ ಹಾರದಿಂದ ಮಾಡಿದ ಪಾಗನ್ನು ಧರಿಸಿ ಆಕಾಶದಲ್ಲಿ ವಿಶೇಷವಾಗಿ ಶೋಭಿಸುತ್ತಿರುವುದು. ಸೂರ್ಯನಲ್ಲಿ ಪ್ರಕಾಶವೂ, ಚಂದ್ರನಲ್ಲಿ ಕಾಂತಿಯೂ, ಪರ್ವತದಲ್ಲಿ ಸ್ಥಿರತೆಯೂ, ವಾಯುವಿನಲ್ಲಿಬಲವೂ, ಅಗ್ನಿಯಲ್ಲಿ ಉಷ್ಣತೆಯೂ, ನೀರಿನಲ್ಲಿ ಶೈತ್ಯವೂ, ಆಕಾಶದಲ್ಲಿ ಶಬ್ದವೂ, ನಿನ್ನ ಸ್ವರೂಪಗುಣವಾಗಿರುವುದು.

೭೭–೮೧. ಈ ಗುಣಗಳೆಲ್ಲವೂ, ನಾಶರಹಿತವಾದ ನಿನ್ನ ಸ್ವರೂಪದ ಒಂದಂಶದಿಂದ ಉಂಟಾಗಿರುವುದೆಂದು ವಿದ್ವಾಂಸರು ಹೇಳುವರು. ಇದ

ಪುರೇಶಯೋ ಗುಹಾವಾಸೀ ಖೇಚರೋ ರಜನೀಚರಃ ।
ತಪೋನಿಧಿರ್ಗುಹಗುರುಃ ನಂದನೋ ನಂದವರ್ಧನಃ ॥೭೮॥

ಹಯಶೀರ್ಷಾ ಪಯೋಧಾತಾ ವಿಧಾತಾ ಭೂತಭಾವನಃ ।
ಬೋದ್ಧವ್ಯೋ ಬೋಧಿತಾ ನೇತಾ ದುರ್ಧರ್ಷೋ ದುಷ್ಪ್ರಕಂಪನಃ ॥

ಬೃಹದ್ರಥೋ ಭೀಮಕರ್ಮಾ ಬೃಹತ್ಕೀರ್ತಿರ್ಧನಂಜಯಃ ।
ಘಂಟಾಪ್ರಿಯೋ ಧ್ವಜೀ ಛತ್ರೀ ಪಿನಾಕೀ ಧ್ವಜಿನೀಪತಿಃ ॥೮೦॥

ಕವಚೀ ಪಟ್ಟಿಶೀ ಖಡ್ಗೀ ಧನುರ್ಹಸ್ತಃ ಪರಶ್ವಧೀಃ ।
ಅಘಸ್ಮರೋಽನಘಃ ಶೂರೋ ದೇವರಾಜೋಽರಿಮರ್ದನಃ ॥೮೧॥

ತ್ವಾಂ ಪ್ರಸಾದ್ಯ ಪುರಾಽಸ್ಮಾಭಿರ್ದ್ವಿಷತೋ ನಿಹತಾ ಯುಧಿ ।
ಅಗ್ನಿಃ ಸದಾರ್ಣವಾಂಭಸ್ತ್ವಂ ಪಿಬನ್ನಪಿ ನ ತೃಪ್ಯಸೇ ॥೮೨॥

---

ಲ್ಲದೆ ನೀನು ಜಪಸ್ವರೂಪನೂ, ಧ್ಯಾನವಿಷಯನೂ, ದೊಡ್ಡದೇವನೂ, ದೊಡ್ಡಯೋಗಿಯೂ, ಸರ್ವೇಶ್ವರನೂ, ಶರೀರದಲ್ಲಿ ಹೃದಯಗುಹೆಯಲ್ಲಿ ವಾಸಮಾಡತಕ್ಕವನೂ, ಆಕಾಶದಲ್ಲಿಯೂ, ರಾತ್ರಿಯಲ್ಲಿಯೂ, ಸಂಚರಿಸತಕ್ಕವನೂ, ತಪಸ್ಸಿಗೆ ಗಣಿಯಾದವನೂ, ಗುಹನೆಂಬ ಕುಮಾರಸ್ವಾಮಿಯ ತಂದೆಯೂ, ಸಂತೋಷವನ್ನುಂಟುಮಾಡಿ, ಅದನ್ನು ಹೆಚ್ಚಿಸತಕ್ಕವನೂ, ಕುದುರೆಯ ತಲೆಯುಳ್ಳವನೂ, ನೀರನ್ನು ಸೃಷ್ಟಿಸಿದವನೂ, ಬ್ರಹ್ಮಸ್ವರೂಪನೂ, ಪ್ರಾಣಿಗಳ ಧ್ಯಾನಕ್ಕೆ ಆಶ್ರಯನೂ, ಆಗಿರುವೆ. ಜ್ಞಾನಿಗಳಾದ ಭಕ್ತರುಳ್ಳವನು, ಜ್ಞಾನಸ್ವರೂಪನು, ಸಮಸ್ತ ಪ್ರಪಂಚವನ್ನೂ ನಡೆಯಿಸತಕ್ಕವನು, ಜಯಿಸಲೂ, ಅಲ್ಲಾಡಿಸಲೂ ಅಸಾಧ್ಯನು, ದೊಡ್ಡ ರಥವುಳ್ಳವನು, ಭಯಂಕರವಾದ ಕಾರ್ಯಗಳನ್ನೂ ಮಾಡುವವನು, ವಿಶೇಷವಾದ ಯಶಸ್ಸುಳ್ಳವನು, ಧನವನ್ನು ಜಯಿಸಿದವನು, ಘಂಟೆಯ ಧ್ವನಿಯಲ್ಲಿ ಆಸಕ್ತನಾದವನು, ಧ್ವಜ, ಛತ್ರಿ, ಪಿನಾಕವೆಂಬ ಧನುಸ್ಸು, ಕವಚ, ಪಟ್ಟಿಶ, ಖಡ್ಗ, ಕೊಡಲಿ, ಈ ಆಯುಧಗಳನ್ನು ಧರಿಸಿದವನು, ಪಾಪರಹಿತನು, ಶೂರನು, ದೇವತೆಗಳ ರಾಜನು, ಮತ್ತು ಶತ್ರು ನಾಶಕನು ಆಗಿರುವೆ.

೮೨–೮೪. ನಿನ್ನ ಅನುಗ್ರಹದಿಂದ ಹಿಂದೆ ನಾವು ನಮ್ಮ ಶತ್ರುಗಳನ್ನು ಯುದ್ಧದಲ್ಲಿ ಕೊಂದೆವು. ಬಡಬಾಗ್ನಿಸ್ವರೂಪನಾಗಿ, ನೀನು ಯಾವಾ

ಕ್ರೋಧಾಕಾರಃ ಪ್ರಸನ್ನಾತ್ಮಾ ಕಾಮದಃ ಕಾಮಗಃ ಪ್ರಿಯಃ ।
ಬ್ರಹ್ಮಚಾರೀ ಚಾಗಾಧಶ್ಚ ಬ್ರಹ್ಮಣ್ಯಃ ಶಿಷ್ಟಪೂಜಿತಃ ॥೮೩॥

ದೇವಾನಾಮಕ್ಷಯಃ ಕೋಶಸ್ತ್ವಯಾ ಯಜ್ಞಃ ಪ್ರಕಲ್ಪಿತಃ ।
ಹವ್ಯಂ ತವೇದಂ ವಹತಿ ವೇದೋಕ್ತಂ ಹವ್ಯವಾಹನಃ ।
ಪ್ರೀತೇ ತ್ವಯಿ ಮಹಾದೇವ ವಯಂ ಪ್ರೀತಾ ಭವಾಮಹೇ ॥೮೪॥

ಭವಾನೀಶೋಽನಾದಿ ಮಾಂಸ್ತ್ವಂ ಚ ಸರ್ವ—
ಲೋಕಾನಾಂ ಬ್ರಹ್ಮಕರ್ತಾದಿಸರ್ಗಃ ।
ಸಾಂಖ್ಯಾಃ ಪ್ರಕೃತೇಃ ಪರಮಂ ತ್ವಾಂ ವಿದಿತ್ವಾ
ಕ್ಷೀಣಧ್ಯಾನಾಸ್ತ್ವಾಮಮೃತ್ಯುಂ ವಿಶಂತಿ ॥೮೫॥

---

ಗಲೂ ಸಮುದ್ರದ ನೀರನ್ನು ಕುಡಿಯುತ್ತಿದ್ದರೂ, ತೃಪ್ತನಾಗುವುದಿಲ್ಲ. ಕೋಪದ ಆಕಾರದಿಂದಿದ್ದರೂ, ಸಂತೋಷವಾದ ಮನಸ್ಸುಳ್ಳವನಾಗಿರುವೆ. ಇಷ್ಟಾರ್ಥವನ್ನು ಕೊಡುವ, ಇಷ್ಟಬಂದೆಡೆಗೆ ಹೋಗುವ, ಶಕ್ತಿಯುಳ್ಳವನಾಗಿ ಎಲ್ಲರಿಗೂ ಪ್ರೀತಿಪಾತ್ರನಾಗಿರುವೆ. ಬ್ರಹ್ಮಚಾರಿಯಾಗಿ ದೊಡ್ಡ ಜ್ಞಾನಿಯಾಗಿ, ಶಿಷ್ಟರ ಪೂಜೆಯನ್ನು ಸ್ವೀಕರಿಸುವೆ. ದೇವತೆಗಳಿಗೆ ನಾಶರಹಿತವಾದ ಭಂಡಾರವಾಗಿರುವೆ. ವೇದೋಕ್ತವಾಗಿ ನಿನಗೆ ಸಮರ್ಪಿಸುವ, ಹವಿರ್ಭಾಗವನ್ನು ಈ ಅಗ್ನಿಯು ತೆಗೆದುಕೊಂಡು ಬಂದು ನಿನಗೆ ಕೊಡುವನು. ಓ ಮಹಾದೇವನೇ, ನೀನು ಸಂತುಷ್ಟನಾದರೆ ನಾವೆಲ್ಲರೂ ಸಂತುಷ್ಟರಾಗುವೆವು.

೮೫. ನೀನೇ ಅನಾದಿಯಾದ ಪರಮೇಶ್ವರನು. ನೀನೇ ಬ್ರಹ್ಮಸ್ವರೂಪನಾಗಿ, ಸಮಸ್ತ ಲೊಕಗಳನ್ನೂ ಸೃಷ್ಟಿಮಾಡುವೆ. ಸಾಂಖ್ಯರು (ಜ್ಞಾನಿಗಳು) ನಿನ್ನನ್ನು ಪ್ರಕೃತಿಗಿಂತಲೂ ಶ್ರೇಷ್ಠನಾದ ಪರಮಾತ್ಮನೆಂದು ತಿಳಿದು, ಚಿಂತಾರಹಿತರಾಗಿ, ಮರಣಧರ್ಮವಿಲ್ಲದ ನಿನ್ನಲ್ಲಿ ಐಕ್ಯರಾಗುವರು.

ಯೋಗಾಶ್ಚ ತ್ವಾಂ ಧ್ಯಾಯಿನೋ ನಿತ್ಯಸಿದ್ಧಂ
ಜ್ಞಾತ್ವಾ ಯೋಗಾನ್ ಸಂತ್ಯಜಂತೇ ಪುನಸ್ತಾನ್ ।
ಯೇ ಚಾಪ್ಯನ್ಯೇ ತ್ವಾಂ ಪ್ರಸನ್ನಾ ವಿಶುದ್ಧಾಃ
ಸ್ವಕರ್ಮಭಿಸ್ತೇ ದಿವ್ಯಭೋಗಾ ಭವಂತಿ ॥೮೬॥

ಅಪ್ರಸಂಖ್ಯೇಯತತ್ವಸ್ಯ ಯಥಾ ವಿದ್ಮಃ ಸ್ವಶಕ್ತಿತಃ ।
ಕೀರ್ತಿತಂ ತವ ಮಾಹಾತ್ಮ್ಯಮಪಾರಸ್ಯ ಮಹಾತ್ಮನಃ ॥೮೭॥

ಶಿವೋ ನೋ ಭವ ಸರ್ವತ್ರ ಯೋಽಸಿ ಸೋಽಸಿ ನಮೋಽಸ್ತು ತೇ ।

॥ ಸೂತ ಉವಾಚ ॥

ಯ ಇದಂ ಕೀರ್ತಯೇದ್ಭಕ್ತ್ಯಾ ಬ್ರಹ್ಮನಾರಾಯಣಸ್ತವಂ ॥೮೮॥
ಶ್ರಾವಯೇದ್ವಾ ದ್ವಿಜಾನ್ವಿದ್ವಾನ್ ಶೃಣುಯಾದ್ವಾ ಸಮಾಹಿತಃ ।
ಅಶ್ವಮೇಧಾಯುತಂ ಕೃತ್ವಾ ಯತ್ಫಲಂ ತದವಾಪ್ನುಯಾತ್ ॥೮೯॥

---

೮೬. ನಿನ್ನನ್ನು ಧ್ಯಾನಮಾಡುವ ಯೋಗಿಗಳು, ನೀನು ನಿತ್ಯನು ಮತ್ತು ಸಿದ್ಧನು ಎಂದು ತಿಳಿದುಕೊಂಡು ಆ ಯೋಗವನ್ನು ದಾಟಿ ಬಿಟ್ಟು ಬಿಡುವರು. ನಿನ್ನ ಜ್ಞಾನವಾದ ಮೇಲೆ, ಆಜ್ಞಾನಪ್ರಾಪ್ತಿಗೆ ಸಾಧನವಾದ ಯೋಗವು ಬೇಕಾಗುವುದಿಲ್ಲವೆಂದು ಅಭಿಪ್ರಾಯವು. ನಿನ್ನನ್ನೇ ಭಕ್ತಿಯಿಂದ ಶರಣುಹೊಂದಿದ, ಪರಿಶುದ್ಧರಾದ ಇತರ ಜನರೂ, ತಮ್ಮತಮ್ಮ ಕರ್ಮಗಳಿಂದ ದಿವ್ಯವಾದ ಸುಖಾನುಭವದಲ್ಲಿರುವರು.

೮೭. ಲೆಕ್ಕಮಾಡಲಸಾಧ್ಯವಾದ ತತ್ವಸ್ವರೂಪವುಳ್ಳ ನಿನ್ನ ಅಂತವಿಲ್ಲದ ಮಹಿಮೆಯನ್ನು ನಮ್ಮ ಶಕ್ತಿಯನ್ನನುಸರಿಸಿ ತಿಳಿದಷ್ಟನ್ನು ಹೇಳಿರುವೆವು. ನಮಗೆ ಎಲ್ಲಾ ಸಂದರ್ಭಗಳಲ್ಲಿಯೂ, ಮಂಗಳವನ್ನುಂಟು ಮಾಡು. ಯಾವ ಆತ್ಮಜ್ಞಾನವು ನಮಗಾಗಬೇಕೋ ಆ ಪರಮಾತ್ಮನೇ ನೀನಾಗಿದ್ದೀಯೆ. ನಿನಗೆ ನಮಸ್ಕಾರವು.

೮೮–೮೯. ಸೂತನು ಹೇಳಿದನು: ಈ ಬ್ರಹ್ಮನಾರಾಯಣರು ಮಾಡಿದ ಸ್ತೋತ್ರವನ್ನು ಯಾರು ಭಕ್ತಿಯಿಂದ ಪಠಿಸುವರೋ, ಅಥವಾ ಇತರರಿಗೆ ತಿಳಿಯುವಂತೆ ಹೇಳುವರೋ, ಭಕ್ತಿಯಿಂದ ಕೇಳುವರೋ, ಅವರು ಹತ್ತುಸಾವಿರ ಅಶ್ವಮೇಧ ಯಾಗದ ಫಲವನ್ನು ಹೊಂದುವರು.

ಪಾಪಾಚಾರೋಽಪಿ ಯೋ ಮರ್ತ್ಯಃ ಶೃಣುಯಾಚ್ಛಿವಸನ್ನಿಧೌ ।
ಜಪೇದ್ವಾಽಪಿ ವಿನಿರ್ಮುಕ್ತೋ ಬ್ರಹ್ಮಲೋಕಂ ಸ ಗಚ್ಛತಿ ॥೯೦॥
ಶ್ರಾದ್ಧೇ ವಾ ದೈವಿಕೇ ಕಾರ್ಯೇ ಯಜ್ಞೇ ವಾಽವಭೃಥಾಂತಿಕೇ ।
ಕೀರ್ತಯೇದ್ವಾ ಸತಾಂ ಮಧ್ಯೇ ಸ ಯಾತಿ ಬ್ರಹ್ಮಣೋಽಂತಿಕಂ ॥

**ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಬ್ರಹ್ಮವಿಷ್ಣು ಕೃತ ಶಿವಸ್ತುತಿರ್ನಾಮ ಏಕವಿಂಶೋಽಧ್ಯಾಯಃ**

---

೯೦. ಪಾಪಕಾರ್ಯವನ್ನು ಮಾಡುವ ಮನುಷ್ಯನಾದರೂ, ಶಿವಲಿಂಗದ ಸಮೀಪದಲ್ಲಿ, ಈ ಸ್ತೋತ್ರವನ್ನು ಕೇಳಿದರೂ, ಜಪಮಾಡಿದರೂ, ಪಾಪಗಳಿಂದ ಬಿಡುಗಡೆ ಹೊಂದಿ ಬ್ರಹ್ಮಲೋಕಕ್ಕೆ ಹೋಗುವನು.

೯೧. ಪಿತೃಗಳ ಶ್ರಾದ್ಧದಲ್ಲಾಗಲೀ, ದೇವತಾಕಾರ್ಯಗಳಲ್ಲಾಗಲೀ, ಅವಭೃಥಾಂತವಾದ ಯಜ್ಞಗಳಲ್ಲಾಗಲೀ, ಸಜ್ಜನರ ನಡುವೆಯಾಗಲೀ, ಈ ಸ್ತೋತ್ರವನ್ನು ಹೇಳಿದರೆ, ಅವರು ಬ್ರಹ್ಮನ ಸಮೀಪಕ್ಕೆ ಹೋಗುವರು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಬ್ರಹ್ಮನೂ ವಿಷ್ಣುವೂ ಶಿವನನ್ನು ಸ್ತುತಿಸಿದ ಇಪ್ಪತ್ತೊಂದನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ದ್ವಾವಿಂಶೋಽಧ್ಯಾಯಃ

ದ್ವಾವಿಂಶೇ ವಿಷ್ಣುವಿಧ್ಯೋಶ್ಚ ವರಪ್ರಾಪ್ತಿರ್ಮಹೇಶ್ವರಾತ್ ।
ಸರ್ಪರುದ್ರೋದ್ಭವೋ ಬ್ರಹ್ಮಪ್ರಾಣಪ್ರಾಪ್ತಿರ್ನಿರೂಪ್ಯತೇ ॥

॥ ಸೂತ ಉವಾಚ ॥

ಅತ್ಯಂತಾವನತೌ ದೃಷ್ಟ್ವಾ ಮಧುಪಿಂಗಾಯತೇಕ್ಷಣಃ ।
ಪ್ರಹೃಷ್ಟವದನೋಽತ್ಯರ್ಥಂ ಮಭವತ್ಸತ್ಯಕೀರ್ತನಾತ್ ॥ ೧ ॥

ಉಮಾಪತಿರ್ವಿರೂಪಾಕ್ಷೋ ದಕ್ಷಯಜ್ಞವಿನಾಶನಃ ।
ಪಿನಾಕೀ ಖಂಡಪರಶುಃ ಸುಪ್ರೀತಸ್ತು ತ್ರಿಲೋಚನಃ ॥ ೨ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಇಪ್ಪತ್ತೆರಡನೆಯ ಅಧ್ಯಾಯವು

(ಈ ಇಪ್ಪತ್ತೆರಡನೆಯ ಅಧ್ಯಾಯದಲ್ಲಿ, ಮಹೇಶ್ವರನು ವಿಷ್ಣು ಬ್ರಹ್ಮರಿಗೆ ವರವನ್ನು ಕೊಟ್ಟುದನ್ನೂ, ಸರ್ಪಗಳ ಮತ್ತು ಏಕಾದಶ ರುದ್ರರ ಉತ್ಪತ್ತಿಯೂ, ಬ್ರಹ್ಮನಿಗೆ ಪ್ರಾಣಪ್ರಾಪ್ತಿಯಾದುದೂ, ಇವನ್ನು ವರ್ಣಿಸಲಾಗುವುದು.)

೧-೨. ಸೂತನು ಹೇಳಿದನು: ಜೇನುತುಪ್ಪದ ಬಣ್ಣದಂತೆ ಪಿಂಗಲವರ್ಣವೂ, ವಿಸ್ತಾರವಾದ ಕಣ್ಣುಗಳೂ ಉಳ್ಳ, ಉಮಾದೇವಿಯ ಪತಿಯೂ, ದಕ್ಷನ ಯಜ್ಞವನ್ನು ನಾಶಮಾಡಿದವನೂ, ಪಿನಾಕವೆಂಬ ಧನುಸ್ಸು, ಕೊಡಲಿ ಇವುಗಳನ್ನು ಆಯುಧಗಳಾಗಿ ಧರಿಸಿದವನೂ, ಆದ ಮುಕ್ಕಣ್ಣೇಶನು, ನಿಜವಾದ ಸ್ತೋತ್ರವನ್ನು ಮಾಡಿ, ಭಕ್ತಿಯಿಂದ ತುಂಬ ಬಗ್ಗಿ ನಮಸ್ಕರಿಸಿದ ವಿಷ್ಣುಬ್ರಹ್ಮರನ್ನು ನೋಡಿ, ಅತ್ಯಂತ ಸಂತೋಷವನ್ನು ಹೊಂದಿದನು.

ತತಃ ಸ ಭಗವಾನ್ದೇವಃ ಶ್ರುತ್ವಾ ವಾಗಮೃತಂ ತಯೋಃ ।
ಜಾನನ್ನಪಿ ಮಹಾದೇವಃ ಕ್ರೀಡಾಪೂರ್ವಮಥಾಬ್ರವೀತ್ ॥ ೩ ॥
ಕೌ ಭವಂತೌ ಮಹಾತ್ಮಾನೌ ಪರಸ್ಪರಹಿತೈಷಿಣೌ ।
ಸಮೇತಾವಂಬುಜಾಭಾಕ್ಷಾವಸ್ಮಿನ್ ಘೋರೇ ಮಹಾಪ್ಲವೇ ॥ ೪ ॥
ತಾವೂಚತುರ್ಮಹಾತ್ಮಾನೌ ಸನ್ನಿರೀಕ್ಷ್ಯ ಪರಸ್ಪರಂ ।
ಭಗವನ್ ಕಿಂತು ಯತ್ತೇಽದ್ಯ ನ ವಿಜ್ಞಾತಂ ತ್ವಯಾ ವಿಭೋ ॥ ೫ ॥
ವಿಭೋ ರುದ್ರ ಮಹಾಮಾಯ ಇಚ್ಛಯಾ ವಾಂ ಕೃತೌ ತ್ವಯಾ ।
ತಯೋಸ್ತದ್ವಚನಂ ಶ್ರುತ್ವಾ ಅಭಿನಂದ್ಯಾಭಿಮಾನ್ಯ ಚ ॥ ೬ ॥
ಉವಾಚ ಭಗವಾನ್ದೇವೋ ಮಧುರಂ ಶ್ಲಕ್ಷ್ಣಯಾ ಗಿರಾ ।
ಭೋ ಭೋ ಹಿರಣ್ಯಗರ್ಭ ತ್ವಾಂ ತ್ವಾಂ ಚ ಕೃಷ್ಣ ಬ್ರವೀಮ್ಯಹಂ ॥

---

೩. ಆಮೇಲೆ ಷಡ್ಗುಣೈಶ್ವರ್ಯ ಸಂಪನ್ನನಾದ ಮಹಾದೇವನು, ಅಮೃತಕ್ಕೆ ಸಮಾನವಾದ ಅವರ ಮಾತನ್ನು ಕೇಳಿ ತಾನು ತಿಳಿದವನಾದರೂ, ಆಟಕ್ಕಾಗಿ ಅವರಿಗೆ ಹೀಗೆ ಹೇಳಿದನು.

೪. ಒಬ್ಬರಿಗೊಬ್ಬರಿಗೆ ಹಿತವನ್ನು ಕೋರುತ್ತಿರುವ, ಕಮಲದಂತೆ ಕಣ್ಣುಗಳುಳ್ಳ ನೀವಿಬ್ಬರೂ ಈ ಭಯಂಕರವಾದ ದೊಡ್ಡ ಸಾಗರದಲ್ಲಿ ಸೇರಿರುವಿರಿ! ನೀವಿಬ್ಬರೂ ಯಾರು? ಎಂದು ಪ್ರಶ್ನೆಮಾಡಿದನು.

೫. ಅವರಿಬ್ಬರೂ ಹೇಳಿದರು: ಮಹಾಮಹಿಮರಾದ ಬ್ರಹ್ಮ ವಿಷ್ಣುಗಳು, ಒಬ್ಬರನ್ನೊಬ್ಬರು ನೋಡುತ್ತಾ, ಓ ಷಡ್ಗುಣೈಶ್ವರ್ಯ ಸಂಪನ್ನನಾದ ಶಿವನೇ, ಸರ್ವವ್ಯಾಪಿಯಾದ ನೀನು ಕಾಣೆಯಾ? ಮಹಾಮಾಯಾಸಹಿತನಾದ ರುದ್ರನೇ, ನಿನ್ನ ಇಚ್ಛೆಯಿಂದ ನಾವಿಬ್ಬರೂ ಹುಟ್ಟಿರುವೆವು. ನೀನೇ ನಮ್ಮನ್ನು ಸೃಷ್ಟಿಸಿರುವೆ, ಎಂದರು.

೬. ಮಹಾಮಹಿಮನಾದ ಶಿವನು, ಅವರಿಬ್ಬರ ಮಾತನ್ನೂ ಕೇಳಿ, ಅವರಿಗೆ ಗೌರವವನ್ನು ಮಾಡಿ, ಶ್ಲಾಘಿಸಿ, ಕೇಳುವುದಕ್ಕೆ ಇಂಪಾದ ಮೃದುವಾದ ಮಾತಿನಿಂದ ಅವರನ್ನು ಕುರಿತು ಹೇಳಿದನು.

೭–೮. ಎಲೈ ಹಿರಣ್ಯಗರ್ಭನೇ, ಎಲೈ ವಿಷ್ಣುವೇ, ನಾಶರಹಿತವಾದ ನಿಮ್ಮ ಭಕ್ತಿಗೆ ನಾನು ಸಂತುಷ್ಟನಾಗಿರುವೆನು. ನನ್ನ ಮನಸ್ಸಿಗೆ

ಪ್ರೀತೋ ಹಮನಯಾ ಭಕ್ತ್ಯಾ ಶಾಶ್ವತಾಕ್ಷರಯುಕ್ತಯಾ ।
ಭವಂತೌ ಹೃದಯಸ್ಯಾಸ್ಯ ಮಮ ಹೃದ್ಯತರಾವು ಭೌ ॥ ೮ ॥

ಯುವಾಭ್ಯಾಂ ಕಿಂ ದದಾಮ್ಯದ್ಯ ವರಾಣಾಂ ವರಮೀಪ್ಸಿತಂ ।
ಅಥೋವಾಚ ಮಹಾಭಾಗೋ ವಿಷ್ಣುರ್ಭವಮಿದಂ ವಚಃ ॥ ೯ ॥

ಸರ್ವಂ ಮಮ ಕೃತಂ ದೇವ ಪರಿತುಷ್ಟೋಽಸಿ ಮೇ ಯದಿ ।
ತ್ವಯಿ ಮೇ ಸುಪ್ರತಿಷ್ಠಾ ತು ಭಕ್ತಿರ್ಭವತು ಶಂಕರ ॥೧೦॥

ಏವಮುಕ್ತಸ್ತು ವಿಜ್ಞಾಯ ಸಂಭಾವಯತ ಕೇಶವಂ ।
ಪ್ರದದೌ ಚ ಮಹಾದೇವೋ ಭಕ್ತಿಂ ನಿಜಪದಾಂಬುಜೇ ॥೧೧॥

ಭವಾನ್ಸರ್ವಸ್ಯ ಲೋಕಸ್ಯ ಕರ್ತಾ ತ್ವಮಧಿದೈವತಂ ।
ತದೇವಂ ಸ್ವಸ್ತಿ ತೇ ವತ್ಸ ಗಮಿಷ್ಯಾಮ್ಯಂಬುಜೇಕ್ಷಣ ॥೧೨॥

ಏವಮುಕ್ತ್ವಾ ತು ಭಗವಾನ್ಬ್ರಹ್ಮಾಣಂ ಚಾಪಿ ಶಂಕರಃ ।
ಅನುಗೃಹ್ಯಾಽಸ್ಪೃಶದ್ದೇವೋ ಬ್ರಹ್ಮಾಣಂ ಪರಮೇಶ್ವರಃ ॥೧೩॥

---

ನೀವಿಬ್ಬರೂ, ಮನೋಹರರಾಗಿರುವಿರಿ. ನಿಮಗೆ ಇಷ್ಟವಾದ ಯಾವ ವರವನ್ನು ಕೊಡಲಿ? ಎಂದು ಕೇಳಿದನು.

೯–೧೦. ಆಮೇಲೆ ವಿಷ್ಣುವು ಈಶ್ವರನನ್ನು ಕುರಿತು, ಓ ದೇವನೇ, ನೀನು ನನ್ನ ವಿಷಯದಲ್ಲಿ, ಸಂತೋಷವನ್ನು ಹೊಂದಿದರೆ ಎಲ್ಲವೂ ನನಗೆ ಬಂದಂತಾಯಿತು. ಓ ಶಂಕರನೇ, ನಿನ್ನಲ್ಲಿ ನನಗೆ ಶಾಶ್ವತವಾದ ಭಕ್ತಿಯುಂಟಾಗಲಿ. ಎಂದನು.

೧೧–೧೨. ಮಹಾದೇವನು ವಿಷ್ಣುವಿನ ಮಾತನ್ನು ಕೇಳಿ, ಅವನನ್ನು ಶ್ಲಾಘಿಸಿ, ತನ್ನ ಪಾದಕಮಲದ ಭಕ್ತಿಯನ್ನು ಅವನಿಗೆ ಕೊಟ್ಟು, ನೀನು ಸಕಲ ಲೋಕಗಳನ್ನೂ ಸೃಷ್ಟಿಸಿ, ಆ ಲೋಕಗಳಿಗೆಲ್ಲಕ್ಕೂ ನೀನೇ ದೇವನಾಗಿರು. ನಿನಗೆ ಮಂಗಳವಾಗಲಿ. ನಾನು ಹೋಗಿಬರುತ್ತೇನೆ. ಎಂದನು.

೧೩–೧೪. ಶಂಕರನು ಹೀಗೆಂದು ವಿಷ್ಣುವಿಗೆ ಹೇಳಿ, ಬ್ರಹ್ಮನಿಗೂ ಅನುಗ್ರಹಮಾಡಿ, ಮಂಗಳಕರವಾದ ತನ್ನ ಕೈಗಳಿಂದ ಅವನನ್ನು ಮುಟ್ಟಿ, ಹೇಳಿದನು. ಎಲೈ ಪ್ರೀತಿಪಾತ್ರನಾದ ಬ್ರಹ್ಮನೇ, ನೀನು ನನಗೆ ಸಮ

ಕರಾಭ್ಯಾಂ ಸುಶುಭಾಭ್ಯಾಂ ಚ ಪ್ರಾಹ ಹೃಷ್ಟತರಃ ಸ್ವಯಂ ।
ಮತ್ಸಮಸ್ತ್ವಂ ನ ಸಂದೇಹೋ ವತ್ಸ ಭಕ್ತಶ್ಚ ಮೇ ಭವಾನ್ ॥೧೪॥
ಸ್ವಸ್ತ್ಯಸ್ತು ತೇ ಗಮಿಷ್ಯಾಮಿ ಸಂಜ್ಞಾ ಭವತು ಸುವ್ರತ ।
ಏವಮುಕ್ತ್ವಾ ತು ಭಗವಾನ್ ತತೋಽಂತರ್ಧಾನಮೀಶ್ವರಃ ॥೧೫॥
ಗತವಾನ್ಗಣಪೋ ದೇವಃ ಸರ್ವದೇವನಮಸ್ಕೃತಃ ।
ಅವಾಪ್ಯ ಸಂಜ್ಞಾಂ ಗೋವಿಂದಾತ್ಪದ್ಮಯೋನಿಃ ಪಿತಾಮಹಃ ॥೧೬॥
ಪ್ರಜಾಃ ಸ್ರಷ್ಟುಮನಾಶ್ಚಕ್ರೇ ತಪ ಉಗ್ರಂ ಪಿತಾಮಹಃ ।
ತಸ್ಯೈವಂ ತಪ್ಯಮಾನಸ್ಯ ನ ಕಿಂಚಿತ್ಸಮವರ್ತತ ॥೧೭॥
ತತೋ ದೀರ್ಘೇಣ ಕಾಲೇನ ದುಃಖಾತ್ಕ್ರೋಧೋ ಹ್ಯಜಾಯತ ।
ಕ್ರೋಧಾವಿಷ್ಟಸ್ಯ ನೇತ್ರಾಭ್ಯಾಂ ಪ್ರಾಪತನ್ನಶ್ರುಬಿಂದವಃ ॥೧೮॥
ತತಸ್ತೇಭ್ಯೋಽಶ್ರುಬಿಂದುಭ್ಯೋ ವಾತಪಿತ್ತಕಫಾತ್ಮಕಾಃ ।
ಮಹಾಭಾಗಾ ಮಹಾಸತ್ವಾಃ ಸ್ವಸ್ತಿಕೈರಪ್ಯಲಂಕೃತಾಃ ॥೧೯॥

---

ನಾದವನು, ಮತ್ತೂ, ನನ್ನ ಭಕ್ತನು. ಇದರಲ್ಲಿ ಸಂದೇಹವಿಲ್ಲ. ನಿನಗೆ ಮಂಗಳವಾಗಲಿ, ನಾನು ಹೋಗಿಬರುತ್ತೇನೆ. ನಿನಗೆ ಜ್ಞಾನವುಂಟಾಗಲಿ.

೧೫. ಹೀಗೆಂದು ಹೇಳಿ ದೇವಗಣಗಳಿಗೆ ಪತಿಯಾದ, ಸಕಲದೇವತೆಗಳಿಂದಲೂ ನಮಸ್ಕರಿಸಿಕೊಳ್ಳುವ, ಈಶ್ವರನು ಅಂತರ್ಧಾನನಾದನು.

೧೬–೧೭. ಕಮಲದಲ್ಲಿ ಹುಟ್ಟಿದ ಬ್ರಹ್ಮನು, ನಾರಾಯಣನಿಂದ ಜ್ಞಾನವನ್ನು ಪಡೆದು, ಪ್ರಜೆಗಳನ್ನು ಸೃಷ್ಟಿಮಾಡಬೇಕೆಂಬ ಮನಸ್ಸಿನಿಂದ ಕ್ರೂರವಾದ ತಪಸ್ಸನ್ನುಮಾಡಿದನು. ಹೀಗೆ ತಪಸ್ಸುಮಾಡಿದರೂ ಅವನಿಗೆ ಯಾವ ಫಲವೂ ಆಗಲಿಲ್ಲ.

೧೮. ಬಹಳಕಾಲ ತಪಸ್ಸುಮಾಡಿದ ಬ್ರಹ್ಮನಿಗೆ, ದುಃಖವುಂಟಾಯಿತು. ಆ ಮೇಲೆ ಕೋಪವೂ ಉಂಟಾಯಿತು. ಆ ಕೋಪದಿಂದ ಕೂಡಿದ ಅವನ ಕಣ್ಣುಗಳಿಂದ ನೀರಿನ ಹನಿಗಳು ಬಂದುವು.

೧೯. ಆಮೇಲೆ ಆ ಕಣ್ಣೀರಿನ ಹನಿಗಳಿಂದ ವಾತಪಿತ್ತಕಫ ರೂಪವಾದ, 'ಮಹಾಮಹಿಮೆಯೂ ಮಹಾಬಲವೂ ಉಳ್ಳ ಸ್ವಸ್ತಿಕವೆಂಬ ಚಿನ್ಹೆಯಿಂದ ಕೂಡಿದ ಮಹಾ ವಿಷವುಳ್ಳ ಸರ್ಪಗಳು ಹುಟ್ಟಿದುವು.

ಪ್ರಕೀರ್ಣಕೇಶಾಃ ಸರ್ಪಾಸ್ತೇ ಪ್ರಾದುರ್ಭೂತಾ ಮಹಾವಿಷಾಃ ।
ಸರ್ಪಾಂಸ್ತಾನಗ್ರತೋ ದೃಷ್ಟ್ವಾ ಬ್ರಹ್ಮಾಽಽತ್ಮಾನಮನಿಂದಯತ್ ॥
ಅಹೋ ಧಿಕ್ತಪಸೋ ಮಹ್ಯಂ ಫಲಮೀದೃಶಕಂ ಯದಿ ।
ಲೋಕವೈನಾಶಿಕೇ ಜಜ್ಞೇ ಆದಾವೇವ ಪ್ರಜಾ ಮಮ ॥೨೧॥
ತಸ್ಯ ತೀವ್ರಾಽಭವನ್ಮೂರ್ಛಾ ಕ್ರೋಧಾಮರ್ಷಸಮುದ್ಭವಾ ।
ಮೂರ್ಛಾಭಿಪರಿತಾಪೇನ ಜಹೌ ಪ್ರಾಣಾನ್ಪ್ರಜಾಪತಿಃ ॥೨೨॥
ತಸ್ಯಾಪ್ರತಿಮವೀರ್ಯಸ್ಯ ದೇಹಾತ್ಕಾರುಣ್ಯ ಪೂರ್ವಕಂ ।
ಅಥೈಕಾದಶ ತೇ ರುದ್ರಾ ರುದಂತೋಽಭ್ಯಕ್ರಮಂಸ್ತಥಾ ॥೨೩॥
ರೋದನಾತ್ಖಲು ರುದ್ರತ್ವಂ ತೇಷು ವೈ ಸಮಜಾಯತ ।
ಯೇ ರುದ್ರಾಸ್ತೇ ಖಲು ಪ್ರಾಣಾ ಯೇ ಪ್ರಾಣಾಸ್ತೇ ತದಾತ್ಮಕಾಃ ॥
ಪ್ರಾಣಾಃ ಪ್ರಾಣವತಾಂ ಜ್ಞೇಯಾಃ ಸರ್ವಭೂತೇಷ್ವವಸ್ಥಿತಾಃ ।
ಅತ್ಯುಗ್ರಸ್ಯ ಮಹತ್ವಸ್ಯ ಸಾಧುರಾಚರಿತಸ್ಯ ಚ ॥೨೫॥

---

೨೦–೨೧. ಬ್ರಹ್ಮನು ಆ ಸರ್ಪಗಳನ್ನು ನೋಡಿ, ಅಯ್ಯೋ, ನನ್ನ ತಪಸ್ಸಿನ ಫಲವು ಈರೀತಿಯಾಯಿತು! ಸೃಷ್ಟಿಯ ಆದಿಯಲ್ಲಿಯೇ ನನಗೆ ಲೋಕನಾಶವನ್ನುಂಟುಮಾಡುವ, ಈ ಪ್ರಜೆಗಳು ಹುಟ್ಟಿದರು! ಎಂದು ತನ್ನನ್ನು ತಾನು ನಿಂದಿಸಿಕೊಂಡನು.

೨೨–೨೩. ಕೋಪದಿಂದಲೂ, ದ್ವೇಷದಿಂದಲೂ, ಆ ಬ್ರಹ್ಮನಿಗೆ ಮೂರ್ಛೆಯು ಪ್ರಾಪ್ತವಾಯಿತು, ಆ ಮೂರ್ಛೆಯಿಂದ ಬ್ರಹ್ಮನು ಪ್ರಾಣತ್ಯಾಗಮಾಡಿದನು. ಮಹಾಪರಾಕ್ರಮಿಯಾದ ಆ ಬ್ರಹ್ಮನ ದೇಹದಿಂದ ಅಳುತ್ತಿರುವ ಏಕಾದಶರುದ್ರರು ಹೊರಟರು.

೨೪. ರೋದನಮಾಡಿದುದರಿಂದ ರುದ್ರರೆಂಬುದಾಗಿ, ಆ ವ್ಯಕ್ತಿಗಳಿಗೆ ಹೆಸರುಬಂದಿತು. ಏಕಾದಶರುದ್ರರೇ ಬ್ರಹ್ಮನ ಪ್ರಾಣಗಳು. ಆ ಪ್ರಾಣಗಳು ರುದ್ರಸ್ವರೂಪಗಳು.

೨೫. ಪ್ರಾಣವುಳ್ಳ ಸಮಸ್ತಭೂತಗಳಲ್ಲಿರುವ ಪ್ರಾಣಗಳೂ ರುದ್ರಸ್ವರೂಪವಾದವುಗಳೇ. ಅತಿಕ್ರೂರತೆ, ಮಹಿಮೆ, ಸದಾಚಾರ, ಇವುಗಳನ್ನು ಅಭ್ಯಾಸದಲ್ಲಿಟ್ಟುಕೊಂಡಿರುವ ತ್ರಿಶೂಲವನ್ನು ಧರಿಸಿದ ನೀಲಲೋಹಿತನು ಮತ್ತೆ ಆ ಬ್ರಹ್ಮನಿಗೆ ಪ್ರಾಣಗಳನ್ನು ಕೊಟ್ಟನು.

**ಪ್ರಾಣಾಂಸ್ತಸ್ಯ ದದೌ ಭೂಯಃ ತ್ರಿಶೂಲೀ ನೀಲಲೋಹಿತಃ ।**
**ಲಬ್ಧ್ವಾಽಸೂನ್ಭಗವಾನ್ಬ್ರಹ್ಮಾ ದೇವದೇವಮುಮಾಪತಿಂ ॥೨೬॥**
**ಪ್ರಣಮ್ಯ ಸಂಸ್ಥಿತೋಽಪಶ್ಯದ್ಗಾಯತ್ರ್ಯಾ ವಿಶ್ವಮೀಶ್ವರಂ ।**
**ಸರ್ವಲೋಕಮಯಂ ದೇವಂ ದೃಷ್ಟ್ವಾಸ್ತುತ್ವಾ ಪಿತಾಮಹಃ ॥೨೭॥**
**ತತೋ ವಿಸ್ಮಯಮಾಪನ್ನಃ ಪ್ರಣಿಪತ್ಯ ಮುಹುರ್ಮುಹುಃ ।**
**ಉವಾಚ ವಚನಂ ಶರ್ವಂ ಸದ್ಯಾದಿತ್ವಂ ಕಥಂ ವಿಭೋ ॥೨೮॥**

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ರುದ್ರೋತ್ಪತ್ತಿರ್ವರ್ಣನಂ ನಾಮ ದ್ವಾವಿಂಶೋಽಧ್ಯಾಯಃ

---

೨೬–೨೭. ಮಹಾಮಹಿಮನಾದ ಬ್ರಹ್ಮನು ಪ್ರಾಣವನ್ನು ಹೊಂದಿ, ಉಮಾಪತಿಯೂ ದೇವತೆಗಳಿಗೆ ದೇವನೂ ಆದ ವಿಶ್ವರೂಪಿಯಾದ ಈಶ್ವರನಿಗೆ ನಮಸ್ಕಾರವನ್ನು ಮಾಡಿ, ಸರ್ವಲೋಕಸ್ವರೂಪನಾದ ಅವನನ್ನು ನೋಡಿ, ಸ್ತೋತ್ರಮಾಡಿ, ರುದ್ರಗಾಯತ್ರೀಮಂತ್ರದಿಂದ ಅವನ ದರ್ಶನವನ್ನು ಮಾಡಿದನು.

೨೮. ಆ ಮೇಲೆ ಆಶ್ಚರ್ಯವನ್ನು ಹೊಂದಿ ಬ್ರಹ್ಮನು ಮತ್ತೆ ಮತ್ತೆ ನಮಸ್ಕಾರವನ್ನು ಮಾಡಿ, ಆ ಶಿವನನ್ನು ಕುರಿತು, ಓ ಸರ್ವವ್ಯಾಪಿಯಾದ ಪರಮೇಶ್ವರನೇ, ನಿನಗೆ ಸದ್ಯೋಜಾತಾದಿ ರೂಪವು ಹೇಗೆ ಉಂಟಾಯಿತು? ಎಂದು ಪ್ರಶ್ನೆಮಾಡಿದನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಇಪ್ಪತ್ತೆರಡನೆಯ ಅಧ್ಯಾಯವು ಮುಗಿದುದು.

*

## ಅಥ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ ತ್ರಯೋವಿಂಶೋಽಧ್ಯಾಯಃ

ತ್ರಯೋವಿಂಶೇ ವರ್ಣ್ಯತೇ ಚ ಬ್ರಹ್ಮಪ್ರಶ್ನಾನು ರೋಧತಃ ।
ಸದ್ಯಾದಿ ಸಂಭವಃ ಪುಣ್ಯೋ ಗಾಯತ್ರ್ಯಾ ಮಹಿಮಾಽದ್ಭುತಃ ॥

॥ ಸೂತ ಉವಾಚ ॥

ತಸ್ಯ ತದ್ವಚನಂ ಶ್ರುತ್ವಾ ಬ್ರಹ್ಮಣೋ ಭಗವಾನ್ ಭವಃ ।
ಬ್ರಹ್ಮರೂಪೀ ಪ್ರಬೋಧಾರ್ಥಂ ಬ್ರಹ್ಮಾಣಂ ಪ್ರಾಹ ಸಸ್ಮಿತಂ ॥ ೧ ॥

ಶ್ವೇತಕಲ್ಪೋ ಯದಾ ಹ್ಯಾಸೀದಹಮೇವ ತದಾಽಭವಂ ।
ಶ್ವೇತೋಷ್ಣೀಷಃ ಶ್ವೇತಮಾಲ್ಯಃ ಶ್ವೇತಾಂಬರಧರಃ ಸಿತಃ ॥ ೨ ॥

ಶ್ವೇತಾಸ್ಥಿಃ ಶ್ವೇತರೋಮಾ ಚ ಶ್ವೇತಾಸೃಕ್ ಶ್ವೇತಲೋಹಿತಃ ।
ತೇನ ನಾಮ್ನಾ ಚ ವಿಖ್ಯಾತಃ ಶ್ವೇತಕಲ್ಪಸ್ತದಾಽಹ್ಯಸೌ ॥ ೩ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಇಪ್ಪತ್ತುಮೂರನೆಯ ಅಧ್ಯಾಯವು.

(ಈ ಇಪ್ಪತ್ತುಮೂರನೆಯ ಅಧ್ಯಾಯದಲ್ಲಿ ಬ್ರಹ್ಮನ ಪ್ರಶ್ನೆಗಳಿಗನುಸಾರವಾಗಿ, ಈಶ್ವರನ, ಸದ್ಯೋಜಾತಾದಿ ಅವತಾರಗಳೂ, ಗಾಯತ್ರೀ ಮಂತ್ರದ ಮಹಿಮೆಯೂ, ಇವನ್ನು ವರ್ಣಿಸಲಾಗುವುದು.)

೧. ಸೂತನು ಹೇಳಿದನು: ಮಹಾಮಹಿಮನಾದ, ಪರಬ್ರಹ್ಮಸ್ವರೂಪನಾದ, ಶಿವನು ಆ ಬ್ರಹ್ಮನ ಮಾತನ್ನು ಕೇಳಿ, ಅವನಿಗೆ ಜ್ಞಾನವನ್ನುಂಟುಮಾಡುವುದಕ್ಕಾಗಿ ನಗುತ್ತಾ, ಹೇಳಿದನು.

೨-೩. ಶ್ವೇತವೆಂಬ ಕಲ್ಪವು ಪ್ರಾರಂಭವಾದಾಗ ನಾನೇ ತಲೆಯ ಪಾಗು, ಹೂವು, ಹೊದೆಯುವ ವಸ್ತ್ರ, ಮೂಳೆ, ಕೂದಲು, ರಕ್ತ ಇವುಗಳೆಲ್ಲವುಗಳಲ್ಲೂ ಹೊಸದಾದ ಬಿಳಿಯ ಬಣ್ಣಗಳಿಂದ ಕೂಡಿದವನಾಗಿದ್ದೆನು. ಅದೇ ಹೆಸರಿನಿಂದ ಪ್ರಸಿದ್ಧವಾಗಿ ಆ ಕಾಲವು ಶ್ವೇತಕಲ್ಪವೆಂದಾಯಿತು.

ಮತ್ಪ್ರಸೂತಾ ಚ ದೇವೇಶೀ ಶ್ವೇತಾಂಗಾ ಶ್ವೇತಲೋಹಿತಾ ।
ಶ್ವೇತವರ್ಣಾ ತದಾ ಹ್ಯಾಸೀದ್ಗಾಯತ್ರೀ ಬ್ರಹ್ಮಸಂಜ್ಞಿತಾ ॥ ೪ ॥
ತಸ್ಮಾದಹಂ ಚ ದೇವೇಶ ತ್ವಯಾ ಗುಹ್ಯೇನ ವೈ ಪುನಃ ।
ವಿಜ್ಞಾತಃ ಸ್ವೇನ ತಪಸಾ ಸದ್ಯೋಜಾತತ್ವಮಾಗತಃ ॥ ೫ ॥
ಸದ್ಯೋಜಾತೇತಿ ಬ್ರಹ್ಮೈತದ್ಗುಹ್ಯಂ ಚೈತತ್ಪ್ರಕೀರ್ತಿತಂ ।
ತಸ್ಮಾದ್ಗುಹ್ಯತ್ವಮಾಪನ್ನಂ ಯೇ ವೇತ್ಸ್ಯಂತಿ ದ್ವಿಜಾತಯಃ ॥ ೬ ॥
ಮತ್ಸಮೀಪಂ ಗಮಿಷ್ಯಂತಿ ಪುನರಾವೃತ್ತಿದುರ್ಲಭಂ ।
ಯದಾ ಚೈವ ಪುನಸ್ತ್ವಾಸೀಲ್ಲೋಹಿತೋ ನಾಮ ನಾಮತಃ ॥ ೭ ॥
ಮತ್ಕೃತೇನ ಚ ವರ್ಣೇನ ಕಲ್ಪೋ ವೈ ಲೋಹಿತಃ ಸ್ಮೃತಃ ।
ತದಾ ಲೋಹಿತಮಾಂಸಾಸ್ಥಿ ಲೋಹಿತಕ್ಷೀರಸಂಭವಾ ॥ ೮ ॥
ಲೋಹಿತಾಕ್ಷೀ ಸ್ತನವತೀ ಗಾಯತ್ರೀ ಗೌಃ ಪ್ರಕೀರ್ತಿತಾ ।
ತತೋಽಸ್ಯಾ ಲೋಹಿತತ್ವೇನ ವರ್ಣಸ್ಯ ಚ ವಿಪರ್ಯಯಾತ್ ॥ ೯ ॥

---

೪–೫. ನನ್ನಿಂದ ಉತ್ಪನ್ನಳಾದ ದೇವಿಯೂ ಕೂಡ ಬೆಳ್ಳಗಿರುವ ಅವಯವಗಳುಳ್ಳವಳಾಗಿ, ಬಿಳಿಯಬಣ್ಣದ ಬ್ರಹ್ಮವೆಂಬ ಗಾಯತ್ರೀ ಮಂತ್ರದ ದೇವತೆಯಾದಳು. ಆದುದರಿಂದಲೇ ಎಲೈ ಬ್ರಹ್ಮನೇ, ನೀನು ತಪಸ್ಸಿನಿಂದ ನನ್ನನ್ನು ತಿಳಿದೆ. ಬಳಿಕ ನಾನು ಸದ್ಯೋಜಾತ ನೆಂಬ ಹೆಸರನ್ನು ಪಡೆದೆನು.

೬. ಸದ್ಯೋಜಾತನೆಂಬ ಬ್ರಹ್ಮನ ಉತ್ಪತ್ತಿಯ ವಿಷಯವು ಅತ್ಯಂತ ಗೋಪ್ಯವಾದುದು. ಈ ಗೋಪ್ಯವಾದ ವಿಷಯವನ್ನು (ಸದ್ಯೋ ಜಾತಮಂತ್ರವನ್ನು) ಯಾವ ಬ್ರಾಹ್ಮಣರು ತಿಳಿಯುವರೋ ಅವರು ಪುನರ್ಜನ್ಮವಿಲ್ಲದ, ಸದ್ಯೋಜಾತ ಬ್ರಹ್ಮಸ್ವರೂಪನಾದ, ನನ್ನ ಸಾಮೀ ಪ್ಯವನ್ನು ಪಡೆಯುವರು.

೭–೯. ಮತ್ತೆ ಲೋಹಿತವೆಂಬ ಕಲ್ಪವು ಪ್ರಾರಂಭವಾದಾಗ, ಬಣ್ಣದಿಂದ ಕೆಂಪಾದ, ಮಾಂಸ, ಮೂಳೆ, ಕಣ್ಣುಗಳು, ಹಾಲುಳ್ಳಸ್ತನ ಗಳು, ಇವುಗಳಿಂದ ಕೂಡಿದ ಗಾಯತ್ರೀದೇವಿಯು ಗೋ ರೂಪವನ್ನು ಧರಿಸಿದಳು. ನಾನು ಈ ವರ್ಣವ್ಯತ್ಯಾಸದಿಂದ ಲೋಹಿತನಾಗಿ ಸುಂದರ ನಾಗಿರುವುದರಿಂದ ವಾಮದೇವನೆಂಬ ಹೆಸರನ್ನು ಹೊಂದಿರುವೆನು.

ವಾಮತ್ವಾ ಚ್ಚೈವ ದೇವಸ್ಯ ವಾಮದೇವತ್ವಮಾಗತಃ ।
ತತ್ರಾಪಿ ಚ ಮಹಾಸತ್ವ ತ್ವಯಾಽಹಂ ನಿಯತಾತ್ಮನಾ ॥೧೦॥

ವಿಜ್ಞಾತಃ ಸ್ವೇನ ಯೋಗೇನ ತಸ್ಮಿನ್ವರ್ಣಾಂತರೇ ಸ್ಥಿತಃ ।
ತತಶ್ಚ ವಾಮದೇವೇತಿ ಖ್ಯಾತಿಂ ಯಾತೋಽಸ್ಮಿ ಭೂತಲೇ ॥೧೧॥

ಯೇ ಚಾಪಿ ವಾಮದೇವ ತ್ವಾಂ ಜ್ಞಾಸ್ಯಂತೀ ಹ ದ್ವಿಜಾತಯಃ ।
ರುದ್ರಲೋಕಂ ಗಮಿಷ್ಯಂತಿ ಪುನರಾವೃತ್ತಿದುರ್ಲಭಂ ॥೧೨॥

ಯದಾಽಹಂ ಪುನರೇವೇಹ ಪೀತವರ್ಣೋ ಯುಗಕ್ರಮಾತ್ ।
ಮತ್ಕೃತೇನ ಚ ನಾಮ್ನಾ ವೈ ಪೀತಕಲ್ಪೋಽಭವತ್ತದಾ ॥೧೩॥

ಮತ್ಪ್ರಸೂತಾ ಚ ದೇವೇಶೀ ಪೀತಾಂಗೀ ಪೀತಲೋಹಿತಾ ।
ಪೀತವರ್ಣಾ ತದಾ ಹ್ಯಾಸೀದ್ಗಾಯತ್ರೀ ಬ್ರಹ್ಮಸಂಜ್ಞಿತಾ ॥೧೪॥

ತತ್ರಾಪಿಚ ಮಹಾಸತ್ವ ಯೋಗಯುಕ್ತೇನ ಚೇತಸಾ ।
ಯಸ್ಮಾದಹಂ ತ್ವೈ ರ್ವಿಜ್ಞಾತೋ ಯೋಗತತ್ಪರಮಾನಸೈಃ ॥೧೫॥

---

೧೦–೧೨. ಎಲೈ ಸತ್ವಗುಣಪ್ರಧಾನನಾದ ಬ್ರಹ್ಮನೇ, ನೀನು ಆತ್ಮ ಜ್ಞಾನಿಯಾಗಿ, ಯೋಗದಿಂದ, ಲೋಹಿತವರ್ಣದಿಂದಿರುವ ನನ್ನನ್ನು ತಿಳಿಯುವೆ. ಆಮೇಲೆ ನಾನು ಭೂಮಿಯಲ್ಲಿ ವಾಮದೇವನೆಂದು ಪ್ರಸಿದ್ಧಿಹೊಂದುವೆನು. ಯಾವ ದ್ವಿಜರು ವಾಮದೇವನ ಸ್ವರೂಪವನ್ನು ತಿಳಿಯುವರೋ ಅವರು ಪುನರ್ಜನ್ಮವನ್ನು ಪಡೆಯದೆ ರುದ್ರಲೋಕಕ್ಕೆ ಹೋಗುವರು (ವಾಮದೇವಮಂತ್ರ)

೧೩–೧೪. ಹೀಗೆಯೇ ಯುಗಗಳು ಕಳೆಯುತ್ತಿರಲಾಗಿ, ಮತ್ತೆ ನಾನು ಪೀತವರ್ಣನಾಗಿ, ಪೀತಕಲ್ಪವೆಂಬ ಹೆಸರಿನಿಂದ, ಕಲ್ಪವನ್ನು ಪ್ರಾರಂಭಿಸಿದಾಗ, ನನ್ನಿಂದಲೇ ಹುಟ್ಟಿದ ದೇವಿಯು, ಪೀತವರ್ಣವುಳ್ಳವಳಾಗಿ, ಬ್ರಹ್ಮಗಾಯತ್ರೀ ರೂಪವಾಗಿರುವಳು (ತತ್ಪುರುಷವೆಂಬ ಮಂತ್ರವು).

೧೫–೧೭. ಮಹಾಬಲಶಾಲಿಯಾದ, ಹಿರಣ್ಯಗರ್ಭಬ್ರಹ್ಮನೇ, ಆ ಪೀತಕಲ್ಪದಲ್ಲಿ ಯೋಗಯುಕ್ತನಾದ ನೀನು, ನನ್ನನ್ನು ತತ್ಪುರುಷನೆಂದು ತಿಳಿಯುವೆ. ಅದುರಿಂದ ನನಗೆ ತತ್ಪುರುಷನೆಂದು ಹೆಸರು ಬರುವುದು. ಯಾರು ಪರಿಶುದ್ಧರಾದವರಾಗಿ, ಉತ್ತಮವಾದ ಜ್ಞಾನದಿಂದ

**ತತ್ರ ತತ್ಪುರುಷತ್ವೇನ ವಿಜ್ಞಾತೋಽಹಂ ತ್ವಯಾ ಪುನಃ ।**
**ತಸ್ಮಾತ್ತತ್ಪುರುಷತ್ವಂ ವೈ ಮಮೈತತ್ಕನಕಾಂಡಜ ॥೧೬॥**
**ಯೋ ಮಾಂ ರುದ್ರಂ ಚ ರುದ್ರಾಣೀಂ ಗಾಯತ್ರೀಂ ವೇದ ಮಾತರಂ**
**ವೇತ್ಸ್ಯಂತಿ ತಪಸಾ ಯುಕ್ತಾ ವಿಮಲಾ ಬ್ರಹ್ಮಸಂಗತಾಃ ॥೧೭॥**
**ರುದ್ರಲೋಕಂ ಗಮಿಷ್ಯಂತಿ ಪುನರಾವೃತ್ತಿದುರ್ಲಭಂ ।**
**ಯದಾಽಹಂ ಪುನರೇವಾಸಂ ಕೃಷ್ಣವರ್ಣೋ ಭಯಾನಕಃ ॥೧೮॥**
**ಮತ್ಕೃತೇನ ಚ ವರ್ಣೇನ ಸಂಕಲ್ಪಃ ಕೃಷ್ಣ ಉಚ್ಯತೇ ।**
**ತತ್ರಾಹಂ ಕಾಲಸಂಕಾಶಃ ಕಾಲೋ ಲೋಕಪ್ರಕಾಲಕಃ ॥೧೯॥**
**ವಿಜ್ಞಾತೋಽಹಂ ತ್ವಯಾ ಬ್ರಹ್ಮನ್ಘೋರೋ ಘೋರಪರಾಕ್ರಮಃ ।**
**ಮತ್ಪ್ರಸೂತಾ ಚ ಗಾಯತ್ರೀ ಕೃಷ್ಣಾಂಗೀ ಕೃಷ್ಣಲೋಹಿತಾ ॥೨೦॥**
**ಕೃಷ್ಣರೂಪಾ ಚ ದೇವೇಶ ತದಾಽಸೀದ್ಬ್ರಹ್ಮಸಂಜ್ಞಿತಾ ।**
**ತಸ್ಮಾದ್ಘೋರತ್ವಮಾಪನ್ನಂ ಯೋ ಮಾಂ ವೇತ್ಸ್ಯಂತಿ ಭೂತಲೇ ॥**

---

ರುದ್ರನಾದ ನನ್ನನ್ನೂ, ರುದ್ರಾಣಿಯಾದ ದೇವಿಯನ್ನೂ, ವೇದಕ್ಕೆ ತಾಯಿಯಾದ ತತ್ಪುರುಷವೆಂಬ ಗಾಯತ್ರೀಮಂತ್ರವನ್ನೂ, ತಪಸ್ಸನ್ನು ಮಾಡಿ ತಿಳಿಯುವರೋ, ಅವರು ಪುನರಾವೃತ್ತಿಯಿಲ್ಲದ ರುದ್ರಲೋಕಕ್ಕೆ ಹೋಗುವರು. ಅವರಿಗೆ ಸಾಲೋಕ್ಯಮುಕ್ತಿಯು ದೊರೆಯುವುದೆಂದು ತಾತ್ಪರ್ಯವು.

೧೮-೨೦. ಎಲೈ ಬ್ರಹ್ಮನೇ, ನಾನು ಮತ್ತೆ ಕಪ್ಪುಬಣ್ಣವುಳ್ಳವನಾಗಿ, ಭಯಂಕರನಾಗಿ ಆದಾಗ, ಕೃಷ್ಣಕಲ್ಪವು ಪ್ರಾರಂಭವಾಗುವುದು. ಆಗ ನಾನು ಲೋಕಪ್ರಳಯವನ್ನುಂಟುಮಾಡುವ ಯಮನಂತೆ, ಪ್ರಕಾಶಿಸುತ್ತಿರುವೆನು. ಆಗ ನೀನು ನನ್ನನ್ನು ಭಯಂಕರವಾದ ಪರಾಕ್ರಮವುಳ್ಳ ಘೋರಮೂರ್ತಿಯನ್ನಾಗಿ ತಿಳಿಯುವೆ. ನನ್ನಿಂದ ಹುಟ್ಟಿದ ಗಾಯತ್ರೀದೇವಿಯು, ಕಪ್ಪುಬಣ್ಣವುಳ್ಳವಳಾಗಿ, ಬ್ರಹ್ಮಸ್ವರೂಪಿಣಿಯಾಗಿರುವಳು.

೨೧. ಆದುದರಿಂದ ಭಯಂಕರ ಸ್ವರೂಪನಾದ ನನ್ನನ್ನು ಭೂಮಿಯಲ್ಲಿ [ಅಘೋರೇಭ್ಯೋಽಥ ಇತ್ಯಾದಿ ಮಂತ್ರದಿಂದ] ಯಾರು ತಿಳಿಯುವರೋ, ಅವರಿಗೆ ನಾನು ನಾಶರಹಿತನಾಗಿಯೂ, ಶಾಂತನಾಗಿಯೂ ಕಾಣುವೆನು.

ತೇಷಾಮಘೋರಃ ಶಾಂತಶ್ಚ ಭವಿಷ್ಯಾಮ್ಯಹಮವ್ಯಯಃ ।
ಪುನಶ್ಚ ವಿಶ್ವರೂಪತ್ವಂ ಯದಾ ಬ್ರಹ್ಮನ್ಮಮಾಽಭವತ್ ॥೨೨॥
ತದಾಽಪ್ಯಹಂ ತ್ವಯಾ ಜ್ಞಾತಃ ಪರಮೇಣ ಸಮಾಧಿನಾ ।
ವಿಶ್ವರೂಪಾ ಚ ಸಂವೃತ್ತಾ ಗಾಯತ್ರೀ ಲೋಕಧಾರಿಣೀ ॥೨೩॥
ತಸ್ಮಿನ್ವಿಶ್ವತ್ವಮಾಪನ್ನಂ ಯೇ ಮಾಂ ವೇತ್ಸ್ಯಂತಿ ಭೂತಲೇ ।
ತೇಷಾಂ ಶಿವಶ್ಚ ಸೌಮ್ಯಶ್ಚ ಭವಿಷ್ಯಾಮಿ ಸದೈವ ಹಿ ॥೨೪॥
ಯಸ್ಮಾಚ್ಚ ವಿಶ್ವರೂಪೋ ವೈ ಕಲ್ಪೋಽಯಂ ಸಮುದಾಹೃತಃ ।
ವಿಶ್ವರೂಪಾ ತಥಾ ಚೇಯಂ ಸಾವಿತ್ರೀ ಸಮುದಾಹೃತಾ ॥೨೫॥
ಸರ್ವರೂಪಾ ತಥಾ ಚೇಮೇ ಸಂವೃತ್ತಾ ಮಮ ಪುತ್ರಕಾಃ ।
ಚತ್ವಾರಸ್ತೇ ಮಯಾ ಖ್ಯಾತಾಃ ಪುತ್ರಾ ವೈ ಲೋಕಸಮ್ಮತಾಃ ॥
ಯಸ್ಮಾಚ್ಚ ಸರ್ವವರ್ಣತ್ವಂ ಪ್ರಜಾನಾಂ ಚ ಭವಿಷ್ಯತಿ ।
ಸರ್ವಭಕ್ಷ್ಯಾ ಚ ಮೇಧ್ಯಾ ಚ ವರ್ಣತಶ್ಚ ಭವಿಷ್ಯತಿ ॥೨೭॥

---

೨೨. ಎಲೈ ಬ್ರಹ್ಮನೇ ಮತ್ತೆ ನನಗೆ ವಿಶ್ವರೂಪವು ಬಂದಾಗ ನನ್ನನ್ನು ಸಮಾಧಿಯಿಂದ ತಿಳಿಯುವೆ.

೨೩-೨೫. ದೇವಿಯೂ ಕೂಡ ವಿಶ್ವರೂಪಗಾಯತ್ರಿಯಾಗುವಳು. ಆಗ ವಿಶ್ವರೂಪನಾದ ನನ್ನನ್ನು ಭೂಮಿಯಲ್ಲಿ ಯಾರು ತಿಳಿಯುವರೋ ಅವರಿಗೆ ನಾನು ಯಾವಾಗಲೂ ಶಾಂತನಾಗಿಯೇ ತೋರುವೆನು. ಆ ಕಲ್ಪಕ್ಕೆ ವಿಶ್ವರೂಪಕಲ್ಪವೆಂದು ಹೆಸರು ಬರುವುದು. ದೇವಿಯೂ ಕೂಡ ವಿಶ್ವರೂಪಗಾಯತ್ರೀ ಎಂಬ ಹೆಸರನ್ನು ಹೊಂದುವಳು.

೨೬. ಸದ್ಯೋಜಾತ, ವಾಮದೇವ, ತತ್ಪುರುಷ, ಅಘೋರ, ಎಂಬ ನಾಲ್ಕು ಮೂರ್ತಿಗಳು, ಗಾಯತ್ರಿಯಂತೆ ಸರ್ವರೂಪರಾಗಿ ನನ್ನ ಪುತ್ರರಾಗಿ ಜನಸಮ್ಮತಿಯಿಂದ ಪ್ರಸಿದ್ಧಿ ಹೊಂದುವರು.

೨೭. ಈ ನಾಲ್ಕು ಗಾಯತ್ರೀಮಂತ್ರವು, ಶಬ್ದದಿಂದಲೂ ಅರ್ಥದಿಂದಲೂ ಸಕಲ ಪಾಪಲೋಕಗಳನ್ನೂ ನಾಶಮಾಡತಕ್ಕುದಾಗಿಯೂ, ಯಜ್ಞದಲ್ಲಿ ಪ್ರಯೋಗಿಸಲು ಯೋಗ್ಯವಾದುದರಿಂದ ಶುದ್ಧವಾದುದಾಗಿಯೂ ಇರುವುದರಿಂದ ಪ್ರಜೆಗಳಲ್ಲಿ ಬ್ರಾಹ್ಮಣಾದಿ ನಾಲ್ಕು ವರ್ಣಗಳೂ ಇದರಿಂದ ಉಂಟಾಗಿರುವುವು.

ಮೋಕ್ಷೋ ಧರ್ಮಸ್ತಥಾಽರ್ಥಶ್ಚ ಕಾಮಶ್ಚೇತಿ ಚತುಷ್ಟಯಂ ।
ತಸ್ಮಾದ್ವೇದಾಶ್ಚ ವೇದ್ಯಂ ಚ ಚತುರ್ಧಾ ವೈ ಭವಿಷ್ಯತಿ ॥೨೮॥
ಭೂತಗ್ರಾಮಶ್ಚ ಚತ್ವಾರ ಆಶ್ರಮಾಶ್ಚ ತಥೈವ ಚ ।
ಧರ್ಮಸ್ಯ ಪಾದಾಶ್ಚತ್ವಾರ ಶ್ಚತ್ವಾರೋ ಮಮ ಪುತ್ರಕಾಃ ॥೨೯॥
ತಸ್ಮಾ ಚ್ಚತುರ್ಯುಗಾವಸ್ಥಂ ಜಗದ್ವೈ ಸಚರಾಚರಂ ।
ಚತುರ್ಧಾಽವಸ್ಥಿತಶ್ಚೈವ ಚತುಷ್ಪಾದೋ ಭವಿಷ್ಯತಿ ॥೩೦॥
ಭೂಲೋಕೋಽಥ ಭುವರ್ಲೋಕಃ ಸ್ವರ್ಲೋಕಶ್ಚ ಮಹಸ್ತಥಾ ।
ಜನಸ್ತಪಶ್ಚ ಸತ್ಯಂ ಚ ವಿಷ್ಣುಲೋಕಃ ತತಃ ಪರಂ ॥೩೧॥
ಅಷ್ಟಾಕ್ಷರಸ್ಥಿತೋ ಲೋಕಃ ಸ್ಥಾನೇ ಸ್ಥಾನೇ ತದಕ್ಷರಂ ।
ಭೂರ್ಭುವಃ ಸ್ವರ್ಮಹಶ್ಚೈವ ಪಾದಾಶ್ಚತ್ವಾರ ಏವ ಚ ॥೩೨॥
ಭೂರ್ಲೋಕಃ ಪ್ರಥಮಃ ಪಾದೋ ಭುವರ್ಲೋಕಃ ತತಃ ಪರಂ ।
ಸ್ವರ್ಲೋಕೋ ವೈ ತೃತೀಯಶ್ಚ ಚತುರ್ಥಸ್ತು ಮಹಸ್ತಥಾ ॥೩೩॥

---

೨೮–೩೦. ಧರ್ಮಾರ್ಥಕಾಮಮೋಕ್ಷಗಳೆಂಬ, ನಾಲ್ಕು ಪುರುಷಾರ್ಥಗಳೂ, ಋಗ್ವೇದ, ಯಜುರ್ವೇದ, ಸಾಮವೇದ, ಅಥರ್ವಣವೇದ ಎಂಬ ನಾಲ್ಕು ವೇದಗಳೂ, ಜರಾಯುಜ, ಅಂಡಜ, ಸ್ವೇದಜ, ಉದ್ಭಿಜ್ಜಗಳೆಂಬ ನಾಲ್ಕು ಬಗೆಯ ಜೀವಗಳೂ, ಬ್ರಹ್ಮಚರ್ಯ ಗೃಹಸ್ಥ, ವಾನಪ್ರಸ್ಥ ಸನ್ಯಾಸಗಳೆಂಬ ನಾಲ್ಕು ಆಶ್ರಮಗಳೂ, ಧರ್ಮದ ನಾಲ್ಕು ಪಾದಗಳೂ, ಕೃತಾದಿ ನಾಲ್ಕು ಯುಗಗಳೂ, ನನ್ನಿಂದಲೇ ಉತ್ಪನ್ನವಾದುವುಗಳಾಗಿ, ನನ್ನ ಪುತ್ರಸ್ವರೂಪಗಳಾಗಿರುವುವು. ಒಟ್ಟಿನಲ್ಲಿ ಈ ಚರಾಚರ ಪ್ರಾಣಿಗಳಿಂದ ಕೂಡಿದ ಜಗತ್ತು ನಾಲ್ಕು ಬಗೆಯಾಗಿದ್ದು ಚತುಷ್ಪಾದವೆಂಬ ಹೆಸರನ್ನು ಹೊಂದಿರುವುದು.

೩೧–೩೩. ಭೂಲೋಕ, ಭುವರ್ಲೋಕ, ಸ್ವರ್ಲೋಕ, ಮಹರ್ಲೋಕ, ಜನೋಲೋಕ' ತಪೋಲೋಕ, ಸತ್ಯಲೋಕ, ವಿಷ್ಣುಲೋಕ, ಎಂಬ ಎಂಟು ಲೋಕಗಳು, ಓಂಕಾರಸಹಿತವಾದ ಗಾಯತ್ರಿಯ ಎಂಟು ಅಕ್ಷರಗಳಿಂದ ಸೂಚಿತವಾಗಿರುವುವು. ಭೂಃ, ಭುವಃ, ಸ್ವಃ, ಮಹಃ, ಎಂಬ ಅಕ್ಷರಗಳಿಂದ ನಾಲ್ಕು ಪಾದಗಳೂ, ನಾಲ್ಕು ಲೋಕಗಳೂ, ಸೂಚಿತವಾಗಿರುವುವು.

ಪಂಚಮಸ್ತು ಜನಸ್ತತ್ರ ಷಷ್ಠಶ್ಚ ತಪ ಉಚ್ಯತೇ ।
ಸತ್ಯಂ ತು ಸಪ್ತಮೋ ಲೋಕೋ ಹ್ಯಪುನರ್ಭವಗಾಮಿನಾಂ ॥೩೪॥
ವಿಷ್ಣುಲೋಕಃ ಸ್ಮೃತಂ ಸ್ಥಾನಂ ಪುನರಾವೃತ್ತಿದುರ್ಲಭಂ ।
ಸ್ಕಾಂದಮೌಮಂ ತಥಾ ಸ್ಥಾನಂ ಸರ್ವಸಿದ್ಧಿಸಮನ್ವಿತಂ ॥೩೫॥
ರುದ್ರಲೋಕಃ ಸ್ಮೃತಸ್ತಸ್ಮಾತ್ಪದಂ ತದ್ಯೋಗಿನಾಂ ಶುಭಂ ।
ನಿರ್ಮಮಾ ನಿರಹಂಕಾರಾಃ ಕಾಮಕ್ರೋಧವಿವರ್ಜಿತಾಃ ॥೩೬॥
ದ್ರಕ್ಷ್ಯಂತಿ ತದ್ದ್ವಿಜಾ ಯುಕ್ತಾ ಧ್ಯಾನತತ್ಪರಮಾನಸಾಃ ।
ಯಸ್ಮಾಚ್ಚ ತುಷ್ಪದಾ ಹ್ಯೇಷಾ ತ್ವಯಾ ದೃಷ್ಟಾ ಸರಸ್ವತೀ ॥೩೭॥
ಪಾದಾಂತಂ ವಿಷ್ಣುಲೋಕಂ ವೈ ಕೌಮಾರಂ ಶಾಂತ ಮುತ್ತಮಂ ।
ಔಮಂ ಮಾಹೇಶ್ವರಂ ಚೈವ ತಸ್ಮಾದ್ದೃಷ್ಟಾ ಚತುಷ್ಪದಾ ॥೩೮॥

---

೩೩–೩೪. ಭೂಲೋಕವು ಮೊದಲನೆಯ ಪಾದವು. ಭೂವರ್ಲೋಕವು ಎರಡನೆಯದು. ಸ್ವರ್ಲೋಕವು ಮೂರನೆಯದು. ಮಹರ್ಲೋಕವು ನಾಲ್ಕನೆಯದು, ಜನೋಲೋಕವು ಐದನೆಯದು. ತಪೋಲೋಕವು ಆರನೆಯದು. ಸತ್ಯಲೋಕವು ಏಳನೆಯದು. ಈ ಸತ್ಯಲೋಕಕ್ಕೆ ಹೋದವರಿಗೆ ಪುನರ್ಜನ್ಮವಿಲ್ಲ.

೩೫. ವಿಷ್ಣುಲೋಕಕ್ಕೆ ಹೋದವರಿಗೂ ಪುನರ್ಜನ್ಮವಿಲ್ಲ. ಸ್ಕಂದಲೋಕ, ಉಮಾಲೋಕಗಳು ಇಷ್ಟಾರ್ಥಗಳನ್ನು ಕೊಡತಕ್ಕುವುಗಳು.

೩೬. ರುದ್ರಲೋಕವೆಂಬುದು ಯೋಗಿಗಳಿಗೆ ಅತ್ಯುತ್ತಮವಾದ ಸ್ಥಾನವಾಗಿರುವುದು. ಕಾಮಕ್ರೋಧಾದಿಗಳಿಲ್ಲದ, ಅಹಂಕಾರ ಮಮಕಾರಗಳಿಲ್ಲದ, ಯೋಗಯುಕ್ತರಾದ ಬ್ರಾಹ್ಮಣರು ಧ್ಯಾನಾಸಕ್ತಚಿತ್ತರಾಗಿ ಆ ರುದ್ರಲೋಕವನ್ನು ನೋಡುವರು.

೩೭–೩೮. ಎಲೈ ಬ್ರಹ್ಮನೇ, ನೀನು ಧ್ಯಾನಯೋಗಯುಕ್ತನಾದುದರಿಂದ, ವಿಷ್ಣುಲೋಕ, ಸ್ಕಂದಲೋಕ, ಉಮಾಲೋಕ, ಮಹೇಶ್ವರಲೋಕಗಳೆಂಬ ನಾಲ್ಕು ಲೋಕಗಳನ್ನೂ, ನೋಡಿರುವೆ. ವಿಶ್ವರೂಪನಾದ, ನಿನಗೆ ಈ ನಾಲ್ಕು ಲೋಕಗಳೇ, ನಾಲ್ಕು ಪಾದಗಳು. ಇದನ್ನನು

**ತಸ್ಮಾತ್ತು ಪಶವಃ ಸರ್ವೇ ಭವಿಷ್ಯಂತಿ ಚತುಷ್ಪದಾಃ ।**
**ತತಶ್ಚೈಷಾಂ ಭವಿಷ್ಯಂತಿ ಚತ್ವಾರಸ್ತೇ ಪಯೋಧರಾಃ ॥೩೯॥**

**ಸೋಮಶ್ಚ ಮಂತ್ರಸಂಯುಕ್ತೋ ಯಸ್ಮಾನ್ಮಮ ಮುಖಾಚ್ಚ್ಯುತಃ ।**
**ಜೀವಃ ಪ್ರಾಣಭೃತಾಂ ಬ್ರಹ್ಮನ್ಪ್ಪೀನಃ ಪೀತಸ್ತನಾಃ ಸ್ಮೃತಾಃ ॥೪೦॥**

**ತಸ್ಮಾತ್ಸೋಮಮಯಂ ಚೈವ ಅಮೃತಂ ಜೀವಸಂಜ್ಞಿತಂ ।**
**ಚತುಷ್ಪದಾ ಭವಿಷ್ಯಂತಿ ಶ್ವೇತತ್ವಂ ಚಾಸ್ಯ ತೇನ ತತ್ ॥೪೧॥**

**ಯಸ್ಮಾಚ್ಚೈವ ಕ್ರಿಯಾ ಭೂತ್ವಾ ದ್ವಿಪದಾ ಚ ಮಹೇಶ್ವರೀ ।**
**ದೃಷ್ಟಾ ಪುನಸ್ತ್ವಥೈವೈಷಾ ಸಾವಿತ್ರೀ ಲೋಕಭಾವಿನೀ ॥೪೨॥**

**ತಸ್ಮಾಚ್ಚ ದ್ವಿಪದಾಃ ಸರ್ವೇ ದ್ವಿಸ್ತನಾಶ್ಚ ನರಾಃ ಶುಭಾಃ ।**
**ತಸ್ಮಾಚ್ಚೇಯಮಜಾ ಭೂತ್ವಾ ಸರ್ವವರ್ಣಾ ಮಹೇಶ್ವರೀ ॥೪೩॥**

---

ಸರಿಸಿಯೇ ಲೋಕದಲ್ಲಿ ಪಶುಗಳೆಲ್ಲವೂ ನಾಲ್ಕು ಪಾದಗಳುಳ್ಳವುಗಳಾಗಿ, ನಾಲ್ಕುಸ್ತನಗಳುಳ್ಳವುಗಳಾಗಿರುವುವು.

೪೦. ಯಜ್ಞದಲ್ಲಿ ಮಂತ್ರದಿಂದ ಹೋಮಮಾಡುವ, ಸೋಮ ರಸವು ನನ್ನ ಮುಖದಿಂದ ಬೀಳುವುದೆಂದು ತಿಳಿ. ಇದು ಪ್ರಾಣಿಗಳಿಗೆ ಜೀವಸ್ವರೂಪವಾದುದು. ಆ ಸೋಮರಸವೇ ಪಶುಗಳ ನಾಲ್ಕುಸ್ತನ ಗಳಲ್ಲಿ ಹಾಲಿನ ರೂಪವಾಗಿ ಬರುವುದು. ಅದನ್ನು ಪ್ರಾಣಿಗಳು ಪಾನ ಮಾಡುವುದರಿಂದ ಆ ಹಾಲನ್ನು ಕುಡಿಯುವ ಪ್ರಾಣಿಗಳಿಗೆ ಪೀತಸ್ತನ ರೆಂದು ಹೆಸರು ಬಂದಿರುವುದು.

೪೧. ಹಾಲು ಅಮೃತಸ್ವರೂಪವಾಗಿ, ಜೀವನವೆಂಬ ಹೆಸರನ್ನು ಪಡೆದಿರುವುದೂ ಸೋಮರಸ ಸ್ವರೂಪವಾದುದರಿಂದಲೇ. ಈ ಕಾರಣ ದಿಂದಲೇ ಆ ಹಾಲಿಗೆ ಬಿಳಿಯುಬಣ್ಣವು ಬಂದಿರುವುದು. ಮತ್ತೂ, ಚತು ಷ್ಪಾದ ಪ್ರಾಣಿಗಳು ಇದನ್ನು ಕುಡಿದು ಬದುಕಿರುವುವು.

೪೨-೪೩. ಜನರೆಲ್ಲರೂ ಧ್ಯಾನಮಾಡುವ ಸಾವಿತ್ರಿದೇವಿಯು ಕ್ರಿಯಾಶಕ್ತಿಸ್ವರೂಪಳಾಗಿ, ಎರಡು ಕಾಲುಗಳುಳ್ಳವಳಾಗಿ, ಕಾಣಿಸಿ ಕೊಂಡುದರಿಂದ, ಲೋಕದ ಜನರೆಲ್ಲರೂ, ಎರಡು ಕಾಲುಗಳೂ, ಎರಡು

ಯಾ ವೈ ದೃಷ್ಟ್ವಾ ಮಹಾಸತ್ವಾ ಸರ್ವಭೂತಧರಾ ತ್ವಯಾ ।
ತಸ್ಮಾಚ್ಚ ವಿಶ್ವರೂಪತ್ವಂ ಪ್ರಜಾನಾಂ ವೈ ಭವಿಷ್ಯತಿ ॥೪೪॥
ಅಜ ಶ್ಚೈವ ಮಹಾತೇಜಾ ವಿಶ್ವರೂಪೋ ಭವಿಷ್ಯತಿ ।
ಅಮೋಘರೇತಾಃ ಸರ್ವತ್ರ ಮುಖೇ ಚಾಸ್ಯ ಹುತಾಶನಃ ॥೪೫॥
ತಸ್ಮಾತ್ಸರ್ವಗತೋ ಮೇಧ್ಯಃ ಪಶುರೂಪೀ ಹುತಾಶನಃ ।
ತಪಸಾ ಭಾವಿತಾತ್ಮಾನೋ ಯೇ ಮಾಂ ದ್ರಕ್ಷ್ಯಂತಿ ವೈ ದ್ವಿಜಾಃ ॥
ಈಶಿತ್ವೇ ಚ ವಶಿತ್ವೇ ಚ ಸರ್ವಗಂ ಸರ್ವತಃ ಸ್ಥಿತಂ ।
ರಜಸ್ತಮೋಭ್ಯಾಂ ನಿರ್ಮುಕ್ತಾಸ್ತ್ಯಕ್ತ್ವಾ ಮಾನುಷ್ಯಕಂ ವಪುಃ ॥೪೭॥
ಮತ್ಸಮೀಪಮುಪೇಷ್ಯಂತಿ ಪುನರಾವೃತ್ತಿದುರ್ಲಭಂ ।
ಇತ್ಯೇವಮುಕ್ತೋ ಭಗವಾನ್ಬ್ರಹ್ಮಾ ರುದ್ರೇಣ ವೈ ದ್ವಿಜಾಃ ॥೪೮॥

---

ಸ್ತನಗಳೂ, ಉಳ್ಳವರಾಗಿ, ಶೋಭಿಸುವರು. ಆ ಸಾವಿತ್ರೀದೇವಿಯು ಪ್ರಕೃತಿಸ್ವರೂಪಳಾಗಿ, ಸಕಲ ವರ್ಣಸ್ವರೂಪಳಾಗಿರುವಳು.

೪೪. ಮಹಾಬಲವುಳ್ಳ, ಸಮಸ್ತ ಪ್ರಾಣಿಗಳನ್ನೂ ಧರಿಸಿದ ಪ್ರಕೃತಿಸ್ವರೂಪಳಾದ, ಸಾವಿತ್ರೀದೇವಿಯನ್ನು, ನೀನು ನೋಡಿದುದರಿಂದ ನೀನು ಅನೇಕ ರೂಪವುಳ್ಳವನಾಗಿ ವಿಶ್ವರೂಪ ಎಂಬ ಹೆಸರನ್ನೂ ಅಜನೆಂಬ ಹೆಸರನ್ನೂ ಪಡೆಯುವೆ.

೪೫. ಈ ನನ್ನ ರೂಪದ ಎಲ್ಲಾ ಮುಖದಲ್ಲಿಯೂ, ತೇಜಶ್ಶಾಲಿಯಾದ ಅಗ್ನಿಯು ಇರುವುದರಿಂದ, ಆ ಅಗ್ನಿಯು ಸರ್ವಗತನಾಗಿ, ಪರಿಶುದ್ಧನಾಗಿ, ಪಶುಸ್ವರೂಪನಾಗಿರುವನು.

೪೬–೪೭. ತಪಸ್ಸಿನಿಂದ ಮನಸ್ಸನ್ನು ಪರಿಶುದ್ಧಿಮಾಡಿಕೊಂಡ ಯಾವ ದ್ವಿಜರು, ಈ ಶಿತ್ವವಶಿತ್ವ ಶಕ್ತಿಯಿಂದ ಕೂಡಿ, ಸರ್ವವ್ಯಾಪಿಯಾದ ನನ್ನನ್ನು ನೋಡುವರೋ, ಅವರು ರಜಸ್ತಮೋಗುಣಗಳನ್ನು ಬಿಟ್ಟು, ಮನುಷ್ಯದೇಹವನ್ನು ಬಿಟ್ಟು, ಪುನರ್ಜನ್ಮವಿಲ್ಲದವರಾಗಿ, ನನ್ನ ಸಮೀಪಕ್ಕೆ ಬರುವರು.

೪೮. ಎಲೈ ಋಷಿಗಳೇ, ಕೇಳಿರಿ. ರುದ್ರನು ಹೇಳಿದ ಮಾತನ್ನು ಬ್ರಹ್ಮನು ಕೇಳಿ ನಮಸ್ಕರಿಸಿ ಮತ್ತೆ ಆಸಕ್ತಿಯಿಂದ ಹೇಳಿದನು.

ಪ್ರಣಮ್ಯ ಪ್ರಯತೋ ಭೂತ್ವಾ ಪುನರಾಹ ಪಿತಾಮಹಃ ।
ಯ ಏವಂ ಭಗವಾನ್ವಿದ್ವಾನ್ಗಾಯತ್ರ್ಯಾ ವೈ ಮಹೇಶ್ವರಂ ॥೪೯॥
ವಿಶ್ವಾತ್ಮಾನಂ ಹಿ ಸರ್ವಂ ತ್ವಾಂ ಗಾಯತ್ರ್ಯಾಸ್ತ್ವವ ಚೇಶ್ವರ ।
ತಸ್ಯ ದೇಹಿ ಪರಂ ಸ್ಥಾನಂ ತಥಾಸ್ತ್ವಿತಿ ಚ ಸೋಽಬ್ರವೀತ್ ॥೫೦॥
ತಸ್ಮಾದ್ವಿದ್ವಾನ್ಹಿ ವಿಶ್ವತ್ವಮಸ್ಯಾಶ್ಚಾಸ್ಯ ಮಹಾತ್ಮನಃ ।
ಸ ಯಾತಿ ಬ್ರಹ್ಮಸಾಯುಜ್ಯಂ ವಚನಾದ್ಬ್ರಹ್ಮಣಃ ಪ್ರಭೋಃ ॥೫೧॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
ತ್ರಯೋ ವಿಂಶೋಽಧ್ಯಾಯಃ

---

೪೯–೫೦. ಓ ಪರಮೇಶ್ವರನೇ, ನಿನ್ನ ಸಂಬಂಧವಾದ, ರುದ್ರ ಗಾಯತ್ರೀಮಂತ್ರ ಜಪಧ್ಯಾನಾದಿಗಳಿಂದ ಪ್ರಪಂಚ ಸ್ವರೂಪನಾದ ನಿನ್ನನ್ನು ಯಾವನು ತಿಳಿಯುತ್ತಾನೆಯೋ ಅವನಿಗೆ ನಿನ್ನ ಶ್ರೇಷ್ಠವಾದ ಸ್ಥಾನವನ್ನು ಅನುಗ್ರಹಿಸು. ಎಂದು ಹೇಳುತ್ತಲು ಆ ಪರಮೇಶ್ವರನು ಹಾಗೆಯೇ ಆಗಲಿ. ಎಂದು ಹೇಳಿದನು.

೫೧. ಆದುದರಿಂದ ಈ ರುದ್ರಗಾಯತ್ರಿಯ ಮತ್ತೂ ಮಹಾತ್ಮನಾದ ಪರಮೇಶ್ವರನ ವಿಶ್ವರೂಪವನ್ನು ತಿಳಿದವನು, ಬ್ರಹ್ಮದೇವನಿಗೆ ಶಿವನು ಹೇಳಿದ ಮಾತಿನಂತೆ, ಬ್ರಹ್ಮಸಾಯುಜ್ಯವನ್ನು ಪಡೆಯುವನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ
ಇಪ್ಪತ್ತುಮೂರನೆಯ ಅಧ್ಯಾಯವು ಮುಗಿದುದು.

अथ श्रीलिंगमहापुराणे पूर्वभागे
चतुर्विंशोऽध्यायः

**ಚತುರ್ವಿಂಶೇ ವಿಧಿಂ ಪ್ರಾಹ ಧ್ಯಾನದೃಶ್ಯ ಉಮಾಪತಿಃ ।**
**ಯೋಗಾವತಾರಾಂ ಸ್ತಚ್ಛಿಷ್ಯಾ ನ್ವ್ಯಾಸಾಂಶ್ಚೈವ ಯುಗಕ್ರಮಾತ್ ॥**

**॥ ಸೂತ ಉವಾಚ ॥**

**ಶ್ರುತ್ವೈವಮಖಿಲಂ ಬ್ರಹ್ಮಾ ರುದ್ರೇಣ ಪರಿಭಾಷಿತಂ ।**
**ಪುನಃ ಪ್ರಣಮ್ಯ ದೇವೇಶಂ ರುದ್ರಮಾಹ ಪ್ರಜಾಪತಿಃ ॥ ೧ ॥**

**ಭಗವನ್ದೇವದೇವೇಶ ವಿಶ್ವರೂಪ ಮಹೇಶ್ವರ ।**
**ಉಮಾಧವ ಮಹಾದೇವ ನಮೋ ಲೋಕಾಭಿವಂದಿತ ॥ ೨ ॥**

**ವಿಶ್ವರೂಪ ಮಹಾಭಾಗ ಕಸ್ಮಿನ್ಕಾಲೇ ಮಹೇಶ್ವರ ।**
**ಯಾ ಇಮಾಸ್ತೇ ಮಹಾದೇವ ತನವೋ ಲೋಕವಂದಿತಾಃ ॥ ೩ ॥**

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಇಪ್ಪತ್ತನಾಲ್ಕನೆಯ ಅಧ್ಯಾಯವು

(ಈ ಇಪ್ಪತ್ತುನಾಲ್ಕನೆಯ ಅಧ್ಯಾಯದಲ್ಲಿ ಬ್ರಹ್ಮನ ಧ್ಯಾನಕ್ಕೆ ಗೋಚರನಾದ, ಉಮಾಪತಿಯಾದ, ಪರಮೇಶ್ವರನು, ಯುಗಕ್ರಮದಿಂದ ಬಂದ ವ್ಯಾಸಾವತಾರಗಳನ್ನೂ, ಯೋಗಾವತಾರಗಳನ್ನೂ, ಅವರ ಶಿಷ್ಯರನ್ನೂ ಬ್ರಹ್ಮನಿಗೆ ಹೇಳುವನು.)

೧. ಸೂತನು ಹೇಳಿದನು: ಬ್ರಹ್ಮನು ರುದ್ರನು ಹೇಳಿದ, ಸದ್ಯೋಜಾತಾದಿಗಳ ಉತ್ಪತ್ತಿಯನ್ನೂ, ಗಾಯತ್ರಿಯ ಮಹಿಮೆಯನ್ನೂ ಕೇಳಿ, ಮತ್ತೆ ಮಹೇಶ್ವರನಿಗೆ ನಮಸ್ಕಾರವನ್ನು ಮಾಡಿ ಹೇಳಿದನು.

೨–೪. ಮಹಾಮಹಿಮನೂ, ಪ್ರಪಂಚಸ್ವರೂಪನೂ, ಉಮಾಪತಿಯೂ, ಲೋಕಪೂಜಿತನೂ, ಆದ, ಓ ಪರಮೇಶ್ವರನೇ, ಯಾವ ಕಾಲದಲ್ಲಿ ಯಾವ ಯಾವ ಯುಗದಲ್ಲಿ, ಸದ್ಯೋಜಾತಾದಿ ಅವತಾರಗಳನ್ನು ನೋಡುವರು? ಅವರು ಯಾವ ತಪಸ್ಸಿನ ಬಲದಿಂದ, ಅಥವಾ

ಕಸ್ಯಾಂ ವಾ ಯುಗಸಂಭೂತ್ಯಾಂ ದ್ರಕ್ಷ್ಯಂತೀಹ ದ್ವಿಜಾತಯಃ ।
ಕೇನ ವಾ ತಪಸಾ ದೇವ ಧ್ಯಾನಯೋಗೇನ ಕೇನ ವಾ ॥ ೪ ॥

ನಮಸ್ತೇ ವೈ ಮಹಾದೇವ ಶಕ್ಯೋ ದ್ರಷ್ಟುಂ ದ್ವಿಜಾತಿಭಿಃ ।
ತಸ್ಯ ತದ್ವಚನಂ ಶ್ರುತ್ವಾ ಶರ್ವಃ ಸಂಪ್ರೇಕ್ಷ್ಯ ತಂ ಪುರಃ ॥ ೫ ॥
ಸ್ಮಯನ್ನಾಹ ಮಹಾದೇವೋ ಋಗ್ಯಜುಃಸಾಮಸಂಭವಃ ।

॥ ಶ್ರೀಭಗವಾನುವಾಚ ॥

ತಪಸಾ ನೈವ ವೃತ್ತೇನ ದಾನಧರ್ಮಫಲೇನ ಚ ॥ ೬ ॥

ನ ತೀರ್ಥಫಲಯೋಗೇನ ಕ್ರತುಭಿರ್ವಾಪ್ತದಕ್ಷಿಣೈಃ ।
ನ ವೇದಾಧ್ಯಯನೈರ್ವಾಽಪಿ ಸ ವಿತ್ತೇನ ನ ವೇದನೈಃ ॥ ೭ ॥

ನ ಶಕ್ಯಂ ಮಾನವೈರ್ದ್ರಷ್ಟುಮೃತೇ ಧ್ಯಾನಾದಹಂ ತ್ವಿಹ ।
ಸಪ್ತಮೇ ಚೈವ ವಾರಾಹೇ ತತಸ್ತಸ್ಮಿನ್ಪಿತಾಮಹ ॥ ೮ ॥

---

ಯಾವ ಯೋಗಾಭ್ಯಾಸದ ಬಲದಿಂದ ನಿನ್ನನ್ನು ನೋಡಲು ಸಮರ್ಥರಾಗುವರು? ಅದನ್ನು ನನಗೆ ಹೇಳು.

೫. ಆ ಬ್ರಹ್ಮನ ಮಾತನ್ನು ಕೇಳಿ ಶಿವನು ಮುಂದಿರುವ ಆ ಬ್ರಹ್ಮನನ್ನು ನೋಡುತ್ತಾ, ಋಗಾದಿ ಮೂರು ವೇದಗಳಿಂದಲೂ, ತಿಳಿಯತಕ್ಕವನಾದುದರಿಂದ ನಗುತ್ತ, ಮಾತನಾಡಿದನು.

೬–೭. ಮಹೇಶ್ವರನು ಹೇಳಿದನು: ಎಲೈ ಬ್ರಹ್ಮನೇ, ಈ ಭೂಲೋಕದಲ್ಲಿ ಏಕಾಗ್ರಚಿತ್ತದಿಂದ ಧ್ಯಾನಮಾಡುವುದನ್ನು ಬಿಟ್ಟು, ತಪಸ್ಸಿನಿಂದಾಗಲೀ, ನಡತೆಯಿಂದಾಗಲೀ, ದಾನಧರ್ಮಗಳ ಫಲದಿಂದದಾಗಲೀ, ತೀರ್ಥಯಾತ್ರೆಗಳನ್ನು ಮಾಡುವುದರಿಂದರಾಗಲೀ, ವಿಶೇಷವಾದ ದಕ್ಷಿಣೆಯನ್ನು ಕೊಟ್ಟು ಯಜ್ಞಮಾಡುವುದರಿಂದಲಾಗಲೀ, ವೇದಾಧ್ಯಯನ ಮಾಡುವುದರಿಂದಲಾಗಲೀ, ಹಣವನ್ನು ಇತರರಿಗೆ ಕೊಡುವುದರಿಂದಲಾಗಲೀ, ಶಾಸ್ತ್ರಗಳ್ನು ತಿಳಿಯುವುದರಿಂದಲಾಗಲೀ, ಜನರಿಗೆ ನಾನು ಗೋಚರನಾಗ ತಕ್ಕವನಲ್ಲ. ಧ್ಯಾನದಿಂದ ಮಾತ್ರ ಗೋಚರನಾಗುವೆನು.

೮. ಎಲೈ ಬ್ರಹ್ಮನೇ, ವರಾಹಕಲ್ಪದಲ್ಲಿ ಏಳನೆಯದಾದ ವೈವಸ್ವತಮನ್ವಂತರದಲ್ಲಿ ಆ ಕಲ್ಪಕ್ಕಧಿಪತಿಯಾದ ನಾನು ಸಕಲ ಲೋಕಗಳನ್ನೂ ಪ್ರಕಾಶಪಡಿಸುವವನಾಗಿ, ಉತ್ಪನ್ನನಾಗುವೆನು.

ಕಲ್ಪೇ ಶ್ವರೋಽಥ ಭಗವಾನ್ಸರ್ವಲೋಕ ಪ್ರಕಾಶನಃ ।
ಮನುರ್ವೈವಸ್ವತಶ್ಚೈವ ತವ ಪೌತ್ರೋ ಭವಿಷ್ಯತಿ ॥ ೯ ॥
ತದಾ ಚತುರ್ಯುಗಾವಸ್ಥೇ ತಸ್ಮಿನ್ಕಲ್ಪೇ ಯುಗಾಂತಿಕೇ ।
ಅನುಗ್ರಹಾರ್ಥಂ ಲೋಕಾನಾಂ ಬ್ರಾಹ್ಮಣಾನಾಂ ಹಿತಾಯ ಚ ॥
ಉತ್ಪತ್ಸ್ಯಾಮಿ ತದಾ ಬ್ರಹ್ಮನ್ಪುನರಸ್ಮಿನ್ಯುಗಾಂತಿಕೇ ।
ಯುಗಪ್ರವೃತ್ತ್ಯಾ ಚ ತದಾ ಯಸ್ಮಿಂಶ್ಚ ಪ್ರಥಮೋ ಯುಗೇ ॥೧೧॥
ದ್ವಾಪರೇ ಪ್ರಥಮೇ ಬ್ರಹ್ಮನ್ಯದಾ ವ್ಯಾಸಃ ಸ್ವಯಂ ಪ್ರಭುಃ ।
ತದಾಽಹಂ ಬ್ರಾಹ್ಮಣಾರ್ಥಾಯ ಕಲೌ ತಸ್ಮಿನ್ಯುಗಾಂತಿಕೇ ॥೧೨॥
ಭವಿಷ್ಯಾಮಿ ಶಿಖಾಯುಕ್ತಃ ಶ್ವೇತೋ ನಾಮ ಮಹಾಮುನಿಃ ।
ಹಿಮವಚ್ಛಿಖರೇ ರಮ್ಯೇ ಛಾಗಲೇ ಪರ್ವತೋತ್ತಮೇ ॥೧೩॥
ತತ್ರ ಶಿಷ್ಯಾಃಶಿಖಾಯುಕ್ತಾ ಭವಿಷ್ಯಂತಿ ತದಾ ಮಮ ।
ಶ್ವೇತಃ ಶ್ವೇತ ಶಿಖಶ್ಚೈವ ಶ್ವೇತಾಶ್ವಃ ಶ್ವೇತಲೋಹಿತಃ ॥೧೪॥

---

೯–೧೦. ಸೂರ್ಯ ಪುತ್ರನಾದ ವೈವಸ್ವತಮನುವು ನಿನ್ನ ಮೊಮ್ಮಗನಾಗುವನು. ಆ ಕಲ್ಪದಲ್ಲಿ ದ್ವಾಪರಯುಗದ ಕೊನೆಯಲ್ಲಿ ಲೋಕಾನುಗ್ರಹಕ್ಕಾಗಿಯೂ, ಬ್ರಾಹ್ಮಣರ ಹಿತಕ್ಕಾಗಿಯೂ, ನಾನು ಅವತಾರ ಮಾಡುವೆನು. ಹೀಗೆಯೇ ಪ್ರತಿಯೊಂದು ದ್ವಾಪರಯುಗದ ಕೊನೆಯಲ್ಲಿಯೂ ನಾನು ಅವತಾರಮಾಡುವೆನು.

೧೧–೧೨. ವೈವಸ್ವತಮನ್ವಂತರದ ಮೊದಲನೆಯ ಚತುರ್ಯುಗದ ದ್ವಾಪರಾಂತ್ಯದಲ್ಲಿ ನಾನೇ ವ್ಯಾಸಾವತಾರವನ್ನು ಮಾಡುವೆನು. ಅದೇ ಕಲಿಯುಗದ ಅಂತ್ಯದಲ್ಲಿ ಬ್ರಾಹ್ಮಣರ ರಕ್ಷಣೆಗೋಸ್ಕರವಾಗಿ, ಶ್ವೇತನೆಂಬ ಮುನಿಯಾಗಿ ಅವತಾರ ಮಾಡುವೆನು.

೧೩–೧೫. ಮನೋಹರವಾದ ಹಿಮವತ್ಪರ್ವತದ ಛಾಗಲವೆಂಬ ಶಿಖರದಲ್ಲಿ, ಶಿಖಾಯುಕ್ತನಾಗಿ, ಶ್ವೇತಮುನಿಯಾಗಿ, ಅವತಾರಮಾಡಿದಾಗ, ನನಗೆ ಶ್ವೇತ, ಶ್ವೇತಶಿಖ, ಶ್ವೇತಾಸ್ಯ, ಶ್ವೇತಲೋಹಿತ, ಎಂಬ ನಾಲ್ವರು, ವೇದಾಧ್ಯಯನ ಸಂಪನ್ನರೂ, ಬ್ರಹ್ಮಜ್ಞಾನಿಗಳೂ, ಆದ

ಚತ್ವಾರಸ್ತು ಮಹಾತ್ಮಾನೋ ಬ್ರಾಹ್ಮಣಾ ವೇದಪಾರಗಾಃ ।
ತತಸ್ತೇ ಬ್ರಹ್ಮಭೂಯಿಷ್ಠಾ ದೃಷ್ಟ್ವಾ ಬ್ರಹ್ಮಗತಿಂ ಪರಾಂ ॥೧೫॥
ಮತ್ಸಮೀಪಂ ಗಮಿಷ್ಯಂತಿ ಧ್ಯಾನಯೋಗಪರಾಯಣಾಃ ।
ತತಃ ಪುನರ್ಯದಾ ಬ್ರಹ್ಮನ್ ದ್ವಿತಿಯೇ ದ್ವಾಪರೇ ಪ್ರಭುಃ ॥೧೬॥
ಪ್ರಜಾಪತಿರ್ಯದಾ ವ್ಯಾಸಃ ಸತ್ಯೋ ನಾಮ ಭವಿಷ್ಯತಿ ।
ತದಾ ಲೋಕಹಿತಾರ್ಥಾಯ ಸುತಾರೋ ನಾಮ ನಾಮತಃ ॥೧೭॥
ಭವಿಷ್ಯಾಮಿ ಕಲೌ ತಸ್ಮಿನ್ ಶಿಷ್ಯಾನುಗ್ರಹಕಾಮ್ಯಯಾ ।
ತತ್ರಾಪಿ ಮಮ ತೇ ಶಿಷ್ಯಾ ನಾಮತಃ ಪರಿಕೀರ್ತಿತಾಃ ॥೧೮॥
ದುಂದುಭಿಃ ಶತರೂಪಶ್ಚ ಋಚೀಕಃ ಕೇತುಮಾಂಸ್ತದಾ ।
ಪ್ರಾಪ್ಯ ಯೋಗಂ ತಥಾ ಧ್ಯಾನಂ ಸ್ಥಾಪ್ಯ ಬ್ರಹ್ಮ ಚ ಭೂತಲೇ ॥
ರುದ್ರಲೋಕಂ ಗಮಿಷ್ಯಂತಿ ಸಹಚಾರಿತ್ವಮೇವ ಚ ।
ತೃತೀಯೇ ದ್ವಾಪರೇ ಚೈವ ಯದಾ ವ್ಯಾಸಸ್ತು ಭಾರ್ಗವಃ ॥೨೦॥
ತದಾಽಪ್ಯಹಂ ಭವಿಷ್ಯಾಮಿ ದಮನಸ್ತು ಯುಗಾಂತಿಕೇ ।
ತತ್ರಾಪಿ ಚ ಭವಿಷ್ಯಂತಿ ಚತ್ವಾರೋ ಮಮ ಪುತ್ರಕಾಃ ॥೨೧॥

---

ಶಿಷ್ಯರು ಇರುವರು. ಆ ಶಿಷ್ಯರು ಬ್ರಹ್ಮಜ್ಞಾನವೇ ಪರಗತಿ ಎಂಬುದಾಗಿ ತಿಳಿದು, ಧ್ಯಾನಯೋಗಾಸಕ್ತರಾಗಿ ನನ್ನ ಸಮೀಪಕ್ಕೆ ಬರುವರು.

೧೬–೧೯. ಎರಡನೆಯ ದ್ವಾಪರದಲ್ಲಿ ಸತ್ಯನೆಂಬ ವ್ಯಾಸನು ಅವತಾರಮಾಡಿರುವನು. ಆ ಕಲಿಯುಗದಲ್ಲಿ, ನಾನು ಶಿಷ್ಯರಿಗೆ ಅನುಗ್ರಹ ಮಾಡಬೇಕೆಂದು, ಸುತಾರನೆಂಬ ಹೆಸರಿಂದ ಅವತಾರಮಾಡುವೆನು. ಆ ನನಗೆ, ದುಂದುಭಿ, ಶತರೂಪ, ಋಚೀಕ, ಕೇತುಮಂತ ಎಂಬ ನಾಲ್ಕು ಜನ ಶಿಷ್ಯರಾಗುವರು. ಆ ಶಿಷ್ಯರು ಯೋಗಾಭ್ಯಾಸದಿಂದ ಧ್ಯಾನ ಶಕ್ತಿಯನ್ನು ಪಡೆದು ಭೂಮಿಯಲ್ಲಿ ಬ್ರಹ್ಮಜ್ಞಾನವನ್ನು ಸ್ಥಾಪಿಸಿ, ರುದ್ರ ಲೋಕಕ್ಕೆ ಹೋಗಿ, ನನ್ನ ಸಹಚರರಾಗಿರುವರು.

೨೦–೨೩. ಮೂರನೆಯ ದ್ವಾಪರದಲ್ಲಿ ಭಾರ್ಗವನೆಂಬ ವ್ಯಾಸನಾಗುವನು. ಆಗ ನಾನು ಕಲಿಯುಗದಲ್ಲಿ ದಮನನೆಂಬ ಹೆಸರಿನಿಂದ ಅವತಾರಮಾಡುವೆನು. ವಿಕೋಶ, ವಿಕೇಶ, ವಿಪಾಶ, ಪಾಪನಾಶನ ಎಂಬ

ವಿಕೋಶಶ್ಚ ವಿಕೇಶಶ್ಚ ವಿಪಾಶಃ ಪಾಪನಾಶನಃ ।
ತೇಽಪಿ ತೇನೈವ ಮಾರ್ಗೇಣ ಯೋಗೋಕ್ತೇನ ಮಹೌಜಸಃ ॥೨೨॥

ರುದ್ರಲೋಕಂ ಗಮಿಷ್ಯಂತಿ ಪುನರಾವೃತ್ತಿದುರ್ಲಭಂ ।
ಚತುರ್ಥೇ ದ್ವಾಪರೇ ಚೈವ ಯದಾ ವ್ಯಾಸೋಽಂಗಿರಾಃ ಸ್ಮೃತಃ ॥೨೩॥

ತದಾಽಪ್ಯಹಂ ಭವಿಷ್ಯಾಮಿ ಸುಹೋತ್ರೋ ನಾಮ ನಾಮತಃ ।
ತತ್ರಾಪಿ ಮಮ ತೇ ಪುತ್ರಾಶ್ಚತ್ವಾರೋಽಪಿ ತಪೋಧನಾಃ ॥೨೪॥

ದ್ವಿಜಶ್ರೇಷ್ಠಾ ಭವಿಷ್ಯಂತಿ ಯೋಗಾತ್ಮಾನೋ ದೃಢವ್ರತಾಃ ।
ಸುಮುಖೋ ದುರ್ಮುಖಶ್ಚೈವ ದುರ್ದರೋ ದುರತಿಕ್ರಮಃ ॥೨೫॥

ಪ್ರಾಪ್ಯ ಯೋಗಗತಿಂ ಸೂಕ್ಷ್ಮಾಂ ವಿಮಲಾ ದಗ್ಧಕಿಲ್ಬಿಷಾಃ ।
ತೇಽಪಿ ತೇನೈವ ಮಾರ್ಗೇಣ ಯೋಗಯುಕ್ತಾ ಮಹೌಜಸಃ ॥೨೬॥

ರುದ್ರಲೋಕಂ ಗಮಿಷ್ಯಂತಿ ಪುನರಾವೃತ್ತಿ ದುರ್ಲಭಂ ।
ಪಂಚಮೇ ದ್ವಾಪರೇ ಚೈವ ವ್ಯಾಸಸ್ತು ಸವಿತಾ ಯದಾ ॥೨೭॥

ತದಾ ಚಾಪಿ ಭವಿಷ್ಯಾಮಿ ಕಂಕೋ ನಾಮ ಮಹಾತಪಾಃ ।
ಅನುಗ್ರಹಾರ್ಥಂ ಲೋಕಾನಾಂ ಯೋಗಾತ್ಮೈಕ ಕಲಾಗತಿಃ ॥೨೮॥

---

ನಾಲ್ವರು ಶಿಷ್ಯರು ಯೋಗಶಾಸ್ತ್ರೋಕ್ತವಾದ ಮಾರ್ಗದಿಂದ ಮಹಾ ತೇಜಸ್ವಿಗಳಾಗಿದ್ದು, ಪುನರ್ಜನ್ಮವಿಲ್ಲದ ರುದ್ರಲೋಕವನ್ನು ಪಡೆಯುವರು.

೨೪–೨೬. ನಾಲ್ಕನೆಯ ದ್ವಾಪರಯುಗದಲ್ಲಿ ಅಂಗಿರಸೆಂಬ ವ್ಯಾಸನಿರುವನು. ಆ ಕಲಿಯುಗದಲ್ಲಿ ನಾನು ಸುಹೋತ್ರನೆಂಬ ಹೆಸರಿನಿಂದ ಅವತಾರಮಾಡುವೆನು. ಸುಮುಖ, ದುರ್ಮುಖ, ದುರ್ದರ, ದುರತಿಕ್ರಮ ಎಂಬ ನಾಲ್ವರು ಶಿಷ್ಯರು ಯೋಗದಿಂದ ಸೂಕ್ಷ್ಮಗತಿಯುಂಟಾಗುವುದೆಂದು ತಿಳಿದು ಆ ಮಾರ್ಗದಿಂದಲೇ ತಪಸ್ಸನ್ನು ಮಾಡಿ, ನಿರ್ಮಲರಾಗಿ ಪಾಪಗಳನ್ನೆಲ್ಲವನ್ನೂ ಕಳೆದುಕೊಂಡು ಮಹಾತೇಜಸ್ವಿಗಳಾಗಿ ಪುನರಾವೃತ್ತಿಯಿಲ್ಲದ ರುದ್ರಲೋಕಕ್ಕೆ ಹೋಗುವರು.

೨೭–೩೦. ಐದನೆಯ ದ್ವಾಪರಯುಗದಲ್ಲಿ ಸವಿತಾ ಎಂಬ ವ್ಯಾಸನಾಗುವನು. ಆ ಕಲಿಯುಗದಲ್ಲಿ ಲೋಕಾನುಗ್ರಹಾರ್ಥವಾಗಿ ವಿದ್ಯೆಯನ್ನು ಆತ್ಮಸಾಧನೆಗಾಗಿ ಹರಡುತ್ತಾ ಕಂಕನೆಂಬ ಹೆಸರಿನಿಂದ ನಾನು ಮಹಾ

ಚತ್ವಾರಸ್ತು ಮಹಾಭಾಗಾ ವಿಮಲಾಃ ಶುದ್ಧಯೋನಯಃ ।
ಶಿಷ್ಯಾ ಮಮ ಭವಿಷ್ಯಂತಿ ಯೋಗಾತ್ಮಾನೋ ದೃಢವ್ರತಾಃ ॥೨೯॥
ಸನಕಃ ಸನಂದನಶ್ಚೈವ ಪ್ರಭುರ್ಯಶ್ಚ ಸನಾತನಃ ।
ವಿಭುಃ ಸನತ್ಕುಮಾರಶ್ಚ ನಿರ್ಮಮಾ ನಿರಹಂಕೃತಾಃ ॥೩೦॥
ಮತ್ಸಮೀಪಮುಪೇಷ್ಯಂತಿ ಪುನರಾವೃತ್ತಿದುರ್ಲಭಂ ।
ಪರಿವರ್ತೇ ಪುನಃ ಷಷ್ಠೇ ಮೃತ್ಯುರ್ವ್ಯಾಸೋ ಯದಾ ವಿಭುಃ ॥೩೧॥
ತದಾಽಪ್ಯಹಂ ಭವಿಷ್ಯಾಮಿ ಲೋಗಾಕ್ಷಿರ್ನಾಮ ನಾಮತಃ ।
ತತ್ರಾಪಿ ಮಮ ತೇ ಶಿಷ್ಯಾ ಯೋಗಾತ್ಮಾನೋ ದೃಢವ್ರತಾಃ ॥೩೨॥
ಭವಿಷ್ಯಂತಿ ಮಹಾಭಾಗಾಶ್ಚತ್ವಾರೋ ಲೋಕಸಮ್ಮತಾಃ ।
ಸುಧಾಮಾ ವಿರಜಾಶ್ಚೈವ ಶಂಖಪಾದ್ರಜ ಏವ ಚ ॥೩೩॥
ಯೋಗಾತ್ಮಾನೋ ಮಹಾತ್ಮಾನಃ ಸರ್ವೇ ವೈ ದಗ್ಧಕಿಲ್ಬಿಷಾಃ ।
ತೇಽಪಿ ತೇನೈವಮಾರ್ಗೇಣ ಧ್ಯಾನಯೋಗಸಮನ್ವಿತಾಃ ॥೩೪॥

---

ತೇಜಸ್ವಿಯಾಗಿ ಅವತಾರಮಾಡುವೆನು. ಆಗ ನನಗೆ ಯೋಗಿಗಳೂ ದೃಢವಾದ ವ್ರತನಿಯಮವುಳ್ಳವರೂ, ಆದ ಸನಕ, ಸನಂದನ, ಸನಾತನ, ಸನತ್ಕುಮಾರರೆಂಬ ನಾಲ್ವರು ಶಿಷ್ಯರು ಇರುವರು. ಆ ಶಿಷ್ಯರು ಅಹಂಕಾರ ಮಮಕಾರಗಳಿಲ್ಲದವರಾಗಿ, ಪುನರ್ಜನ್ಮವಿಲ್ಲದವರಾಗಿ ನನ್ನ ಸಮೀಪಕ್ಕೆ ಬಂದು ಸೇರುವರು.

೩೧-೩೪. ಆರನೆಯ ದ್ವಾಪರಯುಗದಲ್ಲಿ ಮೃತ್ಯು ಎಂಬ ಹೆಸರಿನ ವ್ಯಾಸನು ಅಧಿಕಾರಕ್ಕೆ ಬರುವನು. ಆ ಕಲಿಯುಗದಲ್ಲಿ ನಾನು ಲೋಗಾಕ್ಷಿ ಎಂಬ ಹೆಸರಿನಿಂದ ಅವತಾರಮಾಡುವೆನು. ಆಗಲೂ ಯೋಗಿಗಳಾಗಿಯೂ, ದೃಢವಾದ ವ್ರತನಿಯಮವುಳ್ಳವರಾಗಿಯೂ, ಇರುವ ಸುಧಾಮ, ವಿರಜ, ಶಂಖಪಾದ, ರಜ ಎಂಬ ನಾಲ್ವರು ಶಿಷ್ಯರು ನನಗಿರುವರು. ಆ ಶಿಷ್ಯರು ಧ್ಯಾನಯೋಗದಿಂದ ಕೂಡಿ, ತಮ್ಮ ಪಾಪಗಳನ್ನೆಲ್ಲವನ್ನೂ ನಾಶಮಾಕೊಂಡು, ಪುನರಾವೃತ್ತಿರಹಿತವಾದ ನನ್ನ ಸಮೀಪಕ್ಕೆ ಬರುವರು.

ಮತ್ಸಮೀಪಂ ಗಮಿಷ್ಯಂತಿ ಪುನರಾವೃತ್ತಿ ದುರ್ಲಭಂ ।
ಸಪ್ತಮೇ ಪರಿವರ್ತೇ ತು ಯದಾ ವ್ಯಾಸಃ ಶತಕ್ರತುಃ ॥೩೫॥
ವಿಭುನಾಮಾ ಮಹಾತೇಜಾಃ ಪ್ರಥಿತಃ ಪೂರ್ವಜನ್ಮನಿ ।
ತದಾಽಪ್ಯಹಂ ಭವಿಷ್ಯಾಮಿ ಕಲೌ ತಸ್ಮಿನ್ಯುಗಾಂತಿಕೇ ॥೩೬॥
ಜೈಗೀಷವ್ಯೋ ವಿಭುಃ ಖ್ಯಾತಃ ಸರ್ವೇಷಾಂ ಯೋಗಿನಾಂ ವರಃ ।
ತತ್ರಾಪಿ ಮಮ ತೇ ಪುತ್ರ ಭವಿಷ್ಯಂತಿ ಯುಗೇ ತಥಾ ॥೩೭॥
ಸಾರಸ್ವತಶ್ಚ ಮೇಘಶ್ಚ ಮೇಘವಾಹಃ ಸುವಾಹನಃ ।
ತೇಽಪಿ ತೇನೈವ ಮಾರ್ಗೇಣ ಧ್ಯಾನಯೋಗ ಪರಾಯಣಾಃ ॥೩೮॥
ಗಮಿಷ್ಯಂತಿ ಮಹಾತ್ಮಾನೋ ರುದ್ರಲೋಕಂ ನಿರಾಮಯಂ ।
ವಸಿಷ್ಠಶ್ಚಾಷ್ಟಮೋ ವ್ಯಾಸಃ ಪರಿವರ್ತೇ ಭವಿಷ್ಯತಿ ॥೩೯॥
ಯದಾ ತದಾ ಭವಿಷ್ಯಾಮಿ ನಾಮ್ನಾಽಹಂ ದಧಿವಾಹನಃ ।
ತತ್ರಾಪಿ ಮಮ ತೇ ಪುತ್ರಾ ಯೋಗಾತ್ಮಾನೋ ದೃಢವ್ರತಾಃ ॥೪೦॥
ಭವಿಷ್ಯಂತಿ ಮಹಾಯೋಗಾಸ್ತೇಷಾಂ ನಾಸ್ತಿ ಸಮೋ ಭುವಿ ।
ಕಪಿಲಶ್ಚಾಸುರಿಶ್ಚೈವ ತಥಾ ಪಂಚಶಿಖೋ ಮುನಿಃ ॥೪೧॥

---

೩೫–೩೮. ಏಳನೆಯ ದ್ವಾಪರಾಂತ್ಯದಲ್ಲಿ ಶತಕ್ರತು ಎಂಬ ಹೆಸರಿನ ವ್ಯಾಸನಿರುವನು. ಅವನು ಹಿಂದಿನ ಜನ್ಮದಲ್ಲಿ ವಿಭು ಎಂಬ ಹೆಸರಿನಿಂದ ಮಹಾತೇಜಸ್ವಿಯಾಗಿ, ಪ್ರಸಿದ್ಧನಾಗಿದ್ದನು. ಆ ಕಲಿಯುಗದ ಕೊನೆಯಲ್ಲಿ ನಾನು ಜೈಗೀಷವ್ಯನೆಂಬ ಹೆಸರಿನಿಂದ ಯೋಗಿಶ್ರೇಷ್ಠನಾಗಿ ಅವತಾರಮಾಡುವೆನು. ಆಗ ನನಗೆ ಸಾರಸ್ವತ, ಮೇಘ, ಮೇಘವಾಹ, ಸುವಾಹನ, ಎಂಬ ನಾಲ್ವರು ಶಿಷ್ಯರಿರುವರು. ಅವರೂ ಯೋಗಮಾರ್ಗದಲ್ಲಿ, ಧ್ಯಾನಯೋಗಾಸಕ್ತರಾಗಿ, ಅದರ ಮಹಿಮೆಯಿಂದ ದುಃಖರಹಿತವಾದ ರುದ್ರಲೋಕಕ್ಕೆ ಹೋಗುವರು.

೩೯–೪೨. ಎಂಟನೆಯ ದ್ವಾಪರಾಂತ್ಯದಲ್ಲಿ ವಸಿಷ್ಠನೆಂಬ ವ್ಯಾಸನಾಗುವನು. ಆ ಕಲಿಯುಗದಲ್ಲಿ ನಾನು ದಧಿವಾಹನನೆಂಬ ಹೆಸರಿನಿಂದ ಅವತಾರಮಾಡುವೆನು. ಆಗ ನನಗೆ ಅಸಮಾನ ಯೋಗಿಗಳಾದ ಕಪಿಲ, ಆಸುರಿ, ಪಂಚಶಿಖ, ಬಾಷ್ಕಲ ಎಂಬ ಧರ್ಮಾತ್ಮರೂ, ತೇಜಸ್ವಿಗಳೂ ಆದ ಶಿಷ್ಯರಿರುವರು. ಅವರು ಮಾಹೇಶ್ವರ ಯೋಗವನ್ನು ಪಡೆದು,

ಬಾಷ್ಕಲ ಶ್ಚ ಮಹಾಯೋಗೀ ಧರ್ಮಾತ್ಮಾನೋ ಮಹೌಜಸಃ ।
ಪ್ರಾಪ್ಯ ಮಾಹೇಶ್ವರಂ ಯೋಗಂ ಜ್ಞಾನಿನೋ ದಗ್ಧಕಿಲ್ಬಿಷಾಃ ॥೪೨॥
ಮತ್ಸಮೀಪಂ ಗಮಿಷ್ಯಂತಿ ಪುನರಾವೃತ್ತಿ ದುರ್ಲಭಂ ।
ಪರಿವರ್ತೇತು ನವಮೇ ವ್ಯಾಸಃ ಸಾರಸ್ವತೋ ಯದಾ ॥೪೩॥
ತದಾಽಪ್ಯಹಂ ಭವಿಷ್ಯಾಮಿ ಋಷಭೋ ನಾಮ ನಾಮತಃ ।
ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಮಹೌಜಸಃ ॥೪೪॥
ಪರಾಶರಶ್ಚ ಗರ್ಗಶ್ಚ ಭಾರ್ಗವಾಂಗಿರಸೌ ತದಾ ।
ಭವಿಷ್ಯಂತಿ ಮಹಾತ್ಮಾನೋ ಬ್ರಾಹ್ಮಣಾ ವೇದಪಾರಗಾಃ ॥೪೫॥
ಧ್ಯಾನಮಾರ್ಗಂ ಸಮಾಸಾದ್ಯ ಗಮಿಷ್ಯಂತಿ ತಥೈವ ಚ ।
ಸರ್ವೇ ತಪೋಬಲೋತ್ಕೃಷ್ಟಾಃ ಶಾಪಾನುಗ್ರಹಕೋವಿದಾಃ ॥೪೬॥
ತೇಽಪಿ ತೇನೈವ ಮಾರ್ಗೇಣ ಯೋಗೋಕ್ತೇನ ತಪಸ್ವಿನಃ ।
ರುದ್ರಲೋಕಂ ಗಮಿಷ್ಯಂತಿ ಪುನರಾವೃತ್ತಿ ದುರ್ಲಭಂ ॥೪೭॥
ದಶಮೋ ದ್ವಾಪರೇ ವ್ಯಾಸಃ ತ್ರಿಪಾದ್ವೈ ನಾಮ ನಾಮತಃ ।
ಯದಾ ಭವಿಷ್ಯತೇ ವಿಪ್ರಸ್ತದಾಽಹಂ ಭವಿತಾ ಮುನಿಃ ॥೪೮॥

---

ಜ್ಞಾನಿಗಳಾಗಿ ಪಾಪವನ್ನು ಕಳೆದುಕೊಂಡು ಪುನರ್ಜನ್ಮವಿಲ್ಲದವರಾಗಿ ನನ್ನ ಸಮೀಪಕ್ಕೆ ಬರುವರು.

೪೩–೪೭. ಒಂಬತ್ತನೆಯ ದ್ವಾಪರಾಂತ್ಯದಲ್ಲಿ ಸಾರಸ್ವತನೆಂಬುವನು ವ್ಯಾಸನಾಗಿರುವನು. ಆ ಕಲಿಯುಗದಲ್ಲಿ ನಾನು ಋಷಭನೆಂಬ ಯೋಗಿಯಾಗಿ ಅವತರಿಸುವೆನು. ಪರಾಶರ, ಗರ್ಗ, ಭಾರ್ಗವ, ಅಂಗಿರಸ ಎಂಬ ನಾಲ್ಕು ಜನ ಶಿಷ್ಯರುಬ್ರಹ್ಮಜ್ಞಾನಸಂಪನ್ನರಾಗಿ, ವೇದಾಧ್ಯಯನ ಸಂಪನ್ನರಾಗಿ, ಮಹಾತೇಜಸ್ವಿಗಳಾಗಿರುವರು. ಅವರು ಶಾಪಾನುಗ್ರಹ ಶಕ್ತಿಯುಳ್ಳವರಾಗಿಯೂ ಇರುವರು. ಅವರು ಯೋಗಮಾರ್ಗದಿಂದಲೇ ತಪಸ್ಸನ್ನು ಮಾಡಿ, ಪುನರಾವೃತ್ತಿಯಿಲ್ಲದವರಾಗಿ ರುದ್ರಲೋಕಕ್ಕೆ ಹೋಗುವರು.

೪೮–೫೧. ಹತ್ತನೆಯ ದ್ವಾಪರಯುಗದಲ್ಲಿ ತ್ರಿಪಾದನೆಂಬ ವ್ಯಾಸನಿರುವನು. ಆ ಕಲಿಯುಗದಲ್ಲಿ ನಾನು ವಿಪ್ರಮುನಿ ಎಂಬ ಹೆಸರಿನಿಂದ

ಹಿಮವಚ್ಛಿಖರೇ ರಮ್ಯೇ ಭೃಗುತುಂಗೇ ನಗೋತ್ತಮೇ ।
ನಾಮ್ನಾ ಭೃಗೋಸ್ತು ಶಿಖರಂ ಪ್ರಥಿತಂ ದೇವಪೂಜಿತಂ ॥೪೯॥

ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ದೃಢವ್ರತಾಃ ।
ಬಲಬಂಧುರ್ನಿರಾಮಿತ್ರಃ ಕೇತುಶೃಂಗಸ್ತಪೋಧನಃ ॥೫೦॥

ಯೋಗಾತ್ಮಾನೋ ಮಹಾತ್ಮಾನಸ್ತಪೋಯೋಗಸಮನ್ವಿತಾಃ ।
ರುದ್ರಲೋಕಂ ಗಮಿಷ್ಯಂತಿ ತಪಸಾ ದಗ್ಧಕಿಲ್ಬಿಷಾಃ ॥೫೧॥

ಏಕಾದಶೇ ದ್ವಾಪರೇ ತು ವ್ಯಾಸಸ್ತು ತ್ರಿವ್ರತೋ ಯದಾ ।
ತದಾಽಪ್ಯಹಂ ಭವಿಷ್ಯಾಮಿ ಗಂಗಾದ್ವಾರೇ ಕಲೌ ತಥಾ ॥೫೨॥

ಉಗ್ರೋ ನಾಮ ಮಹಾತೇಜಾಃ ಸರ್ವಲೋಕೇಷು ವಿಶ್ರುತಃ ।
ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಮಹೌಜಸಃ ॥೫೩॥

ಲಂಬೋದರಶ್ಚ ಲಂಬಾಕ್ಷೋ ಲಂಬಕೇಶಃ ಪ್ರಲಂಬಕಃ ।
ಪ್ರಾಪ್ಯ ಮಾಹೇಶ್ವರಂ ಯೋಗಂ ರುದ್ರಲೋಕಂ ಗತಾ ಹಿ ತೇ ॥೫೪॥

ದ್ವಾಪರೇ ಪರಿವರ್ತೇ ತು ಶತತೇಜಾ ಯದಾ ಮುನಿಃ ।
ಭವಿಷ್ಯತಿ ಮಹಾತೇಜಾ ವ್ಯಾಸಸ್ತು ಕವಿಸತ್ತಮಃ ॥೫೫॥

---

ಹಿಮವತ್ಪರ್ವತದ, ಭೃಗುತುಂಗವೆಂಬ ಪರ್ವತದ ಭೃಗುಶಿಖರದಲ್ಲಿ ಅವತರಿಸುವೆನು. ಆಗ ನನಗೆ ವ್ರತನಿಯಮವುಳ್ಳ, ಬಲಬಂಧು, ನಿರಾಮಿತ್ರ, ಕೇತುಶೃಂಗ, ತಪೋಧನ ಎಂಬ ನಾಲ್ಕು ಜನ ಶಿಷ್ಯರಿರುವರು. ಅವರು ತಪಸ್ಸಿನಿಂದಲೂ, ಯೋಗಶಕ್ತಿಯಿಂದಲೂ, ಕೂಡಿದವರಾಗಿ, ಪಾಪಗಳನ್ನು ನಾಶಮಾಡಿಕೊಂಡು ರುದ್ರಲೋಕಕ್ಕೆ ಹೋಗುವರು.

೫೨–೫೩. ಹನ್ನೊಂದನೆಯ ದ್ವಾಪರಯುಗದಲ್ಲಿ ತ್ರಿವ್ರತನೆಂಬ ವ್ಯಾಸನಿರುವನು. ಆ ಕಲಿಯುಗದಲ್ಲಿ ನಾನು ಗಂಗಾದ್ವಾರದಲ್ಲಿ ಉಗ್ರನೆಂಬ ಹೆಸರಿನಿಂದ, ಮಹಾತೇಜಸ್ವಿಯಾಗಿ ಲೋಕಗಳಲ್ಲೆಲ್ಲಾ ಪ್ರಸಿದ್ಧನಾಗಿ, ಅವತರಿಸುವೆನು. ಮಹಾತೇಜಸ್ವಿಗಳಾದ ಲಂಬೋದರ, ಲಂಬಾಕ್ಷ, ಲಂಬಕೇಶ, ಪ್ರಲಂಬಕ ಎಂಬ ನಾಲ್ಕು ಜನ ಶಿಷ್ಯರು ಮಾಹೇಶ್ವರಯೋಗವನ್ನು ಪಡೆದು ರುದ್ರಲೋಕವನ್ನು ಹೊಂದುವರು.

೫೪–೫೮. ಹನ್ನೆರಡನೆಯ ದ್ವಾಪರಯುಗದಲ್ಲಿ ಶತತೇಜನೆಂಬ ಮುನಿಯು ಕವಿಶ್ರೇಷ್ಠನಾಗಿ ವ್ಯಾಸನಾಗುವನು. ಆ ಕಲಿಯುಗದಲ್ಲಿ ನಾನು

ತದಾಽಪ್ಯಹಂ ಭವಿಷ್ಯಾಮಿ ಕಲಾವಿಹ ಯುಗಾಂತಿಕೇ ।
ಹೈತುಕಂ ವನಮಾಸಾದ್ಯ ಅತ್ರಿರ್ನಾಮ್ನಾ ಪರಿಶ್ರುತಃ ॥೫೬॥
ತತ್ರಾಪಿ ಮಮ ತೇ ಪುತ್ರಾ ಭಸ್ಮಸ್ನಾನಾನುಲೇಪನಾಃ ।
ಭವಿಷ್ಯಂತಿ ಮಹಾಯೋಗಾ ರುದ್ರಲೋಕ ಪರಾಯಣಾಃ ॥೫೭॥
ಸರ್ವಜ್ಞಃ ಸಮಬುದ್ಧಿಶ್ಚ ಸಾಧ್ಯಃ ಸರ್ವಸ್ತಥೈವ ಚ ।
ಪ್ರಾಪ್ಯ ಮಾಹೇಶ್ವರಂ ಯೋಗಂ ರುದ್ರಲೋಕಂ ಗತಾ ಹಿ ತೇ॥೫೮॥
ತ್ರಯೋದಶೇ ಪುನಃ ಪ್ರಾಪ್ತೇ ಪರಿವರ್ತೇ ಕ್ರಮೇಣ ತು ।
ಧರ್ಮೋ ನಾರಾಯಣೋ ನಾಮ ವ್ಯಾಸಸ್ತು ಭವಿತಾ ಯದಾ ॥
ತದಾಽಪ್ಯಹಂ ಭವಿಷ್ಯಾಮಿ ವಾಲಿರ್ನಾಮ ಮಹಾಮುನಿಃ ।
ವಾಲಖಿಲ್ಯಾಶ್ರಮೇ ಪುಣ್ಯೇ ಪರ್ವತೇ ಗಂಧಮಾದನೇ ॥೬೦॥
ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ತಪೋಧನಾಃ ।
ಸುಧಾಮಾ ಕಾಶ್ಯಪಶ್ಚೈವ ವಾಸಿಷ್ಠೋ ವಿರಜಾಸ್ತಥಾ ॥೬೧॥
ಮಹಾ ಯೋಗಬಲೋಪೇತಾ ವಿಮಲಾ ಊರ್ಧ್ವರೇತಸಃ ।
ಪ್ರಾಪ್ಯ ಮಾಹೇಶ್ವರಂ ಯೋಗಂ ರುದ್ರಲೋಕಂ ಗತಾ ಹಿ ತೇ ॥

---

ಹೈತುಕವೆಂಬ ವನದಲ್ಲಿ ಅತ್ರಿ ಎಂಬ ಹೆಸರಿನಿಂದ ಅವತರಿಸುವೆನು. ನನ್ನ ನಾಲ್ವರು ಶಿಷ್ಯರು ಭಸ್ಮಸ್ನಾನಾನುಲೇಪನವನ್ನು ಮಾಡುತ್ತಿರುವವರಾಗಿ, ರುದ್ರಲೋಕವನ್ನು ಪಡೆಯುವುದರಲ್ಲಾಸಕ್ತರಾಗಿ, ಸರ್ವಜ್ಞ, ಸಮಬುದ್ಧಿ, ಸಾಧ್ಯ, ಸರ್ವ ಎಂಬ ಹೆಸರಿನಿಂದ ಪ್ರಸಿದ್ಧರಾಗಿ, ಮಾಹೇಶ್ವರ ಯೋಗದಿಂದ ರುದ್ರಲೋಕಕ್ಕೆ ಹೋಗುವರು.

೫೯–೬೨. ಹದಿಮೂರನೆಯ ದ್ವಾಪರಾಂತ್ಯದಲ್ಲಿ ಧರ್ಮದೇವನು ನಾರಾಯಣನೆಂಬ ವ್ಯಾಸನಾಗುವನು. ಆಗ ನಾನು ವಾಲಖಿಲ್ಯಾಶ್ರಮದಲ್ಲಿ, ಗಂಧಮಾದನಪರ್ವತದಲ್ಲಿ ವಾಲಿ ಎಂಬ ಮಹಾಮುನಿಯಾಗಿ ಅವತರಿಸುವೆನು. ಸುಧಾಮ, ಕಾಶ್ಯಪ, ವಾಸಿಷ್ಠ, ವಿರಜ ಎಂಬ ನಾಲ್ಕು ಜನ ಶಿಷ್ಯರು, ತಪಸ್ವಿಗಳಾಗಿ, ಯೋಗಬಲದಿಂದ ಕೂಡಿ, ಊರ್ಧ್ವರೇತಸ್ಸುಳ್ಳವರಾಗಿ, ಮಾಹೇಶ್ವರ ಯೋಗದಿಂದ ರುದ್ರಲೋಕಕ್ಕೆ ಹೋಗುವರು.

ಯದಾ ವ್ಯಾಸಸ್ತರಕ್ಷುಸ್ತು ಪರ್ಯಾಯೇ ತು ಚತುರ್ದಶೇ ।
ತತ್ರಾಪಿ ಪುನರೇವಾಹಂ ಭವಿಷ್ಯಾಮಿ ಯುಗಾಂತಿಕೇ ॥೬೩॥

ವಂಶೇ ತ್ವಂಗಿರಸಾಂ ಶ್ರೇಷ್ಠೇ ಗೌತಮೋ ನಾಮ ನಾಮತಃ ।
ಭವಿಷ್ಯತಿ ಮಹಾಪುಣ್ಯಂ ಗೌತಮಂ ನಾಮ ತದ್ವನಂ ॥೬೪॥

ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಕಲೌ ತದಾ ।
ಅತ್ರಿರ್ದೇವಸದಶ್ಚೈವ ಶ್ರವಣೋಽಥ ಶ್ರವಿಷ್ಠಕಃ ॥೬೫॥

ಯೋಗಾತ್ಮಾನೋ ಮಹಾತ್ಮಾನಃ ಸರ್ವೇ ಯೋಗಸಮನ್ವಿತಾಃ ।
ಪ್ರಾಪ್ಯ ಮಾಹೇಶ್ವರಂ ಯೋಗಂ ರುದ್ರಲೋಕಾಯ ತೇ ಗತಾಃ ॥೬೬॥

ತತಃ ಪಂಚದಶೇ ಪ್ರಾಪ್ತೇ ಪರಿವರ್ತೇ ಕ್ರಮಾಗತೇ ।
ತ್ರೈಯ್ಯಾರುಣಿರ್ಯದಾ ವ್ಯಾಸೋ ದ್ವಾಪರೇ ಸಮುಪದ್ಯತ ॥೬೭॥

ತದಾಽಪ್ಯಹಂ ಭವಿಷ್ಯಾಮಿ ನಾಮ್ನಾ ವೇದಶಿರಾ ದ್ವಿಜಃ ।
ತತ್ರ ವೇದಶಿರೋ ನಾಮ ಅಸ್ತ್ರಂ ತತ್ಪಾರಮೇಶ್ವರಂ ॥೬೮॥

ಭವಿಷ್ಯತಿ ಮಹಾವೀರ್ಯಂ ವೇದಶೀರ್ಷಶ್ಚ ಪರ್ವತಃ ।
ಹಿಮವತ್ಪೃಷ್ಠಮಾಸಾದ್ಯ ಸರಸ್ವತ್ಯಾಂ ನಗೋತ್ತಮೇ ॥೬೯॥

ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ತಪೋಧನಾಃ ।
ಕುಣಿಶ್ಚ ಕುಣಿಬಾಹುಶ್ಚ ಕುಶರೀರಃ ಕುನೇತ್ರಕಃ ॥೭೦॥

---

೬೩-೬೬. ಹದಿನಾಲ್ಕನೆಯ ದ್ವಾಪರಯುಗದಲ್ಲಿ ತರಕ್ಷು ಎಂಬ ವ್ಯಾಸನಿರುವನು. ಆಗ ನಾನು ಅಂಗಿರಸ್ಸೆಂಬ ಋಷಿಯ ವಂಶದಲ್ಲಿ ಗೌತಮನೆಂಬ ಹೆಸರಿನಿಂದ ಅವತರಿಸುವೆನು. ಆ ವನಕ್ಕೆ ಗೌತಮವನ ವೆಂದು ಹೆಸರು ಬರುವುದು. ಅತ್ರಿ, ದೇವಸದ, ಶ್ರವಣ, ಶ್ರವಿಷ್ಠಕ ಎಂಬ ನಾಲ್ಕು ಜನ ನನ್ನ ಶಿಷ್ಯರು, ಯೋಗಿಗಳಾಗಿ ಮಾಹೇಶ್ವರ ಯೋಗ ದಿಂದ ರುದ್ರಲೋಕವನ್ನು ಪಡೆಯುವರು.

೬೭-೭೧. ಹದಿನೈದನೆಯ ದ್ವಾಪರದಲ್ಲಿ ತ್ರೈಯ್ಯಾರುಣಿ ಎಂಬುವನು ವ್ಯಾಸನಾಗುವನು. ಆಗ ನಾನುವೇದಶಿರನೆಂಬ ಬ್ರಾಹ್ಮಣನಾಗಿ, ಹಿಮ ವತ್ಪರ್ವತದ ತಪ್ಪಲಿನಲ್ಲಿರುವ, ಸರಸ್ವತೀ ನದೀತೀರದಲ್ಲಿ, ವೇದ ಶೀರ್ಷ ವೆಂಬ ಪರ್ವತದಲ್ಲಿ ಅವತರಿಸುವೆನು. ಅಲ್ಲಿವೇದಶಿರಸ್ಸೆಂಬ ಮಹಾಬಲ

ಯೋಗಾತ್ಮಾನೋ ಮಹಾತ್ಮಾನಃ ಸರ್ವೇ ತೇ ಹ್ಯೂರ್ಧ್ವರೇತಸಃ ।
ಪ್ರಾಪ್ಯ ಮಾಹೇಶ್ವರಂ ಯೋಗಂ ರುದ್ರಲೋಕಾಯ ತೇ ಗತಾಃ ॥
ವ್ಯಾಸೋ ಯುಗೇ ಷೋಡಶೇ ತು ಯದಾ ದೇವೋ ಭವಿಷ್ಯತಿ ।
ತತ್ರ ಯೋಗಪ್ರದಾನಾಯ ಭಕ್ತಾನಾಂ ಚ ಯತಾತ್ಮನಾಂ ॥೭೨॥
ತದಾಽಪ್ಯಹಂ ಭವಿಷ್ಯಾಮಿ ಗೋಕರ್ಣೋ ನಾಮ ನಾಮತಃ ।
ಭವಿಷ್ಯತಿ ಸುಪುಣ್ಯಂ ಚ ಗೋಕರ್ಣಂ ನಾಮ ತದ್ವನಂ ॥೭೩॥
ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಚ ಯೋಗಿನಃ ।
ಕಾಶ್ಯಪೋ ಹ್ಯುಶನಾಶ್ಚೈವ ಚ್ಯವನೋಽಥ ಬೃಹಸ್ಪತಿಃ ॥೭೪॥
ತೇಽಪಿ ತೇನೈವ ಮಾರ್ಗೇಣ ಧ್ಯಾನಯೋಗಸಮನ್ವಿತಾಃ ।
ಪ್ರಾಪ್ಯ ಮಾಹೇಶ್ವರಂ ಯೋಗಂ ಗಂತಾರೋ ರುದ್ರಮೇವ ಹಿ ॥
ತತಃ ಸಪ್ತದಶೇ ಚೈವ ಪರಿವರ್ತೇ ಕ್ರಮಾಗತೇ ।
ಯದಾ ಭವಿಷ್ಯತಿ ವ್ಯಾಸೋ ನಾಮ್ನಾ ದೇವ ಕೃತಂ ಜಯಃ ॥೭೬॥

---

ವುಳ್ಳ ಅಸ್ತ್ರವು ಉತ್ಪತ್ತಿಯಾಗುವುದು. ಕುಣಿ, ಕುಣಿಬಾಹು, ಕುಶರೀರ, ಕುನೇತ್ರಕ, ಎಂಬ ನಾಲ್ಕು ಜನ ಶಿಷ್ಯರು, ಯೋಗಿಗಳಾಗಿ, ಮಹಾ ಮಹಿಮರಾಗಿ, ಊರ್ಧ್ವರೇತಸ್ಸುಳ್ಳವರಾಗಿ, ಮಾಹೇಶ್ವರ ಯೋಗವನ್ನು ನನ್ನಿಂದ ಪಡೆದು ರುದ್ರಲೋಕಕ್ಕೆ ಹೋಗುವರು.

೭೨–೭೫. ಹದಿನಾರನೆಯ ದ್ವಾಪರಯುಗದಲ್ಲಿ ದೇವನೆಂಬ ವ್ಯಾಸ ನಾಗುವನು. ಆ ಕಲಿಯುಗದಲ್ಲಿ ಭಕ್ತರಿಗೆ, ಯೋಗಮಾರ್ಗವನ್ನು ಹೇಳಿ ಕೊಡುವುದಕ್ಕಾಗಿ, ಗೋಕರ್ಣನೆಂಬ ಹೆಸರಿನಿಂದ ಅವತಾರಮಾಡುವೆನು. ನಾನು ವಾಸಮಾಡುವ ಆ ವನವು ಪುಣ್ಯಕರವಾದ ಗೋಕರ್ಣ ಎಂಬ ಹೆಸರುಳ್ಳದ್ದಾಗುವುದು ಅಲ್ಲಿ ಕಾಶ್ಯಪ, ಉಶನಾ, ಚ್ಯವನ, ಬೃಹಸ್ಪತಿ, ಎಂಬ ನಾಲ್ಕು ಜನ ಶಿಷ್ಯರು, ಯೋಗಿಗಳಾಗಿ, ಧ್ಯಾನಯೋಗಾಭ್ಯಾಸ ದಿಂದ ಮಾಹೇಶ್ವರಯೋಗವನ್ನು ಪಡೆದು ರುದ್ರನಲ್ಲಿಯೇ ಐಕ್ಯ ವಾಗುವರು.

೭೬–೭೯. ಬ್ರಹ್ಮನೇ, ಕೇಳು. ಹದಿನೇಳನೆಯ ದ್ವಾಪರಾಂತ್ಯದಲ್ಲಿ, ಕೃತಂಜಯನೆಂಬ ವ್ಯಾಸನಾಗುವನು. ಆ ಕಲಿಯುಗದಲ್ಲಿ ನಾನು ಗುಹಾ

ತದಾಽಪ್ಯಹಂ ಭವಿಷ್ಯಾಮಿ ಗುಹಾವಾಸೀತಿ ನಾಮತಃ ।
ಹಿಮವಚ್ಛಿಖರೇ ರಮ್ಯೇ ಮಹೋತ್ತುಂಗೇ ಮಹಾಲಯೇ ॥೭೭॥
ಸಿದ್ಧಕ್ಷೇತ್ರಂ ಮಹಾಪುಣ್ಯಂ ಭವಿಷ್ಯತಿ ಮಹಾಲಯಂ ।
ತತ್ರಾಪಿ ಮಮ ತೇ ಪುತ್ರಾ ಯೋಗಜ್ಞಾ ಬ್ರಹ್ಮವಾದಿನಃ ॥೭೮॥
ಭವಿಷ್ಯಂತಿ ಮಹಾತ್ಮಾನೋ ನಿರ್ಮಮಾ ನಿರಹಂಕೃತಾಃ ।
ಉತಥ್ಯೋ ವಾಮದೇವಶ್ಚ ಮಹಾಯೋಗೋ ಮಹಾಬಲಃ ॥೭೯॥
ತೇಷಾಂ ಶತಸಹಸ್ರಂ ತು ಶಿಷ್ಯಾಣಾಂ ಧ್ಯಾನಯೋಗಿನಾಂ ।
ಭವಿಷ್ಯತಿ ತದಾ ಕಾಲೇ ಸರ್ವೇ ತೇ ಧ್ಯಾನಯುಂಜಕಾಃ ॥೮೦॥
ಯೋಗಾಭ್ಯಾಸರತಾಶ್ಚೈವ ಹೃದಿ ಕೃತ್ವಾ ಮಹೇಶ್ವರಂ ।
ಮಹಾಲಯೇ ಪದಂ ನ್ಯಸ್ತಂ ದೃಷ್ಟ್ವಾಯಾಂತಿ ಶಿವಂ ಪದಂ ॥೮೧॥
ಯೇ ಚಾಪ್ಯನ್ಯೇ ಮಹಾತ್ಮಾನಃ ಕಲೌ ತಸ್ಮಿನ್ಯುಗಾಂತಿಕೇ ।
ಧ್ಯಾನೇ ಮನಃ ಸಮಾಧಾಯ ವಿಮಲಾಃ ಶುದ್ಧಬುದ್ಧಯಃ ॥೮೨॥

---

ವಾಸಿ ಎಂಬ ಹೆಸರಿನಿಂದ ಅವತಾರಮಾಡಿ, ಹಿಮತ್ಪರ್ವತದ ಮನೋಹರವಾದ ಅತ್ಯಂತ ಎತ್ತರವಾದ ಮಹಾಲಯವೆಂಬ ಶಿಖರದಲ್ಲಿ, ವಾಸವಾಗಿರುವೆನು. ಅಲ್ಲಿ ಅಹಂಕಾರ ಮಮಕಾರಗಳಿಲ್ಲದ, ಯೋಗವನ್ನು ಬಲ್ಲ, ಬ್ರಹ್ಮಜ್ಞಾನಿಗಳಾದ, ಉತಥ್ಯ, ವಾಮದೇವ, ಮಹಾಯೋಗ, ಮಹಾಬಲ ಎಂಬ ನಾಲ್ಕು ಜನ ಶಿಷ್ಯರು, ಇರುವರು. ಅವರಿಗೆ ನೂರು ಸಾವಿರ ಜನ ಶಿಷ್ಯರಿರುವರು.

೮೦-೮೧. ಆ ಕಾಲದಲ್ಲಿ ಆ ಶಿಷ್ಯರೆಲ್ಲರೂ, ಧ್ಯಾನಮಾಡುತ್ತಾ, ಯೋಗಾಭ್ಯಾಸದಲ್ಲಾಸಕ್ತರಾಗಿ, ಮಹೇಶ್ವರನನ್ನು ಮನಸ್ಸಿನಲ್ಲಿಟ್ಟುಕೊಂಡು, ಮಹಾಲಯ ಶಿಖರದಲ್ಲಿರುವ ನನ್ನನ್ನು ದರ್ಶನಮಾಡಿ, ಶಿವನ ಸ್ಥಾನವಾದ ರುದ್ರಲೋಕಕ್ಕೆ ಹೋಗುವರು.

೮೨. ಆ ಕಲಿಯುಗದ ಕೊನೆಯಲ್ಲಿ ಇತರಮಹಾತ್ಮರು ಧ್ಯಾನದಿಂದ ಮನಸ್ಸನ್ನು ಏಕಾಗ್ರವಾಗಿ ನಿಲ್ಲಿಸಿ ನಿರ್ಮಲವಾದ ಬುದ್ಧಿಯುಳ್ಳವರಾಗಿ, ನನ್ನ ಅನುಗ್ರಹದಿಂದ ದುಃಖವಿಲ್ಲದವರಾಗಿ ರುದ್ರಲೋಕಕ್ಕೆ ಹೋಗುವರು.

ಮಮ ಪ್ರಸಾದಾದ್ಯಾಸ್ಯಂತಿ ರುದ್ರಲೋಕಂ ಗತಜ್ವರಾಃ ।
ತತೋಽಷ್ಟಾದಶಮೇ ಚೈವ ಪರಿವರ್ತೇ ಯದಾ ವಿಭೋ ॥೮೩॥

ತದಾ ಋತಂಜಯೋ ನಾಮ ವ್ಯಾಸಸ್ತು ಭವಿತಾ ಮುನಿಃ।
ತದಾಽಪ್ಯಹಂ ಭವಿಷ್ಯಾಮಿ ಶಿಖಂಡೀ ನಾಮ ನಾಮತಃ ॥೮೪॥

ಸಿದ್ಧ ಕ್ಷೇತ್ರೇ ಮಹಾಪುಣ್ಯೇ ದೇವದಾನವಪೂಜಿತೇ ।
ಹಿಮವಚ್ಛಿಖರೇ ರಮ್ಯೇ ಶಿಖಂಡೀ ನಾಮ ಪರ್ವತಃ ॥೮೫॥

ಶಿಖಂಡಿನೋ ವನಂ ಚಾಪಿ ಯತ್ರ ಸಿದ್ಧನಿಷೇವಿತಂ ।
ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ತಪೋಧನಾಃ ॥೮೬॥

ವಾಚಶ್ರವಾ ಋಚೀಕಶ್ಚ ಶ್ಯಾವಾಶ್ವಶ್ಚ ಯತೀಶ್ವರಃ ।
ಯೋಗಾತ್ಮಾನೋ ಮಹಾತ್ಮಾನಃ ಸರ್ವೇ ತೇ ವೇದಪಾರಗಾಃ ॥

ಪ್ರಾಪ್ಯ ಮಾಹೇಶ್ವರಂ ಯೋಗಂ ರುದ್ರಲೋಕಾಯ ಸಂವೃತಾಃ ।
ಅಥ ಏಕೋನವಿಂಶೇ ತು ಪರಿವರ್ತೇ ಕ್ರಮಾಗತೇ ॥೮೮॥

ವ್ಯಾಸಸ್ತು ಭವಿತಾ ನಾಮ್ನಾ ಭರದ್ವಾಜೋ ಮಹಾಮುನಿಃ ।
ತದಾಽಪ್ಯಹಂ ಭವಿಷ್ಯಾಮಿ ಜಟಾಮಾಲೀ ಚ ನಾಮತಃ ॥೮೯॥

---

೮೩–೮೭. ಎಲೈ ಬ್ರಹ್ಮನೇ, ಹದಿನೆಂಟನೆಯ ದ್ವಾಪರದಲ್ಲಿ, ಋತಂಜಯನೆಂಬ ಮುನಿಯು ವ್ಯಾಸನಾಗುವನು. ಆಗ ನಾನು ಶಿಖಂಡಿ ಎಂಬ ಹೆಸರಿನಿಂದ ಅವತಾರಮಾಡುವೆನು. ದೇವದಾನವರ ಪೂಜಾ ಯೋಗ್ಯವಾದ, ಮಹಾಪುಣ್ಯಕರವಾದ ಹಿಮವತ್ಪರ್ವತದಲ್ಲಿ ಸಿದ್ಧಕ್ಷೇತ್ರ ದಲ್ಲಿ ಸಿದ್ಧರು ವಾಸವಾಗಿರುವ, ಶಿಖಂಡಿ( ನವಿಲುಗಳಿರುವ) ವನದಲ್ಲಿ ನಾನಿರುವೆನು. ಅಲ್ಲಿ ವಾಚಶ್ರವ, ಋಚೀಕ, ಶ್ಯಾವಾಶ್ವ, ಯತೀಶ್ವರ, ಎಂಬ ನಾಲ್ಕು ಜನ ಶಿಷ್ಯರು ತಪಸ್ವಿಗಳೂ, ವೇದವನ್ನು ಸಂಪೂರ್ಣ ವಾಗಿ ತಿಳಿದವರೂ, ಮಹಾಮಹಿಮರೂ, ಯೋಗವನ್ನು ತಿಳಿದವರೂ ಆಗಿ, ಮಾಹೇಶ್ವರ ಯೋಗದಿಂದ ರುದ್ರಲೋಕ ವಾಸಕ್ಕೆ ಸಿದ್ಧರಾಗುವರು.

೮೮–೯೧. ಹತ್ತೊಂಬತ್ತನೆಯ ದ್ವಾಪರದಲ್ಲಿ, ಭರದ್ವಾಜಮುನಿಯು ವ್ಯಾಸನಾಗುವನು. ಆಗ ನಾನು ಮನೋಹರವಾದ ಹಿಮತ್ಪರ್ವತದ ಶಿಖರದಲ್ಲಿ ಜಟಾಮಾಲೀ ಎಂಬ ಹೆಸರಿನಿಂದ ಅವತಾರಮಾಡುವೆನು.

ಹಿಮವಚ್ಛಿಖರೇ ರಮ್ಯೇ ಜಟಾಯುರ್ಯತ್ರ ಪರ್ವತಃ ।
ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಮಹೌಜಸಃ ॥೯೦॥

ಹಿರಣ್ಯನಾಭಃ ಕೌಶಲ್ಯೋ ಲೋಲಾಕ್ಷೀ ಕುಥುಮಿಸ್ತಥಾ ।
ಈಶ್ವರಾ ಯೋಗಧರ್ಮಾಣಃ ಸರ್ವೇ ತೇ ಹ್ಯೂರ್ಧ್ವರೇತಸಃ ॥೯೧॥

ಪ್ರಾಪ್ಯ ಮಾಹೇಶ್ವರಂ ಯೋಗಂ ರುದ್ರಲೋಕಾಯ ಸಂಸ್ಥಿತಾಃ ।
ತತೋ ವಿಂಶತಿಮಶ್ಚೈವ ಪರಿವರ್ತೋ ಯದಾ ತದಾ ॥೯೨॥

ಗೌತಮಸ್ತು ತದಾ ವ್ಯಾಸೋ ಭವಿಷ್ಯತಿ ಮಹಾಮುನಿಃ ।
ತದಾಽಪ್ಯಹಂ ಭವಿಷ್ಯಾಮಿ ಅಟ್ಟಹಾಸಸ್ತು ನಾಮತಃ ॥೯೩॥

ಅಟ್ಟಹಾಸಪ್ರಿಯಾಶ್ಚೈವ ಭವಿಷ್ಯಂತಿ ತದಾ ನರಾಃ ।
ತತ್ರೈವ ಹಿಮವತ್ಪೃಷ್ಠೇ ಅಟ್ಟಹಾಸೋ ಮಹಾಗಿರಿಃ ॥೯೪॥

ದೇವದಾನವಯಕ್ಷೇಂದ್ರ ಸಿದ್ಧಚಾರಣಸೇವಿತಃ ।
ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಮಹೌಜಸಃ ॥೯೫॥

ಯೋಗಾತ್ಮಾನೋ ಮಹಾತ್ಮಾನೋ ಧ್ಯಾಯಿನೋ ನಿಯತವ್ರತಾಃ ।
ಸುಮಂತುರ್ಬರ್ಬರೀ ವಿದ್ವಾನ್ಕಬಂಧಃ ಕುಶಿಕಂಧರಃ ॥೯೬॥

---

ಆಗ ನನಗೆ ಹಿರಣ್ಯನಾಭ, ಕೌಶಲ್ಯ, ಲೋಲಾಕ್ಷೀ, ಕುಥುಮಿ, ಎಂಬ ಯೋಗವನ್ನು ತಿಳಿದ ಊರ್ಧ್ವರೇತಸ್ಸುಗಳಾದ ನಾಲ್ಕು ಜನ ಶಿಷ್ಯರಿರುವರು. ಅವರು ಮಾಹೇಶ್ವರಯೋಗವನ್ನು ಪಡೆದು, ರುದ್ರಲೋಕಕ್ಕೆ ಹೊರಡಲು ಸಿದ್ಧರಾಗುವರು.

೯೨–೯೬. ಇಪ್ಪತ್ತನೆಯ ದ್ವಾಪರಾಂತ್ಯದಲ್ಲಿ ಗೌತಮಮಹಾಮುನಿಯು ವ್ಯಾಸನಾಗುವನು. ಆಗ ನಾನು ಅಟ್ಟಹಾಸನೆಂಬ ಹೆಸರಿನಿಂದ ಅವತಾರಮಾಡುವನು. ಆ ಕಾಲದಲ್ಲಿ ಜನರೆಲ್ಲರೂ, ಅಟ್ಟಹಾಸದಲ್ಲಿ ಆಸಕ್ತರಾಗಿರುವರು. ಹಿಮವತ್ಪರ್ವತದಲ್ಲಿ ದೇವತೆಗಳೂ, ದಾನವರೂ, ಸಿದ್ಧರೂ, ಯಕ್ಷರೂ, ಚಾರಣರೂ, ವಿಹರಿಸುವ ಅಟ್ಟಹಾಸವೆಂಬ ದೊಡ್ಡ ಪರ್ವತವಿರುವುದು. ಅಲ್ಲಿಯೇ ನನ್ನ ಶಿಷ್ಯರಾದ, ಸುಮಂತು, ಬರ್ಬರಿ, ಕಬಂಧ, ಕುಶಿಕಂಧರ ಎಂಬ ನಾಲ್ಕು ಜನರು, ವ್ರತನಿಯಮವುಳ್ಳವರಾಗಿ, ಯೋಗಭ್ಯಾಸವನ್ನು ಮಾಡುತ್ತಾ, ಮಹಾಮಹಿಮರಾಗಿ, ಮಾಹೇಶ್ವರಯೋಗವನ್ನು ಪಡೆದು ರುದ್ರಲೋಕಕ್ಕೆ ಹೋದರು.

ಪ್ರಾಪ್ಯ ಮಾಹೇಶ್ವರಂ ಯೋಗಂ ರುದ್ರಲೋಕಾಯ ತೇ ಗತಾಃ ।
ಏಕವಿಂಶೇ ಪುನಃ ಪ್ರಾಪ್ತೇ ಪರಿವರ್ತೇ ಕ್ರಮಾಗತೇ ॥೯೭॥

ವಾಚಶ್ರವಾಃ ಸ್ಮೃತೋ ವ್ಯಾಸೋ ಯದಾ ಸ ಋಷಿಸತ್ತಮಃ ।
ತದಾಽಪ್ಯಹಂ ಭವಿಷ್ಯಾಮಿ ದಾರುಕೋ ನಾಮ ನಾಮತಃ ॥೯೮॥

ತಸ್ಮಾದ್ಭವಿಷ್ಯತೇ ಪುಣ್ಯಂ ದೇವದಾರುವನಂ ಶುಭಂ ।
ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಮಹೌಜಸಃ ॥೯೯॥

ಪ್ಲಕ್ಷೋ ದಾರ್ಭಾಯಣಿಶ್ಚೈವ ಕೇತುಮಾನ್ಗೌತಮಸ್ತಥಾ ।
ಯೋಗಾತ್ಮಾನೋ ಮಹಾತ್ಮಾನೋ ನಿಯತಾ ಊರ್ಧ್ವರೇತಸಃ ॥

ನೈಷ್ಠಿಕಂ ವ್ರತಮಾಸ್ಥಾಯ ರುದ್ರಲೋಕಾಯ ತೇ ಗತಾಃ ।
ದ್ವಾವಿಂಶೇ ಪರಿವರ್ತೇ ತು ವ್ಯಾಸಃ ಶುಷ್ಮಾಯಣೋ ಯದಾ ॥

ತದಾಽಪ್ಯಹಂ ಭವಿಷ್ಯಾಮಿ ವಾರಾಣಸ್ಯಾಂ ಮಹಾಮುನಿಃ ।
ನಾಮ್ನಾ ವೈ ಲಾಂಗಲೀ ಭೀಮೋ ಯತ್ರ ದೇವಾಃ ಸವಾಸವಾಃ ॥

ದ್ರಕ್ಷ್ಯಂತಿ ಮಾಂ ಕಲೌ ತಸ್ಮಿನ್ ಭವಂ ಚೈವ ಹಲಾಯುಧಂ ।
ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಸುಧಾರ್ಮಿಕಾಃ ॥೧೦೪॥

---

೯೭–೧೦೦. ಇಪ್ಪತ್ತೊಂದನೆಯ ದ್ವಾಪರದಲ್ಲಿ, ವಾಚಶ್ರವನೆಂಬ ಋಷಿಶ್ರೇಷ್ಠನು ವ್ಯಾಸನಾಗುವನು. ಆಗ ನಾನು ದಾರುಕನೆಂಬ ಹೆಸರಿನಿಂದ ಅವತರಿಸುವೆನು. ನಾನು ವಾಸಮಾಡುವ ವನವು ದೇವದಾರುವನವೆಂದು ಪ್ರಸಿದ್ಧವಾಗಿರುವುದು. ಅಲ್ಲಿ ಪ್ಲಕ್ಷ, ದರ್ಭಾಯಣಿ, ಕೇತುಮಂತ, ಗೌತಮ ಎಂಬ ನಾಲ್ವರು ನನ್ನ ಶಿಷ್ಯರು, ಯೋಗಾಭ್ಯಾಸಮಾಡಿ ಮಹಾಮಹಿಮರಾಗಿ, ಊರ್ಧ್ವರೇತಸ್ಸುಳ್ಳವರಾಗಿ, ನೈಷ್ಠಿಕವ್ರತವನ್ನಾಚರಿಸಿ ರುದ್ರಲೋಕಕ್ಕೆ ಹೋಗುವರು.

೧೦೧–೧೦೪. ಇಪ್ಪತ್ತೆರಡನೆಯ ದ್ವಾಪರಾಂತದಲ್ಲಿ ಶುಷ್ಮಾಯಣನೆಂಬ ವ್ಯಾಸನಿರುವನು. ಆ ಕಲಿಯುಗದಲ್ಲಿ ನಾನು ಕಾಶಿಯಲ್ಲಿ ಲಾಂಗಲಿ ಎಂಬ ಹೆಸರಿನಿಂದ ಪರಾಕ್ರಮಿಯಾಗಿ, ನೇಗಿಲನ್ನು ಆಯುಧವನ್ನಾಗಿ ಧರಿಸಿ, ಅವತಾರಮಾಡಿರುವೆನು. ದೇವೇಂದ್ರನೊಡನೆ ದೇವತೆಗಳು ಬಂದು ಅಲ್ಲಿ ನನ್ನ ದರ್ಶನವನ್ನು ಮಾಡುವರು. ಭಲ್ಲವಿ, ಮಧುಪಿಂಗ,

ಭಲ್ಲವೀ ಮಧುಪಿಂಗಶ್ಚ ಶ್ವೇತಕೇತುಃ ಕುಶಸ್ತಥಾ ।
ಪ್ರಾಪ್ಯ ಮಾಹೇಶ್ವರಂ ಯೋಗಂ ತೇಽಪಿ ಧ್ಯಾನಪರಾಯಣಾಃ ॥೧೦೪॥

ವಿಮಲಾ ಬ್ರಹ್ಮಭೂಯಿಷ್ಠಾ ರುದ್ರಲೋಕಾಯ ಸಂಸ್ಥಿತಾಃ ।
ಪರಿವರ್ತೇ ತ್ರಯೋವಿಂಶೇ ತೃಣಬಿಂದುರ್ಯದಾ ಮುನಿಃ ॥೧೦೫॥

ವ್ಯಾಸೋ ಹಿ ಭವಿತಾ ಬ್ರಹ್ಮಂಸ್ತದಾಽಹಂ ಭವಿತಾ ಪುನಃ ।
ಶ್ವೇತೋ ನಾಮ ಮಹಾಕಾಯೋ ಮುನಿಪುತ್ರಸ್ತು ಧಾರ್ಮಿಕಃ ॥

ತತ್ರ ಕಾಲಂ ಜರಿಷ್ಯಾಮಿ ತದಾ ಗಿರಿವರೋತ್ತಮೇ ।
ತೇನ ಕಾಲಂ ಜರೋ ನಾಮ ಭವಿಷ್ಯತಿ ಸ ಪರ್ವತಃ ॥೧೦೭॥

ತತ್ರಾಪಿ ಮಮ ತೇ ಶಿಷ್ಯಾ ಭವಿಷ್ಯಂತಿ ತಪಸ್ವಿನಃ ।
ಉಶಿಕೋ ಬೃಹದಶ್ವಶ್ಚ ದೇವಲಃ ಕವಿರೇವ ಚ ॥೧೦೮॥

ಪ್ರಾಪ್ಯ ಮಾಹೇಶ್ವರಂ ಯೋಗಂ ರುದ್ರಲೋಕಾಯ ತೇ ಗತಾಃ ।
ಪರಿವರ್ತೇ ಚತುರ್ವಿಂಶೇ ವ್ಯಾಸೋ ಋಕ್ಷೋ ಯದಾ ವಿಭೋ ॥

---

ಶ್ವೇತಕೇತು, ಕುಶ, ಎಂಬ ನಾಲ್ವರು ನನ್ನ ಶಿಷ್ಯರು ಧ್ಯಾನಯೋಗಾಸಕ್ತರಾಗಿ, ಮಾಹೇಶ್ವರಯೋಗವನ್ನು ಪಡೆದು ಬ್ರಹ್ಮಜ್ಞಾನವನ್ನು ಪಡೆದು ರುದ್ರಲೋಕಕ್ಕೆ ಪ್ರಯಾಣ ಮಾಡುವರು.

೧೦೫-೧೦೮. ಇಪ್ಪತ್ತುಮೂರನೆಯ ದ್ವಾಪರಾಂತದಲ್ಲಿ ತೃಣಬಿಂದು ಮುನಿಯು ವ್ಯಾಸನಾಗುವನು. ಮತ್ತೆ ಆ ಕಲಿಯುಗದಲ್ಲಿ ನಾನು ಶ್ವೇತನೆಂಬ ದೊಡ್ಡ ಶರೀರವುಳ್ಳ ಮುನಿಪುತ್ರನಾಗಿ ಅವತಾರಮಾಡುವೆನು. ಧರ್ಮಮಾರ್ಗಾಸಕ್ತನಾಗಿ ಪರ್ವತ ಪ್ರದೇಶದಲ್ಲಿ ಕಾಲವನ್ನು ಕಳೆಯುತ್ತಿದ್ದುದರಿಂದ, ಆ ಪರ್ವತಕ್ಕೆ ಕಾಲಂಜರ ಪರ್ವತವೆಂದು ಹೆಸರು ಬರುವುದು. ಅಲ್ಲಿಯೂ, ನನಗೆ, ಉಶಿಕ, ಬೃಹದಶ್ವ, ದೇವಲ, ಕವಿ, ಎಂಬ ನಾಲ್ವರು ಶಿಷ್ಯರಿರುವರು. ಅವರು ತಪಸ್ವಿಗಳಾಗಿ ನನ್ನಿಂದ ಮಾಹೇಶ್ವರ ಯೋಗವನ್ನು ಪಡೆದು ರುದ್ರಲೋಕಕ್ಕೆ ಹೋಗುವರು.

೧೦೯-೧೧೧. ಇಪ್ಪತ್ತುನಾಲ್ಕನೆಯ ದ್ವಾಪರಾಂತದಲ್ಲಿ ಋಕ್ಷನೆಂಬುವನು ವ್ಯಾಸನಾಗುವನು. ಆ ಕಲಿಯುಗಾಂತದಲ್ಲಿ ನಾನು ನೈಮಿಷಾರಣ್ಯ

ತದಾಽಪ್ಯಹಂ ಭವಿಷ್ಯಾಮಿ ಕಲೌ ತಸ್ಮಿನ್ಯುಗಾಂತಿಕೇ ।
ಶೂಲೀ ನಾಮ ಮಹಾಯೋಗೀ ನೈಮಿಷೇ ದೇವ ವಂದಿತೇ ॥೧೧೦॥

ತತ್ರಾಪಿ ಮಮ ತೇ ಶಿಷ್ಯಾ ಭವಿಷ್ಯಂತಿ ತಪೋಧನಾಃ ।
ಶಾಲಿಹೋತ್ರೋಽಗ್ನಿವೇಶ್ಯಶ್ಚ ಯುವನಾಶ್ವಃ ಶರದ್ವಸುಃ ॥೧೧೧॥

ತೇಽಪಿ ತೇನೈವ ಮಾರ್ಗೇಣ ರುದ್ರಲೋಕಾಯ ಸಂಸ್ಥಿತಾಃ ।
ಪಂಚವಿಂಶೇ ಪುನಃ ಪ್ರಾಪ್ತೇ ಪರಿವರ್ತೇ ಕ್ರಮಾಗತೇ ॥೧೧೨॥

ವಾಸಿಷ್ಠಸ್ತು ಯದಾ ವ್ಯಾಸಃ ಶಕ್ತಿರ್ನಾಮ್ನಾ ಭವಿಷ್ಯತಿ ।
ತದಾಽಪ್ಯಹಂ ಭವಿಷ್ಯಾಮಿ ದಂಡೀ ಮುಂಡೀಶ್ವರಃ ಪ್ರಭುಃ ॥೧೧೩॥

ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ತಪೋಧನಾಃ ।
ಛಗಲಃ ಕುಂಡಕರ್ಣಶ್ಚ ಕುಂಭಾಂಡಶ್ಚ ಪ್ರವಾಹಕಃ ॥೧೧೪॥

ಪ್ರಾಪ್ಯ ಮಾಹೇಶ್ವರಂ ಯೋಗಮಮೃತತ್ವಾಯ ತೇ ಗತಾಃ ।
ಷಡ್ವಿಂಶೇ ಪರಿವರ್ತೇ ತು ಯದಾ ವ್ಯಾಸಃ ಪರಾಶರಃ ॥೧೧೫॥

ತದಾಽಪ್ಯಹಂ ಭವಿಷ್ಯಾಮಿ ಸಹಿಷ್ಣುರ್ನಾಮ ನಾಮತಃ ।
ಪುರಂ ಭದ್ರವಟಂ ಪ್ರಾಪ್ಯ ಕಲೌ ತಸ್ಮಿನ್ಯುಗಾಂತಿಕೇ ॥೧೧೬॥

---

ದಲ್ಲಿ ಶೂಲಿ ಎಂಬ ಮಹಾಯೋಗಿಯಾಗಿ ಅವತಾರಮಾಡುವೆನು. ಆಗ ನನಗೆ ಶಾಲಿಹೋತ್ರ, ಅಗ್ನಿವೇಶ್ಯ, ಯುವನಾಶ್ವ, ಶರದ್ವಸು ಎಂಬ ನಾಲ್ವರು ತಪಸ್ವಿಗಳಾದ ಶಿಷ್ಯರಿರುವರು. ಅವರೂ ಯೋಗಮಾರ್ಗದಿಂದ ರುದ್ರಲೋಕಕ್ಕೆ ಪ್ರಯಾಣಮಾಡುವರು.

೧೧೨–೧೧೪. ಮತ್ತೆ ಕ್ರಮವಾಗಿ ಇಪ್ಪತ್ತೈದನೆಯ ದ್ವಾಪರಾಂತದಲ್ಲಿ ವಸಿಷ್ಠಪುತ್ರನಾದ ಶಕ್ತಿಮುನಿಯು ವ್ಯಾಸನಾಗುವನು. ಆ ಕಲಿಯುಗದಲ್ಲಿ ನಾನು ಈಶ್ವರನೆಂಬ ಸನ್ಯಾಸಿಯಾಗಿ ಅವತರಿಸುವೆನು. ಛಗಲ, ಕುಂಡಕರ್ಣ, ಕುಂಭಾಂಡ, ಪ್ರವಾಹಕ ಎಂಬ ನಾಲ್ಕು ಜನ ಶಿಷ್ಯರು ತಪಸ್ವಿಗಳಾಗಿದ್ದು ನನ್ನಿಂದ ಮಾಹೇಶ್ವರಯೋಗವನ್ನು ಪಡೆದು ಮೋಕ್ಷವನ್ನು ಹೊಂದುವರು.

೧೧೫–೧೧೬. ಇಪ್ಪತ್ತಾರನೆಯ ದ್ವಾಪರಯುಗಾಂತದಲ್ಲಿ ಪರಾಶರ ಮುನಿಯು ವ್ಯಾಸನಾಗುವನು. ಆ ಕಲಿಯುಗಾಂತದಲ್ಲಿ ನಾನು ಸಹಿಷ್ಣು

**ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ಸುಧಾರ್ಮಿಕಾಃ ।**
**ಉಲೂಕೋ ವಿದ್ಯುತಶ್ಚೈವ ಶಂಬೂಕೋ ಹ್ಯಾಶ್ವಲಾಯನಃ ॥**
**ಪ್ರಾಪ್ಯ ಮಾಹೇಶ್ವರಂ ಯೋಗಂ ರುದ್ರಲೋಕಾಯ ತೇ ಗತಾಃ ।**
**ಸಪ್ತವಿಂಶೇ ಪುನಃ ಪ್ರಾಪ್ತೇ ಪರಿವರ್ತೇ ಕ್ರಮಾಗತೇ ॥೧೧೪॥**
**ಜಾತೂಕರ್ಣ್ಯೋ ಯದಾ ವ್ಯಾಸೋ ಭವಿಷ್ಯತಿ ತಪೋಧನಃ ।**
**ತದಾಽಪ್ಯಹಂ ಭವಿಷ್ಯಾಮಿ ಸೋಮಶರ್ಮಾ ದ್ವಿಜೋತ್ತಮಃ ॥**
**ಪ್ರಭಾಸತೀರ್ಥಮಾಸಾದ್ಯ ಯೋಗಾತ್ಮಾ ಯೋಗವಿಶ್ರುತಃ ।**
**ತತ್ರಾಪಿ ಮಮ ತೇ ಶಿಷ್ಯಾ ಭವಿಷ್ಯಂತಿ ತಪೋಧನಾಃ ॥೧೨೦॥**
**ಅಕ್ಷಪಾದಃ ಕುಮಾರಶ್ಚ ಉಲೂಕೋ ವತ್ಸ ಏವ ಚ ।**
**ಯೋಗಾತ್ಮಾನೋ ಮಹಾತ್ಮಾನೋ ವಿಮಲಾಃ ಶುದ್ಧಬುದ್ಧಯಃ ॥**
**ಪ್ರಾಪ್ಯ ಮಾಹೇಶ್ವರಂ ಯೋಗಂ ರುದ್ರಲೋಕಂ ತತೋ ಗತಾಃ ।**
**ಅಷ್ಟಾವಿಂಶೇ ಪುನಃ ಪ್ರಾಪ್ತೇ ಪರಿವರ್ತೇ ಕ್ರಮಾಗತೇ ॥೧೨೨॥**

---

ಎಂಬ ಹೆಸರಿನಿಂದ ಭದ್ರವಟವೆಂಬ ಪಟ್ಟಣದಲ್ಲಿ ಅವತರಿಸುವೆನು. ಅಲ್ಲಿ ನನಗೆ ಧರ್ಮಜ್ಞರಾದ, ಉಲೂಕ, ವಿದ್ಯುತ, ಶಂಬೂಕ, ಆಶ್ವಲಾಯನ ಎಂಬ ನಾಲ್ಕು ಜನ ಶಿಷ್ಯರು ಇರುವರು. ಅವರು ನನ್ನಿಂದ ಮಾಹೇಶ್ವರಯೋಗವನ್ನು ಪಡೆದು ರುದ್ರಲೋಕಕ್ಕೆ ಹೋಗುವರು.

೧೧೪–೧೨೧. ಕ್ರಮವಾಗಿ ಇಪ್ಪತ್ತೇಳನೆಯ ದ್ವಾಪರಾಂತದಲ್ಲಿ **ಜಾತೂಕರ್ಣಿ** ಎಂಬ ತಪಸ್ವಿಯು ವ್ಯಾಸನಾಗುವನು. ಆ ಕಲಿಯುಗದಲ್ಲಿ **ನಾನು** ಪ್ರಭಾಸತೀರ್ಥದಲ್ಲಿ **ಸೋಮಶರ್ಮ**ನೆಂಬ ಬ್ರಾಹ್ಮಣೋತ್ತಮನಾಗಿ ಅವತರಿಸಿ ಯೋಗಿಯಾಗಿ ಪ್ರಸಿದ್ಧಿಹೊಂದುವೆನು. ಆಗ ನನಗೆ ಅಕ್ಷಪಾದ, ಕುಮಾರ, ಉಲೂಕ, ವತ್ಸ ಎಂಬ ನಾಲ್ವರು ಶಿಷ್ಯರಾಗುವರು. ಅವರು ಮಹಾಮಹಿಮರಾಗಿ, ನಿರ್ಮಲರೂ, ಯೋಗಿಗಳೂ, ಶುದ್ಧವಾದ ಬುದ್ಧಿಯುಳ್ಳವರೂ, ಆಗಿ **ಮಾಹೇಶ್ವರಯೋಗವನ್ನು ಪಡೆದು,** ರುದ್ರಲೋಕಕ್ಕೆ ಹೋಗುವರು.

೧೨೨–೧೨೫. ಮತ್ತೆ ಇಪ್ಪತ್ತೆಂಟನೆಯ ದ್ವಾಪರಾಂತವು ಬರಲಾಗಿ, ವಿಷ್ಣುವು ಪರಾಶರಸುತನಾಗಿ ದ್ವೈಪಾಯನನೆಂಬ ಹೆಸರಿನಿಂದ ವ್ಯಾಸನಾಗು

ಪರಾಶರಸುತಃ ಶ್ರೀಮಾನ್ ವಿಷ್ಣುರ್ಲೋಕ ಪಿತಾಮಹಃ ।
ಯದಾ ಭವಿಷ್ಯತಿ ವ್ಯಾಸೋ ನಾಮ್ನಾ ದ್ವೈಪಾಯನಃ ಪ್ರಭುಃ ॥
ತದಾ ಷಷ್ಠೇನ ಚಾಂಶೇನ ಕೃಷ್ಣಃ ಪುರುಷಸತ್ತಮಃ ।
ವಸುದೇವಾದ್ಯದುಶ್ರೇಷ್ಠೋ ವಾಸುದೇವೋ ಭವಿಷ್ಯತಿ ॥೧೨೪॥
ತದಾಽಪ್ಯಹಂ ಭವಿಷ್ಯಾಮಿ ಯೋಗಾತ್ಮಾ ಯೋಗಮಾಯಯಾ ।
ಲೋಕವಿಸ್ಮಯನಾರ್ಥಾಯ ಬ್ರಹ್ಮಚಾರಿ ಶರೀರಕಃ ॥೧೨೫॥
ಶ್ಮಶಾನೇ ಮೃತಮುತ್ಸೃಜ್ಯ ದೃಷ್ಟ್ವಾ ಕಾಯಮನಾಥಕಂ ।
ಬ್ರಾಹ್ಮಣಾನಾಂ ಹಿತಾರ್ಥಾಯ ಪ್ರವಿಷ್ಟೋ ಯೋಗಮಾಯಯಾ ॥
ದಿವ್ಯಾಂ ಮೇರುಗುಹಾಂ ಪುಣ್ಯಾಂ ತ್ವಯಾ ಸಾರ್ಧಂ ಚ ವಿಷ್ಣುನಾ ।
ಭವಿಷ್ಯಾಮಿ ತದಾ ಬ್ರಹ್ಮನ್ ಲಕುಲೀ ನಾಮ ನಾಮತಃ ॥೧೨೭॥
ಕಾಯಾವತಾರ ಇತ್ಯೇವಂ ಸಿದ್ಧಕ್ಷೇತ್ರಂ ಚ ವೈ ತದಾ ।
ಭವಿಷ್ಯತಿ ಸುವಿಖ್ಯಾತಂ ಯಾವದ್ಭೂಮಿರ್ಧರಿಷ್ಯತಿ ॥೧೨೮॥
ತತ್ರಾಪಿ ಮಮ ತೇ ಪುತ್ರಾ ಭವಿಷ್ಯಂತಿ ತಪಸ್ವಿನಃ ।
ಕುಶಿಕಶ್ಚೈವ ಗರ್ಗಶ್ಚ ಮಿತ್ರಃ ಕೌರುಷ್ಯ ಏವ ಚ ॥೧೨೯॥

---

ವನು. ಆಗ ವಿಷ್ಣುವು ತನ್ನ ಆರನೆಯ ಒಂದಂಶದಿಂದ, ಯಾದವವಂಶದ ವಸುದೇವನ ಪುತ್ರನಾಗಿ, ಅವತರಿಸಿ ಶ್ರೀ ಕೃಷ್ಣನೆಂಬ ಹೆಸರಿನಿಂದ ಪ್ರಸಿದ್ಧನಾಗುವನು. ಆಗ ನಾನು ಯೋಗಮಾಯೆಯಿಂದ, ಲೋಕದ ಜನರನ್ನು ಆಶ್ಚರ್ಯಪಡಿಸುತ್ತಾ, ಬ್ರಹ್ಮಚಾರಿಯ ಶರೀರವುಳ್ಳವನಾಗಿ ಅವತರಿಸುವೆನು.

೧೨೬–೧೨೮. ಮರಣಹೊಂದಿ ಶ್ಮಶಾನದಲ್ಲಿ ದಿಕ್ಕಿಲ್ಲದೆ ಬಿದ್ದಿರುವ ಬ್ರಹ್ಮಚಾರಿಯ ಶವವನ್ನು ಪ್ರವೇಶಿಸಿ, ಯೋಗಮಾಯೆಯಿಂದ ಅದಕ್ಕೆ ಜೀವವು ಬರುವಂತೆ ಮಾಡಿ, ಬ್ರಾಹ್ಮಣರ ಹಿತಕ್ಕಾಗಿ, ಕಾಯಾವತಾರ ವನ್ನು ಸ್ವೀಕರಿಸಿ ಲಕುಲೀ ಎಂಬ ಹೆಸರಿನಿಂದ ಸಿದ್ಧಕ್ಷೇತ್ರದಲ್ಲಿ ವಾಸ ವಾಗಿರುವೆನು. ಈ ಭೂಮಿಯು ಇರುವವರೆಗೂ, ಆ ಸಿದ್ಧಕ್ಷೇತ್ರವು ಪ್ರಸಿದ್ಧವಾಗಿರುವುದು. ನಿನ್ನೊಡನೆಯೂ ವಿಷ್ಣುವಿನೊಡನೆಯೂ ಪರ್ವ ತದ ಗುಹೆಯನ್ನು ಪ್ರವೇಶಿಸುವೆನು.

೧೨೯–೧೩೦. ಈ ಸಂದರ್ಭದಲ್ಲಿಯೂ ನನಗೆ, ಕುಶಿಕ, ಗರ್ಗ, ಮಿತ್ರ, ಕೌರುಷ್ಯ ಎಂದು ನಾಲ್ಕು ಜನ ಶಿಷ್ಯರಿರುವರು. ಅವರು ವೇದವನ್ನು

ಯೋಗಾತ್ಮಾನೋ ಮಹಾತ್ಮಾನೋ ಬ್ರಾಹ್ಮಣಾ ವೇದಪಾರಗಾಃ ।
ಪ್ರಾಪ್ಯ ಮಾಹೇಶ್ವರಂ ಯೋಗಂ ವಿಮಲಾ ಹ್ಯೂರ್ಧ್ವರೇತಸಃ ॥
ರುದ್ರಲೋಕಂ ಗಮಿಷ್ಯಂತಿ ಪುನರಾವೃತ್ತಿದುರ್ಲಭಂ ।
ಏತೇ ಪಾಶುಪತಾಃ ಸಿದ್ಧಾ ಭಸ್ಮೋದ್ಧೂಲಿತವಿಗ್ರಹಾಃ ॥೧೩೧॥
ಲಿಂಗಾರ್ಚನರತಾ ನಿತ್ಯಂ ಬಾಹ್ಯಾಭ್ಯಂತರತಃ ಸ್ಥಿತಾಃ ।
ಭಕ್ತ್ಯಾ ಮಯಿ ಚ ಯೋಗೇನ ಧ್ಯಾನನಿಷ್ಠಾ ಜಿತೇಂದ್ರಿಯಾಃ ॥
ಸಂಸಾರಬಂಧಛೇದಾರ್ಥಂ ಜ್ಞಾನಮಾರ್ಗಪ್ರಕಾಶಕಂ ।
ಸ್ವರೂಪಜ್ಞಾನ ಸಿದ್ಧ್ಯರ್ಥಂ ಯೋಗಂ ಪಾಶುಪತಂ ಮಹತ್ ॥
ಯೋಗಮಾರ್ಗಾ ಅನೇಕಾಶ್ಚ ಜ್ಞಾನಮಾರ್ಗಾಸ್ತ್ವನೇಕಶಃ ।
ನ ನಿವೃತ್ತಿಮುಪಾಯಾಂತಿ ವಿನಾ ಪಂಚಾಕ್ಷರೀಂ ಕ್ವಚಿತ್ ॥೧೩೪॥

---

ಸಂಪೂರ್ಣವಾಗಿ ತಿಳಿದವರಾಗಿಯೂ, ಯೋಗಿಗಳಾಗಿ, ಮಹಾಮಹಿಮರಾಗಿಯೂ, ಬ್ರಹ್ಮಜ್ಞಾನಿಗಳಾಗಿಯೂ, ಇದ್ದು ನನ್ನಿಂದ ಮಾಹೇಶ್ವರ ಯೋಗವನ್ನು ಪಡೆದು, ಊರ್ಧ್ವರೇತಸ್ಸುಗಳಾಗಿ ಪುನರ್ಜನ್ಮವಿಲ್ಲದೇ ರುದ್ರಲೋಕಕ್ಕೆ ಹೋಗುವರು.

೧೩೧-೧೩೨. ಇದುವರೆಗೆ ಹೇಳಿದ ನನ್ನ ಶಿಷ್ಯರೆಲ್ಲರೂ, ಪಶುಪತಿಯಾದ ನನ್ನ ಭಕ್ತರು. ಇವರು ಪ್ರತಿನಿತ್ಯವೂ, ಶರೀರದಲ್ಲಿ ಭಸ್ಮಧಾರಣೆ ಮಾಡಿಕೊಂಡು ಹೊರಗೂ ಮನಸ್ಸಿನಲ್ಲಿಯೂ ನನ್ನಲ್ಲಿ ಭಕ್ತಿಯಿಂದ ಲಿಂಗಾರ್ಚನೆಯನ್ನು ಮಾಡುತ್ತಾ, ಜಿತೇಂದ್ರಿಯರಾಗಿ, ಯೋಗದಿಂದ ಧ್ಯಾನನಿಷ್ಠರಾಗಿರುವರು.

೧೩೩. ಶ್ರೇಷ್ಠವಾದ ಮಾಹೇಶ್ವರಯೋಗವು ಜ್ಞಾನಮಾರ್ಗವನ್ನು ಪ್ರಕಾಶಪಡಿಸಿ, ಸ್ವಸ್ವರೂಪಜ್ಞಾನ ಸಿದ್ಧಿಯನ್ನುಂಟುಮಾಡುವುದು. ಇದರಿಂದ ಉತ್ಪತ್ತಿ ಮರಣರೂಪವಾದ ಸಂಸಾರದ ಕಟ್ಟಿನ ಬಿಡುಗಡೆಯಾಗುವುದು.

೧೩೪. ಯೋಗಮಾರ್ಗವೂ ಅನೇಕವಾಗಿರುವುದು. ಜ್ಞಾನಮಾರ್ಗವೂ, ಅನೇಕವಾಗಿರುವುದು. ಶಿವಪಂಚಾಕ್ಷರೀ ಮಂತ್ರ ಜಪರೂಪವಾದ ವಿದ್ಯೆಯನ್ನು ಬಿಟ್ಟು, ಮತ್ತೊಂದರಿಂದ ಸಂಸಾರದುಃಖದ ನಿವೃತ್ತಿಯಾಗಿ ಸುಖದ ಪ್ರಾಪ್ತಿಯಾಗುವುದಿಲ್ಲ.

**ಯದಾ ಚರೇತ್ತಪಶ್ಚಾಯಂ ಸರ್ವದ್ವಂದ್ವವಿವರ್ಜಿತಂ ।**
**ತದಾ ಸ ಮುಕ್ತೋ ಮಂತವ್ಯಃ ಪಕ್ವಂ ಫಲಮಿವ ಸ್ಥಿತಂ ॥೧೩೫॥**

**ಏಕಾಹಂ ಯಃ ಪುಮಾನ್ಸಮ್ಯಕ್ ಚರೇತ್ಪಾಶುಪತವ್ರತಂ ।**
**ನ ಸಾಂಖ್ಯೇ ಪಂಚರಾತ್ರೇ ವಾ ನ ಪ್ರಾಪ್ನೋತಿ ಗತಿಂ ತದಾ ॥೧೩೬॥**

**ಇತ್ಯೇತದ್ವೈ ಮಯಾ ಪ್ರೋಕ್ತಂ ಅವತಾರೇಷು ಲಕ್ಷಣಂ ।**
**ಮನ್ವಾದಿ ಕೃಷ್ಣಪರ್ಯಂತ ಮಷ್ಟಾವಿಂಶದ್ಯುಗಕ್ರಮಾತ್ ॥೧೩೭॥**

**ತತ್ರ ಶ್ರುತಿಸಮೂಹಾನಾಂ ವಿಭಾಗೋ ಧರ್ಮಲಕ್ಷಣಃ ।**
**ಭವಿಷ್ಯತಿ ತದಾ ಕಲ್ಪೇ ಕೃಷ್ಣದ್ವೈಪಾಯನೋ ಯದಾ ॥೧೩೮॥**

---

೧೩೫. ಮನುಷ್ಯನು ಶೀತೋಷ್ಣಸುಖದುಃಖಾದಿಸಕಲದ್ವಂಧ್ವಗಳ, ಅನುಭವವಿಲ್ಲದವನಾಗಿ, ಯಾವಾಗ ಏಕಾಗ್ರಚಿತ್ತದಿಂದ ತಪಸ್ಸನ್ನು ಮಾಡುವನೋ ಆಗ ಅವನನ್ನು ಮುಕ್ತನೆಂಬುದಾಗಿ ತಿಳಿಯಬೇಕು. ಪಕ್ವವಾದ ಫಲವು ರಸಪೂರ್ಣವಾಗಿರುವಂತೆ, ಅವನು ಬ್ರಹ್ಮಜ್ಞಾನದಿಂದ ಪೂರ್ಣನಾಗಿರುವನು.

೧೩೬. ಯಾವ ಮನುಷ್ಯನು ಒಂದು ದಿನ ಪಾಶುಪತವ್ರತವನ್ನು ವಿಧ್ಯುಕ್ತವಾಗಿ ಮಾಡುವನೋ ಅದರಿಂದ ಬರುವಷ್ಟು ಫಲವನ್ನು ಸಾಂಖ್ಯ ಶಾಸ್ತ್ರಜ್ಞಾನದಿಂದಲಾಗಲಿ, ಪಾಂಚರಾತ್ರಾಗಮಜ್ಞಾನದಿಂದಾಗಲಿ, ಎಂದಿಗೂ ಹೊಂದಲಾರನು.

೧೩೭. ಎಲೈ ಬ್ರಹ್ಮನೇ, ಮನುಮೊದಲುಗೊಂಡು ಕ್ರಮವಾಗಿ ಇಪ್ಪತ್ತೆಂಟು ಚತುರ್ಯುಗಗಳಲ್ಲಿ, ಕೃಷ್ಣಾವತಾರಪರ್ಯಂತವಾಗಿ ಅವತಾರ ಲಕ್ಷಣಗಳನ್ನು ಹೇಳಿದೆನು.

೧೩೮. ಶ್ವೇತವರಾಹಕಲ್ಪದಲ್ಲಿ ಕೃಷ್ಣದ್ವೈಪಾಯನನು ವ್ಯಾಸನಾದಾಗ ವೇದಗಳ ವಿಭಾಗವೂ, ಧರ್ಮಗಳ ಲಕ್ಷಣಗಳನ್ನು ತಿಳಿಸುವ ಶಾಸ್ತ್ರಗಳೂ, ಉಂಟಾಗುವುವು.

॥ ಸೂತ ಉವಾಚ ॥

ನಿಶಮ್ಯೈವಂ ಮಹಾತೇಜಾ ಮಹಾದೇವೇನ ಕೀರ್ತಿತಂ ।
ರುದ್ರಾವತಾರಂ ಭಗವಾನ್ ಪ್ರಣಿಪತ್ಯ ಮಹೇಶ್ವರಂ ॥೧೩೯॥
ತುಷ್ಟಾವ ವಾಗ್ಭಿರಿಷ್ಟಾಭಿಃ ಪುನಃ ಪ್ರಾಹ ಚ ಶಂಕರಂ ।

॥ ಪಿತಾಮಹ ಉವಾಚ ॥

ಸರ್ವೇ ವಿಷ್ಣುಮಯಾ ದೇವಾಃ ಸರ್ವೇ ವಿಷ್ಣುಮಯಾ ಗಣಾಃ ॥
ನ ಹಿ ವಿಷ್ಣುಸಮಾ ಕಾಚಿದ್ಗತಿರನ್ಯಾ ವಿಧೀಯತೇ ।
ಇತ್ಯೇವಂ ಸತತಂ ದೇವಾ ಗಾಯಂತಿ ನಾತ್ರ ಸಂಶಯಃ ॥೧೪೦॥
ಸ ದೇವದೇವೋ ಭಗವಾಂಸ್ತವ ಲಿಂಗಾರ್ಚನೇ ರತಃ ।
ತವ ಪ್ರಣಾಮಪರಮಃ ಕಥಂ ದೇವೋ ಹ್ಯಭೂತ್ಪ್ರಭುಃ ॥೧೪೨॥

॥ ಸೂತ ಉವಾಚ ॥

ನಿಶಮ್ಯ ವಚನಂ ತಸ್ಯ ಬ್ರಹ್ಮಣಃ ಪರಮೇಷ್ಠಿನಃ ।
ಪ್ರಪಿಬನ್ನಿವ ಚಕ್ಷುರ್ಭ್ಯಾಂ ಪ್ರೀತಸ್ತತ್ಪ್ರಶ್ನಗೌರವಾತ್ ॥೧೪೩॥

---

೧೩೯. ಸೂತನು ಹೇಳಿದನು: ಮಹಾತೇಜಸ್ವಿಯಾದ ಬ್ರಹ್ಮನು, ಶಿವನು ಹೇಳಿದ ರುದ್ರಾವತಾರಗಳ ವಿಷಯಗಳನ್ನು ಕೇಳಿ ಆ ದೇವನಿಗೆ ನಮಸ್ಕಾರಮಾಡಿ, ತನಗಿಷ್ಟವಾದ ಮಾತುಗಳಿಂದ, ಸ್ತೋತ್ರಮಾಡಿ, ಮತ್ತೆ ಶಿವನನ್ನು ಕುರಿತು ಹೇಳಿದನು.

೧೪೦–೧೪೨. ಬ್ರಹ್ಮನು ಹೇಳಿದನು: ಓ ಮಹಾದೇವನೇ, ಸಮಸ್ತದೇವತೆಗಳೂ, ವಿಷ್ಣುಸ್ವರೂಪರು, ಸಮಸ್ತಗಣಗಳೂ ವಿಷ್ಣುಸ್ವರೂಪರು. ವಿಷ್ಣುಪದಪ್ರಾಪ್ತಿಗೆ ಸಮಾನವಾದ ಮತ್ತೊಂದು ಸ್ಥಾನವಿಲ್ಲವು. ಆ ಮಹಾಮಹಿಮನಾದ ವಿಷ್ಣುವು ನಿನ್ನ ಲಿಂಗಾರ್ಚನೆಯಲ್ಲಿ ಆಸಕ್ತನಾಗಿ ನಿನಗೆ ನಮಸ್ಕಾರಮಾಡುವುದೇ ಪರಮಫಲವೆಂದು ತಿಳಿದಿರುವೆನು! ಇದು ಹೇಗೆ ಸಂಗತವಾಗುವುದು?

೧೪೩. ಸೂತನು ಹೇಳಿದನು: ಬ್ರಹ್ಮನ ಮಾತನ್ನು ಕೇಳಿ ಶಂಕರನು, ಅವನ ಪ್ರಶ್ನೆಗೆ ಸಂತೋಷಪಡುತ್ತಾ, ದಯಾದೃಷ್ಟಿಯಿಂದ ಅವನನ್ನು ನೋಡುತ್ತಾ, ಅವನಿಗೆ ಪೂಜಾಪ್ರಕರಣವನ್ನು ಹೇಳಿದನು.

ಪೂಜಾಪ್ರಕರಣಂ ತಸ್ಮೈ ತಮಾಲೋಕ್ಯಾಹ ಶಂಕರಃ ।
ಭವಾನ್ನಾರಾಯಣಶ್ಚೈವ ಶಕ್ರಃ ಸಾಕ್ಷಾತ್ಸುರೋತ್ತಮಃ ॥೧೪೪॥

ಮುನಯಶ್ಚ ಸದಾಲಿಂಗಂ ಸಂಪೂಜ್ಯ ವಿಧಿಪೂರ್ವಕಂ ।
ಸ್ವಂ ಸ್ವಂ ಪದಂ ವಿಭೋ ಪ್ರಾಪ್ತಾಃ ತಸ್ಮಾತ್ಸಂಪೂಜಯಂತಿ ತೇ ॥

ಲಿಂಗಾರ್ಚನಂ ವಿನಾ ನಿಷ್ಠಾ ನಾಸ್ತಿ ತಸ್ಮಾಜ್ಜನಾರ್ದನಃ ।
ಆತ್ಮನೋ ಯಜತೇ ನಿತ್ಯಂ ಶ್ರದ್ಧಯಾ ಭಗವಾನ್ಪ್ರಭುಃ ॥೧೪೬॥

ಇತ್ಯೇವಮುಕ್ತ್ವಾ ಬ್ರಹ್ಮಾಣಮನುಗೃಹ್ಯ ಮಹೇಶ್ವರಃ ।
ಪುನಃ ಸಂಪ್ರೇಕ್ಷ್ಯ ದೇವೇಶಂ ತತ್ರೈವಾಂತರಧೀಯತ ॥೧೪೭॥

---

೧೪೪–೧೪೫. ನೀನೂ, ನಾರಾಯಣನೂ, ದೇವತೆಗಳೂ, ಮುನಿಗಳೂ, ವಿಧಿಗನುಸಾರವಾಗಿ ಲಿಂಗಪೂಜೆಯನ್ನು ಮಾಡಿ, ತಮ್ಮ ತಮ್ಮ ಪದವಿಯನ್ನು ಪಡೆದಿರುವರು. ಆದುದರಿಂದಲೇ, ಅವರು ಲಿಂಗಪೂಜೆಯನ್ನು ಮಾಡುತ್ತಿರುವರು.

೧೪೬. ಲಿಂಗಾರ್ಚನೆಯನ್ನು ಬಿಟ್ಟು ಬೇರೊಂದು ಧರ್ಮನಿಷ್ಠೆಯು ಇಲ್ಲವಾದುದರಿಂದ, ಜನರನ್ನು ಸನ್ಮಾರ್ಗದಲ್ಲಿ ನಿಯಮನಮಾಡುವ, ನಾರಾಯಣನು ಲಿಂಗರೂಪಿಯಾದ, ನನ್ನನ್ನು (ಆತ್ಮನನ್ನು) ಪ್ರತಿದಿನವೂ ಭಕ್ತಿಯಿಂದ ಪೂಜಿಸುವನು. ಆದುದರಿಂದಲೇ ಅವನು ಮಹಾಮಹಿಮನಾಗಿ ಸಕಲರಿಗೂ ಒಡೆಯನಾಗಿರುವನು.

೧೪೭. ಹೀಗೆಂದು ಹೇಳಿ ಮಹೇಶ್ವರನು ಬ್ರಹ್ಮನಿಗೆ ಅನುಗ್ರಹವನ್ನು ಮಾಡಿ, ಮತ್ತೆ ದಯಾದೃಷ್ಟಿಯಿಂದ ನೋಡಿ, ಅಲ್ಲಿಯೇ ಅಂತರ್ಧಾನವನ್ನು ಹೊಂದಿದನು. (ಮರೆಯಾದನು)

ತಮುದ್ದಿಶ್ಯ ತದಾ ಬ್ರಹ್ಮಾ ನಮಸ್ಕೃತ್ವಾ ಕೃತಾಂಜಲಿಃ ।
ಸ್ರಷ್ಟುಂ ತ್ವಶೇಷಂ ಭಗವಾಂಲ್ಲಬ್ಧಸಂಜ್ಞಸ್ತು ಶಂಕರಾತ್ ॥೧೫೦॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಚತುರ್ವಿಂಶೋಽಧ್ಯಾಯಃ

---

೧೫೦. ಆಗ ಬ್ರಹ್ಮನು ಆ ಶಂಕರನನ್ನುದ್ದೇಶಿಸಿ, ಕೈಜೋಡಿಸಿ ನಮಸ್ಕಾರ ಮಾಡಿ, ಸಮಸ್ತ ಪ್ರಪಂಚವನ್ನೂ ಸೃಷ್ಟಿಸುವ ಜ್ಞಾನವನ್ನು ಆ ದೇವನಿಂದ ಪಡೆದನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ
ಇಪ್ಪತ್ತನಾಲ್ಕನೆಯ ಅಧ್ಯಾಯವು ಮುಗಿದುದು.



*

## ಅಥ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ
## ಪಂಚವಿಂಶೋಽಧ್ಯಾಯಃ

**ಪಂಚವಿಂಶೇ ಋಷಿಪೃಷ್ಟಲಿಂಗಾರ್ಚನ ವಿಧಿಕ್ರಮಾತ್ ।**
**ಸೂತಃ ಸಂಕ್ಷೇಪತಃ ಪ್ರಾಹ ವಿಧಿಂ ಸ್ನಾನೇ ಶಿವೋದಿತಂ ॥**

**॥ ಋಷಯ ಊಚುಃ ॥**

**ಕಥಂ ಪೂಜ್ಯೋ ಮಹಾದೇವೋ ಲಿಂಗಮೂರ್ತಿ ರ್ಮಹೇಶ್ವರಃ ।**
**ವಕ್ತುಮರ್ಹಸಿ ಚಾಸ್ಮಾಕಂ ರೋಮ ಹರ್ಷಣ ಸಾಂಪ್ರತಂ ॥ ೧ ॥**

**॥ ಸೂತ ಉವಾಚ ॥**

**ದೇವ್ಯಾ ಪೃಷ್ಟೋ ಮಹಾದೇವಃ ಕೈಲಾಸೇ ತಾಂ ನಗಾತ್ಮಜಾಂ ।**
**ಅಂಕಸ್ಥಾಮಾಹ ದೇವೇಶೋ ಲಿಂಗಾರ್ಚನವಿಧಿಂ ಕ್ರಮಾತ್ ॥ ೨ ॥**

**ತದಾ ಪಾರ್ಶ್ವೇ ಸ್ಥಿತೋ ನಂದೀ ಶಾಲಂಕಾಯನಕಾತ್ಮಜಃ ।**
**ಶ್ರುತ್ವಾಽಖಿಲಂ ಪುರಾ ಪ್ರಾಹ ಬ್ರಹ್ಮಪುತ್ರಾಯ ಸುವ್ರತಾಃ ॥ ೩ ॥**

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಇಪ್ಪತ್ತೈದನೆಯ ಅಧ್ಯಾಯವು

(ಈ ಇಪ್ಪತ್ತೈದನೆಯ ಅಧ್ಯಾಯದಲ್ಲಿ ಋಷಿಗಳು ಪ್ರಶ್ನೆಮಾಡಿದ ಲಿಂಗಾರ್ಚನೆಯ ವಿಧಿಯನ್ನು ಹೇಳುವುದಕ್ಕೆ ಪ್ರಾರಂಭಿಸಿದ ಸೂತನು, ಕ್ರಮವಾಗಿ ಶಿವನು ಹೇಳಿದ ಸ್ನಾನ ವಿಧಿಯನ್ನು ಸಂಕ್ಷೇಪವಾಗಿ ಹೇಳುವನು.)

೧. ಋಷಿಗಳು, ಓ ಸೂತನೇ, ಲಿಂಗಮೂರ್ತಿಯಾದ ಮಹೇಶ್ವರನನ್ನು ಹೇಗೆ ಪೂಜೆಮಾಡಬೇಕೆಂಬುದನ್ನು ನಮಗೆ ಹೇಳಬೇಕೆಂದು ಪ್ರಶ್ನೆಮಾಡಿದರು.

೨-೩. ಸೂತನು ಹೇಳಿದನು : ಕೈಲಾಸಪರ್ವತದಲ್ಲಿ ಪಾರ್ವತಿಯು ಪ್ರಶ್ನೆಮಾಡಲು ಮಹಾದೇವನು ತನ್ನ ತೊಡೆಯ ಮೇಲೆ ಕುಳಿತಿದ್ದ ದೇವಿಗೆ ಲಿಂಗಾರ್ಚನೆಯ ವಿಧಿಯನ್ನು ಕ್ರಮವಾಗಿ ಹೇಳಿದನು. ಆಗ ಸಮೀಪದಲ್ಲಿದ್ದ ಶಾಲಂಕಾಯನ ಋಷಿಪುತ್ರನಾದ ನಂದಿಯು ಅದೆಲ್ಲವನ್ನೂ ಕೇಳಿ ಬ್ರಹ್ಮಪುತ್ರನಾದ ಸನತ್ಕುಮಾರನಿಗೆ ಹೇಳಿದನು.

ಸನತ್ಕುಮಾರಾಯ ಶುಭಂ ಲಿಂಗಾರ್ಚನವಿಧಿಂ ಪರಂ ।
ತಸ್ಮಾದ್ವ್ಯಾಸೋ ಮಹಾತೇಜಾಃ ಶ್ರುತವಾನ್ ಶ್ರುತಿಸಮ್ಮಿತಂ ॥ ೪ ॥
ಸ್ನಾನಯೋಗೋಪಚಾರಂ ಚ ಯಥಾ ಶೈಲಾದಿನೋ ಮುಖಾತ್ ।
ಶ್ರುತವಾನ್ ತತ್ಪ್ರವಕ್ಷ್ಯಾಮಿ ಸ್ನಾನಾದ್ಯಂ ಚಾರ್ಚನಾವಿಧಿಂ ॥ ೫ ॥

॥ ಶೈಲಾದಿರುವಾಚ ॥

ಅಥ ಸ್ನಾನವಿಧಿಂ ವಕ್ಷ್ಯೇ ಬ್ರಾಹ್ಮಣಾನಾಂ ಹಿತಾಯ ಚ ।
ಸರ್ವಪಾಪಹರಂ ಸಾಕ್ಷಾಚ್ಛಿವೇನ ಕಥಿತಂ ಪುರಾ ॥ ೬ ॥
ಅನೇನ ವಿಧಿನಾ ಸ್ನಾತ್ವಾ ಸಕೃತ್ಪೂಜ್ಯ ಚ ಶಂಕರಂ ।
ಬ್ರಹ್ಮಕೂರ್ಚಂ ಚ ಪೀತ್ವಾ ತು ಸರ್ವಪಾಪೈಃ ಪ್ರಮುಚ್ಯತೇ ॥ ೭ ॥
ತ್ರಿವಿಧಂ ಸ್ನಾನಮಾಖ್ಯಾತಂ ದೇವದೇವೇನ ಶಂಭುನಾ ।
ಹಿತಾಯ ಬ್ರಾಹ್ಮಣಾದ್ಯಾನಾಂ ಚತುರ್ಮುಖಸುತೋತ್ತಮ ॥ ೮ ॥

---

೪–೫. ವೇದೋಕ್ತವಾದ ಆ ವಿಧಿಯನ್ನು, ಸನತ್ಕುಮಾರನಿಂದ ವ್ಯಾಸನು ಕೇಳಿ ತಿಳಿದುಕೊಂಡನು. ನಂದಿಯ ಮುಖದಿಂದ ಸನತ್ಕುಮಾರನು ಹೇಗೆ ಕೇಳಿದನೋ ಹಾಗೆ ಸ್ನಾನವೇ ಮೊದಲಾದ ಲಿಂಗಾರ್ಚನೆಯ ವಿಧಿಯನ್ನು ನಿಮಗೆ ಹೇಳುವೆನು.

೬–೭. ನಂದಿಯು ಹೇಳಿದನು: ಬ್ರಾಹ್ಮಣರ ಹಿತಕ್ಕೋಸ್ಕರವಾಗಿ, ಪೂರ್ವದಲ್ಲಿ ಶಿವನು ಹೇಳಿದ, ಸಮಸ್ತ ಪಾಪಪರಿಹಾರಕವಾದ, ಸ್ನಾನ ವಿಧಿಯನ್ನು ಹೇಳುವೆನು. ಈ ವಿಧಿಯನ್ನನುಸರಿಸಿ ಸ್ನಾನವನ್ನು ಮಾಡಿ, ಒಂದಾವೃತ್ತಿ ಶಿವಲಿಂಗದ ಪೂಜೆಯನ್ನು ಮಾಡಿದರೆ, ಮತ್ತೂ, ಬ್ರಹ್ಮಕೂರ್ಚವೆಂಬ ಪಂಚಗವ್ಯವನ್ನು ಪಾನಮಾಡಿದರೆ ಸಮಸ್ತ ಪಾಪಗಳು ಬಿಡುಗಡೆಯನ್ನು ಹೊಂದುವುವು.

೮. ಬ್ರಹ್ಮಪುತ್ರರಲ್ಲಿ ಶ್ರೇಷ್ಠನಾದ ಸನತ್ಕುಮಾರನೇ, ದೇವದೇವನಾದ ಶಿವನು, ಬ್ರಾಹ್ಮಣಾದಿಗಳ ಹಿತಕ್ಕಾಗಿ, ಮೂರು ವಿಧವಾದ ಸ್ನಾನವನ್ನು ಹೇಳಿರುವನು.

ವಾರುಣಂ ಪುರತಃ ಕೃತ್ವಾ ತತಶ್ಚಾಗ್ನೇಯಮುತ್ತಮಂ ।
ಮಂತ್ರಸ್ನಾನಂ ತತಃ ಕೃತ್ವಾ ಪೂಜಯೇತ್ಪರಮೇಶ್ವರಂ ॥ ೯ ॥

ಭಾವದುಷ್ಟೋಽಂಭಸಿ ಸ್ನಾತ್ವಾ ಭಸ್ಮನಾ ಚ ನ ಶುದ್ಧ್ಯತಿ ।
ಭಾವ ಶುದ್ಧಶ್ಚರೇ ಚ್ಛೌಚಮನ್ಯಥಾ ನ ಸಮಾಚರೇತ್ ॥೧೦॥

ಸರಿತ್ಸರಸ್ತಡಾಗೇಷು ಸರ್ವೇಷ್ವಾಪ್ರಳಯಂ ನರಃ ।
ಸ್ನಾತ್ವಾಽಪಿ ಭಾವದುಷ್ಟಶ್ಚೇನ್ನ ಶುದ್ಧ್ಯತಿ ನ ಸಂಶಯಃ ॥೧೧॥

ನೃಣಾಂ ಹಿ ಚಿತ್ತಕಮಲಂ ಪ್ರಬುದ್ಧಮಭವದ್ಯದಾ ।
ಪ್ರಸುಪ್ತಂ ತಮಸಾ ಜ್ಞಾನ ಭಾನೋ ಭಾಸಾ ತದಾ ಶುಚಿಃ ॥೧೨॥

ಮೃಚ್ಛಕೃತ್ತಿಲಪುಷ್ಪಂ ಚ ಸ್ನಾನಾರ್ಥಂ ಭಸಿತಂ ತಥಾ ।
ಆದಾಯ ತೀರೇ ನಿಕ್ಷಿಪ್ಯ ಸ್ನಾನತೀರ್ಥೇ ಕುಶಾನಿ ಚ ॥೧೩॥

---

೯. ನೀರಿನಲ್ಲಿ ಮುಳುಗುವುದು ವಾರುಣಸ್ನಾನವೆನಿಸುವುದು. ಭಸ್ಮಧಾರಣೆಯು ಆಗ್ನೇಯಸ್ನಾನವೆನಿಸುವುದು. ಆಪೋಹಿಷ್ಠಾದಿ ಮಂತ್ರಗಳಿಂದ ಮಾರ್ಜನೆಯು ಮಂತ್ರಸ್ನಾನವೆನಿಸುವುದು. ಕ್ರಮವಾಗಿ ಈ ಮೂರು ಸ್ನಾನಗಳನ್ನು ಮಾಡಿ, ಪರಮೇಶ್ವರನನ್ನು ಪೂಜಿಸಬೇಕು.

೧೦–೧೧. ಮನಸ್ಸಿನ ಭಾವವು ಕೆಟ್ಟುದಾಗಿದ್ದವನು ನೀರಿನಲ್ಲಿ ಸ್ನಾನಮಾಡಿದರೂ, ಭಸ್ಮಸ್ನಾನಮಾಡಿದರೂ, ಶುದ್ಧನಾಗುವುದಿಲ್ಲ. ಮನಸ್ಸಿನ ಭಾವವು ಶುದ್ಧನಾಗಿದ್ದವನು ಶುಚಿತ್ವಕ್ಕಾಗಿ ಸ್ನಾನಾದಿಗಳನ್ನಾಚರಿಸಬೇಕು. ಇಲ್ಲದಿದ್ದರೆ ಸ್ನಾನಾದಿಗಳನ್ನಾಚರಿಸಬೇಕಾದುದಿಲ್ಲ. ನದಿ, ಸರೋವರ, ಕೆರೆ, ಮುಂತಾದವುಗಳಲ್ಲಿ ಮನುಷ್ಯನು ಪ್ರಳಯಕಾಲ ಪರ್ಯಂತ ಸ್ನಾನಮಾಡಿದರೂ, ಭಾವದುಷ್ಟನಾಗಿದ್ದರೆ ಶುದ್ಧನಾಗುವುದಿಲ್ಲ.

೧೨. ಮನುಷ್ಯರ ಮನಸ್ಸಿಗೆ ಆಶ್ರಯವಾದ ಹೃದಯಕಮಲವು ಅಜ್ಞಾನದಿಂದ ನಿದ್ರಿಸುತ್ತಿದ್ದುದು ಜ್ಞಾನವೆಂಬ ಸೂರ್ಯನ ಕಿರಣದಿಂದ ಯಾವಾಗ ವಿಕಸಿತವಾಗುವುದೋ ಆಗ ಪರಿಶುದ್ಧತೆಯುಂಟಾಗುವುದು.

೧೩–೧೪. ಮಣ್ಣು, ಸಗಣಿ, ಎಳ್ಳುಹೂವು, ಭಸ್ಮ, ದರ್ಭೆ, ಇವುಗಳನ್ನು ತೆಗೆದುಕೊಂಡು ಸ್ನಾನಮಾಡುವ ತೀರ್ಥದ ದಡದಲ್ಲಿಟ್ಟು, ಕಾಲು

ಪ್ರಕ್ಷಾಳ್ಯಾಚಮ್ಯ ಪಾದೌ ಚ ಮಲಂ ದೇಹಾದ್ವಿಶೋಧ್ಯ ಚ ।
ದ್ರವ್ಯೈಸ್ತು ತೀರದೇಶಸ್ಥೈಸ್ತತಃ ಸ್ನಾನಂ ಸಮಾಚರೇತ್ ॥೧೪॥
ಉದ್ಧೃತಾಽಸೀತಿ ಮಂತ್ರೇಣ ಪುನರ್ದೇಹಂ ವಿಶೋಧಯೇತ್ ।
ಮೃದಾದಾಯ ತತಶ್ಚಾನ್ಯದ್ವಸ್ತ್ರಂ ಸ್ನಾತ್ವಾ ಹ್ಯನುಲ್ಬಣಂ ॥೧೫॥
ಗಂಧದ್ವಾರಾಂ ದುರಾಧರ್ಷಾ ಮಿತಿ ಮಂತ್ರೇಣ ಮಂತ್ರವಿತ್ ।
ಕಪಿಲಾಗೋಮಯೇನೈವ ಸ್ವಸ್ಥೇನೈವ ತು ಲೇಪಯೇತ್ ॥೧೬॥
ಪುನಃ ಸ್ನಾತ್ವಾ ಪರಿತ್ಯಜ್ಯ ತದ್ವಸ್ತ್ರಂ ಮಲಿನಂ ತತಃ ।
ಶುಕ್ಲವಸ್ತ್ರಪರೀಧಾನೋ ಭೂತ್ವಾ ಸ್ನಾನಂ ಸಮಾಚರೇತ್ ॥೧೭॥
ಸರ್ವಪಾಪವಿಶುದ್ಧ್ಯರ್ಥಮಾವಾಹ್ಯ ವರುಣಂ ತಥಾ ।
ಸಂಪೂಜ್ಯ ಮನಸಾ ದೇವಂ ಧ್ಯಾನಯಜ್ಞೇನ ವೈ ಭವಂ ॥೧೮॥

---

ಗಳನ್ನು ತೊಳೆದುಕೊಂಡು, ಆಚಮನವನ್ನು ಮಾಡಿ ದಡದಲ್ಲಿರುವ ಪದಾರ್ಥಗಳಿಂದ ಶರೀರದಲ್ಲಿರುವ ಕೊಳೆಯನ್ನು ತೊಳೆದುಕೊಂಡು ಆಮೇಲೆ ಸ್ನಾನವನ್ನು ಮಾಡಬೇಕು.

೧೫. "ಉದ್ಧೃತಾಽಸಿ" ಎಂಬ ಮಂತ್ರದಿಂದ ಮಣ್ಣನ್ನು ತೆಗೆದುಕೊಂಡು ಶರೀರಕ್ಕೆ ಬಳಿದುಕೊಂಡು ಸ್ನಾನಮಾಡಿ ಮತ್ತೊಂದು ಶುದ್ಧವಸ್ತ್ರವನ್ನು ಧರಿಸಬೇಕು.

೧೬–೧೭. "ಗಂಧದ್ವಾರಾಂದುರಾಧರ್ಷಾಂ" ಎಂಬ ಮಂತ್ರದಿಂದ, ಕಪಿಲಬಣ್ಣದ ಹಸುವಿನ ಸಗಣಿಯನ್ನು ಶರೀರಕ್ಕೆ ಬಳಿದುಕೊಂಡು, ಮತ್ತೆ ಸ್ನಾನಮಾಡಿ, ಕೊಳೆಯಾದ ಆ ವಸ್ತ್ರವನ್ನು ಬಿಟ್ಟು. ಮತ್ತೊಂದು ಶುದ್ಧವಸ್ತ್ರವನ್ನುಟ್ಟು ಬಳಿಕ ಸ್ನಾನವನ್ನು ಮಾಡಬೇಕು,

೧೮–೧೯. ಆಮೇಲೆ ಸಕಲ ಪಾಪಗಳ ಪರಿಹಾರಕ್ಕಾಗಿ ಜಲಾಧಿಪತಿಯಾದ, ವರುಣದೇವನನ್ನು ಆವಾಹನೆಮಾಡಿ, ಮನಸ್ಸಿನಲ್ಲಿಯೇ ಧ್ಯಾನರೂಪವಾದ ಯಜ್ಞದಿಂದ ಶಿವನನ್ನು ಪೂಜಿಸಿ ತೀರ್ಥದಲ್ಲಿ ಮೂರಾವೃತ್ತಿ ಆಚಮನವನ್ನು ಮಾಡಿ ಶಿವನ ಧ್ಯಾನವನ್ನು ಮಾಡುತ್ತಾ, ಸ್ನಾನಮಾಡಿ

ಆಚಮ್ಯ ತ್ರಿಸ್ತದಾ ತೀರ್ಥೇ ಹ್ಯವಗಾಹ್ಯ ಭವಂ ಸ್ಮರನ್ ।
ಪುನರಾಚಮ್ಯ ವಿಧಿವದಭಿಮಂತ್ರ್ಯ ಮಹಾಜಲಂ ॥೧೯॥

ಅವಗಾಹ್ಯಪುನಸ್ತಸ್ಮಿನ್ ಜಪೇದ್ವೈಚಾಘಮರ್ಷಣಂ ।
ತತ್ತ್ರೋಯೇ ಭಾನುಸೋಮಾಗ್ನಿಮಂಡಲಂ ಚ ಸ್ಮರೇದ್ವಶೀ ॥೨೦॥

ಆಚಮ್ಯ ಚ ಪುನಸ್ತಸ್ಮಾಜ್ಜಲಾದುತ್ತೀರ್ಯ ಮಂತ್ರವಿತ್ ।
ಪ್ರವಿಶ್ಯ ತೀರ್ಥ ಮಧ್ಯೇ ತು ಪುನಃ ಪುಣ್ಯವಿವೃದ್ಧಯೇ ॥೨೧॥

ಶೃಂಗೇಣ ಪರ್ಣಪುಟಕೈಃ ಪಾಲಾಶೈಃ ಕ್ಷಾಲಿ ತೈಸ್ತಥಾ ।
ಸಕುಶೇನ ಸಪುಷ್ಪೇಣ ಜಲೇನೈವಾಭಿಷೇ ಚಯೇತ್ ॥೨೨॥

ರುದ್ರೇಣ ಪವಮಾನೇನ ತ್ವರಿತಾಖ್ಯೇನ ಮಂತ್ರವಿತ್ ।
ತರತ್ಸಮಂದೀ ವರ್ಗಾದ್ಯೈಸ್ತಥಾ ಶಾಂತಿದ್ವಯೇನ ಚ ॥೨೩॥

ಶಾಂತಿಧರ್ಮೇಣ ಚೈತೇನ ಪಂಚಬ್ರಹ್ಮ ಪವಿತ್ರಕೈಃ ।
ತತ್ತನ್ಮಂತ್ರಾಧಿದೇವಾನಾಂ ಸ್ವರೂಪಂ ಚ ಋಷೀನ್ಸ್ಮರೇತ್ ॥೨೪॥

---

ಮತ್ತೆ ಆಚಮನಮಾಡಿ, ಆ ಮಹಾಜಲವನ್ನು ಜಲದೇವತಾಮಂತ್ರಗಳಿಂದ ಅಭಿಮಂತ್ರಿಸಿ, ಮತ್ತೆ ಸ್ನಾನಮಾಡಿ "ಋತಂ ಚ ಸತ್ಯಂ ಚ" ಎಂಬ ಅಘಮರ್ಷಣ ಸೂಕ್ತವನ್ನು ಜಪಿಸಬೇಕು.

೨೦–೨೨. ಬಳಿಕ, ಆ ನೀರಿನಲ್ಲಿ ಸೂರ್ಯ, ಚಂದ್ರ, ಅಗ್ನಿ, ಮಂಡಲಗಳಿರುವುವೆಂದು ಭಾವಿಸಿ, ಸ್ಮರಣಮಾಡಿ, ನೀರಿನಿಂದ ಹೊರಗೆ ಬಂದು, ಮತ್ತೆ ಆಚಮನವನ್ನು ಮಾಡಿ, ಪುನಃ ತೀರ್ಥದ ಮಧ್ಯಕ್ಕೆ ಪ್ರವೇಶಿಸಿ, ಪುಣ್ಯಾಭಿವೃದ್ಧಿಗಾಗಿ, ತೊಳೆದ ಗೋವಿನ ಕೊಂಬಿನಿಂದಲೂ ಮುತ್ತಗದ ಎಲೆಯ ದೊನ್ನೆಯಿಂದಲೂ, ದರ್ಭೆ, ಹೂವು, ಇವುಗಳಿಂದಲೂ, ಕೂಡಿದ ನೀರನ್ನು ಅಭಿಷೇಕಮಾಡಿಕೊಳ್ಳಬೇಕು.

೨೩–೨೪. ಅಭಿಷೇಕಮಾಡಿಕೊಳ್ಳುವಾಗ, ಶ್ರೀ ರುದ್ರ, ಪವಮಾನ ಸೂಕ್ತ, ತ್ವರಿತವೆಂಬ ಯೋರುದ್ರವೆಂಬ ಮಂತ್ರ, ತರತ್ಸಮಂದಿ ಎಂಬ ವರ್ಗ, ಶನ್ನೋಮಿತ್ರ ಇತ್ಯಾದಿ ಶಾಂತಿಮಂತ್ರಗಳು, ಶನ್ನೋದೇವೀ ಎಂಬ ಶಾಂತಿ, ಧರ್ಮಮಂತ್ರ, ಸದ್ಯೋಜಾತಾದಿ ಪಂಚ ಬ್ರಹ್ಮಮಂತ್ರಗಳು, ಇವುಗಳನ್ನು ಆಯಾಯ ಮಂತ್ರಗಳ ಋಷಿದೇವತಾ ಛಂದಸ್ಸಿನ

ಏವಂ ಹಿ ಚಾಭಿಷಿಚ್ಯಾಥ ಸ್ವಮೂರ್ಧ್ನಿ ಪಯಸಾ ದ್ವಿಜಾಃ ।
ಧ್ಯಾಯೇಚ್ಚ ತ್ರ್ಯಂಬಕಂ ದೇವಂ ಹೃದಿ ಪಂಚಾಸ್ಯಮೀಶ್ವರಂ ॥೨೫॥
ಆಚಮ್ಯಾಚಮನಂ ಕುರ್ಯಾತ್ಸ್ವಸೂತ್ರೋಕ್ತಂ ಸಮೀಕ್ಷ್ಯ ಚ ।
ಪವಿತ್ರಹಸ್ತಃ ಸ್ವಾಸೀನಃ ಶುಚೌ ದೇಶೇ ಯಥಾವಿಧಿ ॥೨೬॥
ಅಭ್ಯುಕ್ಷ್ಯ ಸಕುಶಂ ಚಾಪಿ ದಕ್ಷಿಣೇನ ಕರೇಣ ತು ।
ಪಿಬೇತ್ಪ್ರಕ್ಷಿಪ್ಯ ತ್ರಿಸ್ತೋಯಂ ಚಕ್ರೀಭೂತ್ವಾ ಹ್ಯತಂದ್ರಿತಃ ॥೨೭॥
ಪ್ರದಕ್ಷಿಣಂ ತತಃ ಕುರ್ಯಾದ್ಧಿಂಸಾಪಾಪಪ್ರಶಾಂತಯೇ ।
ಏವಂ ಸಂಕ್ಷೇಪತಃ ಪ್ರೋಕ್ತಂ ಸ್ನಾನಾಚಮನಮುತ್ತಮಂ ॥೨೮॥
ಸರ್ವೇಷಾಂ ಬ್ರಾಹ್ಮಣಾನಾಂ ತು ಹಿತಾರ್ಥೇ ದ್ವಿಜಸತ್ತಮಾಃ ।

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಸ್ನಾನವಿಧಿ
ನಾಮ ಪಂಚವಿಂಶೋಽಧ್ಯಾಯಃ

---

ಸ್ವರೂಪಗಳನ್ನು ಹೇಳಿ, ದೇವತೆಗಳನ್ನು ಸ್ಮರಿಸುತ್ತಾ, ತನ್ನತಲೆಯಮೇಲೆ ಅಭಿಷೇಕಮಾಡಿಕೊಂಡು, ಮನಸ್ಸಿನಲ್ಲಿ ಪಂಚಮುಖನಾದ, ತ್ರಿಣೇತ್ರನಾದ ಈಶ್ವರನನ್ನು ಧ್ಯಾನಮಾಡಬೇಕು.

೨೬–೨೭. ಬಳಿಕ ಆಚಮನವನ್ನು ಮಾಡಿ,ಕೈಯ್ಯಲ್ಲಿ ಪವಿತ್ರವನ್ನಿಟ್ಟುಕೊಂಡು, ಪರಿಶುದ್ಧವಾದ ಸ್ಥಳದಲ್ಲಿ ಕುಳಿತು, ತನ್ನ ಸೂತ್ರಾನುಸಾರವಾದ, ವಿಧಿಗನುಸಾರವಾಗಿ ಆಚಮನವನ್ನು ಮಾಡಿ, ಬಲಗೈಯಿಂದ ದರ್ಭೆಸಹಿತವಾದ ನೀರನ್ನು ಸುತ್ತಲೂ ಪ್ರೋಕ್ಷಿಸಿ, ಮೂರಾವೃತ್ತಿ ನೀರನ್ನು ಚಕ್ರಾಕಾರವಾಗಿ ಚಲ್ಲಿ ಪಾನಮಾಡಬೇಕು.

೨೮–೨೯. ಚಕ್ರಾಕಾರವಾಗಿ ನೀರು ಚಲ್ಲುವುದು ಹಿಂಸಾ ಪಾಪದ ಶಾಂತಿಗೋಸ್ಕರವಾಗಿ. ಎಲೈ ಋಷಿಗಳೇ, ಸಕಲ ಬ್ರಾಹ್ಮಣರ ಹಿತಕ್ಕೋಸ್ಕರವಾಗಿ, ಸಂಕ್ಷೇಪವಾಗಿ ಸ್ನಾನ ಮತ್ತೂ ಆಚಮನ ವಿಧಿಗಳನ್ನು ಹೇಳಿರುವೆನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಸ್ನಾನಾಚಮನ ಕ್ರಮವನ್ನು ಹೇಳುವ ಇಪ್ಪತ್ತೈದನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ
## ಷಡ್ವಿಂಶೋಽಧ್ಯಾಯಃ

ಷಡ್ವಿಂಶೇ ವರ್ಣ್ಯತೇ ಸಮ್ಯಕ್ ಸಂಧ್ಯಾದೀನಾಂ ಕ್ರಮಃ ಶುಭಃ ।
ಪಂಚಯಜ್ಞವಿಧಾನಂ ಚ ದ್ವಿವಿಧಂ ಸ್ನಾನಮೇವ ಚ ॥
ಆವಾಹಯೇತ್ತತೋ ದೇವೀಂ ಗಾಯತ್ರೀಂ ವೇದಮಾತರಂ ।

॥ ನಂದ್ಯುವಾಚ ॥

ಆಯಾತು ವರದಾ ದೇವೀತ್ಯನೇನೈವ ಮಹೇಶ್ವರೀಂ ॥ ೧ ॥
ಪಾದ್ಯಮಾಚನೀಯಂ ಚ ತಸ್ಯಾಶ್ಚಾರ್ಘ್ಯಂ ಪ್ರದಾಪಯೇತ್ ।
ಪ್ರಾಣಾಯಾಮತ್ರಯಂ ಕೃತ್ವಾ ಸಮಾಸೀನಃ ಸ್ಥಿತೋಽಪಿ ವಾ ॥
ಸಹಸ್ರಂ ವಾ ತದರ್ಧಂ ವಾ ಶತಮಷ್ಟೋತ್ತರಂ ತು ವಾ ।
ಗಾಯತ್ರೀಂ ಪ್ರಣವೇನೈವ ತ್ರಿವಿಧೇಷ್ವೇಕಮಾಚರೇತ್ ॥ ೩ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಇಪ್ಪತ್ತಾರನೆಯ ಅಧ್ಯಾಯವು

(ಈ ಇಪ್ಪತ್ತಾರನೆಯ ಅಧ್ಯಾಯದಲ್ಲಿ, ಎರಡು ವಿಧವಾದ ಸ್ನಾನ ಸ್ವರೂಪವೂ, ಸಂಧ್ಯಾದಿಗಳ ಕ್ರಮವೂ, ಪಂಚಯಜ್ಞಗಳ ವಿಧಿಯೂ, ಇವನ್ನು ಚನ್ನಾಗಿ ವರ್ಣಿಸಲಾಗುವುದು.)

೧. ನಂದಿಯು ಹೇಳಿದನು: ಸ್ನಾನಾನಂತರದಲ್ಲಿ, ವೇದಗಳಿಗೆ ತಾಯಿಯಾದ ಗಾಯತ್ರೀ ದೇವಿಯನ್ನು "ಆಯಾತುವರದಾದೇವೀ" ಎಂಬ ಮಂತ್ರದಿಂದ ಆವಾಹನೆ ಮಾಡಬೇಕು.

೨–೩. ಆ ಗಾಯತ್ರೀದೇವಿಗೆ ಪಾದ್ಯವನ್ನೂ, ಆಚಮನೀಯವನ್ನೂ, ಅರ್ಘ್ಯವನ್ನೂ, ಸಮರ್ಪಿಸಿ, ಮೂರು ಪ್ರಾಣಾಯಾಮಗಳನ್ನು ಮಾಡಿ, ತಮ್ಮ ತಮ್ಮ ಶಾಖಾನುಸಾರವಾಗಿ ಕುಳಿತುಕೊಂಡಾಗಲಿ, ನಿಂತುಕೊಂಡಾಗಲಿ, ಸಾವಿರ, ಐನೂರು, ನೂರೆಂಟು, ಈ ಮೂರರಲ್ಲಿ, ಒಂದು ಸಂಖ್ಯೆಯನ್ನು ಗೊತ್ತುಮಾಡಿಕೊಂಡು ಪ್ರಣವಸಹಿತವಾಗಿ, ಗಾಯತ್ರೀಮಂತ್ರವನ್ನು ಜಪಮಾಡಬೇಕು.

ಅರ್ಘ್ಯಂ ದತ್ತ್ವಾ ಸಮಭ್ಯರ್ಚ್ಯ ಪ್ರಣಮ್ಯ ಶಿರಸಾ ಸ್ವಯಂ ।
ಉತ್ತಮೇ ಶಿಖರೇ ದೇವೀತ್ಯುಕ್ತ್ವೋದ್ವಾಸ್ಯ ಚ ಮಾತರಂ ॥ ೪ ॥
ಪ್ರಾಚ್ಯಾಲೋಕ್ಯಾ ಭಿವಂದ್ಯೇಶಾಂ ಗಾಯತ್ರೀಂ ವೇದಮಾತರಂ ।
ಕೃತಾಂಜಲಿಪುಟೋ ಭೂತ್ವಾ ಪ್ರಾರ್ಥಯೇದ್ಭಾಸ್ಕರಂ ತಥಾ ॥ ೫ ॥
ಉದುತ್ಯಂ ಚ ತಥಾ ಚಿತ್ರಂ ಜಾತವೇದಸಮೇವ ಚ ।
ಅಭಿವಂದ್ಯ ಪುನಃ ಸೂರ್ಯಂ ಬ್ರಹ್ಮಾಣಂ ಚ ವಿಧಾನತಃ ॥ ೬ ॥
ತಥಾ ಸೌರಾಣಿ ಸೂಕ್ತಾನಿ ಋಗ್ಯಜುಃಸಾಮಜಾನಿ ಚ ।
ಜಪ್ತ್ವಾ ಪ್ರದಕ್ಷಿಣಂ ಪಶ್ಚಾತ್ ತ್ರಿಃಕೃತ್ವಾ ಚ ವಿಭಾವಸೋಃ ॥
ಆತ್ಮಾನಂ ಚಾಂತರಾತ್ಮಾನಂ ಪರಮಾತ್ಮಾನಮೇವ ಚ ।
ಅಭಿವಂದ್ಯ ಪುನಃ ಸೂರ್ಯಂ ಬ್ರಹ್ಮಾಣಂ ಚ ವಿಭಾವಸುಂ ॥ ೮ ॥

---

೪–೫. ಜಪಮಾಡುವುದಕ್ಕೆ ಮುಂಚೆ, ಸೂರ್ಯನಿಗೆ ಅರ್ಘ್ಯವನ್ನು ಕೊಟ್ಟು, ಪೂಜಿಸಿ, ನಮಸ್ಕರಿಸಿ, ಆಮೇಲೆ ಜಪವನ್ನು ಮಾಡಬೇಕು. ಬಳಿಕ "ಉತ್ತಮೇ ಶಿಖರೇದೇವೀ" ಎಂಬ ಮಂತ್ರದಿಂದ, ಗಾಯತ್ರೀ ದೇವಿಯನ್ನು ಉದ್ವಾಸನೆಮಾಡಿ, ಪೂರ್ವಾದಿ ದಿಕ್ಕುಗಳಿಗೂ, ವೇದಮಾತೃ ವಾದ ಗಾಯತ್ರಿಗೂ, ನಮಸ್ಕರಿಸಿ, ಕೈಜೋಡಿಸಿ, ಸೂರ್ಯನನ್ನು ಪ್ರಾರ್ಥನೆಮಾಡಬೇಕು.

೬–೭. ಸೂರ್ಯಪ್ರಾರ್ಥನೆಯ ಕಾಲದಲ್ಲಿ "ಉದುತ್ಯಂ ಜಾತ ವೇದಸಂ" "ಚಿತ್ರಂ ದೇವಾನಾಂ" "ಜಾತವೇದಸೇ ಸುನವಾಮ" ಎಂಬ ಮಂತ್ರಗಳನ್ನೂ, ಋಗ್ವೇದ, ಯಜುರ್ವೇದ, ಸಾಮವೇದಗಳಲ್ಲಿ ರುವ ಸೂರ್ಯ ಸೂಕ್ತಗಳನ್ನೂ, ಜಪಿಸಿ ಸೂರ್ಯನಿಗೂ, ಬ್ರಹ್ಮನಿಗೂ, ಮೂರುಪ್ರದಕ್ಷಿಣೆಗಳನ್ನು ಮಾಡಿ ನಮಸ್ಕಾರವನ್ನು ಮಾಡಬೇಕು.

೮. ಆತ್ಮನಿಗೂ, ಅಂತರಾತ್ಮನಿಗೂ, ಪರಮಾತ್ಮನಿಗೂ, ನಮಸ್ಕರಿಸಿ ಮತ್ತೆ ಸೂರ್ಯನಿಗೂ, ಬ್ರಹ್ಮನಿಗೂ, ಅಗ್ನಿಗೂ ಹೋಮವನ್ನು ಮಾಡಿದ ಬಳಿಕ, ಮುನಿಗಳನ್ನೂ, ಪಿತೃಗಳನ್ನೂ, ಅವರವರ ಹೆಸರಿನಿಂದ ಆವಾಹನೆಮಾಡಿ, ವಿಧಿಗನುಸಾರವಾಗಿ, ತರ್ಪಣವನ್ನು ಮಾಡಬೇಕು.

ಮುನೀನ್ಪಿತೃನ್ ಯಥಾನ್ಯಾಯಂ ಸ್ವನಾಮ್ನಾಽಽವಾಹಯೇತ್ತತಃ ।
ಸರ್ವಾನಾವಾಹಯಾಮೀತಿ ದೇವಾನಾವಾಹ್ಯ ಸರ್ವತಃ ॥ ೯ ॥

ತರ್ಪಯೇದ್ವಿಧಿನಾ ಪಶ್ಚಾತ್ಪ್ರಾಙ್ಮುಖೋ ವಾ ಹ್ಯುದಙ್ಮುಖಃ ।
ಧ್ಯಾತ್ವಾ ಸ್ವರೂಪಂ ತತ್ತತ್ವ ಮಭಿವಂದ್ಯ ಯಥಾಕ್ರಮಂ ॥೧೦॥

ದೇವಾನಾಂ ಪುಷ್ಪತೋಯೇನ ಋಷೀಣಾಂ ತು ಕುಶಾಂಭಸಾ ।
ಪಿತೄಣಾಂ ತಿಲತೋಯೇನ ಗಂಧಯುಕ್ತೇನ ಸರ್ವತಃ ॥೧೧॥

ಯಜ್ಞೋಪವೀತೀ ದೇವಾನಾಂ ನಿವೀತೀ ಋಷಿತರ್ಪಣಂ ।
ಪ್ರಾಚೀನಾವೀತೀ ವಿಪ್ರೇಂದ್ರ ಪಿತೄಣಾಂ ತರ್ಪಯೇತ್ಕ್ರಮಾತ್ ॥

ಅಂಗುಲ್ಯಗ್ರೇಣ ವೈ ಧೀಮಾಂಸ್ತರ್ಪಯೇದ್ದೇವತರ್ಪಣಂ ।
ಋಷೀನ್ ಕನಿಷ್ಠಾಂಗುಲಿನಾ ಶ್ರೋತ್ರಿಯಃ ಸರ್ವಸಿದ್ಧಯೇ ॥

ಪಿತೄಂಸ್ತು ತರ್ಪಯೇದ್ವಿದ್ವಾನ್ ದಕ್ಷಿಣಾಂಗುಷ್ಠಕೇನ ತು ।
ತಥೈವಂ ಮುನಿಶಾರ್ದೂಲ ಬ್ರಹ್ಮಯಜ್ಞಂ ಯಜೇದ್ದ್ವಿಜಃ ॥೧೪॥

---

೯–೧೦. ಎಲ್ಲರನ್ನೂ, ಆವಾಹನೆಮಾಡುತ್ತೇನೆಂದು ಹೇಳಿ ಸಕಲ ದೇವತೆಗಳನ್ನೂ ಕರೆದು ಪೂರ್ವಮುಖವಾಗಿಯಾಗಲಿ, ಉತ್ತರಮುಖ ವಾಗಿಯಾಗಲಿ ಕುಳಿತು, ಆಯಾಯ ದೇವತೆಗಳ ಸ್ವರೂಪವನ್ನು ಧ್ಯಾನ ಮಾಡಿ, ಕ್ರಮವಾಗಿ ನಮಸ್ಕಾರಮಾಡಿ, ತರ್ಪಣವನ್ನು ಮಾಡಬೇಕು.

೧೧–೧೨. ದೇವತೆಗಳಿಗೆ ಯಜ್ಞೋಪವೀತವನ್ನು ಬಲಗಡೆಹಾಕಿ ಕೊಂಡು ಹೂ ಸಹಿತವಾದ ನೀರಿನಿಂದಲೂ, ಋಷಿಗಳಿಗೆ ನಿವೀತಿಯಿಂದ ದರ್ಭೆಸಹಿತವಾದ ನೀರಿನಿಂದಲೂ, ಪಿತೃಗಳಿಗೆ ಪ್ರಾಚೀನಾವೀತಿಯಿಂದ ಎಳ್ಳುನೀರಿನಿಂದಲೂ ತರ್ಪಣಮಾಡಬೇಕು.

೧೩–೧೪. ದೇವತರ್ಪಣವನ್ನು ಬೆರಳುಗಳ ತುದಿಯಲ್ಲಿಯೂ, ಋಷಿ ತರ್ಪಣವನ್ನು ಕಿರುಬೆರಳಿನಲ್ಲಿಯೂ, ಪಿತೃತರ್ಪಣವನ್ನು ಬಲದ ಹೆಬ್ಬೆರಳಿನ ಲ್ಲಿಯೂ, ಮಾಡಿದರೆ ಸರ್ವಸಿದ್ಧಿಯುಂಟಾಗುವುದು. ಎಲೈ ಮುನಿ ಶ್ರೇಷ್ಠನೇ, ಈ ಮೇರೆ ಬ್ರಹ್ಮಯಜ್ಞವನ್ನು ಮಾಡಬೇಕು.

ದೇವಯಜ್ಞಂ ಚ ಮಾನುಷ್ಯಂ ಭೂತಯಜ್ಞಂ ತಥೈವ ಚ ।
ಪಿತೃಯಜ್ಞಂ ಚ ಪೂತಾತ್ಮಾ ಯಜ್ಞಕರ್ಮಪರಾಯಣಃ ॥೧೫॥
ಸ್ವಶಾಖಾಧ್ಯಯನಂ ವಿಪ್ರಾ ಬ್ರಹ್ಮಯಜ್ಞ ಇತಿ ಸ್ಮೃತಃ ।
ಅಗ್ನೌ ಜುಹೋತಿ ಯಚ್ಚಾನ್ನಂ ದೇವಯಜ್ಞ ಇತಿ ಸ್ಮೃತಃ ॥೧೬॥
ಸರ್ವೇಷಾಮೇವ ಭೂತಾನಾಂ ಬಲಿದಾನಂ ವಿಧಾನತಃ ।
ಭೂತಯಜ್ಞ ಇತಿ ಪ್ರೋಕ್ತೋ ಭೂತಿದಃ ಸರ್ವದೇಹಿನಾಂ ॥೧೭॥
ಸದಾರಾನ್ಸರ್ವತತ್ವಜ್ಞಾನ್ ಬ್ರಾಹ್ಮಣಾನ್ವೇದಪಾರಗಾನ್ ।
ಪ್ರಣಮ್ಯ ತೇಭ್ಯೋ ಯದ್ದತ್ತಮನ್ನಂ ಮಾನುಷ ಉಚ್ಯತೇ ॥೧೮॥
ಪಿತೄನುದ್ದಿಶ್ಯ ಯದ್ದತ್ತಂ ಪಿತೃಯಜ್ಞಃ ಸ ಉಚ್ಯತೇ ।
ಏವಂ ಪಂಚಮಹಾಯಜ್ಞಾನ್ ಕುರ್ಯಾತ್ಸರ್ವಾರ್ಥಸಿದ್ಧಯೇ ॥

---

೧೫. ಯಜ್ಞಕರ್ಮಾಸಕ್ತನಾದ ಪೂತನಾದ ಮನುಷ್ಯನು, ದೇವಯಜ್ಞ, ಮನುಷ್ಯಯಜ್ಞ, ಭೂತಯಜ್ಞ, ಪಿತೃಯಜ್ಞ, ಇವುಗಳನ್ನು ಮಾಡಬೇಕು.

೧೬–೧೭. ಎಲೈ ಸನತ್ಕುಮಾರನೇ, ಬ್ರಾಹ್ಮಣನು ತನ್ನ ಶಾಖೆಯ ವೇದಾಧ್ಯಯನಮಾಡುವುದೇ ಬ್ರಹ್ಮಯಜ್ಞ ಎನಿಸುವುದು. ಅಗ್ನಿಯಲ್ಲಿ ಅನ್ನವನ್ನು ಹೋಮಮಾಡುವುದು ದೇವಯಜ್ಞವು. ಸಕಲ ಪ್ರಾಣಿಗಳಿಗೂ, ವಿಧಿಗನುಸಾರವಾಗಿ ಬಲಿದಾನ ಮಾಡುವುದು ಭೂತಯಜ್ಞವೆನಿಸುವುದು. ಈ ಭೂತಯಜ್ಞವು ಸಂಪತ್ತನ್ನು ಕೊಡುವುದು.

೧೮–೧೯. ಸರ್ವಶಾಸ್ತ್ರವನ್ನೂ ಬಲ್ಲ, ವೇದಾಧ್ಯಯನಸಂಪನ್ನರಾದ, ಪತ್ನೀಸಹಿತರಾದ ಬ್ರಾಹ್ಮಣರಿಗೆ, ನಮಸ್ಕರಿಸಿ, ಅನ್ನದಾನಮಾಡಿದರೆ ಮನುಷ್ಯಯಜ್ಞವೆನಿಸುವುದು. ಪಿತೃಗಳನ್ನು ಉದ್ದೇಶಿಸಿ ದಾನಮಾಡುವುದು ಪಿತೃಯಜ್ಞವೆನಿಸುವುದು. ಹೀಗೆ ಸಕಲ ಫಲಪ್ರಾಪ್ತಿಗಾಗಿ, ಪಂಚಮಹಾಯಜ್ಞಗಳನ್ನು ಮಾಡಬೇಕು.

ಸರ್ವೇಷಾಂ ಶೃಣು ಯಜ್ಞಾನಾಂ ಬ್ರಹ್ಮಯಜ್ಞಃ ಪರಃ ಸ್ಮೃತಃ ।
ಬ್ರಹ್ಮಯಜ್ಞೇ ರತೋ ಮರ್ತ್ಯೋ ಬ್ರಹ್ಮಲೋಕೇ ಮಹೀಯತೇ ॥
ಬ್ರಹ್ಮಯಜ್ಞೇನ ತುಷ್ಯಂತಿ ಸರ್ವೇ ದೇವಾಃ ಸವಾಸವಾಃ ।
ಬ್ರಹ್ಮಾ ಚ ಭಗವಾನ್ವಿಷ್ಣುಃ ಶಂಕರೋ ನೀಲಲೋಹಿತಃ ॥೨೦॥
ವೇದಾಶ್ಚ ಪಿತರಃ ಸರ್ವೇ ನಾತ್ರ ಕಾರ್ಯಾ ವಿಚಾರಣಾ ।
ಗ್ರಾಮಾದ್ಬಹಿರ್ಗತೋ ಭೂತ್ವಾ ಬ್ರಾಹ್ಮಣೋ ಬ್ರಹ್ಮಯಜ್ಞವಿತ್ ॥
ಯಾವತ್ತ್ವದೃಷ್ಟಮಭವದುಟಜಾನಾಂ ಛದಂ ನರಃ ।
ಪ್ರಾಚ್ಯಾಮುದೀಚ್ಯಾಂ ಚ ತಥಾ ಪ್ರಾಗುದೀಚ್ಯಾಮಥಾಪಿ ವಾ ॥
ಪುಣ್ಯಮಾಚಮನಂ ಕುರ್ಯಾದ್ಬ್ರಹ್ಮಯಜ್ಞಾರ್ಥಮೇವ ತತ್ ।
ಪ್ರೀತ್ಯರ್ಥಂ ಚ ಋಚಾಂ ವಿಪ್ರಾಃ ತ್ರಿಃ ಪೀತ್ವಾ ಪ್ಲಾವ್ಯಪ್ಲಾವ್ಯ ಚ ॥
ಯಜುಷಾಂ ಪರಿಮೃಜ್ಯೈವಂ ದ್ವಿಃ ಪ್ರಕ್ಷಾಲ್ಯ ಚ ವಾರಿಣಾ ।
ಪ್ರೀತ್ಯರ್ಥಂ ಸಾಮವೇದಾನಾಮುಪಸ್ಪೃಶ್ಯ ಚ ಮೂರ್ಧನಿ ॥೨೫॥

---

೨೦. ಸಮಸ್ತಯಜ್ಞಗಳಿಗಿಂತಲೂ, ಬ್ರಹ್ಮಯಜ್ಞವು ಅತ್ಯಂತ ಶ್ರೇಷ್ಠವಾದುದು. ಬ್ರಹ್ಮಯಜ್ಞವನ್ನು ಮಾಡುವ ಮನುಷ್ಯನು ಬ್ರಹ್ಮಲೋಕದಲ್ಲಿ ಮಹಾಮಹಿಮಾಶಾಲಿಯಾಗುವನು.

೨೧. ಬ್ರಹ್ಮಯಜ್ಞದಿಂದ ದೇವೇಂದ್ರನೊಡಗೂಡಿದ ಸಕಲದೇವತೆಗಳೂ, ಬ್ರಹ್ಮ, ಶಂಕರ, ವಿಷ್ಣು, ಪಿತೃಗಳೂ, ವೇದಗಳೂ, ಅಂದರೆ ವೇದಮಂತ್ರಾಭಿಮಾನಿ ದೇವತೆಗಳೂ, ಸಂತೋಷಹೊಂದುವ ವಿಷಯದಲ್ಲಿ ಸಂದೇಹವಿರುವುದಿಲ್ಲವು.

೨೨–೨೩. ಬ್ರಹ್ಮಯಜ್ಞವನ್ನು ತಿಳಿದ ಬ್ರಾಹ್ಮಣನು ಗ್ರಾಮದಿಂದ ಹೊರಗೆ, ಉತ್ತರ, ಪೂರ್ವ, ಈಶಾನ್ಯ, ಈ ಮೂರು ದಿಕ್ಕುಗಳಲ್ಲಿ, ಒಂದು ದಿಕ್ಕಿಗೆ ಮನೆಗಳ ಮೇಲುಛಾವಣಿ ಕಾಣದಿರುವಷ್ಟು ದೂರ ಹೋಗಿ ಬ್ರಹ್ಮಯಜ್ಞಾರ್ಥವಾಗಿ ಪುಣ್ಯಕರವಾದ ಆಚಮನವನ್ನು ಮಾಡಬೇಕು.

೨೪–೨೬. ಋಗ್ವೇದದ ಪ್ರೀತ್ಯರ್ಥವಾಗಿ ಮೂರಾವೃತ್ತಿ ಆಚಮನವನ್ನು ಮಾಡಬೇಕು. ಯಜುರ್ವೇದದ ಪ್ರೀತ್ಯರ್ಥವಾಗಿ ಎರಡಾವೃತ್ತಿ ಕೈಗಳನ್ನು ತೊಳೆದುಕೊಳ್ಳಬೇಕು. ಸಾಮವೇದ ಪ್ರೀತ್ಯರ್ಥವಾಗಿ ಬ್ರಹ್ಮ

ಸ್ಪೃಶೇದಥರ್ವವೇದಾನಾಂ ನೇತ್ರೇ ಚಾಂಗಿರಸಾಂ ತಥಾ ।
ನಾಸಿಕೇ ಬ್ರಾಹ್ಮಣೋಽಗಾನಾಂಕ್ಷಾಲ್ಯ ಕ್ಷಾಲ್ಯ ಚ ವಾರಿಣಾ ॥

ಅಷ್ಟಾದಶ ಪುರಾಣಾನಾಂ ಬ್ರಹ್ಮಾದ್ಯಾನಾಂ ತಥೈವ ಚ ।
ತಥಾ ಚೋಪಪುರಾಣಾನಾಂ ಸೌರಾದೀನಾಂ ಯಥಾಕ್ರಮಂ ॥೨೭॥

ಪುಣ್ಯಾನಾಮಿತಿಹಾಸಾನಾಂ ಶೈವಾದೀನಾಂ ತಥೈವ ಚ ।
ಶ್ರೋತ್ರೇ ಸ್ಪೃಶೇದ್ಧಿ ತುಷ್ಟ್ಯರ್ಥಂ ಹೃದ್ದೇಶಂ ತು ತತಃ ಸ್ಪೃಶೇತ್ ॥

ಕಲ್ಪಾದೀನಾಂ ತು ಸರ್ವೇಷಾಂ ಕಲ್ಪವಿತ್ಕಲ್ಪವಿತ್ತಮಾಃ ।
ಏವ ಮಾಚಮ್ಯ ಚಾಸ್ತೀರ್ಯ ದರ್ಭಪಿಂಜೂಲಮಾತ್ಮನಃ ॥೨೯॥

ಕೃತ್ವಾ ಪಾಣಿತಲೇ ಧೀಮಾನಾತ್ಮನೋ ದಕ್ಷಿಣೋತ್ತರಂ ।
ಹೇಮಾಂಗುಲೀಯಸಂಯುಕ್ತೋ ಬ್ರಹ್ಮಬಂಧಯುತೋಽಪಿ ವಾ ॥

---

ರಂಧ್ರವನ್ನು ಸ್ಪರ್ಶಮಾಡಬೇಕು. ಅಥರ್ವಣವೇದದ ಪ್ರೀತ್ಯರ್ಥವಾಗಿ, ಕಣ್ಣುಗಳನ್ನೂ, ಮತ್ತೂ ಮೂಗನ್ನೂ, ಸ್ಪರ್ಶಮಾಡಬೇಕು. ಪ್ರತಿಯೊಂದು ಅಂಗವನ್ನು ಸ್ಪರ್ಶಮಾಡುವಾಗಲೂ, ಕೈಗಳನ್ನು ನೀರಿನಿಂದ ತೊಳೆದುಕೊಂಡು ಸ್ಪರ್ಶಮಾಡಬೇಕು.

೨೭–೨೮. ಬ್ರಹ್ಮಪುರಾಣವೇ ಮೊದಲಾದ ಹದಿನೆಂಟು ಮಹಾ ಪುರಾಣಗಳು, ಸೌರವೇ ಮೊದಲಾದ ಹದಿನೆಂಟು ಉಪಪುರಾಣಗಳು, ಪುಣ್ಯಕರವಾದ ಇತಿಹಾಸಗಳು, ಇವುಗಳ ಪ್ರೀತ್ಯರ್ಥವಾಗಿ, ಕಿವಿಗಳನ್ನೂ, ಹೃದಯವನ್ನೂ, ಸ್ಪರ್ಶಮಾಡಬೇಕು.

೨೯–೩೦. ಕಲ್ಪಸೂತ್ರಗಳ ವಿಧಿಯನ್ನು ಬಲ್ಲವನಾದ, ವಿಧಿಜ್ಞನಾದ ಬ್ರಾಹ್ಮಣನು, ಈ ರೀತಿಯಲ್ಲಿ ಆಚಮನವನ್ನು ಮಾಡಿ, ದರ್ಭಾಸನವನ್ನು ಹಾಕಿಕೊಂಡು ಕುಳಿತು, ತನ್ನ ಕೈಗಳನ್ನು ದಕ್ಷಿಣೋತ್ತರವಾಗಿ ಇಟ್ಟು ಕೊಂಡು, ಚಿನ್ನದ ಪವಿತ್ರದ ಉಂಗುರವನ್ನು ಧರಿಸಿ, ಅಥವಾ ದರ್ಭೆಯ ದರ್ಭಾಂಜಲಿಯನ್ನು ಮಾಡಿಕೊಂಡು, ತಾನು ಆಚರಿಸುವ ಸೂತ್ರವನ್ನ ನುಸರಿಸಿ, ವಿಧಿಯಂತೆ ಏಕಾಗ್ರಚಿತ್ತದಿಂದ ಬ್ರಹ್ಮಯಜ್ಞವನ್ನು ಮಾಡ ಬೇಕು.

ವಿಧಿವದ್ಬ್ರಹ್ಮಯಜ್ಞಂ ಚ ಕುರ್ಯಾತ್ಸ್ನಾತ್ವಾ ಸಮಾಹಿತಃ ।
ಅಕೃತ್ವಾ ಚ ಮುನಿಃ ಪಂಚಮಹಾಯಜ್ಞಾನ್ ದ್ವಿಜೋತ್ತಮಃ ॥
ಭುಕ್ತ್ವಾ ಚ ಸೂಕರಾಣಾಂ ತು ಯೋನೌ ವೈ ಜಾಯತೇ ನರಃ ।
ತಸ್ಮಾತ್ಸರ್ವಪ್ರಯತ್ನೇನ ಕರ್ತವ್ಯಾಃ ಶುಭಮಿಚ್ಛತಾ ॥೩೨॥
ಬ್ರಹ್ಮಯಜ್ಞಾದಥಸ್ನಾನಂ ಕೃತ್ವಾದೌ ಸರ್ವಥಾತ್ಮನಃ ।
ತೀರ್ಥಂ ಸಂಗೃಹ್ಯ ವಿಧಿವತ್ಪ್ರವಿಶೇಚ್ಛಿಬಿರಂ ವಶೀ ॥೩೩॥
ಬಹಿರೇವ ಗೃಹಾತ್ಪಾದೌ ಹಸ್ತೌ ಪ್ರಕ್ಷಾಲ್ಯ ವಾರಿಣಾ ।
ಭಸ್ಮಸ್ನಾನಂ ತತಃ ಕುರ್ಯಾದ್ವಿಧಿವದ್ದೇಹ ಶುದ್ಧಯೇ ॥೩೪॥
ಶೋಧ್ಯ ಭಸ್ಮ ಯಥಾನ್ಯಾಯಂ ಪ್ರಣವೇನಾಗ್ನಿಹೋತ್ರಜಂ ।
ಜ್ಯೋತಿಃ ಸೂರ್ಯ ಇತಿ ಪ್ರಾತರ್ಜುಹುಯಾದುದಿತೇ ಯತಃ ॥೩೫॥

---

೩೧–೩೨. ಬ್ರಾಹ್ಮಣ ಶ್ರೇಷ್ಠನು, ಪಂಚಮಹಾಯಜ್ಞಗಳನ್ನು ಮಾಡದೆ ಭೋಜನಮಾಡಿದರೆ ಹಂದಿಯಾಗಿ ಹುಟ್ಟುವನು. ಆದುದರಿಂದ ಮಂಗಳವಾಗಬೇಕೆಂದು ಅಪೇಕ್ಷಿಸುವ ಮನುಷ್ಯನು, ಪ್ರಯತ್ನಪೂರ್ವಕ ವಾಗಿ, ಪಂಚಮಹಾಯಜ್ಞಗಳನ್ನು ಮಾಡಬೇಕು.

೩೩–೩೪. ಇಂದ್ರಿಯಗಳ ನಿಗ್ರಹವುಳ್ಳ ಬ್ರಾಹ್ಮಣನು ಬ್ರಹ್ಮಯಜ್ಞ ವನ್ನು ಮಾಡಿದಮೇಲೆ ಸ್ನಾನವನ್ನು ಮಾಡಿ ಪಾತ್ರೆಯಲ್ಲಿ ನೀರನ್ನು ತೆಗೆದುಕೊಂಡು ವಿಧಿಯಂತೆ ವಾಸಸ್ಥಾನವನ್ನು ಪ್ರವೇಶಿಸಬೇಕು. ಮನೆಯ ಹೊರಗೆ ನೀರಿನಿಂದ ಕೈಕಾಲುಗಳನ್ನು ತೊಳೆದುಕೊಂಡು, ಮನೆಯೊಳಕ್ಕೆ ಪ್ರವೇಶಿಸಬೇಕು. ಆಮೇಲೆ ದೇಹಶುದ್ಧಿಗಾಗಿ ವಿಧಿಯನ್ನನುಸರಿಸಿ ಭಸ್ಮಸ್ನಾನವನ್ನು ಮಾಡಬೇಕು.

೩೫–೩೬. ಪ್ರಾತಃಕಾಲದಲ್ಲಿ "ಸೂರ್ಯಾಯಸ್ವಾಹಾ" ಎಂದೂ ಸಾಯಂಕಾಲದಲ್ಲಿ "ಅಗ್ನಯೇ ಸ್ವಾಹಾ" ಎಂದೂ, ಹೋಮಮಾಡುವುದರಿಂದ, "ಉದಿತೇ ಜುಹೋತಿ" "ಅನುದಿತೇ ಜುಹೋತಿ" ಎಂಬ ಎರಡು ಪಕ್ಷಗಳಲ್ಲಿ, "ಅನುದಿತೇ ಜುಹೋತಿ" ಎಂಬ ಪಕ್ಷವು ಸತ್ಯ

( ತಸ್ಮಾದುದಿತಹೋಮಸ್ಥಂ ಭಸಿತಂ ಪಾವನಂ ಶುಭಂ । )
ಜ್ಯೋತಿರಗ್ನಿಸ್ತಥಾ ಸಾಯಂ ಸಮ್ಯಕ್ ಚಾನುದಿತೇ ನೃಷಾ ।
ತಸ್ಮಾದುದಿತಹೋಮಸ್ಥಂ ಭಸಿತಂ ಪಾವನಂ ಶುಭಂ ॥೩೬॥
ನಾಸ್ತಿ ತಸ್ಯ ಸಮಂ ಯಸ್ಮಾದಸತ್ಯಂ ಪಾತಕಂ ಚ ತತ್ ।
ಈಶಾನೇನ ಶಿರೋದೇಶಂ ಮುಖಂ ತತ್ಪುರುಷೇಣ ಚ ॥೩೭॥
ಉರೋ ದೇಶಮಘೋರೇಣ ಗುಹ್ಯಂ ವಾಮೇನ ಸುವ್ರತಾಃ ।
ಸದ್ಯೇನ ಪಾದೌ ಸರ್ವಾಂಗಂ ಪ್ರಣವೇನಾಭಿಷೇಚಯೇತ್ ॥೩೮॥
ತತಃ ಪ್ರಕ್ಷಾಲಯೇತ್ಪಾದಂ ಹಸ್ತಂ ಬ್ರಹ್ಮವಿದಾಂ ವರ ।
ವ್ಯಪೋಹ್ಯ ಭಸ್ಮ ಚಾದಾಯ ದೇವದೇವಮನುಸ್ಮರನ್ ॥೩೯॥
ಮಂತ್ರಸ್ನಾನಂ ತತಃ ಕುರ್ಯಾ ದಾಪೋಹಿಷ್ಠಾದಿಭಿಃ ಕ್ರಮಾತ್ ।
ಪುಣ್ಯೈಶ್ಚೈವ ತಥಾ ಮಂತ್ರೈ ಋಗ್ಯಜುಸ್ಸಾಮಸಂಭವೈಃ ॥೪೦॥

---

ಸ್ವರೂಪವಾದುದು. ಸೂರ್ಯನು ಜ್ಯೋತಿಸ್ಸ್ವರೂಪನಾದುದರಿಂದ, ಉದಿತ ಹೋಮ ಸಂಬಂಧವಾದ ಭಸ್ಮವೇ ಪರಿಶುದ್ಧವಾದುದೂ, ಮಂಗಳಕರವಾದುದೂ, ಆಗಿರುವುದು. ಸತ್ಯಕ್ಕೆ ಸಮವಾದುದಿಲ್ಲವು. ಅಸತ್ಯವು ಪಾಪ ರೂಪವಾದುದು. ಆದುದರಿಂದ ಅಗ್ನಿಹೋತ್ರದಲ್ಲಿ ಉಂಟಾದ ಭಸ್ಮವನ್ನು ಪ್ರಣವಮಂತ್ರದಿಂದ ತೆಗೆದುಕೊಂಡು ಚನ್ನಾಗಿ ಶೋಧಿಸಿ ಅದನ್ನು ಧರಿಸಬೇಕು.

೩೭–೩೮. ಈಶಾನ ಮಂತ್ರದಿಂದ ತಲೆಗೂ, ತುತ್ಪುರುಷಮಂತ್ರದಿಂದ ಮುಖಕ್ಕೂ, ಅಘೋರಮಂತ್ರದಿಂದ ಎದೆಗೂ, ವಾಮದೇವ ಮಂತ್ರದಿಂದ ಗುಹ್ಯಪ್ರದೇಶಕ್ಕೂ, ಸದ್ಯೋಜಾತಮಂತ್ರದಿಂದ ಪಾದಗಳಿಗೂ, ಪ್ರಣವಮಂತ್ರದಿಂದ ಸರ್ವಾಂಗಗಳಿಗೂ ಭಸ್ಮವನ್ನು ಬಳಿದುಕೊಳ್ಳಬೇಕು.

೩೯–೪೦. ಬ್ರಹ್ಮಜ್ಞಾನಿಗಳಾದವರು ಭಸ್ಮಸ್ನಾನಾನಂತರದಲ್ಲಿ ಕೈಕಾಲುಗಳನ್ನು ತೊಳೆದುಕೊಂಡು, ದರ್ಭೆಯನ್ನು ತೆಗೆದುಕೊಂಡು, ದೇವದೇವನಾದ ಶಿವನನ್ನು ಧ್ಯಾನಮಾಡುತ್ತ, ಆಪೋಹಿಷ್ಠಾ ಮುಂತಾದ ಋಗ್ವೇದ ಯಜುರ್ವೇದ ಸಾಮವೇದಗಳ ಪುಣ್ಯಕರವಾದ ಮಂತ್ರಗಳಿಂದ ಮಂತ್ರಸ್ನಾನವನ್ನು ಕ್ರಮವಾಗಿ ಮಾಡಬೇಕು.

**ದ್ವಿಜಾನಾಂ ತು ಹಿತಾಯೈವ ಕಥಿತಂ ಸ್ನಾನಮುದ್ಯ ತೇ ।**
**ಸಂಕ್ಷಿಪ್ಯ ಯಃ ಸಕೃತ್ಕುರ್ಯಾತ್ಸಯಾತಿ ಪರಮಂ ಪದಂ ॥೪೧॥**

**ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಪಂಚಯಜ್ಞವಿಧಾನಂ ನಾಮ ಷಡ್ವಿಂಶೋಽಧ್ಯಾಯಃ**

---

೪೧. ಎಲೈ ಸನತ್ಕುಮಾರನೇ, ಬ್ರಾಹ್ಮಣರ ಹಿತಕ್ಕೋಸ್ಕರವಾಗಿ ಸ್ನಾನವಿಧಿಯನ್ನು ಈರೀತಿಯಲ್ಲಿ ನಿನಗೆ ಸಂಕ್ಷೇಪವಾಗಿ ಹೇಳಿರುವೆನು. ಯಾವ ಮನುಷ್ಯನು ಒಂದಾವೃತ್ತಿ ಈ ವಿಧಿಯನ್ನು ಅನುಸರಿಸಿ ಸ್ನಾನ ಮಾಡುತ್ತಾನೆಯೋ ಅವನು ಜ್ಞಾನಿಯಾಗಿ ಪರಮ ಪದವನ್ನು ಪಡೆಯುವನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಪಂಚ ಯಜ್ಞಗಳನ್ನು ವಿವರಿಸುವ ಇಪ್ಪತ್ತಾರನೆಯ ಅಧ್ಯಾಯವು ಮುಗಿದುದು.



## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಸಪ್ತವಿಂಶೋಽಧ್ಯಾಯಃ

**ಸಪ್ತವಿಂಶೇ ವರ್ಣ್ಯತೇಽಸ್ಮಿಂಲ್ಲಿಂಗಾರ್ಚನವಿಧಿಃ ಶುಭಃ ।**
**ಲಿಂಗಮೂರ್ಧನಿ ಪೂಜಾ ಚ ತಾರೇಣ ಪರಮೇಶಿತುಃ ॥**

**॥ ಶೈಲಾದಿರುವಾಚ ॥**

**ವಕ್ಷ್ಯಾಮಿ ಶೃಣು ಸಂಕ್ಷೇಪಾಲ್ಲಿಂಗಾರ್ಚನವಿಧಿಕ್ರಮಂ ।**
**ವಕ್ತುಂ ವರ್ಷಶತೇನಾಪಿ ನ ಶಕ್ಯಂ ವಿಸ್ತರೇಣ ಯತ್ ॥ ೧ ॥**

**ಏವಂ ಸ್ನಾತ್ವಾ ಯಥಾ ನ್ಯಾಯಂ ಪೂಜಾಸ್ಥಾನಂ ಪ್ರವಿಶ್ಯ ಚ ।**
**ಪ್ರಾಣಾಯಾಮತ್ರಯಂ ಕೃತ್ವಾ ಧ್ಯಾಯೇದ್ದೇವಂ ತ್ರಿಯಂಬಕಂ ॥**
**ಪಂಚವಕ್ತ್ರಂ ದಶಭುಜಂ ಶುದ್ಧಸ್ಫಟಿಕಸನ್ನಿಭಂ ।**
**ಸರ್ವಾಭರಣಸಂಯುಕ್ತಂ ಚಿತ್ರಾಂಬರವಿಭೂಷಿತಂ ॥ ೩ ॥**

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಇಪ್ಪತ್ತೇಳನೆಯ ಅಧ್ಯಾಯವು.

(ಈ ಇಪ್ಪತ್ತೇಳನೆಯ ಅಧ್ಯಾಯದಲ್ಲಿ ಮಂಗಳಕರವಾದ ಲಿಂಗ ಪೂಜೆಯ ವಿಧಿಯನ್ನೂ, ಪ್ರಣವ ಮಂತ್ರದಿಂದ ಲಿಂಗದ ಶಿರಸ್ಸಿನ ಮೇಲೆ ಪರಮೇಶ್ವರನ ಪೂಜೆಯನ್ನೂ ಮಾಡುವಕ್ರಮವನ್ನು ವರ್ಣಿಸ ಲಾಗುವುದು.

೧. ನಂದಿಯು ಹೇಳಿದನು: ಎಲೈ ಸನತ್ಕುಮಾರನೇ, ಲಿಂಗಾ ರ್ಚನ ವಿಧಿಯನ್ನು ಸಂಕ್ಷೇಪವಾಗಿ ಹೇಳುವೆನು ಕೇಳು. ವಿಸ್ತಾರವಾಗಿ ಹೇಳಿದರೆ ನೂರುವರ್ಷ ಹೇಳಿದರೂ ಮುಗಿಸಲು ಸಾಧ್ಯವಾಗುವುದಿಲ್ಲ.

೨-೩. ಹೀಗೆ ಆಚಾರವನ್ನನುಸರಿಸಿ ಸ್ನಾನವನ್ನು ಮಾಡಿ ಪೂಜಾ ಸ್ಥಾನಕ್ಕೆ ಪ್ರವೇಶಿಸಿ ಮೂರು ಪ್ರಾಣಾಯಾಮಗಳನ್ನು ಮಾಡಿ, ಐದು ಮುಖಗಳು, ಹತ್ತು ತೋಳುಗಳು, ಮೂರು ಕಣ್ಣುಗಳುಳ್ಳ ಸ್ಫಟಿಕದ ಬಣ್ಣದಂತೆ ಶುದ್ಧನಾದ ವಿಚಿತ್ರವಾದ ವಸ್ತ್ರವನ್ನೂ, ಆಭರಣಗಳನ್ನೂ ಧರಿಸಿದ ಪರಮೇಶ್ವರನನ್ನು ಧ್ಯಾನಮಾಡಬೇಕು.

ತಸ್ಯ ರೂಪಂ ಸಮಾಶ್ರಿತ್ಯ ದಹನಪ್ಲಾವನಾದಿಭಿಃ ।
ಶೈವೀಂ ತನುಂ ಸಮಾಸ್ಥಾಯ ಪೂಜಯೇತ್ಪರಮೇಶ್ವರಂ ॥ ೪ ॥
ದೇಹಶುದ್ಧಿಂ ಚ ಕೃತ್ವೈವ ಮೂಲಮಂತ್ರಂ ನ್ಯಸೇತ್ಕ್ರಮಾತ್ ।
ಸರ್ವತ್ರ ಪ್ರಣವೇನೈವ ಬ್ರಹ್ಮಾಣಿ ಚ ಯಥಾಕ್ರಮಂ ॥ ೫ ॥
ಸೂತ್ರೇ ನಮಃಶಿವಾಯೇತಿ ಛಂದಾಂಸಿ ಪರಮೇ ಶುಭೇ ।
ಮಂತ್ರಾಣಿ ಸೂಕ್ಷ್ಮರೂಪೇಣ ಸಂಸ್ಥಿತಾ ನಿ ಯತಸ್ತತಃ ॥ ೬ ॥
ನ್ಯಗ್ರೋಧಬೀಜೇ ನ್ಯಗ್ರೋಧಸ್ತಥಾ ಸೂತ್ರೇ ತು ಶೋಭನೇ ।
ಮಹತ್ಯಪಿ ಮಹದ್ಬ್ರಹ್ಮ ಸಂಸ್ಥಿತಂ ಸೂಕ್ಷ್ಮವತ್ ಸ್ವಯಂ ॥ ೭ ॥
ಸೇಚಯೇದರ್ಚನಸ್ಥಾನಂ ಗಂಧಚಂದನವಾರಿಣಾ ।
ದ್ರವ್ಯಾಣಿ ಶೋಧಯೇತ್ಪಶ್ಚಾತ್ ಕ್ಷಾಲನಪ್ರೋಕ್ಷಣಾದಿಭಿಃ ॥ ೮ ॥

---

೪. ಧ್ಯಾನದಿಂದುಂಟಾದ ಜ್ಞಾನಾಗ್ನಿಯಿಂದಲೂ, ಜಲದಿಂದಲೂ, ದಹನ ಪ್ಲಾವನರೂಪವಾದ ಕರ್ಮದಿಂದಲೂ, ಆ ಪರಮೇಶ್ವರನ ರೂಪವನ್ನಾಶ್ರಯಿಸಿ, ತನ್ನ ಶರೀರವನ್ನು ಮಂಗಳಕರವಾದುದನ್ನಾಗಿ ಮಾಡಿಕೊಂಡು ಆ ಪರಮೇಶ್ವರನನ್ನು ಪೂಜಿಸಬೇಕು.

೫. ದೇಹಶುದ್ಧಿಯನ್ನು ಮಾಡಿಕೊಂಡು ಕ್ರಮವಾಗಿ ಪ್ರಣವ ಸಹಿತವಾದ ಪಂಚಬ್ರಹ್ಮಮೂಲಮಂತ್ರಗಳಿಂದ ಅಂಗನ್ಯಾಸಗಳನ್ನು ಮಾಡಿಕೊಳ್ಳಬೇಕು.

೬–೭. ಅತ್ಯಂತ ಮಂಗಳಕರವಾದ ನಮಃಶಿವಾಯ ಎಂಬ ಪಂಚಾಕ್ಷರೀಮಂತ್ರರೂಪವಾದ ಸೂತ್ರದಲ್ಲಿ ಛಂದಸ್ಸುಗಳೂ ಮಂತ್ರಗಳೂ ಸೂಕ್ಷ್ಮರೂಪದಿಂದಿರುವವು. ಆಲದ ಬೀಜದಲ್ಲಿ ಆಲದಮರವು ಸೂಕ್ಷ್ಮರೂಪದಿಂದಿರುವಂತೆ ಮಹಾಮಹಿಮೆಯುಳ್ಳ ಪಂಚಾಕ್ಷರೀಮಂತ್ರದಲ್ಲಿ ದೊಡ್ಡದಾದ ಬ್ರಹ್ಮವಸ್ತುವು ಸೂಕ್ಷ್ಮರೂಪದಿಂದ ಅಡಗಿರುವುದು.

೮. ಪೂಜಾಸ್ಥಾನವನ್ನು ಗಂಧದ ನೀರಿನಿಂದ ಚುಮುಕಿಸಿ ಪ್ರಣವ ಮಂತ್ರದಿಂದ ಪೂಜಿಸುವುದಕ್ಕೆ ಉಪಯೋಗಿಸುವ ಪದಾರ್ಥಗಳನ್ನೆಲ್ಲವನ್ನೂ ತೊಳೆಯುವುದು, ಪ್ರೋಕ್ಷಣಮಾಡುವುದು, ಮುಂತಾದುವುಗಳಿಂದ ಶುದ್ಧಿಮಾಡಬೇಕು.

ಕ್ಷಾಲನಂ ಪ್ರೋಕ್ಷಣಂ ಚೈವ ಪ್ರಣವೇನ ವಿಧೀಯತೇ ।
ಪ್ರೋಕ್ಷಣೀ ಚಾರ್ಘ್ಯಪಾತ್ರಂ ಚ ಪಾದ್ಯಪಾತ್ರಮನುಕ್ರಮಾತ್ ॥
ತಥಾ ಹ್ಯಾಚಮನೀಯಾರ್ಥಂ ಕಲ್ಪಿತಂ ಪಾತ್ರಮೇವ ಚ ।
ಸ್ಥಾಪಯೇದ್ವಿಧಿನಾ ಧೀಮಾನ್ ಅವಗುಂಠ್ಯ ಯಥಾವಿಧಿ ॥೧೦॥
ದರ್ಭೈರಾಚ್ಛಾದಯೇಚ್ಚೈವ ಪ್ರೋಕ್ಷಯೇಚ್ಛುದ್ಧವಾರಿಣಾ ।
ತೇಷು ತೇಷ್ವಥ ಸರ್ವೇಷು ಕ್ಷಿಪೇತ್ತೋಯಂ ಸುಶೀತಲಂ ॥೧೧॥
ಪ್ರಣವೇನ ಕ್ಷಿಪೇತ್ತೇಷು ದ್ರವ್ಯಾಣ್ಯಾಲೋಕ್ಯ ಬುದ್ಧಿಮಾನ್ ।
ಉಶೀರಂ ಚಂದನಂ ಚೈವ ಪಾದ್ಯೇ ತು ಪರಿಕಲ್ಪಯೇತ್ ॥೧೨॥
ಜಾತಿ ಕಂಕೋಲಕರ್ಪೂರ ಬಹುಮೂಲತಮಾಲಕಂ ।
ಚೂರ್ಣಯಿತ್ವಾ ಯಥಾನ್ಯಾಯಂ ಕ್ಷಿಪೇದಾಚಮನೀಯಕೇ ॥೧೩॥
ಏವಂ ಸರ್ವೇಷು ಪಾತ್ರೇಷು ದಾಪಯೇಚ್ಚಂದನಂ ತಥಾ ।
ಕರ್ಪೂರಂ ಚ ಯಥಾನ್ಯಾಯಂ ಪುಷ್ಪಾಣಿ ವಿವಿಧಾನಿ ಚ ॥೧೪॥

---

೯–೧೧. ಪ್ರೋಕ್ಷಣಪಾತ್ರೆ, ಅರ್ಘ್ಯಪಾತ್ರೆ, ಪಾದ್ಯಪಾತ್ರೆ, ಆಚಮನೀಯ ಪಾತ್ರೆ, ಇವುಗಳನ್ನು ಕ್ರಮವಾಗಿ ವಿಧಿಗನುಸಾರವಾಗಿ ಮುಚ್ಚಿಟ್ಟು ಬಳಿಕ ದರ್ಭೆಯಿಂದ ಮುಚ್ಚಿ ಶುದ್ಧವಾದ ನೀರಿನಿಂದ ಪ್ರೋಕ್ಷಿಸಿ ಆ ಎಲ್ಲಾ ಪಾತ್ರೆಗಳಲ್ಲಿಯೂ ತಣ್ಣಗಿರುವ ನೀರನ್ನು ಹಾಕಿ ಇರಿಸಬೇಕು.

೧೨–೧೩. ಆ ಪಾತ್ರೆಗಳಲ್ಲಿ ಪ್ರಣವಮಂತ್ರಗಳಿಂದ ಮುಂದೆಹೇಳುವ ಪದಾರ್ಥಗಳನ್ನು ಹಾಕಬೇಕು. ಪಾದ್ಯಪಾತ್ರೆಯಲ್ಲಿ ಲಾಂಮಂಚ ಮತ್ತು ಶ್ರೀಗಂಧವನ್ನೂ, ಆಚಮನೀಯ ಪಾತ್ರೆಯಲ್ಲಿ ಜಾಜಿ, ಕಂಕೋಲ, ಶತಾವರಿ, ಹೊಂಗೆ ಎಲೆಗಳ ಚೂರ್ಣವನ್ನು ಹಾಕಬೇಕು.

೧೪. ಈರೀತಿಯಲ್ಲಿ ಎಲ್ಲಾ ಪಾತ್ರೆಗಳಲ್ಲೂ ಶ್ರೀಗಂಧ, ಪಚ್ಚ ಕರ್ಪೂರ, ಹೂಗಳು, ಇವುಗಳನ್ನು ಹಾಕಬೇಕು.

ಕುಶಾಗ್ರಮಕ್ಷತಾಂಶ್ಚೈವ ಯವವ್ರೀಹಿತಿಲಾನಿ ಚ ।
ಆಜ್ಯಸಿದ್ಧಾರ್ಥಪುಷ್ಪಾಣಿ ಭಸಿತಂ ಚಾರ್ಘ್ಯಪಾತ್ರಕೇ ॥೧೫॥

ಕುಶಪುಷ್ಪಯವವ್ರೀಹಿ ಬಹುಮೂಲ ತಮಾಲಕಂ ।
ದಾಪಯೇತ್ಪ್ರೋಕ್ಷಣೀಪಾತ್ರೇ ಭಸಿತಂ ಪ್ರಣವೇನ ಚ ॥೧೬॥

ನ್ಯಸೇತ್ಪಂಚಾಕ್ಷರಂ ಚೈವ ಗಾಯತ್ರೀಂ ರುದ್ರದೇವತಾಂ ।
ಕೇವಲಂ ಪ್ರಣವಂ ವಾಽಪಿ ವೇದಸಾರಮನುತ್ತಮಂ ॥೧೭॥

ಅಥ ಸಂಪ್ರೋಕ್ಷಯೇತ್ಪಶ್ಚಾ ದ್ದ್ರವ್ಯಾಣಿ ಪ್ರಣವೇನ ತು ।
ಪ್ರೋಕ್ಷಣೀಪಾತ್ರಸಂಸ್ಥೇನ ಈಶಾನಾದ್ಯೈಶ್ಚ ಪಂಚಭಿಃ ॥೧೮॥

ಪಾರ್ಶ್ವತೋ ದೇವದೇವಸ್ಯ ನಂದಿನಂ ಮಾಂ ಸಮರ್ಚಯೇತ್ ।
ದೀಪ್ತಾನಲಾಯುತಪ್ರಖ್ಯಂ ತ್ರಿನೇತ್ರಂ ತ್ರಿದಶೇಶ್ವರಂ ॥೧೯॥

---

೧೫–೧೬. ಅರ್ಘ್ಯಪಾತ್ರೆಯಲ್ಲಿ ದರ್ಭೆಯ ಅಗ್ರಗಳು, ಅಕ್ಷತೆ, ಗೋಧಿ, ಬತ್ತ, ಎಳ್ಳು, ತುಪ್ಪ, ಬಿಳಿಯಸಾಸುವೆ, ಹೂಗಳು, ವಿಭೂತಿ, ಇವುಗಳನ್ನೂ ಪ್ರೋಕ್ಷಣಪಾತ್ರೆಯಲ್ಲಿ ದರ್ಭೆ, ಹೂ, ಗೋಧಿ, ಬತ್ತ, ಶತಾವರಿ, ಹೊಂಗೆ, ಭಸ್ಮ, ಇವುಗಳನ್ನೂ ಹಾಕಬೇಕು.

೧೭. ಆಮೇಲೆ ರುದ್ರಗಾಯತ್ರೀ ಮಂತ್ರದಿಂದಲಾಗಲೀ ಪಂಚಾಕ್ಷರೀ ಮಂತ್ರದಿಂದಲಾಗಲೀ ಪ್ರಣವಮಂತ್ರ ಒಂದರಿಂದಲೇ ಆಗಲಿ ಅಂಗನ್ಯಾಸಗಳನ್ನು ಮಾಡಿಕೊಳ್ಳಬೇಕು.

೧೮. ಆಮೇಲೆ ಪ್ರೋಕ್ಷಣೀಪಾತ್ರೆಯಲ್ಲಿರುವ ನೀರಿನಿಂದ, ಈಶಾನಾದಿ ಪಂಚಮಂತ್ರಗಳಿಂದಲೂ ಪ್ರಣವಮಂತ್ರದಿಂದಲೂ, ಪೂಜಾದ್ರವ್ಯಗಳನ್ನು ಪ್ರೋಕ್ಷಿಸಬೇಕು.

೧೯–೨೧. ಬಳಿಕ ದೇವದೇವನಾದ ಪರಮೇಶ್ವರನ ದಕ್ಷಿಣದ ಪಕ್ಕದಲ್ಲಿರುವ, ಉರಿಯುತ್ತಿರುವ ಅಗ್ನಿಯಂತೆ ಪ್ರಕಾಶಿಸುತ್ತಿರುವ, ಮೂರು ಕಣ್ಣುಗಳುಳ್ಳ, ಬಾಲಚಂದ್ರನನ್ನು ಕಿರೀಟದಲ್ಲಿ ಧರಿಸಿರುವ, ಕಪಿಯ ಮುಖವುಳ್ಳ, ನಾಲ್ಕುತೋಳುಗಳುಳ್ಳ, ಹೂವಿನಹಾರವನ್ನು ಹಾಕಿಕೊಂಡು ಸಕಲಾಭರಣಗಳಿಂದಲಂಕೃತನಾಗಿ, ಶಾಂತನಾಗಿರುವ ನಂದಿಯಾದ

ಬಾಲೇಂದುಮುಕುಟಂ ಚೈವ ಹರಿವಕ್ತ್ರಂ ಚತುರ್ಭುಜಂ ।
ಪುಷ್ಪಮಾಲಾಧರಂ ಸೌಮ್ಯಂ ಸರ್ವಾಭರಣಭೂಷಿತಂ ॥೨೦॥
ಉತ್ತರೇ ಚಾತ್ಮನಃ ಪುಣ್ಯಾಂ ಭಾರ್ಯಾಂ ಚ ಮರುತಾಂಶುಭಾಂ ।
ಸುಯಶಾಂ ಸುವ್ರತಾಂ ಚಾಂಬಾ ಪಾದಮಂಡನತತ್ಪರಾಂ ॥೨೧॥
ಏವಂ ಪೂಜ್ಯ ಪ್ರವಿಶ್ಯಾಂತರ್ಭವನಂ ಪರಮೇಷ್ಠಿನಃ ।
ದತ್ವಾ ಪುಷ್ಪಾಂಜಲಿಂ ಭಕ್ತ್ಯಾ ಪಂಚಮೂರ್ಧಸು ಪಂಚಭಿಃ ॥೨೨॥
ಗಂಧಪುಷ್ಪೈಸ್ತಥಾಧೂಪೈಃ ವಿವಿಧೈಃ ಪೂಜ್ಯ ಶಂಕರಂ ।
ಸ್ಕಂದಂ ವಿನಾಯಕಂ ದೇವೀಂ ಲಿಂಗಶುದ್ಧಿಂ ಚ ಕಾರಯೇತ್ ॥೨೩॥
ಜಪ್ತ್ವಾ ಸರ್ವಾಣಿ ಮಂತ್ರಾಣಿ ಪ್ರಣವಾದಿನಮೋಽಂತಕಂ ।
ಕಲ್ಪಯೇದಾಸನಂ ಪಶ್ಚಾತ್ಪದ್ಮಾಖ್ಯಂ ಪ್ರಣವೇನ ತತ್ ॥೨೪॥

---

ನನ್ನನ್ನೂ, ಉತ್ತರದಿಕ್ಕಿನಲ್ಲಿ ನನ್ನ ಪತ್ನಿಯಾದ ಪುಣ್ಯವಂತಳೂ ಒಳ್ಳೆಯ ಯಶಸ್ಸುಳ್ಳವಳೂ, ಒಳ್ಳೆಯ ವ್ರತಗಳನ್ನು ಮಾಡುವವಳೂ, ಮಂಗಳ ಸ್ವರೂಪಳೂ ದೇವಿಯಪಾದಕ್ಕೆ ಅಲಂಕಾರಮಾಡುತ್ತಿರುವುದರಲ್ಲಿ ಆಸಕ್ತಳೂ ಆದ ಮರುದ್ದೇವಿಯನ್ನೂ ಪೂಜಿಸಬೇಕು.

೨೨. ಹೀಗೆ ಪೂಜೆಮಾಡಿ ಪರಮೇಶ್ವರನಿರುವ ಒಳಗಿನಭಾಗಕ್ಕೆ ಪ್ರವೇಶಮಾಡಿ ಸದ್ಯೋಜಾತಾದಿ ಪಂಚಮಂತ್ರಗಳಿಂದ ಐದು ಶಿರಸ್ಸಿನ ಮೇಲೆಯೂ ಪುಷ್ಪಾಂಜಲಿಯನ್ನು ಭಕ್ತಿಯಿಂದ ಸಮರ್ಪಿಸಬೇಕು.

೨೩. ಗಂಧ, ಪುಷ್ಪ, ಧೂಪ, ದೀಪಾದಿಗಳಿಂದ ಶಿವ, ಸ್ಕಂದ, ವಿನಾಯಕ, ದೇವಿ, ಇವರುಗಳನ್ನು ಪೂಜಿಸಿ ಬಳಿಕ ಲಿಂಗಶುದ್ಧಿ ಎಂದರೆ ಲಿಂಗದ ನಿರ್ಮಾಲ್ಯೋದ್ವಾಸನೆಯನ್ನು ಮಾಡಬೇಕು.

೨೪. ಪ್ರಣವಾದಿಯಾಗಿ ನಮೋಽಂತವಾಗಿ ಸಕಲಮಂತ್ರಗಳನ್ನೂ ಎಂದರೆ ಓಂ ನಿಧನಪತಯೇ ನಮಃ, ಎಂಬ ಮಂತ್ರ ಮೊದಲಾಗಿ ಪರಮ ಲಿಂಗಾಯನಮಃ ಎಂಬ ಕೊನೆಯವರೆಗೂ ಎಲ್ಲ ಮಂತ್ರಗಳನ್ನೂ ಜಪಿಸಿ ಬಳಿಕ ಪ್ರಣವಮಂತ್ರದಿಂದ ಯೋಗಶಾಸ್ತ್ರದಲ್ಲಿ ಹೇಳಿರುವ ಪದ್ಮಾಸನ ವನ್ನು ಹಾಕಬೇಕು.

ತಸ್ಯಪೂರ್ವದಲಂ ಸಾಕ್ಷಾದಣಿಮಾಮಯಮಕ್ಷರಂ ।
ಲಘಿಮಾ ದಕ್ಷಿಣಂ ಚೈವ ಮಹಿಮಾ ಪಶ್ಚಿಮಂ ತಥಾ ॥೨೫॥
ಪ್ರಾಪ್ತಿಸ್ತಥೋತ್ತರಂ ಪತ್ರಂ ಪ್ರಾಕಾಮ್ಯಂ ಪಾವಕಸ್ಯ ತು ।
ಈಶಿತ್ವಂ ನೈಋತಂ ಪತ್ರಂ ವಶಿತ್ವಂ ವಾಯುಗೋಚರೇ ॥೨೬॥
ಸರ್ವಜ್ಞತ್ವಂ ತಥೈಶಾನ್ಯಂ ಕರ್ಣಿಕಾ ಸೋಮ ಉಚ್ಯತೇ ।
ಸೋಮಸ್ಯಾಧಸ್ತಥಾ ಸೂರ್ಯಸ್ತಸ್ಯಾಧಃ ಪಾವಕಃ ಸ್ವಯಂ ॥೨೭॥
ಧರ್ಮಾದಯೋ ವಿದಿಕ್ಷ್ವೇತೇ ತ್ವನಂತಂ ಕಲ್ಪಯೇತ್ಕ್ರಮಾತ್ ।
ಅವ್ಯಕ್ತಾದಿಚತುರ್ದಿಕ್ಷು ಸೋಮಸ್ಯಾಂತೇ ಗುಣತ್ರಯಂ ॥೨೮॥
ಆತ್ಮತ್ರಯಂ ತತಶ್ಚೋರ್ಧ್ವಂ ತಸ್ಯಾಂತೇ ಶಿವಪೀಠಿಕಾ ।
ಸದ್ಯೋಜಾತಂ ಪ್ರಪದ್ಯಾಮೀತ್ಯಾವಾಹ್ಯ ಪರಮೇಶ್ವರಂ ॥೨೯॥

---

೨೫–೨೭. ಆ ಪದ್ಮಾಸನಕ್ಕೆ ಪೂರ್ವಾದಿ ನಾಲ್ಕುದಳಗಳಲ್ಲಿ ಅಣಿಮಾ, ಲಘಿಮಾ, ಮಹಿಮಾ, ಪ್ರಾಪ್ತಿ ಎಂಬ ಅಕ್ಷರಗಳನ್ನೂ ಆಗ್ನೇಯಾದಿ ನಾಲ್ಕು ವಿದಿಗ್ದಳಗಳಲ್ಲಿ ಪ್ರಾಕಾಮ್ಯ, ಈಶಿತ್ವ, ವಶಿತ್ವ, ಸರ್ವಜ್ಞತ್ವ ಎಂಬ ಅಕ್ಷರಗಳನ್ನೂ, ಮಧ್ಯಭಾಗದಲ್ಲಿ ಚಂದ್ರನನ್ನೂ, ಆ ಚಂದ್ರನ ಕೆಳ ಭಾಗದಲ್ಲಿ ಸೂರ್ಯನನ್ನೂ, ಸೂರ್ಯನ ಕೆಳಭಾಗದಲ್ಲಿ ಅಗ್ನಿಯನ್ನೂ ಭಾವಿಸಬೇಕು.

೨೮. ಆಗ್ನೇಯಾದಿ ನಾಲ್ಕು ದಿಕ್ಕುಗಳಲ್ಲಿ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯಗಳನ್ನೂ, ಪೂರ್ವಾದಿ ನಾಲ್ಕು ದಿಕ್ಕುಗಳಲ್ಲಿ ಅವ್ಯಕ್ತ, ಮಹತ್ತತ್ವ, ಅಹಂಕಾರ, ಚಿತ್ತ ಇವುಗಳನ್ನೂ, ನಡುವೆ ಆದಿಶೇಷನನ್ನೂ, ಆದಿಶೇಷನ ಮೇಲ್ಭಾಗದಲ್ಲಿ ಚಂದ್ರನನ್ನೂ, ಚಂದ್ರನಮೇಲೆ ಸತ್ವರಜಸ್ತಮೋಗುಣ ಗಳನ್ನೂ ಭಾವಿಸಬೇಕು.

೨೯–೩೦. ಆ ಗುಣತ್ರಯಗಳ ಮೇಲೆ ವಿಶ್ವತೈಜಸಪ್ರಾಜ್ಞರೂಪವಾದ ಆತ್ಮತ್ರಯವನ್ನು ಭಾವಿಸಿ, ಅದರ ಮೇಲೆ ಶಿವಪೀಠಿಕಾರೂಪವಾದ ದೇವಿ ಯನ್ನು ಕಲ್ಪಿಸಬೇಕು. ಸದ್ಯೋಜಾತಂ ಪ್ರಪದ್ಯಾಮಿ ಎಂಬ ಮಂತ್ರ

ವಾಮದೇವೇನ ಮಂತ್ರೇಣ ಸ್ಥಾಪಯೇದಾಸನೋಪರಿ ।
ಸಾನ್ನಿಧ್ಯಂ ರುದ್ರಗಾಯತ್ರ್ಯಾ ಅಘೋರೇಣ ನಿರುಧ್ಯ ಚ ॥೩೦॥
ಈಶಾನಸ್ಸರ್ವವಿದ್ಯಾನಾಮಿತಿಮಂತ್ರೇಣ ಪೂಜಯೇತ್ ।
ಪಾದ್ಯಮಾಚಮನೀಯಂ ಚ ವಿಭೋಶ್ಚಾರ್ಘ್ಯಂ ಪ್ರದಾಪಯೇತ್ ॥
ಸ್ನಾಪಯೇದ್ವಿಧಿನಾ ರುದ್ರಂ ಗಂಧಚಂದನವಾರಿಣಾ ।
ಪಂಚಗವ್ಯವಿಧಾನೇನ ಗೃಹ್ಯ ಪಾತ್ರೇಽಭಿಮಂತ್ರ್ಯ ಚ ॥೩೨॥
ಪ್ರಣವೇನೈವ ಗವ್ಯೈಸ್ತು ಸ್ನಾಪಯೇಚ್ಚ ಯಥಾವಿಧಿ ।
ಆಜ್ಯೇನ ಮಧುನಾ ಚೈವ ತಥಾ ಚೇಕ್ಷುರಸೇನ ಚ ॥೩೩॥
ಪುಣ್ಯೈರ್ದ್ರವ್ಯೈರ್ಮಹಾದೇವಂ ಪ್ರಣವೇನಾಭಿಷೇಚಯೇತ್ ।
ಜಲಭಾಂಡೈಃ ಪವಿತ್ರೈಸ್ತು ಮಂತ್ರೈಸ್ತೋಯಂ ಕ್ಷಿಪೇತ್ತತಃ ॥೩೪॥
ಶುದ್ಧಿಂ ಕೃತ್ವಾ ಯಥಾನ್ಯಾಯಂ ಸಿತವಸ್ತ್ರೇಣ ಸಾಧಕಃ ।
ಕುಶಾಪಾಮಾರ್ಗ ಕರ್ಪೂರ ಜಾತಿಪುಷ್ಪಕ ಚಂಪಕೈಃ ॥೩೫॥

---

ದಿಂದ ಶಿವಲಿಂಗದಲ್ಲಿ ಆವಾಹನೆ ಮಾಡಿ,ಅದನ್ನು ವಾಮದೇವಮಂತ್ರದಿಂದ ದೇವೀರೂಪವಾದ ಪೀಠದಮೇಲೆ ಸ್ಥಾಪಿಸಬೇಕು. ತತ್ಪುರುಷಾಯ ಎಂಬ ರುದ್ರಗಾಯತ್ರಿಯಿಂದ ಲಿಂಗದಲ್ಲಿ ಶಿವಸಾನ್ನಿಧ್ಯವನ್ನು ಭಾವಿಸಿ, ಅಘೋರ ಮಂತ್ರದಿಂದ ಪ್ರಾಣಪ್ರತಿಷ್ಠೆಯನ್ನು ಮಾಡಿ, ಲಿಂಗದಲ್ಲಿ ಶಿವನನ್ನು ನೆಲೆ ಗೊಳಿಸಿ, ಈಶಾನಃ ಸರ್ವವಿದ್ಯಾನಾಂ ಎಂಬ ಮಂತ್ರದಿಂದ ಪೂಜಿಸಬೇಕು.

೩೧–೩೩. ಆಮೇಲೆ ಸರ್ವವ್ಯಾಪಿಯಾದ ರುದ್ರನಿಗೆ ಪಾದ್ಯ ಆಚಮನೀಯ ಅರ್ಘ್ಯ ಇವುಗಳನ್ನು ಸಮರ್ಪಿಸಿ, ಶ್ರೀಗಂಧದ ನೀರಿನಿಂದ ವಿಧ್ಯುಕ್ತವಾಗಿ ಸ್ನಾನಮಾಡಿಸಿ, ಪಂಚಗವ್ಯವನ್ನು ಹಿಂದೆ ಹೇಳಿದ ವಿಧಿಯಂತೆ ಪಾತ್ರೆಯಲ್ಲಿ ಸಂಗ್ರಹಿಸಿಟ್ಟು, ಮಂತ್ರಗಳಿಂದ ಅಭಿಮಂತ್ರಿಸಿ ಪ್ರಣವಮಂತ್ರದಿಂದ ತುಪ್ಪ, ಜೇನು, ಕಬ್ಬಿನರಸ ಮುಂತಾದ ಪುಣ್ಯಕರವಾದ ವಸ್ತುಗಳಿಂದ ಅಭಿಷೇಕವನ್ನು ಮಾಡಬೇಕು.

೩೪–೩೭. ಪರಿಶುದ್ಧವಾದ ಜಲಪಾತ್ರೆಗಳಿಂದ ಜಲದೇವತಾಕವಾದ ವರುಣಮಂತ್ರಗಳಿಂದ ನೀರನ್ನು ಸುರಿದು ಶುದ್ಧವಾದ ಬಿಳಿಯ ಬಟ್ಟೆಗಳಿಂದ ಶೋಧಿಸಿ ನೀರನ್ನು ಶುದ್ಧಿಮಾಡಿಕೊಂಡು ಆ ನೀರಿನಲ್ಲಿ ದರ್ಭೆ,

ಕರವೀರೈಃ ಸಿತೈಶ್ಚೈವ ಮಲ್ಲಿಕಾಕಮಲೋತ್ಪಲೈಃ ।
ಆಪೂರ್ಯ ಪುಷ್ಪೈಃ ಸುಶುಭ್ರೈಃ ಚಂದನಾದ್ಯೈಶ್ಚ ತಜ್ಜಲಂ ॥೩೬॥
ನ್ಯಸೇನ್ಮಂತ್ರಾಣಿ ತತ್ತೋಯೇ ಸದ್ಯೋಜಾತಾದಿಕಾನಿ ತು ।
ಸುವರ್ಣಕಲಶೇನಾಥ ತಥಾ ವೈ ರಾಜತೇನ ವಾ ॥೩೭॥
ತಾಮ್ರೇಣ ಪದ್ಮಪತ್ರೇಣ ಪಾಲಾಶೇನ ದಲೇನ ವಾ ।
ಶಂಖೇನ ಮೃಣ್ಮಯೇನಾಥ ಶೋಧಿತೇನ ಶುಭೇನ ವಾ ॥೩೮॥
ಸಕೂರ್ಚೇನ ಸಪುಷ್ಪೇಣ ಸ್ನಾಪಯೇನ್ಮಂತ್ರಪೂರ್ವಕಂ ।
ಮಂತ್ರಾಣಿ ತೇ ಪ್ರವಕ್ಷ್ಯಾಮಿ ಶೃಣು ಸರ್ವಾರ್ಥಸಿದ್ಧಯೇ ॥೩೯॥
ಯೈರ್ಲಿಂಗಂ ಸಕೃದಪ್ಯೇವಂ ಸ್ನಾಪ್ಯ ಮುಚ್ಯೇತ ಮಾನವಃ ।
ಪವಮಾನೇನ ಮಂತ್ರಜ್ಞಾಃ ತಥಾ ವಾಮೀಯಕೇನ ಚ ॥೪೦॥

---

ಉತ್ತರಣೆ, ಪಚ್ಚಕರ್ಪೂರ, ಜಾಜಿ ಹೂ, ಸಂಪಿಗೆ, ಬಿಳಿಯ ಕಣಿಗಲು, ಮಲ್ಲಿಗೆ ಮುಂತಾದ ಸುಗಂಧದ್ರವ್ಯಗಳು ಇವುಗಳನ್ನು ಹಾಕಿ ಆ ನೀರನ್ನು —

೩೭–೩೯. ಸದ್ಯೋಜಾತಾದಿ ಪಂಚ ಬ್ರಹ್ಮಮಂತ್ರಗಳಿಂದ ಅಭಿಮಂತ್ರಿಸಿ ಚಿನ್ನ, ಬೆಳ್ಳಿ, ತಾಮ್ರ, ಕಮಲದ ಎಲೆ, ಮುತ್ತುಗದ ಎಲೆ, ಶಂಖ, ಮಣ್ಣಿನಪಾತ್ರೆ, ಇವುಗಳಲ್ಲಿ ಶಕ್ತ್ಯನುಸಾರವಾಗಿ ದೊರೆತ ಶುಭಕರವಾದ ಪಾತ್ರೆಯಿಂದ ಆ ನೀರನ್ನು ತೆಗೆದುಕೊಂಡು, ಮಂತ್ರಪೂರ್ವಕವಾಗಿ ಕೂರ್ಚಪುಷ್ಪಸಹಿತವಾಗಿ ಅಭಿಷೇಕವನ್ನು ಮಾಡಬೇಕು. ಸಮಸ್ತ ಫಲಪ್ರಾಪ್ತಿಗೋಸ್ಕರವಾಗಿ ಆ ಮಂತ್ರಗಳನ್ನೂ ನಿನಗೆ ಹೇಳುವೆನು ಕೇಳು ಆ ಮಂತ್ರಗಳಿಂದ ಒಂದಾವೃತ್ತಿ ಲಿಂಗಕ್ಕೆ ಅಭಿಷೇಕಮಾಡಿದರೂ ಮನುಷ್ಯನು ಸಂಸಾರದುಃಖದಿಂದ ಬಿಡುಗಡೆಯನ್ನು ಹೊಂದುವನು.

೪೦–೪೧. ಎಲೈ ಋಷಿಗಳೇ, ತಮ್ಮತಮ್ಮ ಶಾಖೋಕ್ತವಾದ ಮಂತ್ರಗಳಿಂದಲೂ ಆ ಕಾಲಕ್ಕೆದೊರೆತ ಇತರ ಮಂತ್ರಗಳಿಂದಲೂ ಅಭಿಷೇಕವನ್ನು ಮಾಡಬೇಕು. ಆ ಮಂತ್ರಗಳಾವುವೆಂದರೆ: ಪವಮಾನ ಸೂಕ್ತ, ವಾಮನಸೂಕ್ತ, ಶ್ರೀರುದ್ರ, (ಈ ಶ್ರೀರುದ್ರವು ಸರ್ವಮಂತ್ರಗಳಿಗಿಂತಲೂ ಮಾಹಾತ್ಮ್ಯಯುಳ್ಳದ್ದೆಂದು ಶಿವರಹಸ್ಯದ ದಶಮಾಂಶದಲ್ಲಿ

ರುದ್ರೇಣ ನೀಲರುದ್ರೇಣ ಶ್ರೀಸೂಕ್ತೇನ ಶುಭೇನ ಚ।
ರಜನೀಸೂಕ್ತಕೇನೈವ ಚಮಕೇನ ಶುಭೇನ ಚ ॥೪೧॥

ಹೋತಾರೇಣಾಥ ಶಿರಸಾ ಅಥರ್ವೇಣ ಶುಭೇನ ಚ।
ಶಾಂತ್ಯಾ ಚಾಥ ಪುನಃ ಶಾಂತ್ಯಾ ಭಾರುಂಡೇನಾರುಣೇನ ಚ ॥೪೨॥

ವಾರುಣೇನ ಚ ಜ್ಯೇಷ್ಠೇನ ತಥಾ ವೇದವ್ರತೇನ ಚ।
ತಥಾಽಂತರೇಣ ಪುಣ್ಯೇನ ಸೂಕ್ತೇನ ಪುರುಷೇಣ ಚ ॥೪೩॥

ತ್ವರಿತೇನೈವ ರುದ್ರೇಣ ಕಪಿನಾ ಚ ಕಪರ್ದಿನಾ।
ಆವೋಽಸರಾಜೇತಿ ಸಾಮ್ನಾ ತು ಬೃಹಚ್ಚಂದ್ರೇಣ ವಿಷ್ಣುನಾ ॥೪೪॥

ವಿರೂಪಾಕ್ಷೇಣ ಸ್ಕಂದೇನ ಶತಋಗ್ಭಿಃ ಶಿವೈಃ ತಥಾ।
ಪಂಚಬ್ರಹ್ಮೈಶ್ಚ ಸೂತ್ರೇಣ ಕೇವಲಪ್ರಣವೇನ ಚ ॥೪೫॥

---

ಹೇಳಿದೆ. "ವೇದೇಷು ಶತರುದ್ರೀಯಂ ದೇವತಾಸು ಮಹೇಶ್ವರಃ" ಕ್ಷೇತ್ರೇಷು ಚಾ ವಿಮುಕ್ತಂ ವೈ ಮಂತ್ರೇ ಪಂಚಾಕ್ಷರೋ ವರಃ'। ಪೂಜಾಯಾ ಅಧಿಕೋ ಹೋಮೋ ಹೋಮಾತ್ತರ್ಪಣಮುತ್ತಮಂ। ತರ್ಪಣಾಚ್ಚ ಜಪಃ ಶ್ರೇಷ್ಠೋ ಹ್ಯಭಿಷೇಕಃ ಪರೋ ಜಪಾತ್ ॥ ಸ್ಥಾವರೇ ಜಂಗಮೇ ಲಿಂಗೇ ಸಮಾಹಿತಮನಾಃ ಶುಚಿಃ। ನ್ಯಾಸಧ್ಯಾನಾದಿ ಸಹಿತಂ ಪಂಚಮೇ ಸೂಕ್ತಪೂರ್ವಕಂ। ಪ್ರಜಪನ್ ಶತರುದ್ರೀಯಂ ಅಭಿಷೇಕಂ ಸಮಾಚರೇತ್ ॥ ಇತ್ಯಾದಿಯಾಗಿ ಹೇಳಿದೆ. ಹೆಚ್ಚು ಅಂಶಗಳನ್ನು ಅಲ್ಲಿಯೇ ತಿಳಿಯಬಹುದು) ಅಥರ್ವಣವೇದದ ನೀಲರುದ್ರಮಂತ್ರ, ಶ್ರೀ ಸೂಕ್ತ, ರಾತ್ರಿಸೂಕ್ತ, ಚಮಕ—

೪೨—೪೫. ಹೋತಾರಸೂಕ್ತ, ಅಥರ್ವಶಿರೋಪನಿಷತ್ತು, ಶನ್ನ ಇಂದ್ರಾಗ್ನಿ, ಶನ್ನೋಮಿತ್ರ ಎಂಬ ಶಾಂತಿಸೂಕ್ತಗಳು, ಭಾರುಂಡ ಸೂಕ್ತ, ಅರುಣ ವರುಣಸೂಕ್ತ, ವೇದತ್ರಯದಸೂಕ್ತಗಳು, ಪುರುಷ ಸೂಕ್ತ ರಥಂತರ, ಆವೋರಾಜ, ಬೃಹಚ್ಚಂದ್ರಸಾಮಗಳ, ವಿಷ್ಣುಸೂಕ್ತ, ಸ್ಕಂದಸೂಕ್ತ, ಪಂಚಬ್ರಹ್ಮಮಂತ್ರ, ಕೇವಲಪ್ರಣವ.

ಸ್ನಾಪಯೇದ್ದೇವದೇವೇಶಂ ಸರ್ವಪಾಪಪ್ರಶಾಂತಯೇ ।
ವಸ್ತ್ರಂ ಶಿವೋಪವೀತಂ ಚ ತಥಾ ಹ್ಯಾಚಮನೀಯಕಂ ॥೪೬॥

ಗಂಧಪುಷ್ಪಂ ತಥಾ ಧೂಪಂ ದೀಪಮನ್ನಂ ಕ್ರಮೇಣ ತು ।
ತೋಯಂ ಸುಗಂಧಿತಂ ಚೈವ ಪುನರಾಚಮನೀಯಕಂ ॥೪೭॥

ಮುಕುಟಂ ಚ ಶುಭಂ ಛತ್ರಂ ತಥಾ ವೈ ಭೂಷಣಾನಿ ಚ ।
ದಾಪಯೇತ್ಪ್ರಣವೇನೈವ ಮುಖವಾಸಾದಿಕಾನಿ ಚ ॥೪೮॥

ತತಃ ಸ್ಫಟಿಕಸಂಕಾಶಂ ದೇವಂ ನಿಷ್ಕಲಮಕ್ಷರಂ ।
ಕಾರಣಂ ಸರ್ವದೇವಾನಾಂ ಸರ್ವಲೋಕಮಯಂ ಪರಂ ॥೪೯॥

ಬ್ರಹ್ಮೇಂದ್ರ ವಿಷ್ಣುರುದ್ರಾದ್ಯೈಃ ಋಷಿದೇವೈರಗೋಚರಂ ।
ವೇದವಿದ್ಭಿರ್ಹಿ ವೇದಾಂತೈಸ್ತ್ವಗೋಚರಮಿತಿ ಶ್ರುತಿಃ ॥೫೦॥

ಆದಿಮಧ್ಯಾಂತರಹಿತಂ ಭೇಷಜಂ ಭವರೋಗಿಣಾಂ ।
ಶಿವತತ್ವಮಿತಿಖ್ಯಾತಂ ಶಿವಲಿಂಗೇ ವ್ಯವಸ್ಥಿತಂ ॥೫೧॥

---

೪೬–೪೮. ಈ ಮಂತ್ರಗಳಿಂದ ಅಥವಾ ಸ್ವಶಾಖೋಕ್ತವಾದ ಅಭಿಷೇಕಮಂತ್ರಗಳಿಂದ ದೇವದೇವನಾದ ಪರಮೇಶ್ವರನನ್ನು ಸಕಲಪಾಪಪರಿಹಾರಕ್ಕಾಗಿ ಸ್ನಾನಮಾಡಿಸಬೇಕು. ಆಮೇಲೆ ವಸ್ತ್ರ, ಯಜ್ಞೋಪವೀತ, ಆಚಮನೀಯಜಲ, ಗಂಧ, ಹೂ, ಧೂಪ, ದೀಪ, ನೈವೇದ್ಯ, ಸುಗಂಧವಾದ ಗಂಗೋದಕ, ಪುನರಾಚಮನ, ಕಿರೀಟ, ಛತ್ರಿ, ಆಭರಣಗಳು, ತಾಂಬೂಲ, ಮುಂತಾದುವುಗಳನ್ನು ಪ್ರಣವಮಂತ್ರ ಒಂದರಿಂದಲೇ ಸಮರ್ಪಿಸಬೇಕು.

೪೯–೫೦. ಆಮೇಲೆ ಸ್ಫಟಿಕದಂತೆ ಪರಿಶುದ್ಧನಾದ ದೇವದೇವನಾದ ಶಿವನು ನಿರ್ವಿಕಾರನಾಗಿ ನಾಶರಹಿತನಾಗಿ ಸಕಲದೇವತೆಗಳಿಗೂ ಕಾರಣನಾಗಿ ಸಕಲಲೋಕಸ್ವರೂಪನಾಗಿ ಬ್ರಹ್ಮ, ವಿಷ್ಣು, ರುದ್ರ, ಋಷಿಗಳು ದೇವತೆಗಳು ಇವರುಗಳಿಗೂ ಕಾಣಿಸದವನಾದ ಶಿವನು ವೇದಾಂತ ವಾಕ್ಯಗಳಿಂದಲೂ ವಾಚ್ಯಾರ್ಥವಾಗಿ ತಿಳಿಯಲಸಾಧ್ಯನೆಂದು ಶ್ರುತಿಯು ಹೇಳುತ್ತಿದೆ.

೫೧. ಆದಿ ಮಧ್ಯಾಂತಶೂನ್ಯನಾದುದರಿಂದ ನಿತ್ಯನಾಗಿ ಸಂಸಾರವೆಂಬ ರೋಗ ಉಳ್ಳವರಿಗೆ ಔಷಧಸ್ವರೂಪನಾಗಿ ಶಿವತತ್ವವೆಂದು ಪ್ರಸಿದ್ಧಿ ಹೊಂದಿ ಶಿವಲಿಂಗದಲ್ಲಿ ನೆಲಸಿರುವ ಪರಮೇಶ್ವರನನ್ನು ಪ್ರಣವಮಂತ್ರದಿಂದ ಲಿಂಗದ ತಲೆಯಮೇಲೆ ಪೂಜಿಸಬೇಕು.

ಪ್ರಣವೇನೈವ ಮಂತ್ರೇಣ ಪೂಜಯೇಲ್ಲಿಂಗಮೂರ್ಧನಿ ।
ಸ್ತೋತ್ರಂ ಜಪೇಚ್ಚ ವಿಧಿನಾ ನಮಸ್ಕಾರಂ ಪ್ರದಕ್ಷಿಣಂ ॥೫೨॥
ಅರ್ಘ್ಯಂ ದತ್ವಾಽಥ ಪುಷ್ಪಾಣಿ ಪಾದಯೋಸ್ತು ವಿಕೀರ್ಯ ಚ ।
ಪ್ರಣಿಪತ್ಯ ಚ ದೇವೇಶಂ ಆತ್ಮನ್ಯಾರೋಪಯೇಚ್ಛಿವಂ ॥೫೩॥
ಏವಂ ಸಂಕ್ಷಿಪ್ಯ ಕಥಿತಂ ಲಿಂಗಾರ್ಚನಮನುತ್ತಮಂ ।
ಆಭ್ಯಂತರಂ ಪ್ರವಕ್ಷ್ಯಾಮಿ ಲಿಂಗಾರ್ಚನಮಿಹಾದ್ಯ ತೇ ॥೫೪॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಲಿಂಗಾರ್ಚನ ವಿಧಿರ್ನಾಮ
ಸಪ್ತವಿಂಶೋಽಧ್ಯಾಯಃ

---

೫೨–೫೩. ಬಳಿಕ ಸ್ತೋತ್ರಮಾಡಿ ಪ್ರದಕ್ಷಿಣನಮಸ್ಕಾರಗಳನು ಮಾಡಿ ಅರ್ಘ್ಯವನ್ನು ಕೊಟ್ಟು, ಪಾದಗಳ ಮೇಲೆ ಹೂಗಳನ್ನು ಪೂಜಿಸಿ ನಮಸ್ಕರಿಸಿ ಆ ಶಿವನನ್ನು ಆತ್ಮಸಮಾರೋಪಣೆ ಮಾಡಿಕೊಳ್ಳಬೇಕು.

೫೪. ಈರೀತಿಯಲ್ಲಿ ಬಾಹ್ಯಲಿಂಗಾರ್ಚನೆಯನ್ನು ಸಂಕ್ಷೇಪವಾಗಿ ಹೇಳಿಯಾಯ್ತು. ಇನ್ನು ಮುಂದೆ ಹೃದಯಕಮಲದಲ್ಲಿ ಲಿಂಗಾರ್ಚನೆಯ ಕ್ರಮವನ್ನು ಹೇಳುವೆನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಬಾಹ್ಯವಾದ ಲಿಂಗಾರ್ಚನೆಯ
ಕ್ರಮವನ್ನು ವಿವರಿಸುವ ಇಪ್ಪತ್ತೇಳನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ
## ಅಷ್ಟಾವಿಂಶೋಽಧ್ಯಾಯಃ

**ಅಷ್ಟಾವಿಂಶೇಸ್ಮಿನ್ಹೃದಯೇ ಶ್ರೀಸಾಂಬಾರ್ಚಾ ಮನೋಮಯೀ ।**
**ತತ್ಕರ್ತೃಮಹಿಮಾ ಚೈವ ತತ್ವಸಂಖ್ಯಾ ನಿರೂಪ್ಯತೇ ॥**

**॥ ಶೈಲಾದಿರುವಾಚ ॥**

**ಆಗ್ನೇಯಂ ಸೌರಮಮೃತಂ ಬಿಂಬಂ ಭಾವ್ಯಂ ತತೋಪರಿ ।**
**ಗುಣತ್ರಯಂ ಚ ಹೃದಯೇ ತಥಾಚಾತ್ಮತ್ರಯಂ ಕ್ರಮಾತ್ ॥ ೧ ॥**

**ತಸ್ಯೋಪರಿ ಮಹಾದೇವಂ ನಿಷ್ಕಲಂ ಸಕಲಾಕೃತಿಂ ।**
**ಕಾಂತಾರ್ಧರೂಢದೇಹಂ ಚ ಪೂಜಯೇದ್ಧ್ಯಾನವಿದ್ಯಯಾ ॥ ೨ ॥**

---

### ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಇಪ್ಪತ್ತೆಂಟನೆಯ ಅಧ್ಯಾಯವು

( ಈ ಇಪ್ಪತ್ತೆಂಟನೆಯ ಅಧ್ಯಾಯದಲ್ಲಿ ಮಾನಸಿಕವಾದ ಶಿವಾರ್ಚನ ವಿಧಾನವೂ ಅದನ್ನು ಮಾಡುವವರ ಮಹಿಮೆಯೂ ಶಿವತತ್ವ ಸಂಖ್ಯೆಯೂ ಇವನ್ನು ವರ್ಣಿಸಲಾಗುವುದು. )

೧. ನಂದೀಶ್ವರನು ಅಭ್ಯಂತರ ಪೂಜೆಯನ್ನು ಹೇಳುವನು:— ಅಂತರಪೂಜೆಯನ್ನು ಮಾಡುವ ಮನುಜನು ತನ್ನ ಹೃದಯಕಮಲದಲ್ಲಿ ಅಗ್ನಿಮಂಡಲವನ್ನೂ, ಅದರ ಮೇಲೆ ಸೂರ್ಯಮಂಡಲವನ್ನೂ, ಬಳಿಕ ಚಂದ್ರಮಂಡಲವನ್ನೂ, ಅದರ ಮೇಲೆ ಸತ್ವರಜಸ್ತಮೋಗುಣಗಳನ್ನೂ ವಿಶ್ವ ತೈಜಸಪ್ರಾಜ್ಞರೂಪವಾದ ಆತ್ಮತ್ರಯಂಗಳನ್ನೂ ಭಾವನೆಮಾಡಬೇಕು.

೨. ಅದರ ಮೇಲೆ ಪರಿಶುದ್ಧನಾದ, ಅರ್ಧದೇಹದಲ್ಲಿ ಉಮಾದೇವಿಯಿಂದ ಕೂಡಿದ, ಸಂಪೂರ್ಣಾಕಾರನಾದ ಮಹೇಶ್ವರನನ್ನು ಧ್ಯಾನರೂಪವಾದ ಯೋಗವಿದ್ಯೆಯಿಂದ ಪೂಜಿಸಬೇಕು.

ತತೋ ಬಹುವಿಧಂ ಪ್ರೋಕ್ತಂ ಚಿಂತ್ಯಂ ತತ್ರಾಸ್ತಿ ಚೇದ್ಯತಃ।
ಚಿಂತಕಸ್ಯ ತತಶ್ಚಿಂತಾ ಅನ್ಯಥಾ ನೋಪಪದ್ಯತೇ ॥ ೩ ॥
ತಸ್ಮಾದ್ಧ್ಯೇಯಂ ತಥಾ ಧ್ಯಾನಂ ಯಜಮಾನಃ ಪ್ರಯೋಜನಂ।
ಸ್ಮರೇತ್ತನ್ನಾನ್ಯಥಾ ಜಾತು ಬುಧ್ಯತೇ ಪುರುಷಸ್ಯ ಹ ॥ ೪ ॥
ಪುರೇ ಶೇತೇ ಪುರಂ ದೇಹಂ ತಸ್ಮಾತ್ಪುರುಷ ಉಚ್ಯತೇ।
ಯಾಜ್ಯಂ ಯಜ್ಞೇನ ಯಜತೇ ಯಜಮಾನಸ್ತು ಸ ಸ್ಮೃತಃ ॥ ೫ ॥
ಧ್ಯೇಯೋ ಮಹೇಶ್ವರೋ ಧ್ಯಾನಂ ಚಿಂತನಂ ನಿರ್ವೃತಿಃ ಫಲಂ।
ಪ್ರಧಾನಪುರುಷೇಶಾನಂ ಯಾಥಾತಥ್ಯಂ ಪ್ರಪದ್ಯತೇ ॥ ೬ ॥

---

೩. ಧ್ಯಾನಮಾಡತಕ್ಕವನಿಗೆ ಧ್ಯಾನವಿಷಯವಾದ ಒಂದು ವಸ್ತು ಬೇರೆ ಇದ್ದರೆ ಆ ಧ್ಯಾನವು ಅನೇಕ ಬಗೆಯಾಗುವುದು. ಹಾಗಿಲ್ಲದೆಹೋದರೆ, ಎಂದರೆ ಧ್ಯಾನಕರ್ತೃ ಧ್ಯಾನ ವಿಷಯವೆಂಬ ಭೇದವಿಲ್ಲದೆ ಹೋದರೆ, ಧ್ಯಾನ ಕಾರ್ಯವೇ ಇಲ್ಲದೆಹೋಗವುದು.

೪. ಆ ಕಾರಣದಿಂದ ಧ್ಯಾನಮಾಡತಕ್ಕವನು ಧ್ಯಾನವಿಷಯ ಧ್ಯಾನಪ್ರಯೋಜನ. ಇವುಗಳನ್ನು ಶಿವಸ್ವರೂಪವನ್ನಾಗಿಯೇ ತಿಳಿಯ ಬೇಕು. ಹಾಗೆ ಮಾಡದೇ ಹೋದರೆ ಜೀವನಿಗೆ ಈ ಶರೀರದಲ್ಲಿ ಸಾಂಬಶಿವ ಸ್ವರೂಪವಾದ ಪರಬ್ರಹ್ಮವಸ್ತುವು ಎಂದಿಗೂ ತಿಳಿಯುವುದೇ ಇಲ್ಲ.

೫. ದೇಹಕ್ಕೆ ಪುರವೆಂದು ಹೆಸರು. ಆ ಪುರದಲ್ಲಿ ಮಲಗಿರುವನಾದು ದರಿಂದ ಪುರುಷನೆಂಬ ಹೆಸರು ಜೀವನಿಗೆ ಬಂದಿರುವುದು. ಅವನೇ ಯಜ ಮಾನನು. ಎಂದರೆ ಧ್ಯಾನರೂಪವಾದ ಯಾಗಕ್ಕೆ ಕರ್ತೃವು ಈ ಜೀವನು. ಧ್ಯಾನವಿಷಯನಾದ ಪರಮೇಶ್ವರನನ್ನು ಧ್ಯಾನರೂಪವಾದ ಯಜ್ಞದಿಂದ ಪೂಜಿಸುವನು.

೬. ಯಾವ ಜೀವನು, ಧ್ಯಾನವಿಷಯನು ಮಹೇಶ್ವರನು, ಧ್ಯಾನವು ಅವನ ಚಿಂತನೆಯು, ಸುಖವೇ ಫಲವು, ಎಂದು ತಿಳಿಯು ವನೋ ಅವನು ಶಿವನನ್ನು ಸ್ವಸ್ವರೂಪವಾಗಿ ಹೊಂದುವನು.

ಇಹ ಷಡ್ವಿಂಶಕೋ ಧ್ಯೇಯೋ ಧ್ಯಾತಾ ವೈ ಪಂಚವಿಂಶಕಃ ।
ಚತುರ್ವಿಂಶಕಮವ್ಯಕ್ತಂ ಮಹದಾದ್ಯಾಸ್ತು ಸಪ್ತ ಚ ॥ ೭ ॥

ಮಹಾಂಸ್ತಥಾ ತ್ವಹಂಕಾರಂ ತನ್ಮಾತ್ರಂ ಪಂಚಕಂ ಪುನಃ ।
ಕರ್ಮೇಂದ್ರಿಯಾಣಿ ಪಂಚೈವ ತಥಾ ಬುದ್ಧೀಂದ್ರಿಯಾಣಿ ಚ ॥ ೮ ॥

ಮನಶ್ಚ ಪಂಚಭೂತಾನಿ ಶಿವಃ ಷಡ್ವಿಂಶಕಸ್ತತಃ ।
ಸ ಏವ ಭರ್ತಾ ಕರ್ತಾ ಚ ವಿಧೇರಪಿ ಮಹೇಶ್ವರಃ ॥ ೯ ॥

ಹಿರಣ್ಯಗರ್ಭಂ ರುದ್ರೋಽಸೌ ಜನಯಾಮಾಸ ಶಂಕರಃ ।
ವಿಶ್ವಾಧಿಕಶ್ಚ ವಿಶ್ವಾತ್ಮಾ ವಿಶ್ವರೂಪ ಇತಿ ಸ್ಮೃತಃ ॥೧೦॥

ವಿನಾ ಯಥಾ ಹಿ ಪಿತರಂ ಮಾತರಂ ತನಯಾಸ್ತ್ವಿಹ ।
ನ ಜಾಯಂತೇ ತಥಾ ಸೋಮಂ ವಿನಾ ನಾಸ್ತಿ ಜಗತ್ತ್ರಯಂ॥೧೧॥

---

೭–೮. ಎಲ್ಲ ಲಿಂಗಶಾಸ್ತ್ರಗಳಂತೆ ಇಲ್ಲಿಯೂ ಲಿಂಗಶರೀರದಲ್ಲಿ ಇಪ್ಪತ್ತಾರನೆಯ ತತ್ವವಾದವನೇ ಶಿವನು. ಅವನೇ ಧ್ಯಾನವಿಷಯನು. ಧ್ಯಾನಮಾಡತಕ್ಕ ಜೀವನು ಇಪ್ಪತ್ತೈದನೆಯ ತತ್ವವು. ಪ್ರಕೃತಿಯು ಇಪ್ಪತ್ತುನಾಲ್ಕನೆಯ ತತ್ವವು. ಮಿಕ್ಕ ಇಪ್ಪತ್ತುಮೂರು ತತ್ವಗಳಾವುವೆಂದರೆ:— ಮಹತ್ತತ್ವ, ಅಹಂಕಾರತತ್ವ, ಪಂಚತನ್ಮಾತ್ರಗಳಾದ ಶಬ್ದಸ್ಪರ್ಶರೂಪರಸಗಂಧಗಳು, ಮುಖ, ಹಸ್ತ, ಪಾದ, ಪಾಯು, ಉಪಸ್ಥ ಎಂಬ ಐದು ಕರ್ಮೇಂದ್ರಿಯಗಳು. ಕಿವಿ, ಚರ್ಮ, ಕಣ್ಣು, ನಾಲಿಗೆ, ಮೂಗು ಎಂಬ ಐದು ಜ್ಞಾನೇಂದ್ರಿಯಗಳು. ಮನಸ್ಸು, ಪಂಚಭೂತಗಳು. ಈ ಲೆಕ್ಕದಿಂದ ಶಿವತತ್ವವು ಇಪ್ಪತ್ತಾರನೆಯದಾಗುವುದು.

೯–೧೦. ಆ ಮಹೇಶ್ವರನೇ ವಿಶ್ವವನ್ನು ಸೃಷ್ಟಿಸಿ ರಕ್ಷಿಸುವನು. ಆ ಶಂಕರನೇ ಹಿರಣ್ಯಗರ್ಭಬ್ರಹ್ಮನನ್ನು ಹುಟ್ಟಿಸಿದನು. ಅವನು ಪ್ರಪಂಚಕ್ಕಿಂತ ದೊಡ್ಡವನು. ಪ್ರಪಂಚ ಸ್ವರೂಪನಾದುದರಿಂದ ವಿಶ್ವರೂಪನೆಂದು ಅವನಿಗೆ ಹೆಸರಿರುವುದು. ಈ ವಿಷಯದಲ್ಲಿ ಶ್ರುತಿಯಲ್ಲಿ "ಯೋ ದೇವಾನಾಂ ಪ್ರಥಮಂ ಪುರಸ್ತಾದ್ವಿಶ್ವಾಧಿಕೋ ರುದ್ರೋ ಮಹರ್ಷಿಃ। ಹಿರಣ್ಯಗರ್ಭಂ ಪಶ್ಯತ ಜಾಯಮಾನಂ ಸ ನೋ ದೇವಃ ಶುಭಯಾ ಸ್ಮೃತ್ಯಾ ಸಂಯುನಕ್ತು" ಎಂದು ಹೇಳಿರುವುದು.

೧೧. ಈ ಭೂಲೋಕದಲ್ಲಿ ತಾಯಿತಂದೆಗಳಿಲ್ಲದೆ ಮಕ್ಕಳು ಹೇಗೆ ಹುಟ್ಟುವುದಿಲ್ಲವೋ ಹಾಗೆ ಶಿವನಿಲ್ಲದೆ ಮೂರುಲೋಕವೂ ಇರಲಾರದು.

॥ ಸನತ್ಕುಮಾರ ಉವಾಚ ॥

ಕರ್ತಾ ಯದಿ ಮಹಾದೇವಃ ಪರಮಾತ್ಮಾ ಮಹೇಶ್ವರಃ ।
ತಥಾ ಕಾರಯಿತಾ ಚೈವ ಕುರ್ವತೋಽಲ್ಪಾತ್ಮನಸ್ತಥಾ ॥೧೨॥
ನಿತ್ಯೋ ವಿಶುದ್ಧೋ ಬುದ್ಧಶ್ಚ ನಿಷ್ಕಲಃ ಪರಮೇಶ್ವರಃ ।
ತ್ವಯೋಕ್ತೋ ಮುಕ್ತಿದಃ ಕಿಂ ವಾ ನಿಷ್ಕಲಶ್ಚೇತ್ಕರೋತಿ ಕಿಂ ॥೧೩॥

॥ ಶೈಲಾದಿರುವಾಚ ॥

ಕಾಲಃ ಕರೋತಿ ಸಕಲಂ ಕಾಲಂ ಕಲಯತೇ ಸದಾ ।
ನಿಷ್ಕಲಂ ಚ ಮನಃಸರ್ವಂ ಮನ್ಯತೇ ಸೋಽಪಿ ನಿಷ್ಕಲಃ ॥೧೪॥

---

೧೨–೧೩. ಸನತ್ಕುಮಾರನು ಹೇಳಿದನು: ಮಹೇಶ್ವರನೂ, ಪರಮಾತ್ಮನೂ ಆದ ಮಹಾದೇವನು ಸಕಲ ಕರ್ತೃವಾದ ಮೇಲೆ ಜೀವನಿಂದ ಕಾರ್ಯಮಾಡಿಸುವವನೂ ಅವನೇ ಆದಂತಾಯ್ತು. ಹೀಗೆ ಜೀವನು ಪರಾಧೀನನಾದ ಮೇಲೆ ಈಶ್ವರನಿಗೆ ವೈಷಮ್ಯ ನೈರ್ಘೃಣ್ಯಾದಿ ದೋಷಗಳು ಬರುವುವು. ಪರಮೇಶ್ವರನು ನಿತ್ಯನಾದವನು, ಪರಿಶುದ್ಧನು, ಜ್ಞಾನಿಯು, ನಿರ್ವಿಕಾರನು, ಎಂದು ನೀನು ಹೇಳಿರುವೆ. ಇಂಥವನು ಜೀವರಿಗೆ ಮುಕ್ತಿಯನ್ನು ಹೇಗೆ ಕೊಡುವನು? ನಿರ್ವಿಕಾರನಾದಮೇಲೆ ಕರ್ತೃವು ಹೇಗೆ ಆಗುವನು? (ಪುಟ ೧–೨ ನೋಡಿ.)

೧೪. ನಂದಿಯು ಸಮಾಧಾನವನ್ನು ಹೇಳುವನು: ಮಹೇಶ್ವರನು ಸ್ವತಃ ಕರ್ತೃವಲ್ಲದಿದ್ದರೂ ಕಾಲಾದಿಗಳಿಂದ ಕರ್ತೃವು. ಆದುದರಿಂದ ಅದು ಬಾಧಿತವಾಗುವುದಿಲ್ಲ. ಸಕಲ ಪ್ರಪಂಚವನ್ನೂ ಕಾಲವೇ ಸೃಷ್ಟಿಸುವುದು. ಆ ಕಾಲವನ್ನು ಪರಮೇಶ್ವರನು ಪ್ರೇರಿಸುವನು. ಹೀಗೆ ಪರಮೇಶ್ವರನು ಸ್ವತಃ ಕರ್ತೃವೂ ಪ್ರೇರಕನೂ ಅಲ್ಲದುದರಿಂದ ಮುಕ್ತಿಯನ್ನು ಕೊಡುವ ವಿಷಯದಲ್ಲಿ ಯಾವ ತೊಂದರೆಯೂ ಇರುವುದಿಲ್ಲ. ನಿರ್ವಿಕಾರವಾದ ಮನಸ್ಸು ಸಕಲಪ್ರಪಂಚವನ್ನೂ ಶಿವಸ್ವರೂಪವಾಗಿ ತಿಳಿಯುವುದು. ಆದುದರಿಂದ ಆ ಮನಸ್ಸು ನಿರ್ವಿಕಾರವಾದ ಶಿವಸ್ವರೂಪವೇ ಆಗುವುದು ಇದಕ್ಕೆ ಪ್ರಮಾಣವು "ಮನ ಏವ ಮನುಷ್ಯಾಣಾಂ ಕಾರಣಂ ಬಂಧಮೋಕ್ಷಯೋಃ। ಗುಣೇಷು ಸಕ್ತಂ ಬಂಧಾಯ ಮೋಕ್ಷಾಯ ತಪಸಿ ಸ್ಥಿತಂ॥ ಎಂದು ಹೇಳಿದೆ. ದೇ. ಭಾ. ಸ್ಕಂ. ೧೨. ಮುನ್ನುಡಿಯನ್ನುನೋಡಿ.

ಕರ್ಮಣಾ ತಸ್ಯ ಚೈವೇಹ ಜಗತ್ಸರ್ವಂ ಪ್ರತಿಷ್ಠಿತಂ ।
ಕಿಮತ್ರ ದೇವದೇವಸ್ಯ ಮೂರ್ತ್ಯಷ್ಟಕಮಿದಂ ಜಗತ್ ॥೧೫॥

ವಿನಾಽಽಕಾಶಂ ಜಗನ್ನೈವ ವಿನಾ ಕ್ಷ್ಮಾಂ ವಾಯುನಾ ವಿನಾ ।
ತೇಜಸಾ ವಾರಿಣಾ ಚೈವ ಯಜಮಾನಂ ತಥಾ ವಿನಾ ॥೧೬॥

ಭಾನುನಾ ಶಶಿನಾ ಲೋಕಸ್ತಸ್ಯೈತಾಃ ತನವಃ ಪ್ರಭೋಃ ।
ವಿಚಾರತಸ್ತು ರುದ್ರಸ್ಯ ಸ್ಥೂಲಮೇತಚ್ಚರಾಚರಂ ॥೧೭॥

ಸೂಕ್ಷ್ಮಂ ವದಂತಿ ಋಷಯೋ ಯನ್ನ ವಾಚ್ಯಂ ದ್ವಿಜೋತ್ತಮಾಃ ।
ಯತೋ ವಾಚೋ ನಿವರ್ತಂತೇ ಅಪ್ರಾಪ್ಯ ಮನಸಾ ಸಹ ॥೧೮॥

---

೧೫. ಬಂಧಮೋಕ್ಷಗಳೂ ಅಜ್ಞಾನ ಕಲ್ಪಿತವಾದುದರಿಂದ ಪರಮೇಶ್ವರನು ಮೋಕ್ಷವನ್ನು ಕೊಡತಕ್ಕವನಲ್ಲ, ಎಂದು ಹೇಳಿದರೂ ಏನೂ ತೊಂದರೆ ಇಲ್ಲ. ಆ ಪರಮೇಶ್ವರನ ರೂಪದಿಂದಲೇ ಈ ಸಮಸ್ತ ಪ್ರಪಂಚವೂ ಇರುವುದು. ಹೆಚ್ಚು ಹೇಳುವುದೇನು? ಆ ದೇವನ ಅಷ್ಟಮೂರ್ತಿ ಸ್ವರೂಪವೇ ಈ ಜಗತ್ತಾಗಿರುವುದು. ಆಚಾರ್ಯರು ಹೀಗೆ ಹೇಳುವರು, "ನ ನಿರೋಧೋ ನ ಚೋತ್ಪತ್ತಿರ್ನಬದ್ಧೋ ನ ಚ ಸಾಧಕಃ । ನಮುಮುಕ್ಷುರ್ನ ವೈ ಮುಕ್ತ ಇತ್ಯೇಷಾ ಪರಮಾರ್ಥತಾ ॥ ನೈಯಾಯಿಕರು ವ್ಯಾವಹಾರಿಕಸತ್ತೆಯನ್ನಿಟ್ಟುಕೊಂಡು ಪರಮೇಶ್ವರನ ಅಷ್ಟಮೂರ್ತಿಯನ್ನೇ ಮುಖ್ಯವಾದ ನವದ್ರವ್ಯವೆಂದು ಹೇಳಿರುವರು. ಇವುಗಳೇ ಪ್ರಪಂಚಕ್ಕೆ ಕಾರಣಗಳಾಗಿರುವುವು. ಸೂತಸಂಹಿತಾ ಸಂ. ೧. ಪುಟ ೧–೬. ನೋಡಿ.

೧೬. ಆಕಾಶ, ವಾಯು, ತೇಜಸ್ಸು, ನೀರು, ಭೂಮಿ, ಯಜಮಾನ, ಸೂರ್ಯ, ಚಂದ್ರ, ಈ ಎಂಟು ಶಿವನ ಶರೀರಗಳು. ಇವುಗಳಿಲ್ಲದೆ ಪ್ರಪಂಚವು ವ್ಯಕ್ತವಾಗುವುದಿಲ್ಲ.

೧೭–೧೮. ವಿಚಾರಮಾಡಿದರೆ ಈ ಚರಾಚರ ಪ್ರಪಂಚವನ್ನು ರುದ್ರನ ಸ್ಥೂಲರೂಪವೆಂದು ತಿಳಿಯಬಹುದು. ಸೂಕ್ಷ್ಮರೂಪವನ್ನು ಮಾತಿನಿಂದ ಹೇಳಲಾಗುವುದಿಲ್ಲವೆಂದು ಋಷಿಗಳು (ವೇದವು) ಹೇಳಿರುವರು. ಆ ಶ್ರುತಿಯೇ ಇದು. ಪರಮಾತ್ಮನು ಮಾತಿಗೆ ವಿಷಯನಲ್ಲ. ಮನಸ್ಸಿಗೆ ಸಿಕ್ಕತಕ್ಕವನಲ್ಲ. ಆದರೆ ಬ್ರಹ್ಮಾನಂದವನ್ನು ತಿಳಿದವನು ಯಾವುದರಿಂದಲೂ

ಆನಂದಂ ಬ್ರಹ್ಮಣೋ ವಿದ್ವಾನ್ನ ಬಿಭೇತಿ ಕುತಶ್ಚನ ।
ನ ಭೇತವ್ಯಂ ತಥಾ ತಸ್ಮಾಜ್ಞಾತ್ವಾಽಽನಂದಂ ಪಿನಾಕಿನಃ ॥೧೯॥

ವಿಭೂತಯಶ್ಚ ರುದ್ರಸ್ಯ ಮತ್ವಾ ಸರ್ವತ್ರ ಭಾವತಃ ।
ಸರ್ವಂ ರುದ್ರ ಇತಿ ಪ್ರಾಹುರ್ಮುನಯಸ್ತತ್ತ್ವದರ್ಶಿನಃ ॥೨೦॥

ನಮಸ್ಕಾರೇಣ ಸತತಂ ಗೌರವಾತ್ಪರಮೇಷ್ಠಿನಃ ।
ಸರ್ವಂ ತು ಖಲ್ವಿದಂ ಬ್ರಹ್ಮ ಸರ್ವೋ ವೈ ರುದ್ರ ಈಶ್ವರಃ ॥೨೧॥

ಪುರುಷೋ ವೈ ಮಹಾದೇವೋ ಮಹೇಶಾನಃ ಪರಃಶಿವಃ ।
ಏವಂ ವಿಭುರ್ವಿನಿರ್ದಿಷ್ಟೋ ಧ್ಯಾನಂ ತತ್ರೈವ ಚಿಂತನಂ ॥೨೨॥

ಚತುರ್ವ್ಯೂಹೇಣ ಮಾರ್ಗೇಣ ವಿಚಾರ್ಯಾಲೋಕ್ಯ ಸುವ್ರತ ।
ಸಂಸಾರಹೇತುಃ ಸಂಸಾರೋ ಮೋಕ್ಷಹೇತುಶ್ಚ ನಿರ್ವೃತಿಃ ॥೨೩॥

---

ಭಯವನ್ನು ಹೊಂದುವುದಿಲ್ಲ. ಆದುದರಿಂದ ಪಿನಾಕಹಸ್ತನಾದ ಶಿವನ ಆನಂದ ಸ್ವರೂಪವನ್ನು ತಿಳಿದಮೇಲೆ ಭಯಪಡಲಾಗದು.

೨೦. ತತ್ತ್ವಜ್ಞರಾದ ಮುನಿಗಳು ರುದ್ರನ ವಿಭೂತಿಗಳನ್ನು ತಿಳಿದು ಎಲ್ಲೆಡೆಗಳಲ್ಲಿಯೂ ಆ ವಿಭೂತಿಯು ಇರುವುದರಿಂದ ಸಕಲವೂ ರುದ್ರಮಯವಾದುದೆಂದು ಹೇಳುವರು.

೨೧–೨೨. ಸರ್ವಂ ಖಲ್ವಿದಂ ಬ್ರಹ್ಮ, ಸರ್ವೋ ವೈ ರುದ್ರಃ, ಪುರುಷೋ ವೈ ಮಹಾದೇವಃ, ವಿಶ್ವರೂಪಾಯ ವೈ ನಮಃ, ಎಂದು ವೇದವು ಹೇಳಿರುವುದು. ಈ ರೀತಿಯಲ್ಲಿ ಆ ಪರಮೇಶ್ವರನನ್ನು ಮನಸ್ಸಿನಲ್ಲಿಯೇ ಯೋಚಿಸುವುದೇ ಧ್ಯಾನವೆನಿಸುವುದು.

೨೩. ಚತುರ್ವ್ಯೂಹ ಮಾರ್ಗವೆಂದರೆ ಅನ್ನಮಯ ಕೋಶವು, ಸ್ಥೂಲವಾದುದರಿಂದ ಅದನ್ನು ಬಿಟ್ಟು ಉಳಿದ ಪ್ರಾಣ, ಮನಸ್ಸು, ವಿಜ್ಞಾನ, ಆನಂದ ಮಯ ಕೋಶಗಳು, ಇವುಗಳನ್ನಾಗಲೀ, ಧ್ಯಾನ, ಧ್ಯೇಯ, ಧ್ಯಾತೃ ಫಲ ಇವುಗಳನ್ನಾಗಲೀ ವಿಚಾರಮಾಡಿ ಸಂಸಾರ ಸ್ವರೂಪವನ್ನೂ, ಅದರ ಕಾರಣವನ್ನೂ, ಮೋಕ್ಷಸ್ವರೂಪವನ್ನೂ, ಅದರ ಕಾರಣವನ್ನೂ ತಿಳಿದು ಮುಕ್ತರಾಗುವರು.

**ಚತುರ್ವ್ಯೂಹಃ ಸಮಾಖ್ಯಾತಃ ಚಿಂತಕಸ್ಯೇಹ ಯೋಗಿನಃ ।**
**ಚಿಂತಾ ಬಹುವಿಧಾ ಖ್ಯಾತಾ ಸೈಕತ್ರ ಪರಮೇಷ್ಠಿನಾ ॥೨೪॥**
**ಸುನಿಷ್ಠೇತ್ಯತ್ರ ಕಥಿತಾ ರುದ್ರಂ ರೌದ್ರೀ ನ ಸಂಶಯಃ ।**
**ಐಂದ್ರೀ ಚೈಂದ್ರೀ ತಥಾ ಸೌಮ್ಯಾ ಸೋಮೇ ನಾರಾಯಣೇ ತಥಾ ॥**
**ಸೂರ್ಯೇ ವಹ್ನೌ ಚ ಸರ್ವೇಷಾಂ ಸರ್ವತ್ರೈವಂ ವಿಚಾರತಃ ।**
**ಸೈವಾಹಂ ಸೋಽಹಮಿತ್ಯೇವಂ ದ್ವಿಧಾ ಸಂಸ್ಥಾಪ್ಯ ಭಾವತಃ ॥೨೬॥**
**ಭುಕ್ತೋಽಸೌ ನಾಸ್ತಿಯಸ್ತಸ್ಮಾಚ್ಚಿಂತಾ ಬ್ರಾಹ್ಮೀ ನ ಸಂಶಯಃ ।**
**ಏವಂ ಬ್ರಹ್ಮಮಯಂ ಧ್ಯಾಯೇತ್ ಪೂರ್ವೇ ವಿಪ್ರ ಚರಾಚರಂ ॥**
**ಚರಾಚರವಿಭಾಗಂ ಚ ತ್ಯಜೇದಭಿಮತಂ ಸ್ಮರನ್ ।**
**ತ್ಯಾಜ್ಯಂ ಗ್ರಾಹ್ಯಮಲಭ್ಯಂ ಚ ಕೃತ್ಯಂ ಚಾಕೃತ್ಯಮೇವ ಚ ॥೨೮॥**

---

೨೪-೨೬. ಧ್ಯಾನಮಾಡತಕ್ಕ ಯೋಗಿಗೆ ಚತುರ್ವ್ಯೂಹಮಾರ್ಗವು ಹೀಗೆ ಹೇಳಿರುವುದು. ಧ್ಯಾನವು ಅನೇಕ ವಿಧವಾಗಿರುವುದು. ಆ ಧ್ಯಾನವು ಏಕಾಗ್ರವಾದರೆ ಯೋಗನಿಷ್ಠೆಯಾಗುವುದು. ರುದ್ರ, ಇಂದ್ರ, ಚಂದ್ರ, ನಾರಾಯಣ, ಸೂರ್ಯ, ಅಗ್ನಿ, ಹೀಗೆ ಒಂದೊಂದು ವಸ್ತುವೇ ಧ್ಯಾನ ಗೋಚರನಾದರೆ ಏಕನಿಷ್ಠೆಯಾಗುವುದು. ಆ ಏಕನಿಷ್ಠೆಯಲ್ಲಿ ವಿಚಾರ ಮಾಡಿ ಧ್ಯಾನಗೋಚರ ವಸ್ತುವೇ ನಾನು, ನಾನೇ ಧ್ಯಾನಗೋಚರ ವಸ್ತುವು ಎಂಬ ಭಾವವು ನೆಲೆಸಬೇಕು. ಎಂದು ಶ್ಲೋ. ೮ು. ನಲ್ಲಿ ಬ್ರಹ್ಮ ನಿಂದ ಹೇಳಲಾಗಿದೆ.

೨೭. ಈ ಭಕ್ತನು ಈಶ್ವರನಿಗಿಂತಲೂ ಬೇರೆಯವನಲ್ಲ. ಎಂಬ ಭಾವನೆಯನ್ನೇ ಬ್ರಾಹ್ಮೀಚಿಂತಾ, ಎಂದು ಕರೆಯುವರು. ಎಲೈ ಸನತ್ಕು ಮಾರನೇ, ಪೂರ್ವೋಕ್ತವಾದ ಅಷ್ಟಮೂರ್ತಿಸ್ವರೂಪವಾದ ಪ್ರಪಂಚ ವನ್ನು ಪರಬ್ರಹ್ಮಸ್ವರೂಪವಾಗಿ ಧ್ಯಾನಮಾಡಬೇಕು.

೨೮. ಏಕಾಗ್ರಚಿತ್ತನಾದ ಯೋಗಿಯು ತನಗಿಷ್ಟವಾದ ಪರಬ್ರಹ್ಮ ಸ್ವರೂಪವನ್ನು ಧ್ಯಾನಮಾಡುತ್ತಾ ಚರಾಚರ ಪ್ರಪಂಚದ ವಿಭಾಗವಾದ ತ್ಯಾಜ್ಯ, ಗ್ರಾಹ್ಯ, ಕೃತ್ಯ, ಅಕೃತ್ಯ ಮುಂತಾದ ಭೇದಭಾವಗಳನ್ನು ಯಾವನು ತ್ಯಾಗಮಾಡಿರುವನೋ ಅವನು ತೃಪ್ತನಾಗಿ ಬ್ರಾಹ್ಮೀಸ್ಥಿತಿಯಲ್ಲಿ ರುವನು. ಬೇರೆ ಭಾವವು ಅವನಿಗಿರುವುದಿಲ್ಲ.

ಯಸ್ಯ ನಾಸ್ತಿ ಸುತೃಪ್ತಸ್ಯ ತಸ್ಯ ಬ್ರಾಹ್ಮೀ ನ ಚಾನ್ಯಥಾ ।
ಅಭ್ಯಂತರಂ ಸಮಾಖ್ಯಾತಮೇವ ಮಭ್ಯರ್ಚನಂ ಕ್ರಮಾತ್ ॥೨೯॥
ಅಭ್ಯಂತರಾರ್ಚಕಾಃ ಪೂಜ್ಯಾಃ ನಮಸ್ಕಾರಾದಿಭಿಸ್ತಥಾ ।
ವಿರೂಪಾ ವಿಕೃತಾಶ್ಚಾಪಿ ನ ನಿಂದ್ಯಾ ಬ್ರಹ್ಮವಾದಿನಃ ॥೩೦॥
ಅಭ್ಯಂತರಾರ್ಚಕಾಃ ಸರ್ವೇ ನ ಪರೀಕ್ಷ್ಯಾ ವಿಜಾನತಾ ।
ನಿಂದಕಾ ಏವ ದುಃಖಾರ್ತಾ ಭವಿಷ್ಯಂತ್ಯಲ್ಪಚೇತಸಃ ॥೩೧॥
ಯಥಾ ದಾರುವನೇ ರುದ್ರಂ ವಿನಿಂದ್ಯ ಮುನಯಃ ಪುರಾ ।
ತಸ್ಮಾತ್ಸೇವ್ಯಾ ನಮಸ್ಕಾರ್ಯಾಃ ಸದಾ ಬ್ರಹ್ಮವಿದಸ್ತಥಾ ॥೩೨॥
ವರ್ಣಾಶ್ರಮವಿನಿರ್ಮುಕ್ತಾ ವರ್ಣಾಶ್ರಮಪರಾಯಣೈಃ ।

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಶಿವಾರ್ಚನ ತತ್ವ ಸಂಖ್ಯಾऽದಿವರ್ಣನಂ ನಾಮಾऽಷ್ಟಾವಿಂಶೋಽಧ್ಯಾಯಃ

---

೨೯–೩೦. ಕ್ರಮವಾಗಿ ಅಭ್ಯಂತರ ಪೂಜಾವಿಧಾನವನ್ನು ಹೀಗೆ ಹೇಳಿದುದಾಯಿತು. ಅಭ್ಯಂತರ ಪೂಜೆಯನ್ನು ಮಾಡತಕ್ಕವರು ವಿಕಾರವಾದ ರೂಪಾದಿಗಳಿಂದ ಕೂಡಿದ್ದರೂ ಅವರು ಬ್ರಹ್ಮನಿಷ್ಠರಾದುದರಿಂದ ಪೂಜ್ಯರಾಗಿ ನಮಸ್ಕಾರಯೋಗ್ಯರಾಗುವರು. ಅವರನ್ನು ನಿಂದಿಸಬಾರದು.

೩೧. ತಿಳಿದವರು ಅಭ್ಯಂತರ ಪೂಜೆಯನ್ನು ಮಾಡುವವರನ್ನು ಪರೀಕ್ಷಿಸಬಾರದು. ಹಿಂದೆ ದಾರುವನದಲ್ಲಿ ಮುನಿಗಳು ಅಭ್ಯಂತರ ಪೂಜಾಸಕ್ತನಾದ ರುದ್ರನನ್ನು ನಿಂದಿಸಿ ಅಜ್ಞಾನಿಗಳಾಗಿಯೂ ದುಃಖದಿಂದ ಕೂಡಿದವರಾಗಿಯೂ ಪರಿಣಮಿಸಿದರು.

೩೨. ಆದುದರಿಂದ ವರ್ಣಾಶ್ರಮ ನಿಯಮದಲ್ಲಾಸಕ್ತರಾದವರು ವರ್ಣಾಶ್ರಮಗಳ ನಿರ್ಬಂಧದಿಂದ ಬಿಡುಗಡೆಯನ್ನು ಹೊಂದಿ ಯಾವಾಗಲೂ ಬ್ರಹ್ಮಜ್ಞಾನದಲ್ಲಿರುವವರನ್ನು ಸೇವಿಸಿ ನಮಸ್ಕಾರಗಳನ್ನು ಮಾಡಬೇಕು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಶಿವಾರ್ಚನೆ ತತ್ವಸಂಖ್ಯೆ ಇವನ್ನು ವಿವರಿಸುವ ಇಪ್ಪತ್ತೆಂಟನೆಯ ಅಧ್ಯಾಯವು ಮುಗಿದುದು.

ಅಥ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ
ಏಕೋನತ್ರಿಂಶೋಽಧ್ಯಾಯಃ

ಏಕೋನತ್ರಿಂಶದಧ್ಯಾಯೋ ವೃತ್ತಂ ದಾರುವನೌಕಸಾಂ ।
ಸುದರ್ಶನಸ್ಯ ಚಾಖ್ಯಾನಂ ಕ್ರಮಸನ್ಯಾಸಲಕ್ಷಣಂ ॥

॥ ಸನತ್ಕುಮಾರ ಉವಾಚ ॥

ಇದಾನೀಂ ಶ್ರೋತುಮಿಚ್ಛಾಮಿ ಪುರಾ ದಾರುವನೇ ವಿಭೋ ।
ಪ್ರವೃತ್ತಂ ತದ್ವನಸ್ಥಾನಾಂ ತಪಸಾ ಭಾವಿತಾತ್ಮನಾಂ ॥ ೧ ॥

ಕಥಂ ದಾರುವನಂ ಪ್ರಾಪ್ತೋ ಭಗವಾನ್ ನೀಲಲೋಹಿತಃ ।
ವಿಕೃತಂ ರೂಪಮಾಸ್ಥಾಯ ಚೋರ್ಧ್ವರೇತಾ ದಿಗಂಬರಃ ॥ ೨ ॥

ಕಿಂ ಪ್ರವೃತ್ತಂ ವನೇ ತಸ್ಮಿನ್ ರುದ್ರಸ್ಯ ಪರಮಾತ್ಮನಃ ।
ವಕ್ತುಮರ್ಹಸಿ ತತ್ಸರ್ವಂ ದೇವದೇವಸ್ಯ ಚೇಷ್ಟಿತಂ ॥ ೩ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಇಪ್ಪತ್ತೊಂಬತ್ತನೆಯ ಅಧ್ಯಾಯವು

(ಈ ಇಪ್ಪತ್ತೊಂಬತ್ತನೆಯ ಅಧ್ಯಾಯದಲ್ಲಿ ದಾರುವನದಲ್ಲಿದ್ದ ಮುನಿಗಳ ವೃತ್ತಾಂತವನ್ನೂ, ಸುದರ್ಶನನ ಕಥೆಯನ್ನೂ, ಕ್ರಮಸನ್ಯಾಸ ಲಕ್ಷಣವನ್ನೂ, ವರ್ಣಿಸಲಾಗುವುದು.

೧–೩. ಸನತ್ಕುಮಾರನು ಹೇಳಿದನು : ಎಲೈ ನಂದೀಶ್ವರನೇ, ಹಿಂದೆ ದಾರುವನದಲ್ಲಿದ್ದ ಋಷಿಗಳಿಗೆ ಏನಾಯ್ತು? ಮಹಾಮಹಿಮನಾದ ಶಿವನು ವಿಕಾರರೂಪದಿಂದ ದಿಗಂಬರನಾಗಿ ಆ ವನಕ್ಕೆ ಏಕೆ ಬಂದನು? ಆ ವನದಲ್ಲಿ ರುದ್ರನಿಗೆ ಏನಾಯ್ತು? ಅವುಗಳೆಲ್ಲವನ್ನೂ ಕೇಳಬೇಕೆಂದಿರುವೆನು. ಆ ದೇವದೇವನು ಮಾಡಿದ ಕಾರ್ಯಗಳೆಲ್ಲವನ್ನೂ ಯಥಾರ್ಥವಾಗಿ ನನಗೆ ಹೇಳಬೇಕು.

॥ ಸೂತ ಉವಾಚ ॥

ತಸ್ಯ ತದ್ವಚನಂ ಶ್ರುತ್ವಾ ಶ್ರುತಿಸಾರವಿದಾಂ ವರಃ ।
ಶಿಲಾದಸೂನುರ್ಭಗವಾನ್ ಪ್ರಾಹ ಕಿಂಚಿದ್ಭವಂ ಹಸನ್ ॥ ೧ ॥

॥ ಶೈಲಾದಿರುವಾಚ ॥

ಮುನಯೋ ದಾರುಗಹನೇ ತಪಸ್ತೇಪುಃ ಸುದಾರುಣಂ ।
ತುಷ್ಟ್ಯರ್ಥಂ ದೇವದೇವಸ್ಯ ಸದಾರತನಯಾಗ್ನಯಃ ॥ ೨ ॥

ತುಷ್ಟೋ ರುದ್ರೋ ಜಗನ್ನಾಥಶ್ಚೇಕಿತಾನೋ ವೃಷಧ್ವಜಃ ।
ಧೂರ್ಜಟಿಃ ಪರಮೇಶಾನೋ ಭಗವಾನ್ನೀಲಲೋಹಿತಃ ॥ ೬ ॥

ಪ್ರವೃತ್ತಿಲಕ್ಷಣಂ ಜ್ಞಾನಂ ಜ್ಞಾತುಂ ದಾರುವನೌಕಸಾಂ ।
ಪರೀಕ್ಷಾರ್ಥಂ ಜಗನ್ನಾಥಃ ಶ್ರದ್ಧಯಾ ಕ್ರೀಡಯಾ ಚ ಸಃ ॥ ೭ ॥

ನಿವೃತ್ತಿಲಕ್ಷಣಜ್ಞಾನ ಪ್ರತಿಷ್ಠಾರ್ಥಂ ಚ ಶಂಕರಃ ।
ದೇವದಾರುವನಸ್ಥಾನಾಂ ಪ್ರವೃತ್ತಿ ಜ್ಞಾನಚೇತಸಾಂ ॥ ೮ ॥

---

೧. ಸೂತನು ಹೇಳಿದನು: ಆ ಸನತ್ಕುಮಾರನ ಮಾತನ್ನು ಕೇಳಿ ಶಿಲಾದ ಮುನಿಯ ಪುತ್ರನಾದ ನಂದಿಯು ವೇದಸಾರವನ್ನು ತಿಳಿದವರಲ್ಲಿ ಶ್ರೇಷ್ಠನೂ ಮಹಾಮಹಿಮನೂ ಆದುದರಿಂದ ನಗುತ್ತಾ ಶಿವನನ್ನು ಸ್ಮರಿಸಿ ಭಕ್ತಿಯಿಂದ ಅವನ ವಿಚಾರವಾದ ಚರಿತ್ರೆಯನ್ನು ಸ್ವಲ್ಪಮಟ್ಟಿಗೆ ಹೀಗೆ ಹೇಳಿದನು.

೨. ನಂದಿಯು ಹೇಳಿದನು: ದಾರುವನದಲ್ಲಿದ್ದ ಮುನಿಗಳು ದೇವದೇವನಾದ ಶಂಕರನನ್ನು ತೃಪ್ತಿಪಡಿಸಲು, ಹೆಂಡಿತಿ ಮಕ್ಕಳು ಅಗ್ನಿ ಸಹಿತರಾಗಿ ಕ್ರೂರವಾದ ತಪಸ್ಸನ್ನು ಮಾಡಿದರು.

೬-೯. ಆ ತಪಸ್ಸಿಗೆ ಮೆಚ್ಚಿ ಪ್ರಪಂಚಕ್ಕೆ ಒಡೆಯನೂ, ರೋಗ ನಾಶಕನೂ, ವೃಷಭಧ್ವಜನೂ, ಜಟಾಧಾರಿಯೂ ಪರಮೇಶ್ವರನೂ, ಮಹಾ ಮಹಿಮನೂ. ಆದ ಶಿವನು ದೇವದಾರುವನದಲ್ಲಿರುವ ಋಷಿಗಳ ಪ್ರವೃತ್ತಿ ಲಕ್ಷಣಜ್ಞಾನವು ಭಕ್ತಿಯಿಂದ ಕೂಡಿದೆಯೋ ಇಲ್ಲವೇ ಎಂಬುದನ್ನು ಪರೀಕ್ಷಿಸುವುದಕ್ಕೂ, ತನ್ನ ವಿಹಾರಕ್ಕೂ, ಪ್ರವೃತ್ತಿಜ್ಞಾನವುಳ್ಳ ಆ ಋಷಿಗಳಲ್ಲಿ ನಿವೃತ್ತಿಲಕ್ಷಣಜ್ಞಾನವನ್ನು ನೆಲೆಗೊಳಿಸುವುದಕ್ಕೂ, ವಿಕಾರವಾದ ರೂಪ

ವಿಕೃತಂ ರೂಪಮಾಸ್ಥಾಯ ದಿಗ್ವಾಸಾ ವಿಷಮೇಕ್ಷಣಃ ।
ಮುಗ್ಧೋ ದ್ವಿಹಸ್ತಃ ಕೃಷ್ಣಾಂಗೋ ದಿವ್ಯಂ ದಾರುವನಂ ಯಯೌ ॥
ಮಂದಸ್ಮಿತಂ ಚ ಭಗವಾನ್ ಸ್ತ್ರೀಣಾಂ ಮನಸಿಜೋದ್ಭವಂ ।
ಭ್ರೂವಿಲಾಸಂ ಚ ಗಾನಂಚ ಚಕಾರಾತೀವ ಸುಂದರಃ ॥೧೦॥
ಸಂಪ್ರೇಕ್ಷ್ಯ ನಾರೀವೃಂದಂ ವೈ ಮುಹುರ್ಮುಹುರಂನಗಹಾ ।
ಅನಂಗವೃದ್ಧಿಮಕರೋತ್ ಅತೀವ ಮಧುರಾಕೃತಿಃ ॥೧೧॥
ಸ್ತ್ರಿಯಃ ಪತಿವ್ರತಾಶ್ಚಾಪಿ ತಮೇವಾನ್ವಯು ರಾದರಾತ್ ॥೧೨॥
ವನೋಟಜದ್ವಾರಗತಾಶ್ಚ ನಾರ್ಯೋ ।
ವಿಸ್ರಸ್ತ ವಸ್ತ್ರಾಭರಣಾ ವಿಚೇಷ್ಟಾಃ ॥
ಲಬ್ಧ್ವಾ ಸ್ಮಿತಂ ತಸ್ಯ ಮುಖಾರವಿಂದಾತ್ ।
ದ್ರುಮಾಲಯಸ್ಥಾಸ್ತ ಮಥಾನ್ವಯುಸ್ತಾಃ ॥೧೩॥

---

ವುಳ್ಳವನಾಗಿ ಮೂರುಕಣ್ಣುಗಳು, ಎರಡು ಕೈಗಳು ಉಳ್ಳ ಕಪ್ಪಾದ ಶರೀರ ದಿಂದ ಕೂಡಿ ಹುಚ್ಚನಂತೆ ಆ ದಿವ್ಯವಾದ ದೇವದಾರು ವನಕ್ಕೆ ಹೋದನು.

೧೦. ಮಹಾಮಹಿಮನಾದ ಶಿವನು ಋಷಿಸ್ತ್ರೀಯರಿಗೆ ಅತ್ಯಂತ ಸುಂದರನಾಗಿ ಕಾಣುತ್ತಾ ಮತ್ತೆ ಮತ್ತೆ ಅವರನ್ನು ನೋಡಿ ಆ ಹೆಂಗಸರ ಗುಂಪಿಗೆ ಕಾಮೋದ್ರೇಕವನ್ನು ಉಂಟುಮಾಡಿ ಹೆಚ್ಚಿಸಿದನು.

೧೧–೧೨. ಪತಿವ್ರತೆಯರಾದ ಸ್ತ್ರೀಯರೂ ಕೂಡ ದೇವದಾರುವನ ದಲ್ಲಿ ಪುರಾಷಾಕೃತಿಯ ವಿಕಾರವಾದ ಆ ಶಿವನನ್ನು ನೋಡಿ ಪ್ರೀತಿಯಿಂದ ಅವನನ್ನೇ ಕಾಮಿಸುತ್ತಾ ಅನುಸರಿಸಿದರು.

೧೩. ಆ ಕಾಡಿನಲ್ಲಿದ್ದ ಪರ್ಣಶಾಲೆಯ ಬಾಗಿಲಿನಲ್ಲಿದ್ದ ಸ್ತ್ರೀಯರು ಆ ಶಿವನ ಮುಖಕಮಲದಲ್ಲಿ ಉಂಟಾದ ನಗುವನ್ನು ಕಂಡು ಭ್ರಾಂತರಾಗಿ ತಮ್ಮ ವಸ್ತ್ರಾಭರಣಗಳು ಜಾರಿ ಬೀಳುತ್ತಿದ್ದರೂ ಅದನ್ನು ಸರಿಮಾಡಿ ಕೊಳ್ಳದೆ ಅವನ ಹಿಂದೆ ಹೋದರು.

ದೃಷ್ಟ್ವಾ ಕಾಶ್ಚಿದ್ಭವಂ ನಾರ್ಯೋ ಮದಘೂರ್ಣಿತಲೋಚನಾಃ ।
ವಿಲಾಸ ಬಾಹ್ಯಾಸ್ತಾಶ್ಚಾಪಿ ಭ್ರೂವಿಲಾಸಂ ಪ್ರಚಕ್ರಿರೇ ॥೧೪॥

ಅಥ ದೃಷ್ಟ್ವಾ ಪರಾ ನಾರ್ಯಃ ಕಿಂಚಿತ್ಪ್ರಹಸಿತಾ ನತಾಃ ।
ಕಿಂಚಿದ್ವಿಸ್ರಸ್ತವಸನಾಃ ಸ್ರಸ್ತಕಾಂಚೀಗುಣಾ ಜಗುಃ ॥೧೫॥

ಕಾಶ್ಚಿತ್ತದಾ ತಂ ವಿಪಿನೇ ತು ದೃಷ್ಟ್ವಾ ।
ವಿಪ್ರಾಂಗನಾಃ ಸ್ರಸ್ತನವಾಂಶುಕಂ ವಾ ॥
ಸ್ವಾನ್ ಸ್ವಾನ್ ವಿಚಿತ್ರಾನ್ ವಲಯಾನ್ಪ್ರವಿಧ್ಯ ।
ಮುದಾನ್ವಿತಾ ಬಂಧುಜನಾಂಶ್ಚ ಜಗ್ಮುಃ ॥೧೬॥

ಕಾಚಿತ್ತದಾ ತಂ ನವಿವೇದ ದೃಷ್ಟ್ವಾ ।
ವಿವಾಸನಾ ಸ್ರಸ್ತಮಹಾಂಶುಕಾ ಚ ॥
ಶಾಖಾವಿಚಿತ್ರಾನ್ ವಿಟಪಾನ್ ಪ್ರಸಿದ್ಧಾನ್ ।
ಮುದಾನ್ವಿತಾ ಬಂಧುಜನಾಂಸ್ತಥಾಽನ್ಯಾಃ ॥೧೭॥

---

೧೪. ಆ ಸ್ತ್ರೀಯರಲ್ಲಿ ಕೆಲವರು ಶಿವನನ್ನು ನೋಡಿ ಮದದಿಂದ ಭ್ರಾಂತರಾಗಿ ಕಾಮುಕ ದೃಷ್ಟಿಯುಳ್ಳವರಾಗಿ ವೃದ್ಧರಾದರೂ ಕೂಡ ತಮ್ಮ ಹುಬ್ಬಿನ ಸನ್ನೆಯನ್ನು ಮಾಡಿದರು.

೧೫. ಸ್ತ್ರೀಯರು ಮತ್ತೆ ಕೆಲವರು ಹುಸಿನಗೆಯನ್ನು ನಗುತ್ತಾ ಸ್ವಲ್ಪ ಪುಟ್ಟಿಗೆ ನಡುವಿನ ಡಾಬೂ, ವಸ್ತ್ರವೂ, ಸಡಿಲವಾಗುತ್ತಿರಲು ಗಾನ ಮಾಡುತ್ತಿದ್ದರು.

೧೬. ಇನ್ನೂ ಕೆಲವು ಬ್ರಾಹ್ಮಣಸ್ತ್ರೀಯರು ಕಾಡಿನಲ್ಲಿ ಆ ಶಿವನನ್ನು ನೋಡಿ ಹೊಸದಾಗಿ ತಾವು ಉಟ್ಟಿದ್ದ ವಸ್ತ್ರವು ಜಾರಿಹೋಗುವಂತಿರಲು ತಂತಮ್ಮ ವಿಚಿತ್ರವಾದ ಕೈಬಳೆಗಳನ್ನು ಒಡೆದುಕೊಂಡು ತಮ್ಮ ಬಂಧುಗಳ ಬಳಿಗೆ ಹೋದರು.

೧೭. ಒಬ್ಬ ಸ್ತ್ರೀಯು ಆ ಶಿವನನ್ನು ನೋಡಿ ಸ್ಮೃತಿಯಿಲ್ಲದವಳಾಗಿ ಹೊದ್ದಿದ್ದ ಸೆರಗು ಜಾರಿಬೀಳುತ್ತಿದ್ದರೂ ತನ್ನನ್ನು ತಾನು ತಿಳಿಯದೆ ಹೋದಳು. ಮತ್ತೆ ಕೆಲವರು ಮದದಿಂದ ಕೂಡಿದವರಾಗಿ ವಿಚಿತ್ರವಾದ ಕೊಂಬೆಗಳಿಂದ ಕೂಡಿದ ಪ್ರಸಿದ್ಧವಾದ ಮರಗಳನ್ನೂ, ಬಂಧುಜನಗಳನ್ನೂ ತಿಳಿಯಲಾರದೆ ಹೋದರು.

ಕಾಶ್ಚಿಜ್ಜಗುಸ್ತಂ ನನೃತುರ್ನಿಪೇತುಶ್ಚ ಧರಾತಲೇ ।
ನಿಷೇದುರ್ಗಜವಚ್ಚಾನ್ಯಾ ಪ್ರೋವಾಚ ದ್ವಿಜಪುಂಗವಾಃ ॥೧೮॥
ಅನ್ಯೋನ್ಯಂ ಸಸ್ಮಿತಂ ಪ್ರೇಕ್ಷ್ಯ ಚಾಲಿಲಿಂಗುಃ ಸಮಂತತಃ ।
ನಿರುಧ್ಯ ಮಾರ್ಗಂ ರುದ್ರಸ್ಯ ನೈಪುಣಾನಿ ಪ್ರಚಕ್ರಿರೇ ॥೧೯॥
ಕೋ ಭವಾನಿತಿ ಚಾಹುಸ್ತಂ ಆಸ್ಯತಾಮಿತಿ ಚಾಪರಾಃ ।
ಕುತ್ರೇತ್ಯಥ ಪ್ರಸಿದೇತಿ ಜಜಲ್ಪುಃ ಪ್ರೀತಮಾನಸಾಃ ॥೨೦॥
ವಿಪರೀತಾ ನಿಪೇತುರ್ವೈ ವಿಸ್ರಸ್ತಾಂಶುಕಮೂರ್ಧಜಾಃ ।
ಪತಿವ್ರತಾಃ ಪತೀನಾಂ ತು ಸನ್ನಿಧೌ ಭವಮಾಯಯಾ ॥೨೧॥

---

೧೮. ಎಲೈ ಮುನಿಗಳೇ, ಕೇಳಿ. ಆ ಶಿವನನ್ನು ನೋಡಿ ಸ್ತ್ರೀಯರಲ್ಲಿ ಕೆಲವರು ಗಾನಮಾಡಿದರು, ಕೆಲವರು ನರ್ತನಮಾಡಿದರು, ಕೆಲವರು ಭೂಮಿಯಮೇಲೆ ಬಿದ್ದರು, ಕೆಲವರು ಆನೆಯಂತೆ ಕುಳಿತರು, ಕೆಲವರು ವಿಶೇಷವಾಗಿ ಮಾತನಾಡಿದರು.

೧೯. ಸ್ತ್ರೀಯರು ಒಬ್ಬರನ್ನೊಬ್ಬರು ನೋಡಿ ನಗುತ್ತಾ ಆಲಿಂಗನ ಮಾಡಿಕೊಂಡರು ಮತ್ತು ಆ ರುದ್ರನು ನಡೆದುಬರುವ ದಾರಿಯಲ್ಲಿ ಅವನನ್ನು ತಡೆದು ತಮ್ಮ ಕೌಶಲ ವಿಲಾಸಗಳನ್ನು ತೋರಿಸಿದರು.

೨೦. ಕೆಲವು ಸ್ತ್ರೀಯರು ನೀನು ಯಾರು? ಎಂದು ಪ್ರಶ್ನೆಮಾಡಿದರು. ಮತ್ತೆ ಕೆಲವರು ಕುಳಿತುಕೊ. ಎಂದು ಹೇಳಿದರು. ಎಲ್ಲಿಂದ ಬಂದೆ? ಎಂದು ಮತ್ತೆ ಕೆಲವರೂ, ಎಲ್ಲಿಗೆ ಹೋಗುವೆ? ಎಂದು ಕೆಲವರೂ, ನಮ್ಮಲ್ಲಿ ಅನುಗ್ರಹವನ್ನು ಮಾಡೆಂದು ಕೆಲವರೂ, ಸಂತೋಷದಿಂದ ಕಾಮವಶರಾಗಿ ಮನಬಂದಂತೆ ಮಾತನಾಡಿದರು.

೨೧. ಪತಿವ್ರತಾಸ್ತ್ರೀಯರು ಕೂಡ ಶಿವನಮಾಯೆಯಿಂದ ತಮ್ಮ ವಸ್ತ್ರಗಳೂ, ತಲೆಯ ಗಂಟೂ ಬಿಚ್ಚಿ ಹೋಗುತ್ತಿರಲು ತಮ್ಮ ಪತಿಯ ಸಮೀಪದಲ್ಲಿ ವಿರುದ್ಧವಾಗಿ ಮಾತನಾಡುತ್ತಾ ಬಿದ್ದುಬಿಟ್ಟರು.

ದೃಷ್ಟ್ವಾ ಶ್ರುತ್ವಾ ಭವಸ್ತಾಸಾಂ ಚೇಷ್ಟಾ ವಾಕ್ಯಾನಿ ಚಾವ್ಯಯಃ ।
ಶುಭಂ ವಾಽಪ್ಯಶುಭಂ ವಾಽಪಿ ನೋಕ್ತವಾನ್ಪರಮೇಶ್ವರಃ ॥೨೨॥
ದೃಷ್ಟ್ವಾ ನಾರೀ ಕುಲಂ ವಿಪ್ರಾ ಸ್ತಥಾ ಭೂತಂ ಚ ಶಂಕರಂ ।
ಅತೀವ ಪರುಷಂ ವಾಕ್ಯಂ ಜಜಲ್ಪುಸ್ತೇ ಮುನೀಶ್ವರಾಃ ॥೨೩॥
ತಪಾಂಸಿ ತೇಷಾಂ ಸರ್ವೇಷಾಂ ಪ್ರತ್ಯಾಹನ್ಯಂತ ಶಂಕರೇ ।
ಯಥಾಽಽದಿತ್ಯಪ್ರಕಾಶೇನ ತಾರಕಾ ನಭಸಿ ಸ್ಥಿತಾಃ ॥೨೪॥
ಶ್ರೂಯತೇ ಋಷಿಶಾಪೇನ ಬ್ರಹ್ಮಣಸ್ತು ಮಹಾತ್ಮನಃ ।
ಸಮೃದ್ಧಶ್ರೇಯಸಾಂಯೋನಿ ರ್ಯಜ್ಞೋ ವೈನಾಶಮಾಪ್ತವಾನ್ ॥
ಭೃಗೋರಪಿ ಚ ಶಾಪೇನ ವಿಷ್ಣುಃ ಪರಮವೀರ್ಯವಾನ್ ।
ಪ್ರಾದುರ್ಭಾವಾನ್ ದಶ ಪ್ರಾಪ್ತೋ ದುಃಖಿತಶ್ಚ ಸದಾ ಕೃತಃ ॥೨೬॥

---

೨೨. ನಿತ್ಯನಾದ ಶಿವನು ಆ ಸ್ತ್ರೀಯರ ಚೇಷ್ಟೆಗಳನ್ನೂ, ಮಾತುಗಳನ್ನೂ ನೋಡಿ, ಕೇಳಿ, ಪರಮೇಶ್ವರನಾದುದರಿಂದ ಶುಭವಾದ ಮಾತನ್ನಾಗಲಿ, ಅಶುಭವಾದ ಮಾತನ್ನಾಗಲೀ ಆಡಲಿಲ್ಲ.

೨೩. ಮುನಿಗಳಾದ ಆ ಬ್ರಾಹ್ಮಣರು ಆ ಹುಚ್ಚನಂತಿರುವ ಶಂಕರನನ್ನೂ ಸ್ತ್ರೀಯರ ವಿಕಾರಗಳನ್ನೂ ನೋಡಿ ಅತ್ಯಂತ ಕಠಿನವಾದ ಮಾತುಗಳನ್ನಾಡಿದರು.

೨೪. ಸೂರ್ಯನ ಪ್ರಕಾಶದಿಂದ ಆಕಾಶದಲ್ಲಿರುವ ನಕ್ಷತ್ರಗಳ ಪ್ರಕಾಶವು ಹೇಗೆ ಕಾಣದೆ ಹೋಗುವುದೋ ಹಾಗೆ, ಶಿವನ ವಿಷಯದಲ್ಲಿ ಆ ಋಷಿಗಳ ತಪಸ್ಸಿನ ಮಹಿಮೆಯುಲ್ಲವೂ ಪ್ರಕಾಶಕ್ಕೆ ಬರದೆ ಹೋದುವು.

೨೫. ಹಿಂದೆ ಋಷಿಶಾಪದಿಂದ ವಿಶೇಷ ಶ್ರೇಯಸ್ಸಿಗೆ ಸಾಧನವಾದ ಮಹಾತ್ಮನಾದ ಬ್ರಹ್ಮನು ಮಾಡಿದ ಯಜ್ಞವು ನಾಶವನ್ನು ಹೊಂದಿತು.

೨೬. ಭೃಗುವಿನ ಶಾಪದಿಂದ ಮಹಾಪರಾಕ್ರಮಿಯಾದ ವಿಷ್ಣುವು ಹತ್ತು ಅವತಾರಗಳನ್ನೆತ್ತಬೇಕಾಯಿತು. ಮತ್ತು ಯಾವಾಗಲೂ ದುಃಖವುಳ್ಳವನಾದನು.

ಇಂದ್ರಸ್ಯಾಪಿ ಚ ಧರ್ಮಜ್ಞ ಛಿನ್ನಂ ಸ ವೃಷಣಂ ಪುರಾ ।
ಋಷಿಣಾ ಗೌತಮೇನೋರ್ವ್ಯಾಂ ಕ್ರುದ್ಧೇನ ವಿನಿಪಾತಿತಂ ॥೨೭॥

ಗರ್ಭವಾಸೋ ವಸೂನಾಂ ಚ ಶಾಪೇನ ವಿಹಿತಸ್ತಥಾ ।
ಋಷೀಣಾಂ ಚೈವ ಶಾಪೇನ ನಹುಷಃ ಸರ್ಪತಾಂ ಗತಃ ॥೨೮॥

ಕ್ಷೀರೋದಶ್ಚ ಸಮುದ್ರೋಽಸೌ ನಿವಾಸಃ ಸರ್ವದಾ ಹರೇಃ
ದ್ವಿತೀಯಶ್ಚಾಮೃತಾಧಾರೋ ಹ್ಯಪೇಯೋ ಬ್ರಾಹ್ಮಣೈಃ ಕೃತಃ ॥೨೯॥

ಅವಿಮುಕ್ತೇಶ್ವರಂ ಪ್ರಾಪ್ಯ ವಾರಾಣಸ್ಯಾಂ ಜನಾರ್ದನಃ ।
ಕ್ಷೀರೇಣ ಚಾಭಿಷಿಚ್ಯೇಶಂ ದೇವದೇವಂ ತ್ರಿಯಂಬಕಂ ॥೩೦॥

ಶ್ರದ್ಧಯಾ ಪರಯಾ ಯುಕ್ತೋ ದೇಹಾಶ್ಲೇಷಾಮೃತೇನ ವೈ ।
ನಿಷಿಕ್ತೇನ ಸ್ವಯಂ ದೇವಃ ಕ್ಷೀರೇಣ ಮಧುಸೂದನಃ ॥೩೧॥

ಸೇಚಯಿತ್ವಾಽಥ ಭಗವಾನ್ ಬ್ರಹ್ಮಣಾ ಮುನಿಭಿಃ ಸಮಂ ।
ಕ್ಷೀರೋದಂ ಪೂರ್ವವಚ್ಚಕ್ರೇ ನಿವಾಸಂ ಚಾತ್ಮನಃ ಪ್ರಭುಃ ॥೩೨॥

---

೨೭. ಹಿಂದೆ ಕೋಪವನ್ನು ಹೊಂದಿದ ಗೌತಮಋಷಿಯ ಶಾಪದಿಂದ ದೇವೇಂದ್ರನ ಅಂಡಗಳು ಕತ್ತರಿಸಿ ಭೂಮಿಗೆ ಬಿದ್ದವು.

೨೮. ವಸಿಷ್ಠಋಷಿಯ ಶಾಪದಿಂದ ಅಷ್ಟವಸುಗಳಿಗೆ ಗರ್ಭವಾಸವು ಪ್ರಾಪ್ತವಾಯಿತು. ಅಗಸ್ತ್ಯರ ಶಾಪದಿಂದ ನಹುಷನು ಸರ್ಪಜನ್ಮವನ್ನು ಹೊಂದಿದನು.

೨೯. ಯಾವಾಗಲೂ ಹರಿಗೆ ಆವಾಸಸ್ಥಾನವಾದ ಕ್ಷೀರಸಮುದ್ರವನ್ನು ಕುಡಿದ ಒಬ್ಬ ಬ್ರಾಹ್ಮಣನು (ಅಗಸ್ತ್ಯನು) ಅದನ್ನು ಕುಡಿಯುವುದಕ್ಕಾಗದ ಉಪ್ಪುನೀರಿನ ಸಮುದ್ರವನ್ನಾಗಿ ಮಾಡಿದನು.

೩೦–೩೨. ನಾರಾಯಣನು ಕಾಶೀಕ್ಷೇತ್ರದಲ್ಲಿ ಅವಿಮುಕ್ತೇಶ್ವರನ ಸಮೀಪಕ್ಕೆ ಹೋಗಿ, ಆ ಈಶ್ವರನಿಗೆ ಹಾಲಿನಿಂದ ಅಭಿಷೇಕವನ್ನು ಮಾಡಿ ಅತ್ಯಂತ ಭಕ್ತಿಯಿಂದ ಕೂಡಿದವನಾಗಿ, ಆ ಅವಿಮುಕ್ತೇಶ್ವರನನ್ನು ಆಲಿಂಗನೆಯನ್ನು ಮಾಡಿಕೊಂಡು, ತನ್ನ ಶರೀರಕ್ಕೆ ಸಂಬಂಧಿಸಿದ ತೀರ್ಥದಿಂದ ಬ್ರಹ್ಮನಿಂದಲೂ ಋಷಿಗಳಿಂದಲೂ ಕೂಡಿದವನಾಗಿ, ತನ್ನ ವಾಸಕ್ಕೆ ಮತ್ತೊಂದು ಕ್ಷೀರಸಮುದ್ರವನ್ನು ಮಾಡಿಕೊಂಡನು.

ಧರ್ಮಶ್ಚೈವ ತಥಾ ಶಪ್ತೋ ಮಾಂಡವ್ಯೇನ ಮಹಾತ್ಮನಾ ।
ವೃಷ್ಣವಶ್ಚೈವ ಕೃಷ್ಣೇನ ದುರ್ವಾಸಾದ್ಯೈ ರ್ಮಹಾತ್ಮಭಿಃ ॥೩೩॥
ರಾಘವಃ ಸಾನುಜಶ್ಚಾಪಿ ದುರ್ವಾಸೇನ ಮಹಾತ್ಮನಾ ।
ಶ್ರೀವತ್ಸಶ್ಚ ಮುನೇಃ ಪಾದ ಪತನಾತ್ತಸ್ಯ ಧೀಮತಃ ॥೩೪॥
ಏಕೇ ಚಾನ್ಯೇ ಚ ಬಹವೋ ವಿಪ್ರಾಣಾಂ ವಶಮಾಗತಾಃ ।
ವರ್ಜಯಿತ್ವಾವಿರೂಪಾಕ್ಷಂ ದೇವದೇವ ಮುಮಾಪತಿಂ ॥೩೫॥
ಏವಂ ಹಿ ಮೋಹಿತಾಸ್ತೇನ ನಾವಬುಧ್ಯಂತ ಶಂಕರಂ ।
ಅತ್ಯುಗ್ರವಚನಂ ಪ್ರೋಚು ಶ್ಚೋಗ್ರೋಽಪ್ಯಂತ ರಧೀಯತ ॥೩೬॥
ತೇಽಪಿದಾರುವನಾತ್ತಸ್ಮಾತ್ಪ್ರಾತಃ ಸಂವಿಗ್ನಮಾನಸಾಃ ।
ಪಿತಾಮಹಂ ಮಹಾತ್ಮಾನ ಮಾಸೀನಂ ಪರಮಾಸನೇ ॥೩೭॥

---

೩೩. ಮಾಂಡವ್ಯನೆಂಬ ಋಷಿಯು ಧರ್ಮದೇವನಿಗೆ ಶಾಪವನ್ನು ಕೊಟ್ಟನು. ದೂರ್ವಾಸಾದಿ ಋಷಿಗಳು ವೃಷ್ಣಿಗಳೆಂಬ ಯಾದವರಿಗೂ, ಕೃಷ್ಣನಿಗೂ ಶಾಪವನ್ನು ಕೊಟ್ಟರು.

೩೪–೩೫. ರಾಮನು ತಮ್ಮಂದಿರೊಡನೆ ದೂರ್ವಾಸ ಮುನಿಯ ಶಾಪವನ್ನು ಪಡೆದನು. ಶ್ರೀವತ್ಸಚಿಹ್ನೆಯುಳ್ಳ ವಿಷ್ಣುವು ಭೃಗುವಿನ ಕಾಲಿನ ಏಟನ್ನು ಸಹಿಸಿದನು. ಹೀಗೆ ಇತರರು ಅನೇಕರು ಬ್ರಾಹ್ಮಣರ ಶಾಪಕ್ಕೆ ಗುರಿಯಾದರು. ಉಮಾಪತಿಯೂ, ದೇವದೇವನಾದ ಶಿವನು ಮಾತ್ರ ಯಾರ ಶಾಪಕ್ಕೂ ಗುರಿಯಾಗಲಿಲ್ಲ.

೩೬. ಈ ರೀತಿಯಲ್ಲಿ ಮಾಯಾಮೋಹಿತರಾದ ಆ ಮುನಿಗಳು ಶಿವನನ್ನು ತಿಳಿಯಲಿಲ್ಲ. ಕ್ರೂರವಾದ ಮಾತುಗಳನ್ನಾಡಿದರು. ಶಿವನು ಅವರಿಗೆ ಮರೆಯಾದನು.

೩೭. ತೇಜೋಹೀನರಾದ ಆ ಮುನಿಗಳೂ ಪ್ರಾತಃಕಾಲದಲ್ಲಿ ಆ ದೇವದಾರು ವನದಿಂದ ಹೊರಟು ಪದ್ಮಾಸನದಲ್ಲಿ ಕುಳಿತಿದ್ದ ಮಾಹಾತ್ಮನಾದ ಬ್ರಹ್ಮನ ಸಮೀಪಕ್ಕೆ ಹೋಗಿ ನಡೆದ ಸಕಲ ಸಂಗತಿಗಳನ್ನೂ ಆ ಬ್ರಹ್ಮನಿಗೆ ವಿಜ್ಞಾಪನೆಮಾಡಿದರು.

ಗತ್ವಾ ವಿಜ್ಞಾಪಯಾಮಾಸುಃ ಪ್ರವೃತ್ತಮಖಿಲಂ ವಿಭೋ ।
ಶುಭೇ ದಾರುವನೇ ತಸ್ಮಿನ್ ಮುನಯಃ ಕ್ಷೀಣತೇಜಸಃ ॥೩೮॥

ಸೋಽಪಿ ಸಂಚಿಂತ್ಯ ಮನಸಾ ಕ್ಷಣಾದೇವ ಪಿತಾಮಹಃ ।
ತೇಷಾಂ ಪ್ರವೃತ್ತಮಖಿಲಂ ಪುಣ್ಯೇ ದಾರುವನೇ ಪುರಾ ॥೩೯॥

ಉತ್ಥಾಯ ಪ್ರಾಂಜಲಿರ್ಭೂತ್ವಾ ಪ್ರಣಿಪತ್ಯ ಭವಾಯ ಚ ।
ಉವಾಚ ಸತ್ವರಂ ಬ್ರಹ್ಮಾ ಮುನೀನ್ ದಾರುವನಾಲಯಾನ್ ॥೪೦॥

ಧಿಗ್ಯುಷ್ಮಾನ್ಪ್ರಾಪ್ತನಿಧನಾನ್ ಮಹಾನಿಧಿಮನುತ್ತಮಂ ।
ವೃಥಾಕೃತಂ ಯತೋವಿಪ್ರಾ ಯುಷ್ಮಾಭಿ ರ್ಭಾಗ್ಯವರ್ಜಿತೈಃ ॥೪೧॥

ಯಸ್ತುದಾರುವನೇ ತಸ್ಮಿಲ್ಲಿಂಗೀ ದೃಷ್ಟೋಽಪ್ಯಲಿಂಗಿಭಿಃ ।
ಯುಷ್ಮಾಭಿರ್ವಿಕೃತಾಕಾರಃ ಸ ಏವ ಪರಮೇಶ್ವರಃ ॥೪೨॥

ಗೃಹಸ್ಥೈಶ್ಚ ನ ನಿಂದ್ಯಾಸ್ತು ಸದಾಹ್ಯತಿಥಯೋದ್ವಿಜಾಃ ।
ವಿರೂಪಾಶ್ಚ ಸುರೂಪಾಶ್ಚ ಮಲಿನಾಶ್ಚಾಪ್ಯ ಪಂಡಿತಾಃ ॥೪೩॥

---

೩೮–೪೦. ಆ ಬ್ರಹ್ಮನೂ ಕೂಡ ಒಂದು ಕ್ಷಣದೊಳಗಾಗಿ ತನ್ನ ಮನಸ್ಸಿನಲ್ಲಿ ಆಲೋಚಿಸಿ ದಾರುವನದಲ್ಲಿ ನಡೆದ ಸಕಲವಾದ ವೃತ್ತಾಂತ ವನ್ನೂ ತಿಳಿದು ಬೇಗನೆ ಎದ್ದು ಶಿವನಿಗೆ, ಕೈಮುಗಿದು ನಮಸ್ಕಾರಮಾಡಿ ದಾರುವನದ ಮುನಿಗಳನ್ನು ಕುರಿತು ಹೇಳಿದನು.

೪೧. ಎಲೈ ಬ್ರಾಹ್ಮಣರೇ, ದೈವಹತರಾದ ನಿಮ್ಮನ್ನು ನಿಂದಿಸ ಬೇಕು. ಪುಣ್ಯಹೀನರಾದ ನೀವು ಕೈಗೆಸಿಕ್ಕಿದ ಮಹಾನಿಧಿಯನ್ನು ವ್ಯರ್ಥ ಮಾಡಿದಿರಿ!

೪೨. ಲಿಂಗಸ್ವರೂಪಜ್ಞಾನವಿಲ್ಲದ ನೀವು ದಾರುವನದಲ್ಲಿ ಲಿಂಗರೂಪ ನಾದ ಪರಮೇಶ್ವರನನ್ನು ವಿಕಾರವಾದ ಆಕಾರದಿಂದ ದರ್ಶನಮಾಡಿದಿರಿ. ಅವನೇ ಪರಮೇಶ್ವರನು!

೪೩. ಎಲೈ ಬ್ರಾಹ್ಮಣರುಗಳೇ, ಅತಿಥಿಗಳು ಕುರೂಪಿಗಳಾಗಲೀ, ರೂಪವಂತರಾಗಲೀ, ಕೊಳೆಯಾಗಿ ಕಾಣತಕ್ಕವರಾಗಲೀ, ಮೂರ್ಖರಾ ಗಲೀ, ಗೃಹಸ್ಥರು ಅವರನ್ನು ನಿಂದಿಸಕೂಡದು.

ಸುದರ್ಶನೇನ ಮುನಿನಾ ಕಾಲಮೃತ್ಯುರಪಿ ಸ್ವಯಂ ।
ಪುರಾ ಭೂಮೌ ದ್ವಿಜಾಗ್ರ್ಯೇಣ ಜಿತೋ ಹ್ಯತಿಥಿ ಪೂಜಯಾ ॥೪೪॥
ಅನ್ಯಥಾ ನಾಸ್ತಿ ಸಂತರ್ತುಂ ಗೃಹಸ್ಥೈಶ್ಚ ದ್ವಿಜೋತ್ತಮೈಃ ।
ತ್ಯಕ್ತ್ವಾಚಾತಿಥಿ ಪೂಜಾಂ ತಾ ಮಾತ್ಮನೋ ಭುವಿ ಶೋಧನಂ॥೪೫॥
ಗೃಹಸ್ಥೋಽಪಿ ಪುರಾ ಜೇತುಂ ಸುದರ್ಶನ ಇತಿ ಶ್ರುತಃ ।
ಪ್ರತಿಜ್ಞಾಮಕರೋ ಜ್ಜಾಯಾಂ ಭಾರ್ಯಾ ಮಾಹ ಪತಿವ್ರತಾಂ॥೪೬॥
ಸುವ್ರತೇ ಸುಭ್ರು ಸುಭಗೇ ಶೃಣು ಸರ್ವಂ ಪ್ರಯತ್ನತಃ ।
ತ್ವಯಾ ನ್ವೈ ನಾವ ಮಂತವ್ಯಾ ಗೃಹೇ ಹ್ಯತಿಥಿಯಃ ಸದಾ ॥೪೭॥
ಸರ್ವ ಏವ ಸ್ವಯಂ ಸಾಕ್ಷಾದತಿಥಿರ್ಯತ್ಪಿನಾಕಧೃತ್ ।
ತಸ್ಮಾದತಿಥಯೇ ದತ್ವಾ ಆತ್ಮಾನ ಮಪಿ ಪೂಜಯ ॥೪೮॥

---

೪೪. ಭೂಲೋಕದಲ್ಲಿ ಹಿಂದೆ ಸುದರ್ಶನನೆಂಬ ಬ್ರಾಹ್ಮಣಶ್ರೇಷ್ಠನಾದ ಋಷಿಯು ಅತಿಥಿ ಪೂಜೆಯಿಂದ ಕಾಲಮೃತ್ಯುವನ್ನು ಜಯಿಸಿದನು.

೪೫. ಭೂಲೋಕದಲ್ಲಿ ಗೃಹಸ್ಥರಾದ ಬ್ರಾಹ್ಮಣರಿಗೆ ಅತಿಥಿಪೂಜೆಯನ್ನು ಬಿಟ್ಟು ಆತ್ಮಶುದ್ಧಿಗೆ ಬೇರೇ ಉಪಾಯವು ಇರುವುದಿಲ್ಲ.

೪೬. ಹಿಂದೆ ಸುದರ್ಶನನೆಂಬ ಗೃಹಸ್ಥನು ಮೃತ್ಯುವನ್ನು ಜಯಿಸುವೆನೆಂದು ಪ್ರತಿಜ್ಞೆಯನ್ನು ಮಾಡಿ ಪತಿವ್ರತೆಯಾದ ತನ್ನ ಪತ್ನಿಯನ್ನು ಕುರಿತು ಹೇಳಿದನು.

೪೭. ಎಲೌ ಪತಿವ್ರತೆಯೂ, ಸುಂದರಿಯೂ, ಪುಣ್ಯವತಿಯೂ, ಆದ ಪತ್ನಿಯೇ, ನಾನು ಹೇಳುವುದನ್ನು ಪ್ರಯತ್ನಪೂರ್ವಕವಾಗಿ ಕೇಳು. ಮನೆಗೆ ಬಂದ ಅತಿಥಿಗಳನ್ನು ಯಾವಾಗಲೂ ನೀನು ಅಪಮಾನ ಮಾಡಬೇಡ.

೪೮. ಸಮಸ್ತ ಅತಿಥಿಗಳೂ ಸಾಕ್ಷಾತ್ಪಿನಾಕಪಾಣಿಯಾದ ಶಿವಸ್ವರೂಪರು. ಆದುದರಿಂದ ನಿನ್ನ ಶರೀರವನ್ನಾದರೂ ಅತಿಥಿಗೆ ಕೊಟ್ಟು ಪೂಜಿಸು.

ಏವಮುಕ್ತ್ವಾಽಥ ಸಂತಪ್ತಾ ವಿವಶಾ ಸಾ ಪತಿವ್ರತಾ ।
ಪತಿಮಾಹ ರುದಂತೀ ಚ ಕಿಮುಕ್ತಂ ಭವತಾ ಪ್ರಭೋ ॥೪೯॥

ತಸ್ಯಾಸ್ತದ್ವಚನಂ ಶ್ರುತ್ವಾ ಪುನಃ ಪ್ರಾಹ ಸುದರ್ಶನಃ ।
ದೇಯಂ ಸರ್ವಂ ಶಿವಾಯಾರ್ಯೇ ಶಿವ ಏವಾತಿಥಿಃ ಸ್ವಯಂ ॥೫೦॥

ತಸ್ಮಾತ್ಸರ್ವೇ ಪೂಜನೀಯಾಃ ಸರ್ವೇಽಪ್ಯತಿಥಯಃ ಸದಾ ।
ಏವಮುಕ್ತಾ ತದಾ ಭರ್ತ್ರಾ ಭಾರ್ಯಾ ತಸ್ಯ ಪತಿವ್ರತಾ ॥೫೧॥

ಶೇಷಾಮಿವಾಜ್ಞಾಮಾದಾಯ ಮೂರ್ಧ್ನಾ ಸಾ ಪ್ರಾಚರತ್ತದಾ ।
ಪರೀಕ್ಷಿತುಂ ತಥಾ ಶ್ರದ್ಧಾಂ ತಯೋಃ ಸಾಕ್ಷಾದ್ದ್ವಿಜೋತ್ತಮಾಃ ॥

ಧರ್ಮೋ ದ್ವಿಜೋತ್ತಮೋ ಭೂತ್ವಾ ಜಗಾಮಾಥ ಮುನೇರ್ಗೃಹಂ ।
ತಂ ದೃಷ್ಟ್ವಾ ಚಾರ್ಚಯಾಮಾಸ ಸಾಽರ್ಘ್ಯಾದ್ಯೈರನಘಾದ್ವಿಜಂ॥೫೩॥

---

೪೯. ಹೀಗೆಂದು ಹೇಳುತ್ತಲು, ಆ ಪತಿವ್ರತೆಯು ಈ ಮಾತನ್ನು ಕೇಳಿ ಪಶ್ಚಾತ್ತಾಪವನ್ನು ಹೊಂದಿ, ಅಳುತ್ತಾ ಪತಿಯನ್ನು ಕುರಿತು, ಓ ಸ್ವಾಮಿಯೇ, ನೀವು ಏನನ್ನು ಹೇಳಿದಿರಿ? ಎಂದು ಪ್ರಶ್ನೆ ಮಾಡಿದಳು.

೫೦. ಅವಳ ಮಾತನ್ನು ಕೇಳಿ ಸುದರ್ಶನನು ಮತ್ತೆ ಹೇಳಿದನು. ಎಲೌ ಪೂಜ್ಯಳೇ, ಸಮುಸ್ತವನ್ನೂ ಶಿವನಿಗೆ ಕೊಡಬೇಕಾದುದು. ಅತಿಥಿಯೇ ಸಾಕ್ಷಾತ್ ಶಿವನು.

೫೧. ಆದುದರಿಂದ ಸಮುಸ್ತ ಅತಿಥಿಗಳೂ ಯಾವಾಗಲೂ ಪೂಜಾಯೋಗ್ಯರು, ಹೀಗೆಂದು ಪತಿಯು ಹೇಳುತ್ತಲು ಪತಿವ್ರತೆಯಾದ ಆ ಸುದರ್ಶನನ ಹೆಂಡತಿಯು, ತನ್ನ ಪತಿಯ ಅಪ್ಪಣೆಯನ್ನು ಮಹಾಪ್ರಸಾದವೆಂದು ಶಿರಸಾವಹಿಸಿ ಅದರಂತೆ ಆಚರಿಸುತ್ತಿದ್ದಳು.

೫೨. ಎಲೈ ಬ್ರಾಹ್ಮಣರೇ, ಕೇಳಿರಿ: ಅವರಿಬ್ಬರ ಭಕ್ತಿಯನ್ನು ಪರೀಕ್ಷಿಸಬೇಕೆಂದು ಸಾಕ್ಷಾತ್ ಯಮಧರ್ಮದೇವನು ಬ್ರಾಹ್ಮಣನಾಗಿ ಸುದರ್ಶನ ಮುನಿಯ ಮನೆಗೆ ಹೋದನು.

೫೩. ಆ ಪತಿವ್ರತೆಯು ಆ ಬ್ರಾಹ್ಮಣನನ್ನು ಕಂಡು ಅರ್ಘ್ಯಾದಿಗಳಿಂದ ಪೂಜಿಸಿದಳು. ಉತ್ತಮವಾದ ಪೂಜೆಯನ್ನು ಪಡೆದ ಬ್ರಾಹ್ಮಣರೂಪನಾದ ಯಮಧರ್ಮನು ಆಕೆಯನ್ನು ಕುರಿತು ಹೇಳಿದನು.

ಸಂಪೂಜಿತಸ್ತ್ವಯಾ ತಾಂ ತು ಪ್ರಾಹ ಧರ್ಮೋ ದ್ವಿಜಃ ಸ್ವಯಂ ।
ಭದ್ರೇ ಕುತಃ ಪತಿರ್ಧೀಮಾಂ ಸ್ತವ ಭರ್ತಾ ಸುದರ್ಶನಃ ॥೫೪॥

ಅನ್ನಾದ್ಯೈರಲಮದ್ಯಾರ್ಯೇ ಸ್ವಂ ದಾತುಮಿಹ ಚಾರ್ಹಸಿ ।
ಸಾ ಚ ಲಜ್ಜಾವೃತಾ ನಾರೀ ಸ್ಮರಂತೀ ಕಥಿತಂ ಪುರಾ ॥೫೫॥

ಭರ್ತ್ರಾ ನ್ಯಮೀಲಯನ್ನೇತ್ರೇ ಚಚಾಲ ಚ ಪತಿವ್ರತಾ ।
ಕಿಂಚ್ಚೈತ್ಯಾಹ ಪುನಸ್ತಂ ವೈ ಧರ್ಮೇ ಚಕ್ರೇ ಚ ಸಾ ಮತಿಂ ॥೫೬॥

ನಿವೇದಿತುಂ ಕಿಲಾತ್ಮಾನಂ ತಸ್ಮೈ ಪತ್ಯುರಿಹಾಜ್ಞಯಾ ।
ಏತಸ್ಮಿನ್ನಂತರೇ ಭರ್ತಾ ತಸ್ಯಾ ನಾರ್ಯಾಃ ಸುದರ್ಶನಃ ॥೫೭॥

ಗೃಹದ್ವಾರಂ ಗತೋ ಧೀಮಾಂ ಸ್ತ್ವಾಮುವಾಚ ಮಹಾಮುನಿಃ ।
ಏಹ್ಯೇಹಿ ಕ್ವಗತಾ ಭದ್ರೇ ತ ಮುವಾಚಾ ತಿಥಿಃ ಸ್ವಯಂ ॥೫೮॥

---

೫೪. ಎಲೌ ಮಂಗಳೆಯೇ, ನಿನ್ನ ಗಂಡನೂ ಬುದ್ಧಿವಂತನೂ ಆದ ಸುದರ್ಶನನು ಎಲ್ಲಿರುವನು? ಎಲೌ ಪೂಜ್ಯಳೆ, ಅನ್ನಾದಿಗಳು ಈ ದಿನ ನನಗೆ ಬೇಡ, ನಿನ್ನ ಶರೀರವನ್ನೇ ನನಗೆ ಸಮರ್ಪಿಸಬೇಕು.

೫೫. ಆ ಪತಿವ್ರತೆಯು ಈ ಮಾತನ್ನು ಕೇಳಿ ಸ್ತ್ರೀಸ್ವಭಾವವಾದ ನಾಚಿಕೆಯಿಂದ ಕೂಡಿದವಳಾಗಿ ಹಿಂದೆ ತನ್ನ ಪತಿಯು ಹೇಳಿದ ಮಾತನ್ನು ಜ್ಞಾಪಿಸಿಕೊಂಡು ಕಣ್ಣುಗಳನ್ನು ಮುಚ್ಚಿಕೊಂಡು ಚಂಚಲ ಚಿತ್ತಳಾದಳು.

೫೬. ಮತ್ತೆ ಬಂದು ತನ್ನ ಪತಿಯ ಅಪ್ಪಣೆಯಿಂದ ಧರ್ಮವಿಷಯದಲ್ಲಿ ತನ್ನ ಶರೀರವನ್ನು ಸಮರ್ಪಿಸುವೆನೆಂದು ಆ ಬ್ರಾಹ್ಮಣನಿಗೆ ಹೇಳಿದಳು.

೫೭–೫೮. ಈ ಸಮಯಕ್ಕೆ ಸರಿಯಾಗಿ ಆಕೆಯ ಗಂಡನಾದ ಸುದರ್ಶನ ಮಹಾಮುನಿಯು ಮನೆಯಬಾಗಿಲಿಗೆ ಬಂದು, ಎಲೌ ಮಂಗಳೆಯೇ, ಎಲ್ಲಿಗೆ ಹೋದೆ? ಇಲ್ಲಿ ಬಾ, ಎಂದು ಕರೆದನು. ಆಗ ಅತಿಥಿಯಾದ ಬ್ರಾಹ್ಮಣನು ತಾನೇ ಆ ಮುನಿಯನ್ನು ಕುರಿತು ಹೇಳಿದನು.

ಭಾರ್ಯಯಾ ತ್ವನಯಾ ಸಾರ್ಧಂ ಮೈಥುನಸ್ಥೋಽಹಮದ್ಯ ವೈ ।
ಸುದರ್ಶನ ಮಹಾಭಾಗ ಕಿಂಕರ್ತವ್ಯಮಿಹೋಚ್ಯತಾಂ ॥೫೯॥

ಸುರತಾಂತಸ್ತುವಿಪ್ರೇಂದ್ರ ಸಂತುಷ್ಟೋಽಹಂ ದ್ವಿಜೋತ್ತಮ ।
ಸುದರ್ಶನಸ್ತತಃಪ್ರಾಹ ಸುಪ್ರಹೃಷ್ಟೋ ದ್ವಿಜೋತ್ತಮಃ ॥೬೦॥

ಭುಂಕ್ಷ್ವಚೈನಾಂ ಯಥಾಕಾಮಂ ಗಮಿಷ್ಯೇಽಹಂ ದ್ವಿಜೋತ್ತಮ ।
ಹೃಷ್ಟೋಽಥ ದರ್ಶಯಾಮಾಸ ಸ್ವಾತ್ಮಾನಂ ಧರ್ಮರಾಟ್ ಸ್ವಯಂ ॥

ಪ್ರದದೌ ಚೇಪ್ಸಿತಂ ಸರ್ವಂ ತಮಾಹ ಚ ಮಹಾದ್ಯುತಿಃ ।
ಏಷಾ ನ ಭುಕ್ತಾ ವಿಪ್ರೇಂದ್ರ ಮನಸಾಽಪಿ ಸುಶೋಭನಾ ॥೬೨॥

ಮಯಾ ಚೈಷಾ ನ ಸಂದೇಹಃ ಶ್ರದ್ಧಾಂ ಜ್ಞಾತು ಮಿಹಾಗತಃ ।
ಜಿತೋ ವೈ ಯಸ್ತ್ವಯಾ ಮೃತ್ಯು ರ್ಧರ್ಮೇಣೈಕೇನ ಸುವ್ರತ ॥೬೩॥

---

೫೯. ಎಲೈ ಪುಣ್ಯವಂತನಾದ ಸುದರ್ಶನನೇ, ಈ ನಿನ್ನ ಹೆಂಡತಿಯೊಡನೆ ನಾನು ಕೂಡಿದ್ದೆನು. ಈಗ ಏನನ್ನು ಮಾಡಬೇಕು? ಹೇಳು. ಎಲೈ ಬ್ರಾಹ್ಮಣೋತ್ತಮನೇ, ಸುರತಾಂತದಲ್ಲಿ ನಾನು ತೃಪ್ತಿಯನ್ನು ಹೊಂದಿದೆನು.

೬೦–೬೧. ಆ ಬಳಿಕ ಸುದರ್ಶನನೆಂಬ ಬ್ರಾಹ್ಮಣೋತ್ತಮನು ಹೇಳಿದನು. ಎಲೈ ಬ್ರಾಹ್ಮಣ ಶ್ರೇಷ್ಠನೇ, ನಿನ್ನ ಇಷ್ಟಬಂದಂತೆ ಇವಳನ್ನು ಅನುಭವಿಸು. ನಾನು ಹೋಗುತ್ತೇನೆ. ಈ ಮಾತನ್ನು ಕೇಳಿ ಯಮಧರ್ಮನು ಸಂತೋಷ ಹೊಂದಿ ತನ್ನ ಸ್ವರೂಪವನ್ನು ತೋರಿಸಿದನು.

೬೨–೬೩. ಅವನ ಇಷ್ಟಾರ್ಥಗಳನ್ನೆಲ್ಲವನ್ನೂ ಕೊಟ್ಟು ಮಹಾತೇಜಶ್ಶಾಲಿಯಾದ ಯಮಧರ್ಮನು ಅವನನ್ನು ಕುರಿತು ಹೇಳಿದನು. ಎಲೈ ಬ್ರಾಹ್ಮಣಶ್ರೇಷ್ಠನೇ, ಪುಣ್ಯವತಿಯಾದ ಈಕೆಯನ್ನು ನಾನು ಮನಸ್ಸಿನಿಂದಲೂ ಅನುಭವಿಸಲಿಲ್ಲ. ಈ ವಿಷಯದಲ್ಲಿ ಸಂದೇಹಪಡಬೇಡ. ನಿನ್ನ ಭಕ್ತಿಯನ್ನು ತಿಳಿಯುವುದಕ್ಕಾಗಿ ಇಲ್ಲಿಗೆ ಬಂದೆನು. ಒಳ್ಳೆಯ ವ್ರತವನ್ನು ಹಿಡಿದು ನೀನು ಇದೊಂದು ಧರ್ಮದಿಂದಲೇ ಮೃತ್ಯುವನ್ನೂ ಜಯಿಸಿದೆ!

ಅಹೋಽಸ್ಯ ತಪಸೋ ವೀರ್ಯ ಮಿತ್ಯುಕ್ತ್ವಾ ಪ್ರಯಯೌ ಚ ಸಃ ।
ತಸ್ಮಾತ್ತಥಾ ಪೂಜನೀಯಾಃ ಸರ್ವೇ ಹ್ಯತಿಥಯಃ ಸದಾ ॥೬೪॥

ಬಹುನಾಽತ್ರ ಕಿಮುಕ್ತೇನ ಭಾಗ್ಯಹೀನಾ ದ್ವಿಜೋತ್ತಮಾಃ ।
ತಮೇವ ಶರಣಂ ತೂರ್ಣಂ ಗಂತುಮರ್ಹಥ ಶಂಕರಂ ॥೬೫॥

ತಸ್ಯ ತದ್ವಚನಂ ಶ್ರುತ್ವಾ ಬ್ರಹ್ಮಣೋ ಬ್ರಾಹ್ಮಣರ್ಷಭಾಃ ।
ಬ್ರಹ್ಮಾಣ ಮಭಿವಂದ್ಯಾರ್ತಾಃ ಪ್ರೋಚುರಾಕುಲಿತೇಕ್ಷಣಾಃ ॥೬೬॥

॥ ಬ್ರಾಹ್ಮಣಾ ಊಚುಃ ॥

ನಾಪೇಕ್ಷಿತಂ ಮಹಾಭಾಗ ಜೀವಿತಂ ವಿಕೃತಾಃ ಸ್ತ್ರಿಯಃ ।
ದೃಷ್ಟೋಽಸ್ಮಾಭಿ ರ್ಮಹಾದೇವೋ ನಿಂದಿತೋ ಯಸ್ತ್ವ ನಿಂದಿತಃ ॥

ಶಪ್ತಶ್ಚ ಸರ್ವಗಃ ಶೂಲೀ ಪಿನಾಕೀ ನೀಲಲೋಹಿತಃ ।
ಅಜ್ಞಾನಾ ಚ್ಚಾಪಗಾ ಶಕ್ತಿಃ ಕುಂಠಿತಾಽಸ್ಯ ನಿರೀಕ್ಷಣಾತ್ ॥೬೮॥

---

೬೪. ಆಹಾ! ನಿನ್ನ ತಪಸ್ಸಿನ ಮಹಿಮೆಯು ದೊಡ್ಡದು! ಎಂದು ಹೇಳಿ ಆ ಯಮಧರ್ಮನು ಹೊರಟು ಹೋದನು. ಆದುದರಿಂದ ಸಮಸ್ತ ಅತಿಥಿಗಳನ್ನು ಯಾವಾಗಲೂ ಈರೀತಿಯಲ್ಲಿ ಸುದರ್ಶನನಂತೆ ಪೂಜಿಸ ಬೇಕು.

೬೫. ಹೆಚ್ಚು ಹೇಳುವುದೇನು ? ಎಲೈ ಪುಣ್ಯಹೀನರಾದ ಬ್ರಾಹ್ಮಣರೇ, ಬೇಗನೆ ಆ ಶಿವನನ್ನೇ ಶರಣುಹೊಂದಿರಿ.

೬೬. ಆ ಬ್ರಾಹ್ಮಣಶ್ರೇಷ್ಠರು ಬ್ರಹ್ಮನು ಹೇಳಿದ ಮಾತನ್ನು ಕೇಳಿ ಅವನಿಗೆ ನಮಸ್ಕಾರವನ್ನು ಮಾಡಿ ದುಃಖದಿಂದ ಮುಂದುಗಾಣದವರಾಗಿ ಹೇಳಿದರು.

೬೭–೬೮. ಓ ಮಹಾಮಹಿಮನಾದ ಬ್ರಹ್ಮನೇ, ಈ ಪ್ರಾಣವೂ, ವಿಕಾರವಾದ ಸ್ತ್ರೀಯರೂ, ನಮಗೆ ಬೇಡ. ನಿಂದೆಗೆ ಯೋಗ್ಯನಲ್ಲದ ಸರ್ವವ್ಯಾಪಿಯಾದ, ಶೂಲಾಯುಧವನ್ನೂ, ಪಿನಾಕಧನುಸ್ಸನ್ನೂ, ಹಿಡಿದ ಶಿವನನ್ನು ನಾವು ನೋಡಿದರೂ, ಅಜ್ಞಾನದಿಂದ ನಿಂದೆ ಮಾಡಿ ಶಾಪವನ್ನು ಕೊಟ್ಟೆವು. ಅವನ ನೋಟದಿಂದಲೇ ನಮ್ಮ ಶಾಪ ಶಕ್ತಿಯು ನಾಶ

ವಕ್ತುಮರ್ಹಸಿ ದೇವೇಶ ಸಂನ್ಯಾಸಂ ವೈ ಕ್ರಮೇಣ ತು ।
ದ್ರಷ್ಟುಂ ವೈ ದೇವದೇವೇಶ ಮುಗ್ರಂ ಭೀಮಂ ಕಪರ್ದಿನಂ ॥೨೯॥

॥ ಪಿತಾಮಹ ಉವಾಚ ॥

ಆದೌ ವೇದಾನಧೀತ್ಯೈವ ಶ್ರದ್ಧಯಾ ಚ ಗುರೋಃಸದಾ ।
ವಿಚಾರ್ಯಾರ್ಥಂ ಮುನೇರ್ಧರ್ಮಾನ್ ಪ್ರತಿಜ್ಞಾಯ ದ್ವಿಜೋತ್ತಮಾಃ

ಗ್ರಹಣಾಂತಂ ಹಿ ವಾ ವಿದ್ವಾನಥ ದ್ವಾದಶ ವಾರ್ಷಿಕಂ ।
ಸ್ನಾತ್ವಾಽಽಹೃತ್ಯ ಚ ದಾರಾನ್ವೈ ಪುತ್ರಾನುತ್ಪಾದ್ಯಸುವ್ರತಾನ್ ॥
ವೃತ್ತಿಭಿಶ್ಚಾನುರೂಪಾಭಿ ಸ್ತಾನ್ವಿಭಜ್ಯ ಸುರಾನ್ಮುನಿಃ ।
ಅಗ್ನಿಷ್ಟೋಮಾದಿಭಿಶ್ಚೇಷ್ಟ್ವಾ ಯಜ್ಞೈರ್ಯಜ್ಞೇಶ್ವರಂ ವಿಭುಂ ॥
ಪೂಜಯೇತ್ಪರಮಾತ್ಮಾನಂ ಸ್ಪ್ರಾಪ್ಯಾರಣ್ಯಂ ವಿಭಾವಸೌ ।
ಮುನಿರ್ದ್ವಾದಶವರ್ಷಂ ವಾ ವರ್ಷಮಾತ್ರಮಥಾಪಿ ವಾ ॥೭೩॥

---

ವಾಯಿತು. ದೇವದೇವನೂ, ಭಯಂಕರನೂ, ಜಟಾಧಾರಿಯೂ, ಆದ, ದುಷ್ಟರಿಗೆ ಕ್ರೂರಿಯಾದ ಶಿವನನ್ನು ನೋಡಲು ನಮಗೆ ಕ್ರಮಸನ್ಯಾಸವನ್ನು ಉಪದೇಶಿಸು, ಎಂದರು.

೭೦-೭೨. ಬ್ರಹ್ಮನು ಹೇಳಿದನು: ಮೊದಲು ಭಕ್ತಿಯಿಂದ ಗುರುವಿನ ಸಮೀಪದಲ್ಲಿ ವೇದವನ್ನು ಅಭ್ಯಾಸಮಾಡಿ ಗ್ರಹಣಾಂತವಾಗಿ ಅಥವಾ ಹನ್ನೆರಡು ವರ್ಷಗಳವರೆಗೆ ಅರ್ಥವನ್ನೂ, ಧರ್ಮವನ್ನೂ, ವಿಚಾರಮಾಡಿ ಬಳಿಕ ಸ್ನಾತಕವ್ರತವನ್ನಾಚರಿಸಿ ಗೃಹಸ್ಥನಾಗಿ ವಿವಾಹಮಾಡಿಕೊಂಡು, ಮಕ್ಕಳನ್ನು ಪಡೆದು ಅವರಿಗೆ ಒಳ್ಳೆಯ ಆಚಾರವನ್ನು ಕಲಿಸಿ ಅವರಿಗೆ ಅನುರೂಪವಾದ ಜೀವನವನ್ನು ಕಲ್ಪಿಸಿ ವಿಭಾಗಮಾಡಿಕೊಟ್ಟು, ತಾನು ಮೌನವ್ರತವನ್ನು ಹಿಡಿದು ಅಗ್ನಿಷ್ಟೋಮಾದಿಯಜ್ಞಗಳನ್ನು ಮಾಡಿ, ಅಗ್ನಿಯನ್ನು ಪೂಜಿಸಿ ವನಕ್ಕೆ ಹೋಗಿ ಆ ವಾನಪ್ರಸ್ಥಾಶ್ರಮದಲ್ಲಿ ಸೂರ್ಯನಲ್ಲಿ ಪರಮಾತ್ಮನ ಪೂಜೆಯನ್ನು ಮಾಡಬೇಕು.

೭೩-೭೪. ಹನ್ನೆರಡುವರ್ಷ, ಅಥವಾ ಒಂದುವರ್ಷ, ಹನ್ನೆರಡುಪಕ್ಷ ಅಥವಾ ಹನ್ನೆರಡು ದಿವಸವಾದರೂ, ಮೌನವ್ರತದಿಂದ ಹಾಲನ್ನು

ಪಕ್ಷ್ನದ್ವಾದಶಕಂ ವಾಽಪಿ ದಿನದ್ವಾದಶಕಂ ತು ವಾ ।
ಕ್ಷೀರಭಾಕ್ ಸಂಯುತಃ ಶಾಂತಃ ಸರ್ವಾನ್ ಸಂಪೂಜಯೇತ್ಸುರಾನ್
ಇಷ್ಟ್ವೈವಂ ಜುಹುಯಾದಗ್ನೌ ಯಜ್ಞಪಾತ್ರಾಣಿ ಮಂತ್ರತಃ ।
ಅಪ್ಸು ವೈ ಪಾರ್ಥಿವಂ ನ್ಯಸ್ಯ ಗುರವೇ ತೈಜಸಾನಿ ತು ॥೭೫॥
ಸ್ವಧನಂ ಸಕಲಂ ಚೈವ ಬ್ರಾಹ್ಮಣೇಭ್ಯೋಽ ವಿಶಂಕಯಾ ।
ಪ್ರಣಿಪತ್ಯ ಗುರುಂ ಭೂಮೌ ವಿರಕ್ತಃ ಸಂನ್ಯಸೇದ್ಯತಿಃ ॥೭೬॥
ನಿಕೃತ್ಯ ಕೇಶಾನ್ ಸಶಿಖಾ ನುಪವೀತಂ ವಿಸೃಜ್ಯ ಚ ।
ಪಂಚಭಿರ್ಜುಹುಯಾದಪ್ಸು ಭೂಃ ಸ್ವಾಹೇತಿ ವಿಚಕ್ಷಣಃ ॥೭೭॥
ತತಶ್ಚೋರ್ಧ್ವಂ ಚರೇ ದೇವಂ ಯತಿಃ ಶಿವ ವಿಮುಕ್ತಯೇ ।
ವ್ರತೇನಾನಶನೇನಾಽಪಿ ತೋಯವೃತ್ತ್ಯಾಽ ಪಿ ವಾ ಪುನಃ ॥೭೮॥
ಪರ್ಣವೃತ್ತ್ಯಾಪಯೋವೃತ್ತ್ಯಾ ಫಲವೃತ್ತ್ಯಾಽಪಿವಾಯತಿಃ ।
ಏವಂ ಜೀವನ್ಮೃತೋ ನೋ ಚೇತ್ ಷಣ್ಮಾಸಾದ್ವತ್ಸರಾತ್ತುವಾ ॥

---

ಮಾತ್ರ ಆಹಾರವನ್ನು ಮಾಡಿಕೊಂಡು ಶಾಂತನಾಗಿ ಸಕಲದೇವತೆಗಳನ್ನೂ ಪೂಜೆಮಾಡಬೇಕು.

೭೫–೭೬. ಈ ರೀತಿಯಲ್ಲಿ ಪೂಜಿಸಿ ಅಗ್ನಿಯಲ್ಲಿ ಮರದ ಯಜ್ಞ ಪಾತ್ರೆಗಳನ್ನು ಮಂತ್ರ ಪೂರ್ವಕವಾಗಿ ಹೋಮಮಾಡಿ, ಮಣ್ಣಿನ ಪಾತ್ರೆ ಗಳನ್ನು ನೀರಿಗೆ ಹಾಕಿ, ಲೋಹದಪಾತ್ರೆಯನ್ನು ಗುರುವಿಗೆ ಕೊಟ್ಟು, ತನ್ನ ಸಕಲಧನವನ್ನೂ ಸಂದೇಹವಿಲ್ಲದೇ ಬ್ರಾಹ್ಮಣರಿಗೆ ದಾನಮಾಡಿ, ಭೂಮಿ ಯಲ್ಲಿ, ಗುರುವಿಗೆ ನಮಸ್ಕಾರಮಾಡಿ ವೈರಾಗ್ಯದಿಂದ ಯತ್ನಶೀಲನಾಗಿ ಸನ್ಯಾಸಗ್ರಹಣ ಮಾಡಬೇಕು.

೭೭. ಜುಟ್ಟಿನೊಡನೆ ತಲೆಯಕೂದಲನ್ನೆಲ್ಲವನ್ನೂ ತೆಗೆಸಿ, ಯಜ್ಞೋಪ ವೀತವನ್ನೂ ವಿಸರ್ಜನೆಮಾಡಿ, ಭೂಃಸ್ವಾಹಾ ಇತ್ಯಾದಿಯಾದ ಐದು ಮಂತ್ರಗಳಿಂದ ನೀರಿನಲ್ಲಿ ಹೋಮವನ್ನು ಮಾಡಬೇಕು.

೭೮–೭೯. ಆಮೇಲೆ ಯತಿಯಾದವನು ಮೋಕ್ಷಕ್ಕೋಸ್ಕರವಾಗಿ ಅನ ಶನವ್ರತ, ನೀರು, ಎಲೆ, ಹಾಲು, ಹಣ್ಣು, ಇವುಗಳಿಂದಲಾದರೂ ಒಂದು ವರ್ಷ, ಅಥವಾ ಆರುತಿಂಗಳವರೆಗೆ ಆಹಾರಮಾಡಿಕೊಂಡು ವ್ರತಾಚರಣೆ ಯನ್ನು ಮಾಡಬೇಕು.

ಪ್ರಸ್ಥಾನಾದಿಕಮಾಯಾಸಂ ಸ್ವದೇಹಸ್ಯ ಚರೇದ್ಯತಿಃ ।
ಶಿವಸಾಯುಜ್ಯಮಾಪ್ನೋತಿ ಕರ್ಮಣಾಽಪ್ಯೇವಮಾಚರನ್ ॥೮೦॥
ಸದ್ಯೋಽಪಿ ಲಭತೇ ಮುಕ್ತಿಂ ಭಕ್ತಿಯುಕ್ತೋ ದೃಢವ್ರತಾಃ ॥೮೧॥
ತ್ಯಾಗೇನ ವಾ ಕಿಂ ವಿಧಿನಾಽಪ್ಯನೇನ ।
ಭಕ್ತಸ್ಯ ರುದ್ರಸ್ಯ ಶುಭೈರ್ವ್ರತೈಶ್ಚ ॥
ಯಜ್ಞೈಶ್ಚ ದಾನೈ ರ್ವಿವಿಧೈಶ್ಚ ಹೋಮೈ ।
ರ್ಲಬ್ಧೈಶ್ಚ ಶಾಸ್ತ್ರೈ ರ್ವಿವಿಧೈಶ್ಚ ವೇದೈಃ ॥೮೨॥
ಶ್ವೇತೇನೈವಂ ಜಿತೋ ಮೃತ್ಯು ರ್ಭವಭಕ್ತ್ಯಾ ಮಹಾತ್ಮನಾ ।
ವೋಽಸ್ತು ಭಕ್ತಿರ್ಮಹಾದೇವೇ ಶಂಕರೇ ಪರಮಾತ್ಮನಿ ॥೮೩॥

**ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಏಕೋನತ್ರಿಂಶೋಽಧ್ಯಾಯಃ**

---

೮೦–೮೧. ಯತಿಯಾದವನು ತನ್ನ ದೇಹರಕ್ಷಣಾರ್ಥವಾಗಿ ದೇಶ ಸಂಚಾರಾದ್ಯಾದಿ ಆಯಾಸ ಕಾರ್ಯಗಳನ್ನು ಮಾಡಬಹುದು. ಹೀಗೆ ಸ್ವಧರ್ಮಾಚರಣೆಯನ್ನು ಮಾಡಿಕೊಂಡಿದ್ದರೆ ಶಿವಸಾಯುಜ್ಯವು ಪ್ರಾಪ್ತವಾಗುವುದು. ದೃಡವಾದ ವ್ರತ ನಿಯಮ ಉಳ್ಳವರು ಭಕ್ತಿಯಿಂದ ಕೂಡಿದವರಾಗಿದ್ದರೆ ಆಕ್ಷಣವೇ ಮುಕ್ತರಾಗುವರು. ಆದುದರಿಂದಲೇ ಭಗವದ್ಗೀತೆಯಲ್ಲಿ ''ತಪಸ್ವಿಭ್ಯೋಽಧಿಕೋಯೋಗೀ'' ೬. ೪೬. ಇತ್ಯಾದಿಯಾಗಿ ಹೇಳಿದೆ.

೮೨. ರುದ್ರನಲ್ಲಿ ಭಕ್ತಿಯೊಂದಿದ್ದರೆ ಸಾಕು. ಸನ್ಯಾಸರೂಪವಾದ ಈ ನಿಯಮದಿಂದಲೂ, ವ್ರತಗಳಿಂದಲೂ, ಯಜ್ಞ, ದಾನ, ಹೋಮ, ಶಾಸ್ತ್ರಾಭ್ಯಾಸ, ವೇದಾಭ್ಯಾಸ ಇವುಗಳಿಂದಲೂ, ಯಾವ ಪ್ರಯೋಜನವೂ ಭಕ್ತಿಇಲ್ಲದೆ ಉಂಟಾಗುವುದಿಲ್ಲ.

೮೩. ಮಹಾತ್ಮನಾದ ಶ್ವೇತನೆಂಬ ಮುನಿಯು ಶಿವನ ಭಕ್ತಿಯಿಂದ ಮೃತ್ಯುವನ್ನು ಜಯಿಸಿದನು. ಸುಖವನ್ನುಂಟುಮಾಡುವ ದೊಡ್ಡ ದೇವನೂ ಪರಮಾತ್ಮನೂ ಆದ ಶಿವನಲ್ಲಿ ನಿಮಗೆ ಭಕ್ತಿಯುಂಟಾಗಲಿ.

**ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಸುದರ್ಶನ ಕಥೆ, ಸನ್ಯಾಸ ಕ್ರಮವನ್ನು ಹೇಳುವ ಇಪ್ಪತ್ತೊಂಬತ್ತನೆಯ ಅಧ್ಯಾಯವು ಮುಗಿದುದು.**

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ತ್ರಿಂಶೋಽಧ್ಯಾಯಃ

ತ್ರಿಂಶಕೇ ವರ್ಣ್ಯತೇಽಧ್ಯಾಯೇ ಶ್ವೇತ ಆರಾಧ್ಯ ಶಂಕರಂ ।
ಅಂತಕಾಂತಕಮೀಶಾನಂ ಮೃತ್ಯುಗ್ರಸ್ತೋಽಪ್ಯಮೂಮುಚತ್ ॥

॥ ಶೈಲಾದಿರುವಾಚ ॥

ಏವಮುಕ್ತಾ ಸ್ತಥಾ ತೇನ ಬ್ರಾಹ್ಮಣಾ ಬ್ರಾಹ್ಮಣರ್ಷಭಾಃ ।
ಶ್ವೇತಸ್ಯ ಚ ಕಥಾಂ ಪುಣ್ಯಾಮಪೃಚ್ಛನ್ಪರಮರ್ಷಯಃ ॥ ೧ ॥

॥ ಪಿತಾಮಹ ಉವಾಚ ॥

ಶ್ವೇತೋನಾಮ ಮುನಿಃ ಶ್ರೀಮಾನ್ ಗತಾಯುರ್ಗಿರಿ ಗಹ್ವರೇ ।
ಸಕ್ತ್ಯೋಽಭ್ಯರ್ಚ್ಯ ಯದ್ಭಕ್ತ್ಯಾ ತುಷ್ಟಾವ ಚ ಮಹೇಶ್ವರಂ ॥ ೨ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಮೂವತ್ತನೆಯ ಅಧ್ಯಾಯವು.

(ಮೂವತ್ತನೆಯ ಅಧ್ಯಾಯದಲ್ಲಿ ಶ್ವೇತನೆಂಬುವನು ಯಮನಿಗೆ ಯಮಸ್ವರೂಪನಾದ ಶಿವನನ್ನು ಪೂಜಿಸಿ ಮೃತ್ಯುವನ್ನು ಜಯಿಸಿದನೆಂದು ವರ್ಣಿಸಲಾಗುವುದು.)

೧. ಬ್ರಹ್ಮನು ಹೀಗೆ ಹೇಳುತ್ತಲೂ ಆ ಬ್ರಾಹ್ಮಣಶ್ರೇಷ್ಠರು ಶ್ವೇತ ಮುನಿಯ ಪುಣ್ಯಕರವಾದ ಕಥೆಯನ್ನು ಹೇಳಬೇಕೆಂದು ಪ್ರಶ್ನೆ ಮಾಡಿದರು.

೨. ಬ್ರಹ್ಮನು ಹೇಳಿದನು: ಶ್ವೇತನೆಂಬ ಮುನಿಯು ತನ್ನ ಆಯುಸ್ಸು ಮುಗಿದುಹೋಗಲು ಪರ್ವತ ಗುಹೆಯಲ್ಲಿ ಏಕಾಗ್ರಚಿತ್ತದಿಂದ ಮಹೇಶ್ವರನನ್ನು ಪೂಜಿಸಿ ಭಕ್ತಿಯಿಂದ ಸ್ತೋತ್ರ ಮಾಡಿದನು.

ರುದ್ರಾಧ್ಯಾಯೇನ ಪುಣ್ಯೇನ ನಮಸ್ತೇತ್ಯಾದಿನಾ ದ್ವಿಜಾಃ ।
ತತಃ ಕಾಲೇ ಮಹಾತೇಜಾಃ ಕಾಲಪ್ರಾಪ್ತಂ ದ್ವಿಜೋತ್ತಮಂ ॥ ೩ ॥
ನೇತುಂ ಸಂಚಿಂತ್ಯ ವಿಪ್ರೇಂದ್ರಾಃ ಸಾನ್ನಿಧ್ಯ ಮಕರೋನ್ಮುನೇಃ ।
ಶ್ವೇತೋಽಪಿ ದೃಷ್ಟ್ವಾ ತಂ ಕಾಲಂ ಕಾಲಪ್ರಾಪ್ತೋಽಪಿ ಶಂಕರಂ ॥ ೪ ॥
ಪೂಜಯಾಮಾಸ ಪುಣ್ಯಾತ್ಮಾ ತ್ರಿಯಂಬಕ ಮನುಸ್ಮರನ್ ।
ತ್ರಿಯಂಬಕಂ ಯಜೇದೇವಂ ಸುಗಂಧಿಂ ಪುಷ್ಟಿವರ್ಧನಂ ॥ ೫ ॥
ಕಿಂ ಕರಿಷ್ಯತಿ ಮೇ ಮೃತ್ಯುರ್ಮೃತ್ಯೋರ್ಮೃತ್ಯು ರಹಂ ಯತಃ ।
ತಂ ದೃಷ್ಟ್ವಾ ಸಸ್ಮಿತಂ ಪ್ರಾಹ ಶ್ವೇತಂ ಲೋಕ ಭಯಂಕರಃ ॥ ೬ ॥
ಏಹ್ಯೇಹಿ ಶ್ವೇತ ಚಾನೇನ ವಿಧಿನಾ ಕಿಂ ಫಲಂ ತವ ।
ರುದ್ರೋ ವಾ ಭಗವಾನ್ ವಿಷ್ಣುಃ ಬ್ರಹ್ಮಾ ವಾ ಜಗದೀಶ್ವರಃ ॥ ೭ ॥

---

೩. ಎಲೈ ಬ್ರಾಹ್ಮಣರೇ, ಕೇಳಿ. ಆ ಶ್ವೇತಮುನಿಯು ಪುಣ್ಯಕರವಾದ ರುದ್ರಾಧ್ಯಾಯದ ನಮಸ್ತೇ ರುದ್ರಮನ್ಯವ ಇತ್ಯಾದಿ ಮಂತ್ರಗಳಿಂದ ಸ್ತೋತ್ರಮಾಡಿದನು. ಆಯುಸ್ಸು ಮುಗಿದು ಆ ಬ್ರಾಹ್ಮಣನಿಗೆ ಮರಣಕಾಲವು ಬರುತ್ತಲು ಯಮನು ಅವನ ಪ್ರಾಣವನ್ನು ತೆಗೆದುಕೊಂಡು ಹೋಗಬೇಕೆಂದು ಯೋಚಿಸಿ ಆ ಮುನಿಯ ಸಮೀಪಕ್ಕೆ ಬಂದನು.

೪–೫. ಶ್ವೇತನು ಆ ಯಮನನ್ನು ನೋಡಿ ತನಗೆ ಮರಣಕಾಲವು ಬಂದಿದ್ದರೂ ಶಿವನನ್ನು ತ್ರಿಯಂಬಕ ಮಂತ್ರದಿಂದ ಜಪಿಸುತ್ತ ಪೂಜೆ ಮಾಡುತ್ತಿದ್ದನು. ಸುಖವಾದ ಸಂಬಂಧವುಳ್ಳ, ಪ್ರಪಂಚಕ್ಕೆ ಪುಷ್ಟಿಯನ್ನು ಹೆಚ್ಚಿಸುವ, ಮೃತ್ಯುವಿಗೂ ಮೃತ್ಯುವಾದ, ದೇವನಾದ, ಶಿವನನ್ನು ಪೂಜಿಸುವೆನು. ನನ್ನನ್ನು ಮೃತ್ಯುವು ಏನುಮಾಡುವುದು? ಈಗ ನಾನು ಮೃತ್ಯುವಿಗೆ ಮೃತ್ಯುಸ್ವರೂಪನಾಗಿರುವೆನು. ಎಂಬುದೇ ಆ ಮಂತ್ರಾರ್ಥವು.

೬–೭. ಪ್ರಪಂಚಕ್ಕೆ ಭಯವನ್ನುಂಟುಮಾಡುವ ಯಮನು ಆ ಶ್ವೇತಮುನಿಯನ್ನು ನೋಡಿ ನಗುತ್ತಾ ಎಲೈ ಬ್ರಾಹ್ಮಣಶ್ರೇಷ್ಠನಾದ ಶ್ವೇತನೇ, ಬಾ! ಬಾ! ಈ ನಿನ್ನ ತ್ರಿಯಂಬಕ ಮಂತ್ರ ಜಪರೂಪವಾದ ವಿಧಿಯಿಂದೇನು ಪ್ರಯೋಜನ? ಮೃತ್ಯುಗ್ರಸ್ತನಾದವನನ್ನು ಕಾಪಾಡಲು ರುದ್ರ, ವಿಷ್ಣು, ಬ್ರಹ್ಮರುಗಳಲ್ಲಿ ಯಾರೂ ಶಕ್ತರಲ್ಲ.

ಕಃ ಸಮರ್ಥಃ ಪರಿತ್ರಾತುಂ ಮಯಾ ಗ್ರಸ್ತಂ ದ್ವಿಜೋತ್ತಮ ।
ಅನೇನ ಮಮ ಕಿಂ ವಿಪ್ರ ರೌದ್ರೇಣ ವಿಧಿನಾ ಪ್ರಭೋಃ ॥ ೮ ॥
ನೇತುಂ ಯಸ್ಯೋತ್ಥಿತಶ್ಚಾಹಂ ಯಮಲೋಕಂ ಕ್ಷಣೇನ ವೈ ।
ಯಸ್ಮಾದ್ಗತಾಯುಸ್ತ್ವಂ ತಸ್ಮಾನ್ಮನೇ ನೇತು ಮಿಹೋದ್ಯತಃ ॥ ೯ ॥
ತಸ್ಯ ತದ್ವಚನಂ ಶ್ರುತ್ವಾ ಭೈರವಂ ಧರ್ಮಮಿಶ್ರಿತಂ ।
ಹಾರುದ್ರ ರುದ್ರ ರುದ್ರೇತಿ ಲಲಾಪ ಮುನಿಪುಂಗವಃ ॥೧೦॥
ತಂ ಪ್ರಾಹ ಚ ಮಹಾದೇವಂ ಕಾಲಂ ಸಂಪ್ರೇಕ್ಷ್ಯ ವೈ ದೃಶಾ ।
ನೇತ್ರೇಣ ಬಾಷ್ಪಮಿಶ್ರೇಣ ಸಂಭ್ರಾಂತೇನ ಸಮಾಕುಲಃ ॥೧೧॥

॥ ಶ್ವೇತಉವಾಚ ॥

ತ್ವಯಾ ಕಿಂ ಕಾಲ ನೋ ನಾಥ ಶ್ಚಾಸ್ತಿ ಚೇದ್ಧಿ ವೃಷಧ್ವಜಃ ।
ಲಿಂಗೇಽಸ್ಮಿನ್ ಶಂಕರೋ ರುದ್ರಃ ಸರ್ವದೇವ ಭವೋದ್ಭವಃ ॥೧೨॥
ಅತೀವ ಭವಭಕ್ತಾನಾಂ ಮದ್ವಿಧಾನಾಂ ಮಹಾತ್ಮನಾಂ ।
ವಿಧಿನಾ ಕಿಂ ಮಹಾಬಾಹೋ ಗಚ್ಛ ಗಚ್ಛ ಯಥಾಗತಂ ॥೧೩॥

---

೮–೯. ಎಲೈ ಬ್ರಾಹ್ಮಣನೇ, ಸ್ವಾಮಿಯಾದ ರುದ್ರನ ಸಂಬಂಧವಾದ ಪೂಜಾದಿ ವಿಧಿಗಳಿಂದ ನಿನಗೇನು ಪ್ರಯೋಜನ? ನೀನು ಆಯುಸ್ಸು ತೀರಿದವನಾದುದರಿಂದ ಒಂದುಕ್ಷಣದೊಳಗಾಗಿ ನಿನ್ನನ್ನು ಯಮಲೋಕಕ್ಕೆ ತೆಗೆದುಕೊಂಡು ಹೋಗಲು ಸಿದ್ಧನಾಗಿರುವೆನು.

೧೦–೧೧. ಆ ಯಮನು ಹೇಳಿದ ಭಯಂಕರವೂ ಧರ್ಮದಿಂದ ಕೂಡಿದುದೂ ಆದ ಮಾತನ್ನು ಕೇಳಿ ಮುನಿಶ್ರೇಷ್ಠನಾದ ಶ್ವೇತನು, ಹಾ! ರುದ್ರ, ರುದ್ರ, ಎಂದು ಅಳುತ್ತ ಯಮನನ್ನು ಭಯ ಭ್ರಾಂತವಾದ ಕಣ್ಣಿನಿಂದ ನೋಡುತ್ತಾ, ಆ ಮಹಾದೇವನನ್ನು ಕುರಿತು ಹೇಳಿದನು.

೧೨–೧೩. ಶ್ವೇತನು ಹೇಳಿದನು: ಎಲೈ ಯಮನೆ, ನನಗೆ ವೃಷಭಧ್ವಜನಾದ ಮಹಾದೇವನು ಒಡೆಯನಾಗಿರುವಾಗ ನಿನ್ನಿಂದ ಏನು ಪ್ರಯೋಜನ? ಈ ಲಿಂಗದಲ್ಲಿ ಸಮಸ್ತ ದೇವತೆಗಳ ಉತ್ಪತ್ತಿಗೂ ಕಾರಣನಾದ ಶಿವನು ಅತ್ಯಂತ ಭಕ್ತರಾದ ನನ್ನಂತಹವರ ರಕ್ಷಣೆಗಾಗಿ ಇರುತ್ತಿರುವಲ್ಲಿ ನಿನ್ನ ನಿಯಮದಿಂದೇನಾಗುವುದು? ನೀನು ಬಂದ ಹಾಗೆ ಹೋಗು, ಹೋಗು.

ತತೋ ನಿಶಮ್ಯ ಕುಪಿತ ಸ್ತೀಕ್ಷ್ಣದಂಷ್ಟ್ರೋ ಭಯಂಕರಃ ।
ಶ್ರುತ್ವಾ ಶ್ವೇತಸ್ಯ ತದ್ವಾಕ್ಯಂ ಪಾಶಹಸ್ತೋ ಭಯಾವಹಃ ॥೧೪॥
ಸಿಂಹನಾದಂ ಮಹತ್ಕೃತ್ವಾ ಚಾಸ್ಫಾಟ್ಯ ಚ ಮುಹುರ್ಮುಹುಃ ।
ಬಬಂಧ ಚ ಮುನಿಂ ಕಾಲಃ ಕಾಲಪ್ರಾಪ್ತಂ ತಮಾಹ ಚ ॥೧೫॥
ಮಯಾ ಬದ್ಧೋಽಸಿ ವಿಪ್ರರ್ಷೇ ಶ್ವೇತಂ ನೇತುಂ ಯಮಾಲಯಂ ।
ಅದ್ಯ ವೈ ದೇವದೇವೇನ ತವರುದ್ರೇಣ ಕಿಂ ಕೃತಂ ॥೧೬॥
ಕ್ವ ಶರ್ವ ಸ್ತವ ಭಕ್ತಿ ಶ್ಚ ಕ್ವ ಪೂಜಾ ಪೂಜಯಾ ಫಲಂ ।
ಕ್ವ ಚಾಹಂ ಕ್ವ ಚ ಮೇ ಭೀತಿಃ ಶ್ವೇತ ಬದ್ಧೋಽಸಿ ವೈ ಮಯಾ ॥
ಲಿಂಗೇಽಸ್ಮಿನ್ ಸಂಸ್ಥಿತಃ ಶ್ವೇತ ತವ ರುದ್ರೋ ಮಹೇಶ್ವರಃ ।
ನಿಶ್ಚೇಷ್ಟೋ ಸೌ ಮಹಾದೇವಃ ಕಥಂ ಪೂಜ್ಯೋ ಮಹೇಶ್ವರಃ ॥

---

೧೪-೧೫. ಹೀಗೆಂದು ಹೇಳಿದ ಶ್ವೇತ ಮುನಿಯ ಮಾತನ್ನು ಕೇಳಿ ಭಯಂಕರವಾದ ಹರಿತವಾದ ಕೋರೆ ಹಲ್ಲುಗಳುಳ್ಳ, ಪಾಶಾಯುಧವನ್ನು ಕೈಯಲ್ಲಿ ಹಿಡಿದ, ಯಮಧರ್ಮರಾಜನು ಕೋಪವನ್ನು ಹೊಂದಿ, ಸಿಂಹ ನಾದವನ್ನು ಮಾಡಿ, ಮತ್ತೆಮತ್ತೆ ಭುಜವನ್ನು ತಟ್ಟಿಕೊಳ್ಳುತ್ತಾ, ಆಯುಸ್ಸು ತೀರಿದ ಆ ಶ್ವೇತ ಮುನಿಯನ್ನು ತನ್ನ ಹಗ್ಗದಿಂದ ಕಟ್ಟಿ ಅವನನ್ನು ಕುರಿತು ಹೇಳಿದನು.

೧೬-೧೭. ಎಲೈ ಬ್ರಹ್ಮರ್ಷಿಯೇ, ಶ್ವೇತನೆಂಬೀಜೀವನಾದ ನಿನ್ನನ್ನು ಯಮನ ಮನೆಗೆ ತೆಗೆದುಕೊಂಡು ಹೋಗಬೇಕೆಂದು ನಾನು ಬಿಡದೆ ಕಟ್ಟಿಹಾಕಿರುವೆನು. ಈಗ ದೇವ ದೇವನಾದ ನಿನ್ನ ರುದ್ರನು ಏನನ್ನು ಮಾಡಿದನು? ನಿನ್ನ ಶಿವನೆಲ್ಲಿ? ನಿನ್ನ ಭಕ್ತಿ ಎಲ್ಲಿ? ನಿನ್ನ ಪೂಜೆ ಎಲ್ಲಿ? ಆ ಪೂಜೆಯಿಂದ ಪ್ರಯೋಜನವೆಲ್ಲಿ? ಎಲೈ ಶ್ವೇತನೇ, ನಾನು ನಿನ್ನನ್ನು ಕಟ್ಟಿ ಹಾಕಿರುವೆನು!

೧೮. ಎಲೈ ಶ್ವೇತನೇ, ನಿನ್ನ ಮಹೇಶ್ವರನಾದ ರುದ್ರನು ಈ ಲಿಂಗ ದಲ್ಲಿ ಚಲಿಸದೇ ಇರುವನು. ದೊಡ್ಡ ದೇವನಾದ ಅವನು ಮಹೇಶ್ವರನೆಂಬ ಹೆಸರಿನಿಂದ ಹೇಗೆ ಪೂಜಾಯೋಗ್ಯನಾಗುವನು? ಎಂದನು.

ತತಃ ಸದಾಶಿವಃ ಸ್ವಯಂ । ದ್ವಿಜಂ ನಿಹಂತುಮಾಗತಂ ।
ನಿಹಂತು ಮಂತಕಂ ಸ್ಮಯನ್ ಸ್ಮರಾರಿಯಜ್ಞ ಹಾ ಹರಃ ॥೧೯॥
ತ್ವರನ್ವಿನಿರ್ಗತಃ ಪರಃ । ಶಿವಃಸ್ವಯಂ ತ್ರಿಲೋಚನಃ ।
ತ್ರಿಯಂಬಕೋಽಂಬಯಾಸಮಂ । ಸನಂದಿನಾ ಗಣೇಶ್ವರೈಃ ॥೨೦॥
ಸಸರ್ಜ ಜೀವಿತಂ ಕ್ಷಣಾ । ದ್ಭವಂ ನಿರೀಕ್ಷ್ಯ ವೈ ಭಯಾತ್ ।
ಪಪಾತ ಚಾಶುವೈ ಬಲೀ । ಮುನೇಸ್ತು ಸನ್ನಿಧೌ ದ್ವಿಜಾಃ ॥೨೧॥
ನನಾದಚೋರ್ಧ್ವ ಮುಚ್ಚಧೀ । ನಿರೀಕ್ಷ್ಯ ಚಾಂತಕಾಂತಕಂ ।
ನಿರೀಕ್ಷಣೇನ ವೈ ಮೃತಂ । ಭವಸ್ಯ ವಿಪ್ರಪುಂಗವಾಃ ॥೨೨॥
ವಿನೇದುರುಚ್ಚಮೀಶ್ವರಾಃ ಸುರೇಶ್ವರಾ ಮಹೇಶ್ವರಂ ।
ಪ್ರಣೇಮುರಂಬಿಕಾ ಮುಮಾಂ ಮುನೀಶ್ವರಾಸ್ತು ಹರ್ಷಿತಾಃ ॥೨೩॥

---

೧೯–೨೦. ಆಮೇಲೆ ಬ್ರಾಹ್ಮಣನನ್ನು ಕೊಲ್ಲಲು ಬಂದ ಯಮನನ್ನು ಪರಿಹರಿಸುವುದಕ್ಕಾಗಿ ಕಾಮಾರಿಯೂ, ದಕ್ಷಯಜ್ಞನಾಶಕನೂ, ಪಾಪ ಪರಿಹಾರಕನೂ, ಆದ ಸದಾಶಿವನು ನಗುತ್ತ ತಾನಾಗಿಯೇ ಪಾರ್ವತೀ, ನಂದಿ ಗಣೇಶ್ವರ ಸಹಿತನಾಗಿ ಆತುರದಿಂದ ಆ ಲಿಂಗದಿಂದ ವ್ಯಕ್ತವಾದನು !

೨೧–೨೨. ಶಿವನನ್ನು ನೋಡಿ ಬಲಶಾಲಿಯಾದ ಯಮನು ಭಯದಿಂದ ಶ್ವೇತ ಮುನಿಯ ಜೀವವನ್ನು ಆ ಕ್ಷಣದಲ್ಲಿಯೇ ಬಿಟ್ಟು ಬಿಟ್ಟನು. ಆ ಶ್ವೇತಮುನಿಯ ಇದುರಿಗೆ ಅ ಬಲಯುತನಾದ ಯಮನು ಕಣ್ಣೀರು ಸುರಿಸುತ್ತಾ ಬಿದ್ದುಬಿಟ್ಟನು. ಉತ್ತಮವಾದ ಬುದ್ಧಿಯುಳ್ಳ ಶ್ವೇತ ಮುನಿಯು ಯಮನಿಗೂ ಯಮನಂತಿರುವ ಆ ಶಿವನನ್ನು ನೋಡಿದುದರಿಂದಲೇ ಮರಣವನ್ನು ಹೊಂದಿದ ಯಮನನ್ನು ಕಂಡು ಸಂತೋಷದಿಂದ ಘಟ್ಟಿಯಾಗಿ ಧ್ವನಿಮಾಡಿದನು.

೨೩–೨೪. ಇದನ್ನು ಕಂಡು ದೇವೇಂದ್ರನೂ ದೇವತೆಗಳೂ ಗಟ್ಟಿಯಾಗಿ ಧ್ವನಿ ಮಾಡಿದರು. ಮತ್ತು ಪಾರ್ವತೀ ಸಹಿತನಾದ ಪರಮೇಶ್ವರನನ್ನು ನಮಸ್ಕರಿಸಿದರು. ಋಷಿಗಳೆಲ್ಲರೂ ಸಂತೋಷಪಟ್ಟರು.

ಸಸರ್ಜುರಸ್ಯ ಮೂರ್ಧ್ನಿ ವೈ ಮುನೇರ್ಭವಸ್ಯ ಖೇಚರಾಃ ।
ಸುಶೋಭನಂ ಸುಶೀತಲಂ ಸುಪುಷ್ಪವರ್ಷಮಂಬರಾತ್ ॥೨೪॥

ಅಹೋ ನಿರೀಕ್ಷ್ಯ ಚಾಂತಕಂ ಮೃತಂ ತದಾ ಸುವಿಸ್ಮಿತಃ ।
ಶಿಲಾಶನಾತ್ಮಜೋಽವ್ಯಯಂ ಶಿವಂಪ್ರಣಮ್ಯ ಶಂಕರಂ ॥೨೫॥

ಉವಾಚ ಬಾಲಧೀರ್ಮೃತಃ ಪ್ರಸೀದ ಚೇತಿ ವೈ ಮುನೇಃ ।
ಮಹೇಶ್ವರಂ ಮಹೇಶ್ವರಸ್ಯ ಚಾನುಗೋ ಗಣೇಶ್ವರಃ ॥೨೬॥

ತತೋ ವಿವೇಶ ಭಗವಾ ನನುಗೃಹ್ಯ ದ್ವಿಜೋತ್ತಮಂ ।
ಕ್ಷಣಾದ್ಗೂಢ ಶರೀರಂ ಹಿ ಧ್ವಸ್ತಂ ದೃಷ್ಟ್ವಾಽಂತಕಂ ಕ್ಷಣಾತ್ ॥೨೭॥

ತಸ್ಮಾನ್ಮೃತ್ಯುಂಜಯಂ ಚೈವ ಭಕ್ತ್ಯಾ ಸಂಪೂಜಯೇ ದ್ವಿಜಾಃ ।
ಮುಕ್ತಿದಂ ಭುಕ್ತಿದಂ ಚೈವ ಸರ್ವೇಷಾಮಪಿ ಶಂಕರಂ ॥೨೮॥

---

ಈ ಶಿವನ ಮೇಲೂ, ಆ ಶ್ವೇತಮುನಿಯ ಮೇಲೂ ಖೇಚರರು ಆಕಾಶದಿಂದ ತಣ್ಣಗಿರುವ ಉತ್ತಮವಾದ ಹೂ ಮಳೆಯನ್ನು ಕರೆದರು.

೨೫–೨೬. ಮರಣಹೊಂದಿದ ಯಮನನ್ನು ನೋಡಿ ಶಿಲಾದ ಮುನಿಯ ಪುತ್ರನಾದ ನಂದಿಯು ಆಶ್ಚರ್ಯಪಡುತ್ತ ಸುಖವನ್ನುಂಟು ಮಾಡುವ ಶಿವನಿಗೆ ನಮಸ್ಕಾರವನ್ನು ಮಾಡಿ, ಬಾಲಬುದ್ಧಿಯಿಂದ ಕೂಡಿದ ಯಮನು ಮರಣ ಹೊಂದಿದನು. ಅವನಿಗೂ, ಈ ಶ್ವೇತ ಮುನಿಗೂ ನೀನು ಪ್ರಸನ್ನನಾಗಿ ವರವನ್ನು ಕೊಡಬೇಕು೦ ಎಂದು ನಂದಿಯೂ, ಗಣಪತಿಯೂ ಶಿವನಿಗೆ ಹೇಳಿದರು.

೨೭. ಆಮೇಲೆ ಆ ಮಹಾ ಮಹಿಮನಾದ ಶಿವನು ಶ್ವೇತ ಮುನಿಗೆ ಅನುಗ್ರಹವನ್ನು ಮಾಡಿ ಮೃತನಾದ ಯಮನನ್ನು ನೋಡಿ ಕರುಣಿಸಿ, ಆ ಕ್ಷಣದಲ್ಲಿಯೇ ತನ್ನ ಗೋಪ್ಯವಾದ ಶರೀರವನ್ನು ಪ್ರವೇಶಿಸಿದನು.

೨೮. ಆದುದರಿಂದ ಸಕಲರಿಗೂ ಭುಕ್ತಿ ಮುಕ್ತಿಗಳನ್ನೂ ಸುಖವನ್ನೂ ಕೊಡುವ ಮೃತ್ಯುಂಜಯನನ್ನೇ ಭಕ್ತಿಯಿಂದ ಪೂಜಿಸಬೇಕು.

ಬಹುನಾ ಕಿಂ ಪ್ರಲಾಪೇನ ಸಂನ್ಯಸ್ಯಾಭ್ಯರ್ಚ್ಯ ವೈ ಭವಂ ।
ಭಕ್ತ್ಯಾ ಚಾಪರಯಾ ತಸ್ಮಿನ್ ವಿಶೋಕಾ ವೈ ಭವಿಷ್ಯಥ ॥೨೯॥

॥ ಶೈಲಾದಿರುವಾಚ ॥

ಏವಮುಕ್ತಾಸ್ತದಾ ತೇನ ಬ್ರಹ್ಮಣಾ ಬ್ರಹ್ಮವಾದಿನಃ ।
ಪ್ರಸೀದ ಭಕ್ತಿರ್ದೇವೇಶೇ ಭವೇದ್ರುದ್ರೇ ಪಿನಾಕಿನಿ ॥೩೦॥

ಕೇನ ವಾ ತಪಸಾ ದೇವ ಯಜ್ಞೇನಾಪ್ಯಥ ಕೇನ ವಾ ।
ವ್ರತೈರ್ವಾ ಭಗವದ್ಭಕ್ತಾ ಭವಿಷ್ಯಂತಿ ದ್ವಿಜಾತಯಃ ॥೩೧॥

॥ ಪಿತಾಮಹಉವಾಚ ॥

ನ ದಾನೇನ ಮುನಿಶ್ರೇಷ್ಠಾಃ ತಪಸಾ ಚ ನ ವಿದ್ಯಯಾ ।
ಯಜ್ಞೈರ್ಹೋಮೈರ್ವ್ರತೈರ್ವೇದೈರ್ಯೋಗಶಾಸ್ತ್ರೈರ್ನಿರೋಧನೈಃ

---

೨೯. ಹೆಚ್ಚು ಮಾತಿನಿಂದೇನು? ಸನ್ಯಾಸಗ್ರಹಣಮಾಡಿ ಶಿವನನ್ನು ಪೂಜಿಸಿ ಆ ಶಿವನಲ್ಲಿ ಅನನ್ಯಭಾವದಿಂದ ಕೂಡಿದ ಭಕ್ತಿಯಿಂದ ದುಃಖ ವಿಲ್ಲದವರಾಗಿರಿ.

೩೦-೩೧. ನಂದಿಯು ಹೇಳಿದನು: ಬ್ರಹ್ಮನು ಹೀಗೆ ಹೇಳುತ್ತಲೂ ಆ ದೇವದಾರುವನದ ಋಷಿಗಳೆಲ್ಲರೂ, ಓ ಬ್ರಹ್ಮನೇ, ನಮ್ಮ ಮೇಲೆ ಪ್ರಸನ್ನನಾಗಿ ಆ ದೇವ ದೇವನೂ, ಪಿನಾಕಪಾಣಿಯೂ ಆದ ರುದ್ರನಲ್ಲಿ ಭಕ್ತಿಯು ಯಾವ ತಪಸ್ಸು, ಯಜ್ಞ, ವ್ರತ, ಇವುಗಳಿಂದ ಉಂಟಾಗು ವುದು? ದ್ವಿಜರು ಹೇಗೆ ಭಗವದ್ಭಕ್ತರಾಗುವರು? ಹೇಳು. ಎಂದು ಪ್ರಶ್ನೆ ಮಾಡಿದರು.

೩೨. ಬ್ರಹ್ಮನು ಹೇಳಿದನು: ಎಲೈ ಋಷಿ ಶ್ರೇಷ್ಠರೇ? ದಾನ, ತಪಸ್ಸು, ವಿದ್ಯೆ, ಯಜ್ಞ, ಹೋಮ, ವ್ರತ, ವೇದ, ಯೋಗಾಭ್ಯಾಸ, ಇವುಗಳಿಂದಲೇ ಪರಮಕಾರಣನಾದ ಶಿವನಲ್ಲಿ ಭಕ್ತಿಯುಂಟಾಗುವುದಿಲ್ಲ. ಆ ಶಿವನ ಅನುಗ್ರಹ ಒಂದರಿಂದಲೇ ಭಕ್ತಿಯುಂಟಾಗುವುದು.

ಪ್ರಸಾದೇ ನೈವ ಸಾ ಭಕ್ತಿಃ ಶಿವೇ ಪರಮಕಾರಣೇ ।
ಅಥ ತಸ್ಯ ವಚಃ ಶ್ರುತ್ವಾ ಸರ್ವೇ ತೇ ಪರಮರ್ಷಯಃ ॥೩೩॥
ಸದಾರತನಯಾಃ ಶ್ರಾಂತಾಃ ಪ್ರಣೇಮು ಶ್ಚ ಪಿತಾಮಹಂ ।
ತಸ್ಮಾತ್ಪಾಶುಪತೀ ಭಕ್ತಿ ರ್ಧರ್ಮ ಕಾಮಾರ್ಥ ಸಿದ್ಧಿದಾ ॥೩೪॥
ಮುನೇರ್ವಿಜಯದಾಚೈವ ಸರ್ವಮೃತ್ಯು ಜಯಪ್ರದಾ ।
ದಧೀಚಸ್ತು ಪುರಾ ಭಕ್ತ್ಯಾ ಹರಿಂ ಜಿತ್ವಾ ಮರೈರ್ವಿಭುಂ ॥೩೫॥
ಕ್ಷುಯಂ (ಕ್ಷುಪಂ) ಜಘಾನ ಪಾದೇನ ವಜ್ರಾಸ್ಥಿತ್ವಂ ಚ ಲಬ್ಧವಾನ್ ।
ಮಯಾಽಪಿ ನಿರ್ಜಿತೋ ಮೃತ್ಯು ರ್ಮಹಾದೇವಸ್ಯ ಕೀರ್ತನಾತ್ ॥
ಶ್ವೇತೇನಾಪಿ ಗತೇನಾಸ್ಯಂ ಮೃತ್ಯೋ ರ್ಮುನಿವರೇಣ ತು ।
ಮಹಾದೇವ ಪ್ರಸಾದೇನ ಜಿತೋ ಮೃತ್ಯುರ್ಯಥಾ ಮಯಾ ॥೩೬॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಶ್ವೇತೋಪಾಖ್ಯಾನಂ ನಾಮ ತ್ರಿಂಶೋಽಧ್ಯಾಯಃ

---

೩೩. ಆ ಬಳಿಕ ಬ್ರಹ್ಮನ ಮಾತನ್ನು ಕೇಳಿದ ಆ ಸಮಸ್ತ ಋಷಿಗಳೂ ಪತ್ನೀಪುತ್ರರೊಡನೆ ಆಯಾಸವನ್ನು ಹೊಂದಿದವರಾಗಿ ಬ್ರಹ್ಮನಿಗೆ ನಮಸ್ಕರಿಸಿದರು.

೩೪. ಆದುದರಿಂದ ಪಶುಪತಿಯಾದ ಶಿವನಲ್ಲಿ ಭಕ್ತಿಯು ಧರ್ಮ ಕಾಮಾರ್ಥಗಳನ್ನು ಕೊಡುತಕ್ಕುದಾಗಿಯೂ, ಜಯವನ್ನು ಕೊಡುತಕ್ಕುದಾಗಿಯೂ, ಸಮಸ್ತ ಮೃತ್ಯುವನ್ನೂ ನಿವಾರಿಸತಕ್ಕುದಾಗಿಯೂ, ಇರುವುದು.

೩೫–೩೬. ಹಿಂದೆ ದಧೀಚನೆಂಬ ಮುನಿಯು ಶಿವನಲ್ಲಿ ಭಕ್ತಿಯಿಂದ ವಿಷ್ಣುವನ್ನು ಜಯಿಸಿ ಕ್ಷುಯ (ಕ್ಷುಪ)ನೆಂಬುವನನ್ನು ಕಾಲಿನಿಂದ ಒದೆದು ಕೊಂದು ವಜ್ರಸ್ವರೂಪವಾದ ಮೂಳೆಗಳನ್ನು ಪಡೆದನು. ನಾನೂ ಕೂಡ ಮಹಾದೇವನ ನಾಮ ಸಂಕೀರ್ತನೆಯಿಂದ ಮೃತ್ಯುವನ್ನು ಜಯಿಸಿದೆನು.

೩೬. ನಾನು ಹೇಗೆ ಮೃತ್ಯುವನ್ನು ಜಯಿಸಿದೆನೋ ಹಾಗೆಯೇ ಮೃತ್ಯುವಿನ ಬಾಯಿಗೆ ಬಿದ್ದ ಶ್ವೇತಮುನಿಶ್ರೇಷ್ಠನೂ ಕೂಡ ಮಹಾದೇವನ ಅನುಗ್ರಹದಿಂದ ಮೃತ್ಯುವನ್ನು ಜಯಿಸಿದನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಶ್ವೇತೋಪಾಖ್ಯಾನವನ್ನು ವಿವರಿಸುವ ಮೂವತ್ತನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ
## ಏಕತ್ರಿಂಶೋಽಧ್ಯಾಯಃ

ಏಕತ್ರಿಂಶೇ ಋಷಿಗಣಾ ಬ್ರಹ್ಮ ಪ್ರೋಕ್ತವಿಧಾನತಃ ।
ತಪಸಾಽಽರಾಧ್ಯ ದೇವೇಶಂ ಭಾವೇನ ದದೃಶುಃ ಶಿವಂ ॥

॥ ಸನತ್ಕುಮಾರ ಉವಾಚ ॥

ಕಥಂ ಭವ ಪ್ರಸಾದೇನ ದೇವದಾರುವನೌಕಸಃ ।
ಪ್ರಪನ್ನಾಃ ಶರಣಂ ದೇವಂ ವಕ್ತುಮರ್ಹಸಿ ಮೇ ಪ್ರಭೋ ॥ ೧ ॥

॥ ಶೈಲಾದಿರುವಾಚ ॥

ತಾನುವಾಚ ಮಹಾಭಾಗಾ ನ್ಭಗವಾ ನಾತ್ಮ ಭೂಃ ಸ್ವಯಂ ।
ದೇವದಾರುವನಸ್ಥಾಂಸ್ತು ತಪಸಾ ಪಾವಕ ಪ್ರಭಾನ್ ॥ ೨ ॥

---

### ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಮೂವತ್ತೊಂದನೆಯ ಅಧ್ಯಾಯವು

(ಈ ಮೂವತ್ತೊಂದನೆಯ ಅಧ್ಯಾಯದಲ್ಲಿ ಋಷಿಗಳು ಬ್ರಹ್ಮನು ಹೇಳಿದ ರೀತಿಯಿಂದ ತಪಸ್ಸುಮಾಡಿ ಶಿವನನ್ನು ಪೂಜಿಸಿ ಭಕ್ತಿಯಿಂದ ಶಿವನ ದರ್ಶನವನ್ನು ಮಾಡಿದುದನ್ನು ವರ್ಣಿಸಲಾಗಿದೆ.)

೧. ಸನತ್ಕುಮಾರನು ಹೇಳಿದನು: ಓ ನಂದೀಶ್ವರನೇ, ದೇವದಾರು ವನದಲ್ಲಿದ್ದ ಮುನಿಗಳು ಹೇಗೆ ಶಿವನ ಅನುಗ್ರಹದಿಂದ ಅವನಿಗೆ ಶರಣಾಗತರಾದರು? ಎಂಬುದನ್ನು ನನಗೆ ಹೇಳಬೇಕು.

೨. ನಂದಿಯು ಹೇಳಿದನು: ದೇವದಾರು ವನದಲ್ಲಿ ತಪಸ್ಸಿನಿಂದ ಅಗ್ನಿಯಂತೆ ಪ್ರಕಾಶಿಸುತ್ತಿರುವ ಆ ಋಷಿಗಳನ್ನು ಕುರಿತು ತಾನೇ ವ್ಯಕ್ತನಾದ ಬ್ರಹ್ಮನು ಹೇಳಿದನು.

॥ ಪಿತಾಮಹ ಉವಾಚ ॥

ಏಷ ದೇವೋ ಮಹಾದೇವೋ ವಿಜ್ಞೇಯಸ್ತು ಮಹೇಶ್ವರಃ ।
ನ ತಸ್ಮಾತ್ಪರಮಂ ಕಿಂಚಿತ್ಪದಂ ಸಮಧಿಗಮ್ಯತೇ ॥ ೩ ॥

ದೇವಾನಾಂ ಚ ಋಷೀಣಾಂ ಚ ಪಿತೄಣಾಂ ಚೈವ ಸ ಪ್ರಭುಃ ।
ಸಹಸ್ರ ಯುಗಪರ್ಯಂತೇ ಪ್ರಲಯೇ ಸರ್ವದೇಹಿನಃ ॥ ೪ ॥

ಸಂಹರತ್ಯೇಷ ಭಗವಾನ್ ಕಾಲೋ ಭೂತ್ವಾ ಮಹೇಶ್ವರಃ ।
ಏಷ ಚೈವ ಪ್ರಜಾಃ ಸರ್ವಾಃ ಸೃಜತ್ಯೇಕಃ ಸ್ವತೇಜಸಾ ॥ ೫ ॥

ಏಷ ಚಕ್ರೀ ಚ ವಜ್ರೀಚ ಶ್ರೀವತ್ಸ ಕೃತ ಲಕ್ಷಣಃ ।
ಯೋಗೀ ಕೃತಯುಗೇ ಚೈವ ತ್ರೇತಾಯಾಂ ಕ್ರತುರುಚ್ಯತೇ ॥ ೬ ॥

ದ್ವಾಪರೇ ಚೈವ ಕಾಲಾಗ್ನಿ ರ್ಧರ್ಮಕೇತುಃ ಕಲೌ ಸ್ಮೃತಃ ।
ರುದ್ರಸ್ಯ ಮೂರ್ತಯಸ್ತ್ವೇತಾ ಯೇಽಭಿಧ್ಯಾಯಂತಿ ಪಂಡಿತಾಃ ॥

---

೩–೫. ಈ ಮಹಾಮಹಿಮನಾದ ದೇವನನ್ನೇ ಮಹೇಶ್ವರನೆಂದು ತಿಳಿಯಿರಿ. ಇವನಿಗಿಂತಲೂ ಉತ್ತಮವಾದ ದೇವನು ಯಾರೂ ಇರುವುದಿಲ್ಲ. ದೇವತೆಗಳಿಗೂ, ಋಷಿಗಳಿಗೂ, ಪಿತೃಗಳಿಗೂ, ಅವನೇ ಒಡೆಯನು. ಬ್ರಹ್ಮನ ರಾತ್ರಿಯಾದ ಸಾವಿರ ಚತುರ್ಯುಗಗಳವರೆಗೆ ಇರುವ ಪ್ರಳಯ ಕಾಲದಲ್ಲಿ ಈ ರುದ್ರನು ಯಮನಾಗಿ ಸಕಲ ಜೀವಗಳನ್ನೂ ಸಂಹರಿಸುವನು. ಇವನೊಬ್ಬನೇ ತನ್ನ ಮಹಿಮೆಯಿಂದ ಸಕಲ ಪ್ರಜೆಗಳನ್ನೂ ಸೃಷ್ಟಿಮಾಡುವನು.

೬. ಇವನೇ ಚಕ್ರಾಯುಧವುಳ್ಳ ವಿಷ್ಣುವು, ವಜ್ರಾಯುಧವುಳ್ಳ ದೇವೇಂದ್ರನು, ಶ್ರೀವತ್ಸನೆಂಬ ಗುರುತುಳ್ಳ ನಾರಾಯಣನು. ಇವನು ಕೃತಯುಗದಲ್ಲಿ ಯೋಗಿಯಸ್ವರೂಪ ಉಳ್ಳವನಾಗಿಯೂ, ತ್ರೇತಾಯುಗದಲ್ಲಿ ಯಜ್ಞಸ್ವರೂಪನಾಗಿಯೂ, ದ್ವಾಪರಯುಗದಲ್ಲಿ ಕಾಲಾಗ್ನಿಸ್ವರೂಪನಾಗಿಯೂ, ಕಲಿಯುಗದಲ್ಲಿ ಧರ್ಮಧ್ವಜನಾಗಿಯೂ, ಇರುವನು.

೭. ಈ ಮೇಲೆ ಹೇಳಿದುವುಗಳೆಲ್ಲವೂ ರುದ್ರನ ಮೂರ್ತಿಗಳು. ಇವುಗಳನ್ನೇ ವಿದ್ವಾಂಸರು ಧ್ಯಾನಮಾಡುವರು.

ಚತುರಸ್ರಂ ಬಹಿಶ್ಚಾಂತ ರಷ್ಟಾಸ್ರಂಪಿಂಡಿಕಾಶ್ರಯೇ ।
ವೃತ್ತಂ ಸುದರ್ಶನಂ ಯೋಗ್ಯ ಮೇವಂ ಲಿಂಗಂ ಪ್ರಪೂಜಯೇತ್ ॥
ತಮೋಽಹ್ಯಗ್ನೀ ರಜೋ ಬ್ರಹ್ಮಾ ಸತ್ವಂ ವಿಷ್ಣುಃ ಪ್ರಕಾಶಕಂ ।
ಮೂರ್ತಿರೇಕಾ ಸ್ಥಿತಾ ಚಾಸ್ಯ ಮೂರ್ತಯಃ ಪರಿಕೀರ್ತಿತಾಃ ॥ ೯ ॥
ಯತ್ರ ತಿಷ್ಠತಿ ತದ್ಬ್ರಹ್ಮ ಯೋಗೇನ ತು ಸಮನ್ವಿತಂ ।
ತಸ್ಮಾದ್ಧಿದೇವ ದೇವೇಶ ಮೀಶಾನಂ ಪ್ರಭುಮವ್ಯಯಂ ॥೧೦॥
ಆರಾಧಯಂತಿ ವಿಪ್ರೇಂದ್ರಾ ಜಿತಕ್ರೋಧಾ ಜಿತೇಂದ್ರಿಯಾಃ ।
ಲಿಂಗಂ ಕೃತ್ವಾ ಯಥಾನ್ಯಾಯಂ ಸರ್ವಲಕ್ಷಣ ಸಂಯುತಂ ॥೧೧॥
ಅಂಗುಷ್ಠಮಾತ್ರಂ ಸುಶುಭಂ ಸುವೃತ್ತಂ ಸರ್ವ ಸಂಮತಂ ।
ಸಮನಾಭಂ ತಥಾಷ್ಟಾಸ್ರಂ ಷೋಡಶಾಸ್ರಮಥಾಪಿವಾ ॥೧೨॥

---

೮. ಹೊರಗೂ, ಒಳಗೂ, ಚಚ್ಚೌಕ ಅಥವಾ ಎಂಟು ಮೂಲೆಗಳು, ಗುಂಡು, ಚಕ್ರಾಕಾರಗಳಲ್ಲಿ ಒಂದು ಆಕಾರದಿಂದ ಕೂಡಿ ಇರುವ ಲಿಂಗವು, ಪೂಜಾಯೋಗ್ಯವಾದುದು. ಇಂತಹ ಲಿಂಗಗಳನ್ನೇ ಪೂಜಿಸಬೇಕು.

೯. ತಮೋಗುಣವೇ ಅಗ್ನಿಯು. ರಜೋಗುಣವೇ ಬ್ರಹ್ಮನು. ಪ್ರಕಾಶವಾದ ಸತ್ವಗುಣವೇ ವಿಷ್ಣುವು. ಈ ಮೂರು ಮೂರ್ತಿಗಳೂ ಶಿವನ ಒಂದೇ ತತ್ವದ ರೂಪವಾಗಿರುವುವು.

೧೦–೧೧. ಸಮಾಧಿಯಿಂದ ಕೂಡಿದ ಜೀವನಲ್ಲಿ ಧ್ಯಾನರೂಪದಲ್ಲಿ ನೆಲಸಿರುವ ಲಿಂಗವೇ ಬ್ರಹ್ಮಸ್ವರೂಪವಾದುದು. ಆದುದರಿಂದ ನಾಶ ರಹಿತನಾದ ಸ್ವಾಮಿಯಾದ ಬ್ರಹ್ಮಸ್ವರೂಪನಾದ ಶಿವನನ್ನು ಕ್ರೋಧ ವಿಲ್ಲದ ಜಿತೇಂದ್ರಿಯರಾದ ಬ್ರಾಹ್ಮಣರು ಶಾಸ್ತ್ರಾನುಸಾರವಾಗಿ ಸಮಸ್ತ ಲಕ್ಷಣಗಳಿಂದ ಕೂಡಿದ ಲಿಂಗದಲ್ಲಿ ಆವಾಹನೆಮಾಡಿ ಪೂಜಿಸುವರು.

೧೨. ಲಿಂಗವು ಹೆಬ್ಬೆರಳಿನ ಗಾತ್ರಕ್ಕಿಂತ ಕಡಮೆಯಾಗಿರಬಾರದು. ಹೆಬ್ಬೆರಳಿನ ಗಾತ್ರವಾದುದು ಅತ್ಯಂತ ಮಂಗಳಕರವಾದುದು. ಗುಂಡ ಗಿರುವ ಲಿಂಗವು ಸಕಲ ಇಷ್ಟಾರ್ಥಗಳನ್ನೂ ಕೊಡತಕ್ಕುದಾಗಿ ಸರ್ವ ಸಮ್ಮತವಾದುದಾಗಿರುವುದು. ಚಚ್ಚೌಕ, ಎಂಟು ಮುಖ, ಹದಿನಾರು ಮುಖಗಳು ಇದ್ದರೂ ಇರಬಹುದು.

ಸುವೃತ್ತಂ ಮಂಡಲಂ ದಿವ್ಯಂ ಸರ್ವಕಾಮ ಫಲಪ್ರದಂ ।
ವೇದಿಕಾ ದ್ವಿಗುಣಾ ತಸ್ಯ ಸಮಾ ವಾ ಸರ್ವ ಸಂಮತಾ ॥೧೩॥
ಗೋಮುಖೀ ಚ ತ್ರಿಭಾಗೈಕಾ ವೇದ್ಯಾ ಲಕ್ಷಣಸಂಯುತಾ ।
ಪಟ್ಟಿಕಾ ಚ ಸಮಂತಾದ್ವೈಯವ ಮಾತ್ರಾ ದ್ವಿಜೋತ್ತಮಾಃ ॥೧೪॥
ಸೌವರ್ಣಂ ರಾಜತಂ ಶೈಲಂ ಕೃತ್ವಾ ತಾಮ್ರಮಯಂ ತಥಾ ।
ವೇದಿಕಾಯಾಶ್ಚ ವಿಸ್ತಾರಂ ತ್ರಿಗುಣಂ ವೈ ಸಮಂತತಃ ॥೧೫॥
ವರ್ತುಲಂ ಚತುರಸ್ರಂವಾ ಷಡಸ್ರಂ ವಾ ತ್ರಿರಸ್ರಕಂ ।
ಸಮಂತಾನ್ನಿರ್ವ್ರಣಂ ಶುಭ್ರಂ ಲಕ್ಷಣೈಸ್ತತ್ಸುಲಕ್ಷಿತಂ ॥೧೬॥
ಪ್ರತಿಷ್ಠಾಪ್ಯ ಯಥಾನ್ಯಾಯಂ ಪೂಜಾಲಕ್ಷಣ ಸಂಯುತಂ ।
ಕಲಶಂ ಸ್ಥಾಪಯೇತ್ತಸ್ಯ ವೇದಿಮಧ್ಯೇ ತಥಾ ದ್ವಿಜಾಃ ॥೧೭॥

---

೧೩–೧೪. ಲಿಂಗಕ್ಕೆ ವೇದಿಕೆಯು ಅಂದರೆ ಜಗುಲಿಯಂತಿರುವ ಆಧಾರವು ಲಿಂಗದ ಎರಡರಷ್ಟು ವಿಸ್ತಾರವಿರಬೇಕು. ಗೋಮುಖಿಯು ವೇದಿಕೆಯ ಮೂರನೆಯ ಒಂದು ಭಾಗದಷ್ಟಿರಬೇಕು. ವೇದಿಕೆಯ ಸುತ್ತಲೂ ಗೋಧಿಯಕಾಳಿನಷ್ಟು ಗಾತ್ರವಾದ ಪಟ್ಟಿಯು ಸಮಸ್ತಲಕ್ಷಣಗಳಿಂದ ಕೂಡಿದುದಾಗಿರಬೇಕು. ಒಟ್ಟಿನಲ್ಲಿ ಸರ್ವರೂ ಲಿಂಗವು ಸುಂದರವಾಗಿರುವುದೆಂದು ಹೇಳುವಂತಿರಬೇಕು.

೧೫–೧೬. ಚಿನ್ನ, ಬೆಳ್ಳಿ, ಕಲ್ಲು, ತಾಮ್ರ, ಇವುಗಳಿಂದ ಲಿಂಗವನ್ನು ಮಾಡಿ ಸುತ್ತಲೂ ಇರುವ ವೇದಿಕೆಯನ್ನು ಆ ಲಿಂಗದ ಮೂರರಷ್ಟು ವಿಸ್ತಾರವುಳ್ಳದ್ದನ್ನಾಗಿ ಮಾಡಬೇಕು. ವೇದಿಕೆಯನ್ನು ಗುಂಡು, ಅಥವ ಚಚ್ಚೌಕ, ಆರುಮುಖ, ಅಥವಾ ಮೂರು ಮುಖ ಅಥವಾ ಕೋಣಗಳಿರುವಂತೆ ಸುತ್ತಲೂಯಾವ ವಿಕಾರವೂ ಇಲ್ಲದೆ ಪರಿಶುದ್ಧವಾಗಿ ಸಮಸ್ತ ಲಕ್ಷಣಗಳಿಂದ ಕೂಡಿದುದಾಗಿ ಮಾಡಿರಬೇಕು.

೧೭–೧೮. ಎಲೈ ಬ್ರಾಹ್ಮಣರೇ, ಆ ಲಿಂಗದ ವೇದಿಕೆಯ ನಡುವೆ ಪೂಜಾಲಕ್ಷಣಗಳಿಂದ ಕೂಡಿದ ಕಲಶವನ್ನು ಪ್ರತಿಷ್ಠೆಮಾಡಿ, ಆ ಕಲಶದಲ್ಲಿ ಸುವರ್ಣವನ್ನು ಹಾಕಿ ಪಂಚಾಕ್ಷರೀಬೀಜಮಂತ್ರದಿಂದಲೂ, ಪಂಚ

ಸಹಿರಣ್ಯಂ ಸಬೀಜಂ ಚ ಬ್ರಹ್ಮಭಿಶ್ಚಾಭಿಮಂತ್ರಿತಂ ।
ಸೇಚಯೇಚ್ಚ ತತೋ ಲಿಂಗಂ ಪವಿತ್ರೈಃ ಪಂಚಭಿಃ ಶುಭೈಃ ॥೧೮॥

ಪೂಜಯೇಚ್ಚ ಯಥಾಲಾಭಂ ತತಃ ಸಿದ್ಧಿಮವಾಪ್ಸ್ಯಥ ।
ಸಮಾಹಿತಾಃ ಪೂಜಯಧ್ವಂ ಸಪುತ್ರಾಃ ಸಹ ಬಂಧುಭಿಃ ॥೧೯॥

ಸರ್ವೇ ಪ್ರಾಂಜಲಯೋ ಭೂತ್ವಾ ಶೂಲಪಾಣಿಂ ಪ್ರಪದ್ಯತ ।
ತತೋ ದ್ರಕ್ಷ್ಯಥ ದೇವೇಶಂ ದುರ್ದರ್ಶಮಕೃತಾತ್ಮಭಿಃ ॥೨೦॥

ಯಂ ದೃಷ್ಟ್ವಾ ಸರ್ವಮಜ್ಞಾನಮಧರ್ಮಶ್ಚ ಪ್ರಣಶ್ಯತಿ ।
ತತಃ ಪ್ರದಕ್ಷಿಣಂ ಕೃತ್ವಾ ಬ್ರಹ್ಮಾಣ ಮಮಿತೌಜಸಂ ॥೨೧॥

ಸಂಪ್ರಸ್ಥಿತಾ ವನೌಕಾಸ್ತೇ ದೇವದಾರುವನಂ ತತಃ ।
ಆರಾಧಯಿತು ಮಾರಬ್ಧಾ ಬ್ರಹ್ಮಣಾ ಕಥಿತಂ ಯಥಾ ॥೨೨॥

---

ಬ್ರಹ್ಮಮಂತ್ರಗಳಿಂದಲೂ ಅಭಿಮಂತ್ರಿಸಿ ಆ ನೀರಿನಿಂದ ಪರಿಶುದ್ಧವಾದ ಪಂಚಬ್ರಹ್ಮಮಂತ್ರಗಳಿಂದ ಲಿಂಗಕ್ಕೆ ಅಭಿಷೇಕವನ್ನು ಮಾಡಬೇಕು.

೧೯-೨೦. ನಿಮ್ಮ ಶಕ್ತ್ಯನುಸಾರವಾಗಿ ಪೂಜೆಮಾಡಿರಿ. ಆಮೇಲೆ ಸಿದ್ಧಿಯನ್ನು ಪಡೆವಿರಿ. ಮಕ್ಕಳೊಡನೆಯೂ, ನಂಟರೊಡನೆಯೂ, ಕೂಡಿ ಏಕಾಗ್ರಚಿತ್ತದಿಂದ ಪೂಜಿಸಿರಿ. ಎಲ್ಲರೂ ನಮಸ್ಕಾರವನ್ನು ಮಾಡಿ. ಶೂಲವನ್ನು ಕೈಯ್ಯಲ್ಲಿ ಧರಿಸಿದ ಪರಮೇಶ್ವರನನ್ನು ಶರಣು ಹೊಂದಿರಿ. ತರುವಾಯ ಯಾರನ್ನು ನೋಡಿದರೆ ಸಮಸ್ತ ಅಜ್ಞಾನವೂ ಅಧರ್ಮವೂ, ನಾಶವಾಗುವುದೋ ಅಂತಹ, ಪುಣ್ಯಹೀನರಿಗೆ ದರ್ಶನಮಾಡಲಸಾಧ್ಯನಾದ, ದೇವೇಶನಾದ ಶಿವನನ್ನು ನೋಡುವಿರಿ!

೨೧-೨೨. ಆಮೇಲೆ ಆ ಋಷಿಗಳು ಬ್ರಹ್ಮನಿಗೆ ಪ್ರದಕ್ಷಿಣೆ ನಮಸ್ಕಾರಗಳನ್ನು ಮಾಡಿ ದೇವದಾರುವನಕ್ಕೆ ಪ್ರಯಾಣಮಾಡಿದರು. ಅಲ್ಲಿ ಅವರು ಬ್ರಹ್ಮನು ಹೇಳಿದ ಮೇರೆಗೆ ಲಿಂಗಪೂಜೆಯನ್ನು ಮಾಡಲು ಪ್ರಾರಂಭಿಸಿದರು.

ಸ್ಥಂಡಿಲೇಷು ವಿಚಿತ್ರೇಷು ಪರ್ವತಾನಾಂ ಗುಹಾಸು ಚ ।
ನದೀನಾಂ ಚ ವಿವಿಕ್ತೇಷು ಪುಲಿನೇಷು ಶುಭೇಷು ಚ ॥೨೩॥

ಶೈವಾಲ ಶೋಭನಾಃ ಕೇಚಿ ತ್ಕೇಚಿದಂತ ರ್ಜಲೇಶಯಾಃ ।
ಕೇಚಿದ್ದರ್ಭಾವಕಾಶಾಸ್ತು ಪಾದಾಂಗುಷ್ಠಾಗ್ರಧಿಷ್ಠಿತಾಃ ॥೨೪॥

ದಂತೋಲೂಖಲಿನಸ್ತ್ವನ್ಯೇ ಅಶ್ಮಕುಟ್ಟಾಸ್ತಥಾಪರೇ ।
ಸ್ಥಾನವೀರಾಸನಾಸ್ತ್ವನ್ಯೇ ಮೃಗಚರ್ಯಾರತಾಃ ಪರೇ ॥೨೫॥

ಕಾಲಂ ನಯಂತಿ ತಪಸಾ ಪೂಜಯಾ ಚ ಮಹಾಧಿಯಃ ।
ಏವಂ ಸಂವತ್ಸರೇ ಪೂರ್ಣೇ ವಸಂತೇ ಸಮುಪಸ್ಥಿತೇ ॥೨೬॥

ತತಃ ತೇಷಾಂ ಪ್ರಸಾದಾರ್ಥಂ ಭಕ್ತಾನಾಮನುಕಂಪಯಾ ।
ದೇವಃ ಕೃತಯುಗೇ ತಸ್ಮಿನ್ ಗಿರೌ ಹಿಮವತಃ ಶುಭೇ ॥೨೭॥

ದೇವದಾರು ವನಂ ಪ್ರಾಪ್ತಃ ಪ್ರಸನ್ನಃ ಪರಮೇಶ್ವರಃ ।
ಭಸ್ಮಪಾಂಸೂಪದಿ ಗ್ಧಾಂಗೋ ನಗ್ನೋ ವಿಕೃತಲಕ್ಷಣಃ ॥೨೮॥

---

೨೩–೨೫. ವಿಚಿತ್ರವಾದ ನೆಲದಲ್ಲಿಯೂ, ಪರ್ವತ ಗುಹೆಗಳಲ್ಲಿಯೂ, ನಿರ್ಜನವಾದ ಮತ್ತು ಪರಿಶುದ್ಧವಾದ ನದಿ, ಮರಗಳು, ಗುಡ್ಡೆಗಳು ಇವುಗಳ ಮೇಲೂ, ಕೆಲವರು ಪಾಚಿಯಮೇಲೆ ಕುಳಿತುಕೊಂಡೂ. ಕೆಲವರು ನೀರಿನೊಳಗೆ ಮಲಗಿಕೊಂಡೂ. ಕೆಲವರು ದರ್ಭೆಯ ಆಸನದ ಮೇಲೆ ಕುಳಿತೂ, ಕೆಲವರು ಕಾಲಿನ ಹೆಬ್ಬೆರಳಿನ ತುದಿಯಲ್ಲಿ ನಿಂತುಕೊಂಡೂ, ಕೆಲವರು ವೀರಾಸನದಲ್ಲಿ ಕುಳಿತೂ, ಮೃಗವೃತ್ತಿಯಿಂದ ಜೀವನ ಮಾಡುತ್ತಾ ತಪಸ್ಸುಮಾಡಿ ಕಾಲವನ್ನು ಕಳೆಯುತ್ತಾ ಶಿವನ ಪೂಜೆಯನ್ನು ಮಾಡುತ್ತಿದ್ದರು.

೨೬–೨೭. ಹೀಗೆ ಒಂದು ವರ್ಷವು ತುಂಬುತ್ತಲು ವಸಂತ ಋತುವಿನಲ್ಲಿ ಪರಮೇಶ್ವರನು ಭಕ್ತರಲ್ಲಿ ದಯೆಯಿಂದ ಅವರಿಗೆ ಅನುಗ್ರಹಮಾಡಬೇಕೆಂದು, ಆ ಹಿಮವತ್ಪರ್ವತದ ದೇವದಾರು ವನಕ್ಕೆ ಬಂದನು.

೨೮–೩೦. ಆ ಶಿವನು ಬೂದಿಯ ಧೂಳಿಯನ್ನು ಮೈಗೆಲ್ಲಕ್ಕೂ ಬಳಿದುಕೊಂಡು, ಬೆತ್ತಲೆಯಾಗಿ, ವಿಕಾರವಾದ ವೇಷದಿಂದ ಕೈಯ್ಯಲ್ಲಿ ಕೊಳ್ಳಿಯನ್ನು ಹಿಡಿದುಕೊಂಡು, ಕೆಂಪಾದ ಕಣ್ಣುಗಳುಳ್ಳವನಾಗಿ, ಭಯಂಕರ

ಉಲ್ಮುಕವ್ಯಗ್ರಹಸ್ತಶ್ಚ ರಕ್ತಪಿಂಗಲಲೋಚನಃ ।
ಕ್ವಚಿಚ್ಚ ಹಸತೇ ರೌದ್ರಂ ಕ್ವಚಿದ್ಗಾಯತಿ ವಿಸ್ಮಿತಃ ॥೨೯॥
ಕ್ವಚಿನ್ನೃತ್ಯತಿ ಶೃಂಗಾರಂ ಕ್ವಚಿದ್ರೌತಿ ಮುಹುರ್ಮುಹುಃ ।
ಆಶ್ರಮೇ ಹ್ಯಟತೇ ಭೈಕ್ಷ್ಯಂ ಯಾಚತೇ ಚ ಪುನಃ ಪುನಃ ॥೩೦॥
ಮಾಯಾಂ ಕೃತ್ವಾ ತಥಾರೂಪಾಂ ದೇವಸ್ತ ದ್ವನಮಾಗತಃ ।
ತತಸ್ತೇ ಮುನಯಃ ಸರ್ವೇ ತುಷ್ಟುವುಶ್ಚ ಸಮಾಹಿತಾಃ ॥೩೧॥
ಅದ್ಭಿರ್ವಿವಿಧಮಾಲ್ಯೈಶ್ಚ ಧೂಪೈ ರ್ಗಂಧೈಸ್ತ ಥೈವಚ ।
ಸಪತ್ನೀಕಾ ಮಹಾಭಾಗಾಃ ಸಪುತ್ರಾಃ ಸಪರಿಚ್ಛದಾಃ ॥೩೨॥
ಮುನಯಸ್ತೇ ತಥಾ ವಾಗ್ಭಿ ರೀಶ್ವರಂ ಚೇದಮಬ್ರುವನ್ ।
ಅಜ್ಞಾನಾದ್ದೇವದೇವೇಶ ಯದಸ್ಮಾಭಿ ರನುಷ್ಠಿತಂ ॥೩೩॥
ಕರ್ಮಣಾ ಮನಸಾ ವಾಚಾ ತತ್ಸರ್ವಂ ಕ್ಷಂತು ಮರ್ಹಸಿ ।
ಚರಿತಾನಿ ವಿಚಿತ್ರಾಣಿ ಗುಹ್ಯಾನಿ ಗಹನಾನಿ ಚ ॥೩೪॥

---

ವಾಗಿ ನಗುತ್ತ, ಗಾನಮಾಡುತ್ತ, ಕುಣಿಯುತ್ತ, ಘಟ್ಟಿಯಾಗಿ ಧ್ವನಿ ಮಾಡುತ್ತ, ಆ ಋಷ್ಯಾಶ್ರಮದಲ್ಲಿ ಭಿಕ್ಷವನ್ನು ಬೇಡುತ್ತ ಬರುತ್ತಿದ್ದನು.

೩೧–೩೨. ದೇವನಾದ ಶಿವನು, ಮಾಯೆಯಿಂದ ಈ ಬಗೆಯಾದ ರೂಪವನ್ನು ಮಾಡಿಕೊಂಡು ಆ ವನಕ್ಕೆ ಬಂದನು. ಬಳಿಕ ಆ ಮುನಿಗಳೆಲ್ಲರೂ ಏಕಾಗ್ರಚಿತ್ತದಿಂದ ಆ ದೇವನನ್ನು ನೀರಿನಿಂದಲೂ ಬಗೆಬಗೆಯ ಹೂಗಳು, ಧೂಪ, ಗಂಧಗಳಿಂದಲೂ, ಪತ್ನೀಪುತ್ರ ಪರಿವಾರಸಹಿತರಾಗಿ ಪೂಜಿಸಿ ಸ್ತೋತ್ರಮಾಡಿ ಮುಂದೆ ಹೇಳುವಂತೆ ಈಶ್ವರನನ್ನು ಕುರಿತು ಮಾತನಾಡಿದರು.

೩೩–೩೪. ಓ ದೇವದೇವನೇ, ಅಜ್ಞಾನದಿಂದ ನಾವು ಕಾರ್ಯದಿಂದಲೂ, ಮನಸ್ಸಿನಿಂದಲೂ, ಮಾತಿನಿಂದಲೂ, ಮಾಡಿದ ಅಪರಾಧಗಳೆಲ್ಲವನ್ನೂ ಕ್ಷಮಿಸಬೇಕು. ನಿನ್ನ ಚರಿತ್ರೆಗಳು ವಿಚಿತ್ರವಾದುವಾಗಿಯೂ, ಗುಟ್ಟಾಗಿಯೂ, ತಿಳಿಯಲಸಾಧ್ಯವಾದುವಾಗಿಯೂ, ಇರುವುವು. ಅವು ಬ್ರಹ್ಮನೇ ಮೊದಲಾದ ದೇವತೆಗಳಿಗೂ ತಿಳಿಯಲು ಕಷ್ಟಸಾಧ್ಯವಾದುವಾಗಿರುವುವು.

ಬ್ರಹ್ಮಾದೀನಾಂ ಚ ದೇವಾನಾಂ ದುರ್ವಿಜ್ಞೇಯಾನಿ ತೇ ಹರ ।
ಅಗತಿಂ ತೇ ನ ಜಾನೀಮೋ ಗತಿಂ ನೈವ ಚ ನೈವ ಚ ॥೩೫॥

ವಿಶ್ವೇಶ್ವರ ಮಹಾದೇವ ಯೋಽಸಿ ಸೋಽಸಿ ನಮೋಽಸ್ತುತೇ ।
ಸ್ತುವಂತಿ ತ್ವಾಂ ಮಹಾತ್ಮಾನೋ ದೇವದೇವಂ ಮಹೇಶ್ವರಂ ॥೩೬॥

ನಮೋ ಭವಾಯ ಭವ್ಯಾಯ ಭಾವನಾ ಯೋದ್ಭವಾಯಚ ।
ಅನಂತ ಬಲವೀರ್ಯಾಯ ಭೂತಾನಾಂ ಪತಯೇ ನಮಃ ॥೩೭॥

ಸಂಹರ್ತ್ರೇಚ ಪಿಶಂಗಾಯ ಅವ್ಯಯಾಯ ವ್ಯಯಾಯ ಚ ।
ಗಂಗಾ ಸಲಿಲ ಧಾರಾಯ ಆಧಾರಾಯ ಗುಣಾತ್ಮನೇ ॥೩೮॥

ತ್ರ್ಯಂಬಕಾಯ ತ್ರಿನೇತ್ರಾಯ ತ್ರಿಶೂಲ ವರಧಾರಿಣೇ ।
ಕಂದರ್ಪಾಯ ಹುತಾಶಾಯ ನಮೋಽಸ್ತು ಪರಮಾತ್ಮನೇ ॥೩೯॥

---

೩೫. ನಿನ್ನ ಗಮನಾಗಮನಾದಿಗಳು ನಮಗೆ ತಿಳಿಯವು. ಪ್ರಪಂಚಕ್ಕೆಲ್ಲಕ್ಕೂ ಸ್ವಾಮಿಯಾದ ಓ ಮಹಾದೇವನೇ, ಈ ರೀತಿಯಾದ ನೀನು ಆ ಪರಮಾತ್ಮನೇ ಆಗಿರುವೆ, ನಿನಗೆ ನಮಸ್ಕಾರವು.

೩೬–೩೮. ದೇವತಗಳಿಗೆಲ್ಲರಿಗೂ ದೇವನಾದ ಮಹೇಶ್ವರನಾದ ನಿನ್ನನ್ನು ಮಹಾತ್ಮರು ಸ್ತೋತ್ರಮಾಡುವರು. ಈಗ ಇರತಕ್ಕ, ಮುಂದೆಯೂ ಇರುವ, ಯೋಗಿಗಳ ಧ್ಯಾನಕ್ಕೆ ಆಶ್ರಯನಾದ, ಪ್ರಪಂಚರೂಪವಾದ ಉತ್ಪತ್ತಿಯುಳ್ಳ, ಲೆಕ್ಕವಿಲ್ಲದಷ್ಟು ಬಲಪರಾಕ್ರಮಗಳಿಂದ ಕೂಡಿದ, ಸಮಸ್ತ ಜೀವರುಗಳಿಗೂ ಒಡೆಯನಾದ, ಸಕಲ ಪ್ರಪಂಚವನ್ನೂ ಸಂಹಾರಮಾಡುವ, ತಾನು ನಾಶರಹಿತನಾಗಿ ಅಜ್ಞಾನಾದಿಗಳನ್ನು ನಾಶಮಾಡುವ ಗಂಗೆಯ ನೀರಿನ ಧಾರೆಯುಳ್ಳ, ಸಮಸ್ತ ಪ್ರಪಂಚಗಳಿಗೂ ಆಧಾರವಾಗಿ ತ್ರಿಗುಣಸ್ವರೂಪನಾದ ನಿನಗೆ ನಮಸ್ಕಾರವು.

೩೯–೪೦. ತ್ರಿಗುಣಾತ್ಮಕಳಾದ ಅಂಬಾ ಎಂದರೆ ಪಾರ್ವತಿಯುಳ್ಳ, ಮೂರು ಕಣ್ಣುಗಳುಳ್ಳ, ತ್ರಿಶೂಲಾಯುಧವನ್ನು ಧರಿಸಿದ, ಕಂದರ್ಪನೆಂದರೆ ಸುಖವನ್ನುಂಟುಮಾಡಿ ಸಂತೋಷಗೊಳಿಸುವ ಅಗ್ನಿಸ್ವರೂಪನಾದ ಪರಬ್ರಹ್ಮಸ್ವರೂಪನಾದ ನಿನಗೆ ನಮಸ್ಕಾರವು. ಸುಖವನ್ನುಂಟುಮಾಡುವ,

ಶಂಕರಾಯ ವೃಷಾಂಕಾಯ ಗಣಾನಾಂ ಪತಯೇ ನಮಃ ।
ದಂಡಹಸ್ತಾಯ ಕಾಲಾಯ ಪಾಶಹಸ್ತಾಯ ವೈ ನಮಃ ॥೪೦॥
ವೇದಮಂತ್ರ ಪ್ರಧಾನಾಯ ಶತಜಿಹ್ವಾಯ ವೈ ನಮಃ ।
ಭೂತಂಭವ್ಯಂಭವಿಷ್ಯಂಚ ಸ್ಥಾವರಂ ಜಂಗಮಂ ಚ ಯತ್ ॥೪೧॥
ತವ ದೇಹಾತ್ಸಮುತ್ಪನ್ನಂ ದೇವ ಸರ್ವ ಮಿದಂ ಜಗತ್ ।
ಪಾಸಿ ಹಂಸಿ ಚ ಭದ್ರಂ ತೇ ಪ್ರಸೀದ ಭಗವಂ ಸ್ತುತಃ ॥೪೨॥
ಅಜ್ಞಾನಾ ದ್ಯದಿವಿಜ್ಞಾನಾ ದ್ಯತ್ಕಿಂಚಿತ್ಕುರುತೇ ನರಃ ।
ತತ್ಸರ್ವಂ ಭಗವಾನೇವ ಕುರುತೇ ಯೋಗ ಮಾಯಯಾ ॥೪೩॥
ಏವಂ ಸ್ತುತ್ವಾ ತು ಮುನಯಃ ಪ್ರಹೃಷ್ಟೈ ರಂತರಾತ್ಮಭಿಃ ।
ಯಾಚಂತ ತಪಸಾ ಯುಕ್ತಾಃ ಪಶ್ಯಾಮಸ್ತ್ವಂ ಯಥಾಪುರಾ ॥೪೪॥

---

ವೃಷಭಚಿಹ್ನೆಯುಳ್ಳ, ರುದ್ರಗಣಗಳ ಪತಿಯಾದ, ದಂಡವನ್ನು ಕೈಯ್ಯಲ್ಲಿ ಹಿಡಿದಿರುವ, ಯಮಸ್ವರೂಪನೂ, ಪಾಶಾಯುಧವನ್ನು ಧರಿಸಿದವನೂ, ಆದ ನಿನಗೆ ನಮಸ್ಕಾರವು.

೪೧–೪೨. ವೇದ ಮಂತ್ರಗಳನ್ನು ಹೇಳುತ್ತಿರುವ ಅನೇಕ ನಾಲಿಗೆಗಳುಳ್ಳ ನಿನಗೆ ನಮಸ್ಕಾರವು. ಹಿಂದೆ ಕಳೆದ, ಈಗ ಇರುತ್ತಿರುವ, ಮುಂದೆ ಹುಟ್ಟುವ, ಚರಾಚರ ಜಗತ್ತುಗಳೆಲ್ಲವೂ ನಿನ್ನ ಶರೀರದಿಂದಲೇ ಹುಟ್ಟಿದುವಾಗಿರುವುವು. ಅವುಗಳನ್ನು ನೀನೇ ಕಾಪಾಡುವೆ ಮತ್ತು ನಾಶ ಮಾಡುವೆ. ಮಹಾಮಹಿಮನಾದ ನಿನಗೆ ಮಂಗಳವಾಗಲಿ. ನಮ್ಮ ವಿಷಯದಲ್ಲಿ ಪ್ರಸನ್ನನಾಗು.

೪೩. ಮನುಷ್ಯನು ತಿಳಿದೋ ತಿಳಿಯದೆಯೋ ಯಾವಕೆಲಸವನ್ನು ಮಾಡಿದರೂ ಅವುಗಳೆಲ್ಲವನ್ನೂ ಯೋಗ ಮಾಯೆಯಿಂದ ನೀನೇ ಮಾಡಿದವನಾಗುತ್ತೀಯೆ. ಮಾಯೆಯು ನಿನ್ನಧೀನವು. ನಾವೆಲ್ಲರೂ ಮಾಯಾಧೀನರಾದವರು. ಎಂದು ತಾತ್ಪರ್ಯವು.

೪೪. ಈ ರೀತಿಯಲ್ಲಿ ಮುನಿಗಳು ಸಂತೋಷದಿಂದ ಕೂಡಿದ ಮನಸ್ಸಿನಿಂದ ಸ್ತೋತ್ರಮಾಡಿ ತಪಸ್ಸು ಮಾಡುತ್ತಾ, ನಾವು ನಿನ್ನನ್ನು ಹಿಂದೆ ಹೇಗೆ ನೋಡುತ್ತಿದ್ದೆವೋ ಆ ರೂಪದಿಂದಲೇ ದರ್ಶನ ಕೊಡು. ಎಂಬುದಾಗಿ ಬೇಡಿಕೊಂಡರು.

ತತೋ ದೇವಃ ಪ್ರಸನ್ನಾತ್ಮಾ ಸ್ವಮೇವಾ ಸ್ಥಾಯ ಶಂಕರಃ ।
ರೂಪಂ ತ್ರ್ಯಕ್ಷಂ ಚ ಸಂದ್ರಷ್ಟುಂ ದಿವ್ಯಂ ಚಕ್ಷುರದಾತ್ಪ್ರಭುಃ ॥೪೫॥
ಲಬ್ಧದೃಷ್ಟ್ಯಾ ತಯಾ ದೃಷ್ಟ್ವಾ ದೇವದೇವಂ ತ್ರಿಯಂಬಕಂ ।
ಪುನಸ್ತುಷ್ಟು ವುರೀಶಾನಂ ದೇವದಾರುವನೌಕಸಃ ॥೪೬॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಋಷಿಕೃತ ಶಿವಪೂಜಾ ವರ್ಣನಂ ನಾಮ ಏಕತ್ರಿಂಶೋಽಧ್ಯಾಯಃ

---

೪೫. ಆ ಬಳಿಕ ಶಂಕರನು ಪ್ರಸನ್ನನಾಗಿ ತನ್ನ ಸ್ವರೂಪದಿಂದಲೇ ಇದ್ದು ತನ್ನನ್ನು ನೋಡುವುದಕ್ಕಾಗಿ ಆಮುನಿಗಳಿಗೆ ದಿವ್ಯ ದೃಷ್ಟಿಯನ್ನು ಕರುಣಿಸಿದನು.

೪೬. ಆ ದೇವದಾರು ವನದಲ್ಲಿ ವಾಸವಾಗಿದ್ದ ಋಷಿಗಳೆಲ್ಲರೂ ತಮಗೆ ದೊರೆತ ದಿವ್ಯದೃಷ್ಟಿಯಿಂದ ಮುಕ್ಕಣ್ಣನೂ, ದೇವದೇವನೂ, ಆದ ಈಶ್ವರನನ್ನು ನೋಡಿ ಮತ್ತೆ ಸ್ತೋತ್ರ ಮಾಡಿದರು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಋಷಿಗಳು ಮಾಡಿದ ಶಿವಪೂಜೆಯ ಕ್ರಮವನ್ನು ತಿಳಿಸುವ ಮೂವತ್ತೊಂದನೆಯ ಅಧ್ಯಾಯವು ಮುಗಿದುದು.



अथ श्रीलिंगमहापुराणे पूर्वभागे
द्वात्रिंशोऽध्यायः

ದ್ವಾತ್ರಿಂಶೇ ದಿವ್ಯರೂಪಂ ತಂ ಶಿವಂ ಸರ್ವಗತಂ ಪ್ರಭುಂ ।
ತುಷ್ಟುವುರ್ಮನಸಾ ರುದ್ರಂ ಧನ್ಯಾ ದಾರುವನೌಕಸಃ ॥

॥ ಋಷಯ ಊಚುಃ ॥

ನಮೋ ದಿಗ್ವಾಸಸೇ ನಿತ್ಯಂ ಕೃತಾಂತಾಯ ತ್ರಿಶೂಲಿನೇ ।
ವಿಕಟಾಯ ಕರಾಲಾಯ ಕರಾಲ ವದನಾಯ ಚ ॥ ೧ ॥

ಅರೂಪಾಯ ಸುರೂಪಾಯ ವಿಶ್ವರೂಪಾಯ ತೇ ನಮಃ ।
ಕಟಂಕಟಾಯ ರುದ್ರಾಯ ಸ್ವಾಹಾಕಾರಾಯ ವೈ ನಮಃ ॥ ೨ ॥

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಮೂವತ್ತೆರಡನೆಯ ಅಧ್ಯಾಯವು

( ಈ ಮೂವತ್ತೆರಡನೆಯ ಅಧ್ಯಾಯದಲ್ಲಿ ದಿವ್ಯರೂಪವನ್ನು ಧರಿಸಿದ ಸರ್ವಗತನಾದ ಶಿವನನ್ನು ದಾರುವನದಲ್ಲಿದ್ದ ಮುನಿಗಳು ಮನಸ್ಸಿನಲ್ಲಿ ಸ್ತೋತ್ರಮಾಡಿದುದನ್ನು ವರ್ಣಿಸಿರುವುದು. )

೧. ಋಷಿಗಳು ಹೇಳಿದರು. ಅಳತೆಗೆ ಸಿಕ್ಕದ ರೂಪವುಳ್ಳವನಾದುದರಿಂದ ದಿಕ್ಕುಗಳೇ ವಸ್ತ್ರವಾಗಿ ಉಳ್ಳ, ಪ್ರಳಯ ಕಾರಣನಾದ, ಶೂಲಾಯುಧವನ್ನು ಧರಿಸಿದ, ಸುಂದರನಾದ, ಸಂಸಾರವೆಂಬ ಮರಕ್ಕೆ ಕೊಡಲಿಯಂತಿರುವ, ಭಯಂಕರವಾದ ಮುಖವುಳ್ಳ ನಿನಗೆ ಯಾವಾಗಲೂ ನಮಸ್ಕಾರವು.

೨. ಮಾಯಾ ರಹಿತನಾದುದರಿಂದ ಯಾವ ರೂಪವೂ ಇಲ್ಲದ, ಮಾಯೆಗೆ ಆಶ್ರಯನಾಗಿ ಸುಂದರವಾದ ರೂಪವನ್ನೂ, ಪ್ರಪಂಚಸ್ವರೂಪವನ್ನೂ, ಧರಿಸಿದ, ಪ್ರೀತಿಯಿಂದ ಗಜಾನನನ ತಲೆಯನ್ನು ಕೈಯಿಂದ ಸವರುತ್ತಿರುವ, ಯಜಮಾನಸ್ವರೂಪನಾದ, ಸರ್ವಾತ್ಮಕನಾಗಿ ರುದ್ರನೆನಿಸಿದ ನಿನಗೆ ನಮಸ್ಕಾರವು.

ಸರ್ವಪ್ರಣತ ದೇಹಾಯ ಸ್ವಯಂ ಚ ಪ್ರಣತಾತ್ಮನೇ ।
ನಿತ್ಯಂ ನೀಲ ಶಿಖಂಡಾಯ ಶ್ರೀಕಂಠಾಯ ನಮೋನಮಃ ॥ ೩ ॥

ನೀಲಕಂಠಾಯ ದೇವಾಯ ಚಿತಾಭಸ್ಮಾಂಗಧಾರಿಣೇ ।
ತ್ವಂ ಬ್ರಹ್ಮಾ ಸರ್ವದೇವಾನಾಂ ರುದ್ರಾಣಾಂ ನೀಲಲೋಹಿತಃ ॥ ೪ ॥

ಆತ್ಮಾ ಚ ಸರ್ವಭೂತಾನಾಂ ಸಾಂಖ್ಯೈಃ ಪುರುಷ ಉಚ್ಯತೇ ।
ಪರ್ವತಾನಾಂ ಮಹಾಮೇರುಃ ನಕ್ಷತ್ರಾಣಾಂ ಚ ಚಂದ್ರಮಾಃ ॥

ಋಷೀಣಾಂ ಚ ವಸಿಷ್ಠಸ್ತ್ವಂ ದೇವಾನಾಂ ವಾಸವಸ್ತಥಾ ।
ಓಂಕಾರಃ ಸರ್ವವೇದಾನಾಂ ಶ್ರೇಷ್ಠಂ ಸಾಮ ಚ ಸಾಮಸು ॥ ೬ ॥

ಆರಣ್ಯಾನಾಂ ಪಶೂನಾಂಚ ಸಿಂಹಸ್ತ್ವಂ ಪರಮೇಶ್ವರಃ ।
ಗ್ರಾಮ್ಯಾಣಾಂ ವೃಷಭಶ್ಚಾಸಿ ಭಗವಾನ್ ಲೋಕಪೂಜಿತಃ ॥ ೭ ॥

---

೩. ಸಕಲರೂ ನಮಸ್ಕರಿಸುವ ಶರೀರ ಉಳ್ಳವನಾದ, ಸರ್ವಾಧಾರನಾದುದರಿಂದ ದಯಾಯುಕ್ತವಾದ ಮನಸ್ಸುಳ್ಳವನಾದ, ಯಾವಾಗಲೂ, ಕಪ್ಪಾದ ಕೂದಲುಗಳುಳ್ಳ, ಕಾಂತಿಯುಕ್ತವಾದ ಕಂಠವುಳ್ಳ, ನಿನಗೆ ನಮಸ್ಕಾರವು.

೪–೭. ವಿಷಪಾನದಿಂದ ನೀಲವಾದ ಕುತ್ತಿಗೆಯುಳ್ಳ, ಚಿತಿಯ ಭಸ್ಮವನ್ನು ಅವಯವಗಳಿಗೆ ಬಳಿದುಕೊಂಡಿರುವ ನಿನಗೆ ನಮಸ್ಕಾರವು. ನೀನು ಸಕಲ ದೇವತೆಗಳಲ್ಲಿ ಬ್ರಹ್ಮನಾಗಿರುವೆ. ಏಕಾದಶ ರುದ್ರರಲ್ಲಿ ನೀಲಲೋಹಿತನೇ ನೀನು. ಸಕಲ ಭೂತಗಳಲ್ಲಿಯೂ ಆತ್ಮಸ್ವರೂಪನು. ಸಾಂಖ್ಯಶಾಸ್ತ್ರದಲ್ಲಿ ನಿನ್ನನ್ನು ಪುರುಷನೆಂದು ಹೇಳುವರು. ಪರ್ವತಗಳಲ್ಲೆಲ್ಲಾ ಮಹಾಮೇರುವೇ ನೀನು. ನಕ್ಷತ್ರಗಳಲ್ಲೆಲ್ಲಾ ಚಂದ್ರನೇ ನೀನು. ಋಷಿಗಳಲ್ಲಿ ವಸಿಷ್ಠ ಋಷಿಯೇ ನೀನು. ದೇವತೆಗಳಲ್ಲಿ ದೇವೇಂದ್ರನೇ ನೀನು. ಸಕಲ ವೇದಮಂತ್ರಗಳಲ್ಲಿ ಓಂಕಾರ ಸ್ವರೂಪನು ನೀನು. ಸಾಮಗಳಲ್ಲಿ ಶ್ರೇಷ್ಠ ಸಾಮವೇ ನೀನು. ಅರಣ್ಯದಲ್ಲಿರುವ ಪಶುಗಳಲ್ಲಿ ಸಿಂಹಸ್ವರೂಪವು ನಿನ್ನದು. ಲೋಕಪೂಜ್ಯನಾದ ನೀನು ಗ್ರಾಮ್ಯ ಪಶುಗಳಲ್ಲಿ ಎತ್ತಿನ ಸ್ವರೂಪನಾಗಿದ್ದು ಜನರ ಪೂಜೆಯನ್ನು ಸ್ವೀಕರಿಸುವೆ.

ಸರ್ವಥಾ ವರ್ತಮಾನೋಽಪಿ ಯೋ ಯೋ ಭಾವೋ ಭವಿಷ್ಯತಿ ।
ತ್ವಾಮೇವ ತತ್ರ ಪಶ್ಯಾಮೋ ಬ್ರಹ್ಮಣಾ ಕಥಿತಂ ಕಥಾ ॥ ೮ ॥
ಕಾಮಃ ಕ್ರೋಧಶ್ಚ ಲೋಭಶ್ಚ ವಿಷಾದೋ ಮದ ಏವ ಚ ।
ಏತದಿಚ್ಛಾಮಹೇ ಬೋದ್ಧುಂ ಪ್ರಸೀದ ಪರಮೇಶ್ವರ ॥ ೯ ॥
ಮಹಾಸಂಹರಣೇ ಪ್ರಾಪ್ತೇ ತ್ವಯಾ ದೇವ ಕೃತಾತ್ಮನಾ ।
ಕರಂ ಲಲಾಟೇ ಸಂಪಿಧ್ಯ ವಹ್ನಿರುತ್ಪಾದಿತಸ್ತ್ವಯಾ ॥೧೦॥
ತೇನಾಗ್ನಿನಾ ತದಾ ಲೋಕಾ ಅರ್ಚಿರ್ಭಿಃ ಸರ್ವತೋ ವೃತಾಃ ।
ತಸ್ಮಾದಗ್ನಿಸಮಾ ಹ್ಯೇತೇ ಬಹವೋ ವಿಕೃತಾಗ್ನಯಃ ॥೧೧॥
ಕಾಮಃ ಕ್ರೋಧಶ್ಚ ಲೋಭಶ್ಚ ಮೋಹೋ ದಂಭ ಉಪದ್ರವಃ ।
ಯಾನಿ ಚಾನ್ಯಾನಿ ಭೂತಾನಿ ಸ್ಥಾವರಾಣಿ ಚರಾಣಿ ಚ ॥೧೨॥

---

೮. ಪ್ರಪಂಚದಲ್ಲಿರುವ ಸಕಲ ಪದಾರ್ಥಗಳೂ, ನಿನ್ನ ಸ್ವರೂಪ ಗಳು ಎಂಬುದಾಗಿ ಬ್ರಹ್ಮನು ಹೇಳಿರುವನು. ಅವುಗಳಲ್ಲೆಲ್ಲಾ ನಿನ್ನನ್ನು ನೋಡುವ ಶಕ್ತಿಯನ್ನು ನಮಗೆ ಕರುಣಿಸು.

೯. ಕಾಮ, ಕ್ರೋಧ, ಲೋಭ, ವಿಷಾದ, ಮದ, ಈ ಐದೂ ಸಕಲವನ್ನೂ ನಾಶ ಮಾಡುವುವಾಗಿ ಹೇಗೆ ಆದುವು? ಇದನ್ನು ತಿಳಿಯ ಬೇಕೆಂದು ನಮ್ಮ ಅಪೇಕ್ಷೆಯಿರುವುದು. ಎಲೈ ಪರಮೇಶ್ವರನೆ ನೀನು ಪ್ರಸನ್ನನಾಗಿ ನಮಗೆ ಇದನ್ನು ತಿಳಿಸಿಕೊಡು.

೧೦. ಭಗವಂತನ ಅನುಗ್ರಹದಿಂದ ಉಂಟಾದ ತಿಳಿವಳಿಕೆಯಿಂದ ತಾವೇ ಅವನ ಸ್ವರೂಪವನ್ನು ಇಲ್ಲಿಂದ ಮುಂದೆ ವರ್ಣನೆ ಮಾಡುವರು. ಓ ದೇವನೇ, ಮಹಾ ಪ್ರಳಯಕಾಲವು ಪ್ರಾಪ್ತವಾದಾಗ ನೀನು ಕೈಯ್ಯಿಂದ ಹಣೆಯ ಮೇಲೆ ಉಜ್ಜಿಕೊಂಡು ಅಗ್ನಿಯನ್ನು ಹುಟ್ಟಿಸಿದೆ.

೧೧–೧೨. ಆಗ ಅಗ್ನಿಯು ಲೋಕಗಳ ಸುತ್ತಲೂ ಆವರಿಸಿತು. ಆ ಅಗ್ನಿಗಿಂತಲೂ, ಈ ಕಾಮಾದಿಗಳು ವಿಕಾರವಾದ ಅಗ್ನಿಗಳಾಗಿ ಅಗ್ನಿ ಸಮಾನವೆನಿಸಿ, ಕಾಮ, ಕ್ರೋಧ, ಲೋಭ, ಮೋಹ, ದಂಭ, ಎಂಬ ಉಪದ್ರವಗಳೆನಿಸಿ ಉತ್ಪನ್ನವಾದುವು. ಚರಾಚರ ಪ್ರಾಣಿಗಳೆಲ್ಲವೂ ನಿನ್ನಿಂದ

ದಹ್ಯಂತೇ ಪ್ರಾಣಿನಸ್ತ್ರೇ ತು ತ್ವತ್ಸಮುತ್ಥೇನ ವಹ್ನಿನಾ ।
ಅಸ್ಮಾಕಂ ದಹ್ಯಮಾನಾನಾಂ ತ್ರಾತಾ ಭವ ಸುರೇಶ್ವರ ॥೧೩॥

ತ್ವಂ ಚ ಲೋಕಹಿತಾರ್ಥಾಯ ಭೂತಾನಿ ಪರಿಷಿಂಚಸಿ ।
ಮಹೇಶ್ವರ ಮಹಾಭಾಗ ಪ್ರಭೋ ಶುಭನಿರೀಕ್ಷಕ ॥೧೪॥

ಆಜ್ಞಾಪಯ ವಯಂ ನಾಥ ಕರ್ತಾರೋ ವಚನಂ ತವ ।
ಭೂತಕೋಟಿಸಹಸ್ರೇಷು ರೂಪಕೋಟಿಶತೇಷು ಚ ॥೧೫॥

ಅಂತಂ ಗಂತುಂ ನ ಶಕ್ತಾಃಸ್ಮಃ ದೇವದೇವ ನಮೋಽಸ್ತು ತೇ ॥೧೬॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಋಷಿಕೃತ
ಶಿವಸ್ತುತಿರ್ನಾಮ ದ್ವಾತ್ರಿಂಶೋಧ್ಯಾಯಃ

---

ಹುಟ್ಟಿದ ಈ ಬೆಂಕಿಯಿಂದ ಸುಟ್ಟುಹೋಗುತ್ತಿರುವುವು. ಓ ದೇವ ದೇವನೇ, ಈ ಬೆಂಕಿಯಿಂದ ಬಾಧೆ ಪಡುತ್ತಿರುವ ನಮ್ಮನ್ನು ನೀನೇ ರಕ್ಷಿಸಬೇಕು.

೧೪. ಮಹಾಮಹಿಮನೂ, ಸರ್ವೇಶ್ವರನೂ, ಆದ ನೀನು ಮಂಗಳ ವನ್ನೇ ಕೋರತಕ್ಕವನಾಗಿ ಲೋಕಗಳಿಗೆಲ್ಲಕ್ಕೂ ಹಿತವಾಗಲೆಂದು ಚಂದ್ರನ ರೂಪದಿಂದ ನೀರನ್ನು ಎರಚಿ ಪ್ರಾಣಿಗಳನ್ನೆಲ್ಲವನ್ನೂ ತಣ್ಣಗೆ ಇಟ್ಟಿರುತ್ತೀಯೆ.

೧೫–೧೬. ಓ ಸ್ವಾಮಿಯೇ, ನಾವು ನಿನ್ನ ಮಾತಿನಂತೆ ನಡೆಯು ತ್ತೇವೆ. ನಮಗೆ ಅಪ್ಪಣೆಯನ್ನು ಕೊಡು. ಒಂದು ಸಾವಿರ ಕೋಟಿ ಪ್ರಾಣಿಗಳಲ್ಲಿಯೂ, ನೂರು ಕೋಟಿ ರೂಪಗಳಲ್ಲಿಯೂ, ನಿನ್ನ ಸ್ವರೂಪವು ಇಂಥವೆಂದು ತಿಳಿಯಲು ನಾವು ಶಕ್ತರಾಗಿಲ್ಲ. ದೇವತೆಗಳನ್ನೂ ಆನಂದ ಪಡಿಸುವವನಾದ ನಿನಗೆ ನಾವು ನಮಸ್ಕಾರ ಮಾಡುವೆವು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ದಾರಕವನದ ಋಷಿಗಳು
ಶಿವನನ್ನು ಸ್ತುತಿಸಿದರೆಂಬ ಮೂವತ್ತೆರಡನೆಯ ಅಧ್ಯಾಯವು

## ಅಥ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ
## ತ್ರಯಸ್ತ್ರಿಂಶೋಽಧ್ಯಾಯಃ

**ತ್ರಯಸ್ತ್ರಿಂಶೇ ಸ್ತವಪ್ರೀತ ಋಷೀಣಾಂ ಶಂಕರಃ ಸ್ವಯಂ ।**
**ಸ್ತವಸ್ಯ ಚೈವ ಶೈವಾನಾಂ ಮಹಿಮಾನ ಮವರ್ಣಯತ್ ॥**

**॥ ನಂದ್ಯುವಾಚ ॥**

**ತತಸ್ತುತೋಽಷ ಭಗವಾನ್ ಅನುಗೃಹ್ಯ ಮಹೇಶ್ವರಃ ।**
**ಸ್ತುತಿಂ ಶ್ರುತ್ವಾ ಸ್ತುತಸ್ತೇಷಾ ಮಿದಂ ವಚನ ಮಬ್ರವೀತ್ ॥ ೧ ॥**
**ಯಃ ಪಠೇಚ್ಛೃಣು ಯಾದ್ವಾಽಪಿ ಯುಷ್ಮಾಭಿಃ ಕೀರ್ತಿತಂ ಸ್ತವಂ ।**
**ಶ್ರಾವಯೇದ್ವಾ ದ್ವಿಜಾನ್ ವಿಪ್ರೋ ಗಾಣಪತ್ಯ ಮವಾಪ್ನುಯಾತ್ ॥**

---

### ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಮೂವತ್ತುಮೂರನೆಯ ಅಧ್ಯಾಯವು

(ಈ ಮೂವತ್ತುಮೂರನೆಯ ಅಧ್ಯಾಯದಲ್ಲಿ ಋಷಿಗಳ ಸ್ತೋತ್ರಕ್ಕೆ ಸಂತೋಷಪಟ್ಟ ಶಿವನು ಶಿವ ಸಂಬಂಧವಾದ ಸ್ತೋತ್ರಗಳ ಮಹಿಮೆಯನ್ನು ತಾನೇ ವರ್ಣನೆ ಮಾಡಿದನು, ಎಂದು ಹೇಳಲಾಗುವುದು.)

೧. ನಂದಿಯು ಹೇಳಿದನು: ಆ ಬಳಿಕ ಮಹಾಮಹಿಮನಾದ ಮಹೇಶ್ವರನು ಆ ಋಷಿಗಳಿಗೆ ಅನುಗ್ರಹವನ್ನು ಮಾಡಿ ಅವರು ಸ್ತೋತ್ರ ಮಾಡಿದುದನ್ನು ಕೇಳಿ ಅವರಿಗೆ ಮುಂದೆ ಹೇಳುವ ಮಾತುಗಳನ್ನು ಹೇಳಿದನು.

೨. ಎಲೈ ಮುನಿಗಳೇ, ನೀವು ಹೇಳಿದ ಸ್ತೋತ್ರವನ್ನು ಯಾರು ಪಠಿಸುವರೋ, ಕೇಳುವರೋ, ಅಥವಾ ಮತ್ತೊಬ್ಬರಿಗೆ ಹೇಳುವರೋ, ಅಂತಹ ಬ್ರಾಹ್ಮಣರು ಶಿವಗಣಗಳಿಗೆ ಅಧಿಪತಿಗಳಾಗುವರು.

ವಕ್ಷ್ಯಾಮಿ ವೋ ಹಿತಂ ಪುಣ್ಯಂ ಭಕ್ತಾನಾಂ ಮುನಿಪುಂಗವಾಃ ।
ಸ್ತ್ರೀಲಿಂಗಮಖಿಲಂ ದೇವೀ ಪ್ರಕೃತಿರ್ಮಮ ದೇಹಜಾ ॥ ೩ ॥
ಪುಲ್ಲಿಂಗಂ ಪುರುಷೋ ವಿಪ್ರಾ ಮಮ ದೇಹ ಸಮುದ್ಭವಃ ।
ಉಭಾಭ್ಯಾಮೇವ ವೈ ಸೃಷ್ಟಿ ರ್ಮಮ ವಿಪ್ರಾ ನ ಸಂಶಯಃ ॥ ೪ ॥
ನ ನಿಂದ್ಯೇದ್ಯತಿನಂ ತಸ್ಮಾದ್ದಿಗ್ವಾಸಸ ಮನುತ್ತಮಂ ।
ಬಾಲೋನ್ಮತ್ತ ವಿಚೇಷ್ಟಂ ತು ಮತ್ಪರಂ ಬ್ರಹ್ಮವಾದಿನಂ ॥ ೫ ॥
ಯೇ ಹಿ ಮಾಂ ಭಸ್ಮನಿರತಾ ಭಸ್ಮನಾ ದಗ್ಧಕಿಲ್ಬಿಷಾಃ ।
ಯಥೋಕ್ತಕಾರಿಣೋ ದಾಂತಾ ವಿಪ್ರಾ ಧ್ಯಾನಪರಾಯಣಾಃ ॥ ೬ ॥

---

೩-೪. ಎಲೈ ಮುನಿಶ್ರೇಷ್ಠರೇ, ಭಕ್ತರಾದ ನಿಮಗೆ ಹಿತಕರವಾದ ಮತ್ತು ಪುಣ್ಯವನ್ನು ಕೊಡುವ ಮಾತನ್ನು ಹೇಳುವೆನು, ಕೇಳಿರಿ. ಪ್ರಪಂಚ ದಲ್ಲಿರುವ ಸ್ತ್ರೀಯರೆಲ್ಲರೂ ನನ್ನ ಶರೀರದಲ್ಲಿ ಹುಟ್ಟಿದ ಪ್ರಕೃತಿ ಸ್ವರೂಪರಾದ ದೇವಿಯರು. ಪುರುಷರೆಲ್ಲರೂ ನನ್ನ ದೇಹದಲ್ಲಿ ಹುಟ್ಟಿದ ಪುರುಷಸ್ವರೂ ಪರು. ಆದುದರಿಂದ ನನ್ನ ಸಂಬಂಧವಾದ ಸ್ತ್ರೀಪುರುಷರಿಂದಲೇ ಈ ಪ್ರಪಂಚವು ಸೃಷ್ಟಿಯಾಗಿರುವುದು. ಸಂದೇಹವಿಲ್ಲ.

೫. ಲಿಂಗವು ಶಿವನ ಚಿಹ್ನೆಯಾದುದರಿಂದ ಕಾಮಕ್ರೋದಾದಿ ಗಳಿಂದ ಕೂಡಿದ ಅಜ್ಞಾನಿಗಳಾದ ಜನರು ಲೋಕಮರ್ಯಾದೆ ಎಂದು ಲಿಂಗವನ್ನು ಮರೆಯಾಗಿಟ್ಟುಕೊಂಡಿರುವರು. ಕಾಮಕ್ರೋಧಾದಿಗಳಿಲ್ಲದ ಯತಿಗಳು ದಿಗಂಬರರಾಗಿ ಸಂಚರಿಸುವರು. ಅಂತಹ ದಿಗಂಬರರಾದ ಯತಿಗಳನ್ನು ನಿಂದಿಸಬಾರದು. ಆ ಯತಿಗಳು ಬಾಲಕರಂತೆಯೂ, ಹುಚ್ಚ ರಂತೆಯೂ, ಕಾರ್ಯಮಾಡುತ್ತಾ ಬ್ರಹ್ಮಜ್ಞಾನಿಗಳಾಗಿ ಯಾವಾಗಲೂ ನನ್ನ ಧ್ಯಾನದಲ್ಲಿ ಆಸಕ್ತರಾಗಿರುವರು. ಆದುದರಿಂದ ಅವರು ಅತ್ಯಂತ ಶ್ರೇಷ್ಠ ರೆನಿಸುವರು.

೬-೭. ಯಾರು ಪ್ರತಿದಿನವೂ ಭಸ್ಮ ಧಾರಣೆಯನ್ನು ಮಾಡಿ ಕೊಂಡು ಆ ಭಸ್ಮದಿಂದ ಪಾಪಗಳೆಲ್ಲವನ್ನೂ ನಾಶಮಾಡಿಕೊಂಡು ವೇದವಿಧಿಯಂತೆ ನಡೆಯುತ್ತಾ ಇಂದ್ರಿಯ ನಿಗ್ರಹವುಳ್ಳವರಾಗಿ ಧ್ಯಾನಾಸ ಕ್ತರಾಗಿ ಮಹಾದೇವನಲ್ಲಿ ಯಾವಾಗಲೂ ಭಕ್ತಿಯುಳ್ಳವರಾಗಿ ಊರ್ಧ್ವ

ಮಹಾದೇವಪರಾ ನಿತ್ಯಂ ಚರಂತೋ ಹ್ಯೂರ್ಧ್ವರೇತಸಃ ।
ಅರ್ಚಯಂತಿ ಮಹಾದೇವಂ ವಾಙ್ಮನಃಕಾಯಸಂಯತಾಃ ॥ ೭ ॥
ರುದ್ರಲೋಕಮನುಪ್ರಾಪ್ಯ ನ ನಿವರ್ತಂತಿ ತೇ ಪುನಃ ।
ತಸ್ಮಾದೇತದ್ವ್ರತಂ ದಿವ್ಯಮವ್ಯಕ್ತಂ ವ್ಯಕ್ತಲಿಂಗಿನಃ ॥ ೮ ॥
ಭಸ್ಮವ್ರತಾಶ್ಚ ಮುಂಡಾಶ್ಚ ವ್ರತಿನೋ ವಿಶ್ವರೂಪಿಣಃ ।
ನ ತಾನ್ಪರಿವದೇದ್ವಿದ್ವಾನ್ ನ ಚೈತಾನ್ನಾಭಿಲಂಘಯೇತ್ ॥ ೯ ॥
ನ ಹಸೇನ್ನಾಪ್ರಿಯಂ ಬ್ರೂಯಾದಮುತ್ರೇಹ ಹಿತಾರ್ಥವಾನ್ ।
ಯಸ್ತಾನ್ನಿಂದತಿ ಮೂಢಾತ್ಮಾ ಮಹಾದೇವಂ ಸ ನಿಂದತಿ ॥೧೦॥
ಯಸ್ತ್ವೇತಾನ್ಪೂಜಯೇನ್ನಿತ್ಯಂ ಸ ಪೂಜಯತಿ ಶಂಕರಂ ।
ಏವಮೇಷ ಮಹಾದೇವೋ ಲೋಕಾನಾಂ ಹಿತ ಕಾಮ್ಯಯಾ ॥೧೧॥

---

ರೇತಸ್ಸುಗಳಾಗಿ (ಬ್ರಹ್ಮಚರ್ಯ ವ್ರತದಿಂದಕೂಡಿ) ಮನೋವಾಕ್ಕಾಯಗಳೆಂಬ ತ್ರಿಕರಣಗಳಿಂದ ಮಹಾದೇವನನ್ನು ಪೂಜಿಸುತ್ತಲಿರುವರೋ, ಅವರು ಈ ಶರೀರವನ್ನು ಬಿಟ್ಟಮೇಲೆ ರುದ್ರಲೋಕಕ್ಕೆ ಹೋಗುವರು. ಅವರಿಗೆ ಪುನರ್ಜನ್ಮವಿಲ್ಲ.

೮–೯. ಸ್ವಾಭಾವಿಕವಾದ ಶಿವಸಂಬಂಧವಾದ ಚಿಹ್ನೆಗಳಿಂದ ಕೂಡಿದ ಭಸ್ಮಧಾರಿಗಳೂ, ಸನ್ಯಾಸಿಗಳೂ, ಪಾಶುಪತವ್ರತನಿಷ್ಠರೂ ಆದ ದಿಗಂಬರರಾದ ಭಕ್ತರಿಗೆ ಈ ವ್ರತವು ಅತ್ಯಂತ ಶ್ರೇಷ್ಠವಾದುದಾಗಿರುವುದು. ತಿಳಿದವರು ಇಂತಹ ಭಕ್ತರನ್ನು ನಿಂದಿಸಕೂಡದು. ಅವರ ಮಾತನ್ನು ಮೀರಕೂಡದು. ಹಾಸ್ಯಮಾಡಬಾರದು. ಅವರಿಗೆ ಅಪ್ರಿಯವಾದ ಮಾತುಗಳನ್ನಾಡಬಾರದು. ಹೀಗೆ ನಡದುಕೊಂಡವರಿಗೆ ಇಹಪರಗಳಲ್ಲಿ ಸುಖವುಂಟಾಗುವುದು.

೧೦–೧೨. ಯಾವ ಮೂಢನು ಪಾಶುಪತವ್ರತ ನಿಷ್ಠರಾದ ಭಕ್ತರನ್ನು ನಿಂದಿಸುವನೋ ಅವನು ಶಿವನನ್ನೇ ನಿಂದಿಸಿದಂತಾಗುವುದು. ಯಾವನು ಇವರನ್ನು ಪೂಜಿಸುವನೋ ಅವನು ಶಂಕರನನ್ನೇ ಪೂಜಿಸಿದಂತಾಗುವುದು. ಹೀಗೆಯೇ ಮಹಾದೇವನಾದ ಪರಮೇಶ್ವರನು ಲೋಕಕ್ಕೆ ಹಿತವನ್ನು ಮಾಡಬೇಕೆಂದು ಪ್ರತಿಯೊಂದು ಯುಗದಲ್ಲಿಯೂ ಮಹಾ

ಯುಗೇ ಯುಗೇ ಮಹಾಯೋಗೀ ಕ್ರೀಡತೇ ಭಸ್ಮ ಗುಂಠಿತಃ ।
ಏವಂ ಚರತ ಭದ್ರಂ ವ ಸ್ತತಃ ಸಿದ್ಧಿಮವಾಪ್ಸ್ಯಥ ॥೧೨॥

ಅತುಲಮಿಹ ಮಹಾಭಯ ಪ್ರಣಾಶಹೇತುಂ ।
ಶಿವಕಥಿತಂ ಪರಮಂ ಪದಂ ವಿದಿತ್ವಾ ॥
ವ್ಯಪಗತ ಭವಲೋಭಮೋಹ ಚಿತ್ತಾಃ ।
ಪ್ರಣಿಪತಿತಾಃ ಸಹಸಾ ಶಿರೋಭಿರುಗ್ರಂ ॥೧೩॥

ತತಃ ಪ್ರಮುದಿತಾ ವಿಪ್ರಾಃ ಶ್ರುತ್ವೈವಂ ಕಥಿತಂ ತದಾ ।
ಗಂಧೋದಕೈಃ ಸುಶುದ್ಧೈಶ್ಚ ಕುಶಪುಷ್ಪವಿಮಿಶ್ರಿತೈಃ ॥೧೪॥

ಸ್ನಾಪಯಂತಿ ಮಹಾಕುಂಭೈಃ ಅದ್ಭಿರೇವ ಮಹೇಶ್ವರಂ ।
ಗಾಯಂತಿ ವಿವಿಧೈರ್ಗುಹ್ಯೈಃ ಹುಂಕಾರೈಶ್ಚಾಪಿ ಸುಸ್ವರೈಃ ॥೧೫॥

---

ಯೋಗಿಯಂತೆ ಬೂದಿಯನ್ನು ಬಳಿದುಕೊಂಡು ವಿಹಾರಮಾಡುತ್ತಿರುವನು. ಈ ರೀತಿಯಲ್ಲಿ ಸುಖಕರವಾದ ಶಿವವ್ರತವನ್ನು ನೀವು ಮಾಡಿದ ಬಳಿಕ ಸಿದ್ಧಿಯನ್ನು ಪಿಡೆವಿರಿ.

೧೩. ಆ ದೇವದಾರು ವನದಲ್ಲಿದ್ದ ಮುನಿಗಳು ಈ ಲೋಕದಲ್ಲಿ ಮಹಾಭಯ ನಾಶಕ್ಕೆ ಕಾರಣವಾದ ಶಿವನು ಹೇಳಿದ ಬ್ರಹ್ಮಸ್ವರೂಪವನ್ನು ತಿಳಿದು, ಪ್ರಪಂಚ ಸಂಬಂಧವಾದ ಆಶ್ಯಾಸೆ, ಅಜ್ಞಾನ ಮುಂತಾದ ಮನಸ್ಸಿನ ದೋಷಗಳನ್ನು ಕಳೆದುಕೊಂಡು, ಆ ಕ್ಷಣದಲ್ಲಿಯೇ ಶಿವನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿದರು.

೧೪–೧೫. ಆಮೇಲೆ ಸಂತೋಷವನ್ನು ಹೊಂದಿದ ಆ ಬ್ರಾಹ್ಮಣರು ಆಗ ಶಿವನು ಹೇಳಿದ ಮಾತನ್ನು ಕೇಳಿ ಪರಿಶುದ್ಧವಾದ ದರ್ಭೆ ಮತ್ತು ಹೂಗಳನ್ನು ಮಿಶ್ರ ಮಾಡಿದ ಸುಗಂಧವಾದ ನೀರನ್ನು ದೊಡ್ಡ ದೊಡ್ಡ ಕಲಶಗಳಲ್ಲಿ ತಂದು, ಆ ನೀರಿನಿಂದ ಮಹೇಶ್ವರನಿಗೆ ಅಭಿಷೇಕವನ್ನು ಮಾಡಿದರು. ಬಗೆಬಗೆಯ ಗೋಪ್ಯವಾದ ಸ್ತೋತ್ರಗಳಿಂದ ಹೊಗಳಿ, ಉತ್ತಮವಾದ ಸ್ವರಗಳಿಂದ ಕೂಡಿದ, ಹುಂಕಾರಯುಕ್ತವಾದ, ಸಾಮ ವೇದಮಂತ್ರದಿಂದ ಕೂಡಿದ ಗಾನವನ್ನು ಮಾಡಿದರು.

ನಮೋ ದೇವಾಧಿದೇವಾಯ ಮಹಾದೇವಾಯ ವೈ ನಮಃ ।
ಅರ್ಧನಾರೀಶರೀರಾಯ ಸಾಂಖ್ಯಯೋಗಪ್ರವರ್ತಿನೇ ॥೧೬॥

ಮೇಘವಾಹನ ಕೃಷ್ಣಾಯ ಗಜಚರ್ಮನಿವಾಸಿನೇ ।
ಕೃಷ್ಣಾಜಿನೋತ್ತರೀಯಾಯ ವ್ಯಾಲಯಜ್ಞೋಪವೀತಿನೇ ॥೧೭॥

ಸುರಚಿತ ಸುವಿಚಿತ್ರ ಕುಂಡಲಾಯ ।
ಸುರಚಿತಮಾಲ್ಯವಿಭೂಷಣಾಯ ತುಭ್ಯಂ ॥
ಮೃಗಪತಿವರಚರ್ಮವಾಸಸೇ ಚ ।
ಪ್ರಥಿತಯಶಸೇ ನಮೋಽಸ್ತು ಶಂಕರಾಯ ॥೧೮॥

ತತಸ್ತಾನ್ ಸಮುನೀನ್ಪ್ರೀತಃ ಪ್ರತ್ಯುವಾಚ ಮಹೇಶ್ವರಃ ।
ಪ್ರೀತೋಽಸ್ಮಿ ತಪಸಾ ಯುಷ್ಮಾನ್ವರಂ ವೃಣುತ ಸುವ್ರತಾಃ ॥೧೯॥

---

೧೬-೧೭. ದೇವತೆಗಳಿಗೆಲ್ಲರಿಗೂ ದೇವನಾದ ಓ ಮಹಾದೇವನೇ, ಅರ್ಧ ಸ್ತ್ರೀರೂಪನಾದ, ಸಾಂಖ್ಯಶಾಸ್ತ್ರವನ್ನೂ, ಯೋಗಶಾಸ್ತ್ರವನ್ನೂ ಪ್ರಪಂಚದಲ್ಲಿ ವಿಸ್ತರಿಸಿದವನೂ, ಮೇಘರೂಪದಿಂದ ಪ್ರಪಂಚದಲ್ಲಿ ಸಂಚರಿಸುವ ವಿಷ್ಣುಸ್ವರೂಪನೂ, ಆನೆಯ ಚರ್ಮವನ್ನುಟ್ಟವನೂ, ಜಿಂಕೆಯ ಚರ್ಮವನ್ನು ಹೊದ್ದವನೂ, ಸರ್ಪವನ್ನೇ ಯಜ್ಞೋಪವೀತವಾಗಿ ಧರಿಸಿದವನೂ, ಆದ ನಿನಗೆ ನಮಸ್ಕಾರವು.

೧೮. ಚೆನ್ನಾಗಿ ಮಾಡಿದ ವಿಚಿತ್ರವಾದ ಕರ್ಣಾಭರಣ ಮತ್ತು ಹಾರಗಳುಳ್ಳವನಾದ, ಹುಲಿಯ ಚರ್ಮವೇ ವಸ್ತ್ರವಾಗಿ ಉಳ್ಳ, ಪ್ರಸಿದ್ಧವಾದ ಕೀರ್ತಿಯುಳ್ಳ, ಸುಖವನ್ನುಂಟುಮಾಡುವ, ನಿನಗೆ ನಮಸ್ಕಾರವು; ಎಂದು ನಮಸ್ಕರಿಸಿದರು.

೧೯. ಆಮೇಲೆ ಸಂತೋಷವನ್ನು ಹೊಂದಿದ ಮಹೇಶ್ವರನು ಆ ಮುನಿಗಳನ್ನು ಕುರಿತು ನಿಮ್ಮ ತಪಸ್ಸುಗಳಿಂದ ನಾನು ಸಂತೋಷವನ್ನು ಹೊಂದಿದೆನು. ಉತ್ತಮವಾದ ವ್ರತವನ್ನು ಮಾಡಿದ ನೀವು ವರವನ್ನು ಕೇಳಿಕೊಳ್ಳಿರಿ, ಎಂದು ಹೇಳಿದನು.

ತತಸ್ತೇ ಮುನಯಃ ಸರ್ವೇ ಪ್ರಣಿಪತ್ಯ ಮಹೇಶ್ವರಂ ।
ಭೃಗ್ವಂಗಿರಾ ವಸಿಷ್ಠಶ್ಚ ವಿಶ್ವಾಮಿತ್ರಸ್ತಥೈವ ಚ ॥೨೦॥

ಗೌತಮೋಽತ್ರಿಃ ಸುಕೇಶಶ್ಚ ಪುಲಸ್ತ್ಯಃ ಪುಲಹಃ ಕ್ರತುಃ ।
ಮರೀಚಿಃ ಕಶ್ಯಪಃ ಕಣ್ವಃ ಸಂವರ್ತಶ್ಚ ಮಹಾತಪಾಃ ॥೨೧॥

ತೇ ಪ್ರಣಮ್ಯ ಮಹಾದೇವ ಮಿದಂ ವಚನ ಮಬ್ರುವನ್ ।
ಭಸ್ಮಸ್ನಾನಂ ಚ ನಗ್ನತ್ವಂ ವಾಮತ್ವಂ ಪ್ರತಿಲೋಮತಾ ॥೨೨॥

ಸೇವ್ಯಾಸೇವ್ಯತ್ವಮೇವಂ ಚ ಹ್ಯೇತದಿಚ್ಛಾಮ ವೇದಿತುಂ ।
ತತಸ್ತೇಷಾಂ ವಚಃ ಶ್ರುತ್ವಾ ಭಗವಾನ್ಪರಮೇಶ್ವರಃ ॥೨೩॥

ಸಸ್ಮಿತಂ ಪ್ರಾಹ ಸಂಪ್ರೇಕ್ಷ್ಯ ಸರ್ವಾನ್ಮುನಿವರಾಂಸ್ತದಾ ॥೨೪॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಋಷಿ ವಾಕ್ಯಂ ನಾಮ ತ್ರಯಸ್ತ್ರಿಂಶೋಽಧ್ಯಾಯಃ

---

೨೦–೨೧. ಆ ಬಳಿಕ ಆ ಮುನಿಗಳೆಲ್ಲರೂ ಮಹೇಶ್ವರನಿಗೆ ನಮಸ್ಕಾರ ಮಾಡಿದರು. ಭೃಗು, ಅಂಗಿರಸ್ಸು, ವಸಿಷ್ಠ, ವಿಶ್ವಾಮಿತ್ರ, ಗೌತಮ, ಅತ್ರಿ, ಸುಕೇಶ, ಪುಲಸ್ತ್ಯ, ಪುಲಹ, ಕ್ರತು, ಮರೀಚಿ, ಕಶ್ಯಪ, ಕಣ್ವ, ಸಂವರ್ತ, ಎಂಬ ಮಹಾ ತಪಸ್ವಿಗಳೆಲ್ಲರೂ ಮಹಾದೇವನಿಗೆ ನಮಸ್ಕರಿಸಿ ಈ ಮಾತನ್ನು ಹೇಳಿದರು.

೨೨. ಭಸ್ಮದಿಂದ ದೇಹವನ್ನು ಶುದ್ಧಿಮಾಡಿಕೊಳ್ಳುವಿಕೆ, ನಗ್ನವಾಗಿರುವ ರೀತಿ, ಸವ್ಯ ಮಾರ್ಗ ಪ್ರಕಾರ, ಕಾಮ್ಯ ಕರ್ಮಮಾರ್ಗದ ಆಚಾರ, ಈ ನಾಲ್ಕು ಆಚರಿಸುವುದಕ್ಕೆ ಯೋಗ್ಯವೇ? ಅಲ್ಲವೇ? ಎಂಬುದನ್ನು ತಿಳಿಯಬೇಕೆಂದು ನಾವು ಅಪೇಕ್ಷಿಸುತ್ತೇವೆ, ಎಂದು ಹೇಳಿದರು.

೨೩–೨೪. ತರುವಾಯ ಮಹಾಮಹಿಮನಾದ ಪರಮೇಶ್ವರನು ಅವರ ಮಾತನ್ನು ಕೇಳಿ ಆ ಸಮಸ್ತ ಮುನಿಗಳನ್ನೂ ನೋಡುತ್ತಾ ಮಂದಹಾಸದಿಂದ ಹೇಳುವುದಕ್ಕೆ ಪ್ರಾರಂಭಿಸಿದನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಋಷಿಗಳ ವಾಮಾಚಾರದ ಪ್ರಶ್ನೆ ಎಂಬ ಮೂವತ್ತುಮೂರನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಚತುಸ್ತ್ರಿಂಶೋऽಧ್ಯಾಯಃ

**ಚತುಸ್ತ್ರಿಂ ಶೇ ಮಹೇಶೋಕ್ತ ಋಷಿ ಪ್ರಶ್ನಾನು ಸಾರತಃ ।**
**ಭಸ್ಮ ಸ್ನಾನಾದಿ ಸೇವ್ಯತ್ವಪ್ರಕಾರೋ ಹಿ ನಿರೂಪ್ಯತೇ ॥**

**॥ ಶ್ರೀ ಭಗವಾನು ವಾಚ ॥**

**ಏತದ್ವಃ ಸಂಪ್ರವಕ್ಷ್ಯಾಮಿ ಕಥಾ ಸರ್ವಸ್ವಮುದ್ಯ ವೈ ।**
**ಅಗ್ನಿರ್ಹ್ಯಹಂ ಸೋಮ ಕರ್ತಾ ಸೋಮಶ್ಚಾಗ್ನಿ ಮುಪಾಶ್ರಿತಃ ॥**
**ಕೃತ ಮೇತ ದ್ವಹ ತ್ಯಗ್ನಿರ್ಭೂಯೋ ಲೋಕ ಸಮಾಶ್ರಯಾತ್ ।**
**ಅಸ ಕೃತ್ತ್ವಗ್ನಿನಾ ದಗ್ಧಂ ಜಗತ್ ಸ್ಥಾವರ ಜಂಗಮಂ ॥ ೨ ॥**

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಮೂವತ್ತುನಾಲ್ಕನೆಯ ಅಧ್ಯಾಯವು.

(ಈ ಮೂವತ್ತುನಾಲ್ಕನೆಯ ಅಧ್ಯಾಯದಲ್ಲಿ ಋಷಿಗಳ ಪ್ರಶ್ನೆಗೆ ಅನುಸಾರವಾಗಿ ಮಹೇಶ್ವರನು ಹೇಳಿದ ಭಸ್ಮಸ್ನಾನವೇ ಮುಂತಾದುವುಗಳನ್ನು ಮಾಡುವ ರೀತಿಯನ್ನು ವರ್ಣಿಸಲಾಗುವುದು.)

೧. ಮಹೇಶ್ವರನು ಹೇಳಿದನು: ಭಸ್ಮಸ್ನಾನಾದಿಗಳ ಮಹಿಮೆಯು ಅನೇಕ ವೇದಗಳಲ್ಲಿ ಅನೇಕ ಕಥೆಗಳೊಡನೆ ಹೇಳಿರುವುದು. ಆ ಕಥೆಗಳ ಸಾರವನ್ನು ಈಗ ನಿಮಗೆ ನಿಶ್ಚಯಿಸಿ ಹೇಳುವೆನು. ಸೋಮಕ್ಕೆ ಕಾರಣವಾದ ಅಗ್ನಿಯೇ ನಾನು. ಅಗ್ನಿಯನ್ನು ಆಶ್ರಯಿಸಿದ ಸೋಮನೂ ನಾನೇ.

೨. ಈ ಭರತ ಖಂಡವನ್ನಾಶ್ರಯಿಸಿರುವುದರಿಂದ ಅಗ್ನಿಯು ಕರ್ಮಫಲವನ್ನುಂಟು ಮಾಡುವನು. ಈ ಚರಾಚರ ಪ್ರಾಣಿಗಳಿಂದ ಕೂಡಿದ ಪ್ರಪಂಚವು ಅನೇಕ ವೇಳೆ ಅಗ್ನಿಯಿಂದ ಸುಟ್ಟು ಹೋಗಿರುವುದು.

ಭಸ್ಮಸಾದ್ವಿಹಿತಂ ಸರ್ವಂ ಪವಿತ್ರ ಮಿದ ಮುತ್ತಮಂ ।
ಭಸ್ಮನಾ ವೀರ್ಯ ಮಾಸ್ಥಾಯ ಭೂತಾನಿ ಪರಿ ಷಿಂಚತಿ ॥ ೩ ॥
ಅಗ್ನಿ ಕಾರ್ಯಂ ಚ ಯಃ ಕೃತ್ವಾ ಕರಿಷ್ಯತಿ ತ್ರಿಯಾ ಯುಷಂ ।
ಭಸ್ಮನಾ ಮಮ ವೀರ್ಯೇಣ ಮುಚ್ಯತೇ ಸರ್ವ ಕಿಲ್ಬಿಷೈಃ ॥ ೪ ॥
ಭಾಸತೇ ತ್ಯೇವ ಯದ್ಭಸ್ಮ ಶುಭಂ ಭಾವಯತೇ ಚ ಯತ್ ।
ಭಕ್ಷಣಾ ತ್ಸರ್ವ ಪಾಪಾನಾಂ ಭಸ್ಮೇತಿ ಪರಿಕೀರ್ತಿತಂ ॥ ೫ ॥
ಊಷ್ಮಪಾಃ ಪಿತರೋ ಜ್ಞೇಯಾ ದೇವಾ ವೈ ಸೋಮ ಸಂಭವಾಃ ।
ಅಗ್ನೀ ಷೋ ಮಾತ್ಮಕಂ ಸರ್ವಂ ಜಗತ್ ಸ್ಥಾವರ ಜಂಗಮಂ ॥ ೬ ॥
ಅಹ ಮಗ್ನಿ ರ್ಮಹಾತೇಜಾಃ ಸೋಮಶ್ಚೈಷಾ ಮಹಾಂಬಿಕಾ ।
ಅಹ ಮಗ್ನಿಶ್ಚ ಸೋಮಶ್ಚ ಪ್ರಕೃತ್ಯಾ ಪುರುಷಃ ಸ್ವಯಂ ॥ ೭ ॥

---

೩. ಭಸ್ಮವಾದ ಈ ಪ್ರಪಂಚದ ವಸ್ತುಗಳೆಲ್ಲವೂ ಪರಿಶುದ್ಧವಾದುದಾಗಿರುವುವು. ಭಸ್ಮದಿಂದಲೇ ಸಾಮರ್ಥ್ಯವನ್ನು ಹೊಂದಿದ ಸೋಮನು ಪ್ರಾಣಿಗಳನ್ನು ತನ್ನ ಕಿರಣಗಳಿಂದ ತಣ್ಣಗೆ ಮಾಡಿ ಜೀವಿಸುವಂತೆ ಮಾಡುವನು.

೪. ಯಾವನಾದರೂ ಅಗ್ನಿಕಾರ್ಯವನ್ನು ಮಾಡಿ "ತ್ರಿಯಾಯುಷಂ ಜಮದಗ್ನೇ" ಎಂಬ ಮಂತ್ರದಿಂದ ನನ್ನ ಶಕ್ತಿಸ್ವರೂಪವಾದ ಭಸ್ಮವನ್ನು ಧರಿಸಿದರೆ ಅವನು ಸಮಸ್ತ ಪಾಪಗಳಿಂದಲೂ ಬಿಡುಗಡೆಯನ್ನು ಹೊಂದುವನು.

೫. ಪ್ರಕಾಶಿಸುವುದರಿಂದಲೂ, ಶುಭವನ್ನು ಭಾವಿಸುವುದರಿಂದಲೂ, ಸಕಲ ಪಾಪಗಳನ್ನೂ ಭಕ್ಷಿಸುವುದರಿಂದಲೂ, ಭಾಸ್, ಭೂ, ಭಕ್ಷ್, ಈ ಮೂರು ಧಾತುಗಳಿಂದ ಭಸ್ಮವೆಂಬ ರೂಪವು ಸಿದ್ಧವಾಗಿರುವುದು.

೬. ಸೋಮನಿಂದಲೇ ಊಷ್ಮರೆಂಬ ಪಿತೃದೇವತೆಗಳು ಉತ್ಪನ್ನರಾದರು. ಈ ಚರಾಚರ ಪ್ರಪಂಚವೆಲ್ಲವೂ ಅಗ್ನೀ ಷೋಮಸ್ವರೂಪವಾದುದಾಗಿರುವುದು.

೭. ನಾನೇ ಅಗ್ನಿಯು, ದೇವಿಯೇ ಸೋಮನು. ಪ್ರಕೃತಿಯೊಡನೆ ಕೂಡಿದ ಪುರುಷನಾದ ನಾನು ಅಗ್ನೀಷೋಮಸ್ವರೂಪನು.

ತಸ್ಮಾದ್ಭಸ್ಮ ಮಹಾಭಾಗಾ ಮದ್ವೀರ್ಯ ಮಿತಿ ಚೋಚ್ಯತೇ ।
ಸ್ವ ವೀರ್ಯಂ ವ ಪುಷಾ ಚೈವ ಧಾರಯಾಮೀತಿ ವೈ ಸ್ಥಿತಿಃ ॥ ೮ ॥

ತದಾ ಪ್ರಭೃತಿ ಲೋಕೇಷು ರಕ್ಷಾರ್ಥ ಮಶುಭೇ ಷು ಚ ।
ಭಸ್ಮನಾ ಕ್ರಿಯತೇ ರಕ್ಷಾ ಸೂತಿಕಾನಾಂ ಗೃಹೇಷು ಚ ॥ ೯ ॥

ಭಸ್ಮಸ್ನಾನ ವಿಶುದ್ಧಾತ್ಮಾ ಜಿತಕ್ರೋಧೋ ಜಿತೇಂದ್ರಿಯಃ ।
ಮತ್ಸಮೀಪಂ ಸಮಾಗಮ್ಯ ನ ಭೂಯೋ ವಿನಿವರ್ತತೇ ॥೧೦॥

ವ್ರತಂ ಪಾಶುಪತಂ ಯೋಗಂ ಕಾಪಿಲಂ ಚೈವ ನಿರ್ಮಿತಂ ।
ಪೂರ್ವಂ ಪಾಶುಪತಂ ಹ್ಯೇತ ನ್ನಿರ್ಮಿತಂ ತದನುತ್ತಮಂ ॥೧೧॥

ಶೇಷಾ ಶ್ಚಾ ಶ್ರಮಿಣಃ ಸರ್ವೇ ಪಶ್ಚಾತ್ಸೃಷ್ಟಾಃ ಸ್ವಯಂಭುವಾ ।
ಸೃಷ್ಟಿರೇಷಾ ಮಯಾ ಸೃಷ್ಟಾ ಲಜ್ಜಾ ಮೋಹ ಭಯಾತ್ಮಿಕಾ ॥೧೨॥

---

೮. ಆದುದರಿಂದಲೇ ಎಲೈ ಪುಣ್ಯವಂತರಾದ ಮುನಿಗಳೇ, ಭಸ್ಮವು ನನ್ನ ವೀರ್ಯವೆಂದು ಹೆಸರು ಹೊಂದಿರುವುದು. ನನ್ನ ವೀರ್ಯವನ್ನು ನನ್ನ ಶರೀರದಲ್ಲಿಯೇ ಧರಿಸಿರುವೆನು. (ಆದುದರಿಂದಲೇ ನಾನು ತೇಜೋವಂತನಾಗಿರುವೆನು, ಎಂದು ಭಾವವು.)

೯. ಆ ಕಾಲದಿಂದಲೂ ಲೋಕದಲ್ಲಿ ಅಶುಭ ಕಾಲಗಳಲ್ಲಿ ರಕ್ಷಣಾರ್ಥವಾಗಿಯೂ, ಪ್ರಸವ ಗೃಹಪಲ್ಲಿಯೂ, ಭಸ್ಮದಿಂದ ರಕ್ಷಣೆಯನ್ನು ಕಲ್ಪಿಸುವರು.

೧೦. ಕೋಪವನ್ನು ಜಯಿಸಿ ಜಿತೇಂದ್ರಿಯನಾದವನು ಭಸ್ಮಸ್ನಾನದಿಂದ ಶುದ್ಧನಾಗಿ ನನ್ನ ಸಮೀಪಕ್ಕೆ ಬಂದಮೇಲೆ ಮತ್ತೆ ಭೂಮಿಯಲ್ಲಿ ಹುಟ್ಟುವುದಿಲ್ಲ.

೧೧. ಪಾಶುಪತವ್ರತ, ಯೋಗಶಾಸ್ತ್ರ, ಸಾಂಖ್ಯಶಾಸ್ತ್ರ, ಇವುಗಳನು ನಾನೇ ನಿರ್ಮಿಸಿದೆನು. ಇವುಗಳಲ್ಲಿ ಪಾಶುಪತವ್ರತವೇ ಶ್ರೇಷ್ಠವಾದುದರಿಂದ ಅದನ್ನು ಮೊದಲು ನಿರ್ಮಿಸಿದೆನು.

೧೨. ಮಿಕ್ಕ ಸಕಲವಾದ ಆಶ್ರಮ ಧರ್ಮಸಹಿತರಾದ ಜೀವರುಗಳನ್ನೂ ನಾಚಿಕೆ, ಅಜ್ಞಾನ, ಭಯ, ಮುಂತಾದ ಭಯಗಳಿಂದ ಕೂಡಿದ ಪ್ರಪಂಚವನ್ನೂ ನನ್ನಿಂದಲೇ ಪ್ರೇರಿತನಾದ ಬ್ರಹ್ಮನು ಸೃಷ್ಟಿಸಿದನು.

ನಗ್ನಾ ಏವಹಿ ಜಾಯಂತೇ ದೇವತಾ ಮುನಯಸ್ತಥಾ ।
ಯೇ ಚಾನ್ಯೇ ಮಾನವಾ ಲೋಕೇ ಸರ್ವೇ ಜಾಯಂ ತ್ಯವಾಸಸಃ ॥

ಇಂದ್ರಿಯೈ ರಜಿತೈರ್ನಗ್ನೋ ದುಕೂಲೇ ನಾಪಿ ಸಂ ವೃತಃ ।
ತೈರೇವ ಸಂವೃತೈ ರ್ಗುಪ್ತೋ ನ ವಸ್ತ್ರಂ ಕಾರಣಂ ಸ್ಮೃತಂ ॥೧೪॥

ಕ್ಷಮಾ ಧೃತಿ ರಹಿಂಸಾ ಚ ವೈರಾಗ್ಯಂ ಚೈವ ಸರ್ವಶಃ ।
ತುಲ್ಯೌ ಮಾನಾವ ಮಾನೌ ಚ ತದಾವರಣ ಮುತ್ತಮಂ ॥೧೫॥

ಭಸ್ಮಸ್ನಾನೇನ ದಿಗ್ಧಾಂಗೋ ಧ್ಯಾಯತೇ ಮನಸಾ ಭವಂ ।
ಯದ್ಯಕಾರ್ಯ ಸಹಸ್ರಾಣಿ ಕೃತ್ವಾ ಯಃ ಸ್ನಾತಿ ಭಸ್ಮನಾ ॥೧೬॥

ತತ್ಸರ್ವಂ ದಹತೇ ಭಸ್ಮ ಯಥಾಗ್ನಿ ಸ್ತೇಜಸಾ ವನಂ ।
ತಸ್ಮಾ ದ್ಯತ್ನ ಪರೋ ಭೂತ್ವಾ ತ್ರಿಕಾಲ ಮಪಿ ಯಃ ಸದಾ ॥೧೭॥

---

೧೩. ದೇವತೆಗಳೂ, ಮುನಿಗಳೂ, ಮಾನವರೂ, ಇವರೆಲ್ಲರೂ ಹುಟ್ಟುವಾಗ ವಸ್ತ್ರವನ್ನು ಧರಿಸದೇ ಬೆತ್ತಲೆಯಾಗಿಯೇ ಹುಟ್ಟುತ್ತಾರೆ.

೧೪-೧೫. ವಸ್ತ್ರಗಳನ್ನು ಧರಿಸಿದ್ದರೂ ಇಂದ್ರಿಯ ಜಯವಿಲ್ಲದವರನ್ನು ನಗ್ನರೆನ್ನಬೇಕು. ಇಂದ್ರಿಯ ಜಯವುಳ್ಳವರೇ ವಸ್ತ್ರಾಲಂಕಾರ ಸಹಿತರೆನ್ನಬೇಕು. ನಗ್ನಾವಸ್ಥೆಗೆ ವಸ್ತ್ರ ಒಂದೇ ಕಾರಣವಲ್ಲ. ಕ್ಷಮಾ ಗುಣ, ಧೈರ್ಯ, ಅಹಿಂಸೆ, ವೈರಾಗ್ಯ ಮಾನಾಪಮಾನಗಳಲ್ಲಿ ಸಮಾನ ಸ್ಥಿತಿ, ಈ ಗುಣಗಳೇ ಮನುಷ್ಯನಿಗೆ ಉತ್ತಮವಾದ ಆವರಣವೆನಿಸುವುವು. ಈ ವಿಷಯದಲ್ಲಿ ವಿಷ್ಣುಪುರಾಣದ ಮೂರನೆಯ ಅಂಶದಲ್ಲಿ "ಋಗ್ಯಜುಃ ಸಾಮ ಸಂಜ್ಞೇಯಂ ತ್ರಯೀವರ್ಣಾವೃತಿ ರ್ದ್ವಿಜ । ಏತಾ ಮುಜ್ಝತಿ ಯೋಮೋಹಾತ್ಸ ನಗ್ನಃ ಪಾತಕೀ ಸ್ಮೃತಃ ॥ ಯಸ್ತು ಸಂತ್ಯಜ್ಯಗಾರ್ಹಸ್ಥ್ಯಂ ವಾನಪ್ರಸ್ಥೋ ನ ಜಾಯತೇ । ಪರಿವ್ರಾಡ್ವಾಪಿ ಮೈತ್ರೇಯ ಸನಗ್ನಃ ಪಾಪ ಕೃನ್ನರಃ ॥ ಎಂದು ಹೇಳಿದೆ.

೧೬-೧೭. ಮನುಷ್ಯನು ಭಸ್ಮಸ್ನಾನಮಾಡಿ ಅಂದರೆ ಮೈಗೆಲ್ಲಕ್ಕೂ ಭಸ್ಮವನ್ನು ಬಳಿದುಕೊಂಡು ಮನಸ್ಸಿನಲ್ಲಿ ಶಿವನನ್ನು ಧ್ಯಾನಮಾಡಿದರೆ ಆ ಭಸ್ಮವು ಅವನು ಮಾಡಿದ ಅನೇಕ ಪಾಪಕಾರ್ಯಗಳನ್ನು, ಅಗ್ನಿಯು ವನವನ್ನು ಸುಡುವಂತೆ, ಸುಡುವುದು. ಆದುದರಿಂದ ಪ್ರಯತ್ನ ಪೂರ್ವಕವಾಗಿ ಪ್ರಾತಃಕಾವಲ್ಲಿಯೂ ಮಧ್ಯಾಹ್ನ ಮತ್ತು ಸಾಯಂಕಾಲಗಳಲ್ಲಿಯೂ ಭಸ್ಮಸ್ನಾನ ಮಾಡಿದವನು ಗಾಣಪತ್ಯ ಪದವಿಯನ್ನು ಹೊಂದುವನು.

ಭಸ್ಮನಾ ಕುರುತೇ ಸ್ನಾನಂ ಗಾಣಪತ್ಯಂ ಸ ಗಚ್ಛತಿ ।
ಸಮಾಹೃತ್ಯ ಕ್ರತೂನ್ ಸರ್ವಾನ್ ಗೃಹೀತ್ವಾ ವ್ರತ ಮುತ್ತಮಂ ॥
ಧ್ಯಾಯಂತಿ ಯೇ ಮಹಾದೇವಂ ಲೀಲಾ ಸದ್ಭಾವ ಭಾವಿತಾಃ ।
ಉತ್ತರೇಣಾರ್ಯ ಪಂಥಾನಂ ತೇ ಮೃತತ್ವ ಮವಾ ಪ್ನುಯುಃ ॥೧೯॥
ದಕ್ಷಿಣೇನ ಚ ಪಂಥಾನಂ ಯೇ ಶ್ಮಶಾನಾನಿ ಭೇಜಿರೇ ।
ಅಣಿಮಾ ಗರಿಮಾ ಚೈವ ಲಘಿಮಾ ಪ್ರಾಪ್ತಿ ರೇವ ಚ ॥೨೦॥
ಇಚ್ಛಾ ಕಾಮಾವಸಾಯಿತ್ವಂ ತಥಾ ಪ್ರಾ ಕಾಮ್ಯ ಮೇವಚ ।
ಈಶಿತ್ವಂಚ ವಶಿತ್ವಂಚ ಅಮರತ್ವಂಚ ತೇ ಗತಾಃ ॥೨೧॥
ಇಂದ್ರಾದಯು ಸ್ತಥಾ ದೇವಾಃ ಕಾಮಿಕವ್ರತ ಮಾಸ್ಥಿತಾಃ ।
ಐಶ್ವರ್ಯಂ ಪರಮಂ ಪ್ರಾಪ್ಯ ಸರ್ವೇ ಪ್ರಥಿತ ತೇಜಸಃ ॥೨೨॥
ವ್ಯಪಗತ ಮದಮೋಹ ಮುಕ್ತರಾಗ
ಸ್ತಮರಜ ದೋಷ ವಿವರ್ಜಿತ ಸ್ವಭಾವಃ ।

---

೧೮–೧೯. ವೇದ ವಿಹಿತವಾದ ಪಂಚ ಮಹಾಯಜ್ಞಗಳನ್ನೂ ಮಾಡಿ ಉತ್ತಮವಾದ ಮನಶ್ಶಾಂತಿ ರೂಪವಾದ ವ್ರತವನ್ನು ಹಿಡಿದು ಲೀಲಾ ವಿಗ್ರಹ ರೂಪವನ್ನು ಧರಿಸಿದ ಮಹಾದೇವನನ್ನು ಯಾರು ಧ್ಯಾನಿಸುವರೋ ಅವರು ಪೂಜ್ಯವಾದ ಉತ್ತರಮಾರ್ಗವನ್ನು ಅನುಸರಿಸಿ ಮೋಕ್ಷವನ್ನು ಹೊಂದುವರು.

೨೦–೨೧. ದಕ್ಷಿಣ ಮಾರ್ಗವನ್ನು ಅನುಸರಿಸಿ ಯಾರು ನಾಶಕರವಾದ ಕಾಮ್ಯ ಕರ್ಮಗಳನ್ನು ಮಾಡುವರೋ, ಅವರು ಅಣಿಮಾದಿ ಅಷ್ಟ ಸಿದ್ಧಿಗಳನ್ನೂ, ದೇವತ್ವವನ್ನೂ, ಹೊಂದುವರು.

೨೨. ಇಂದ್ರಾದಿ ದೇವತೆಗಳು ಕಾಮ್ಯ ವ್ರತವನ್ನು ಮಾಡಿ ಉತ್ತಮವಾದ ಐಶ್ವರ್ಯವನ್ನು ಪಡೆದು ಎಲ್ಲರೂ ಪ್ರಸಿದ್ಧವಾದ ತೇಜಸ್ಸುಳ್ಳವರಾದರು.

೨೩. ರಾಗ, ಮದ, ಮೋಹ, ಈ ದೋಷಗಳಿಲ್ಲದೆ, ತಮಸ್ಸು, ರಜಸ್ಸು ಎಂಬ ಗುಣಗಳನ್ನು ಕಳೆದುಕೊಂಡು, ಜನನ ಮರಣ ರೂಪವಾದ ಸಂಸಾರವು ನಾಶಕವೆಂದು ತಿಳಿದು, ಮನುಷ್ಯನು ಯಾವಾಗಲೂ ಪಾಶುಪತ

ಪರಿಭವ ಮಿದ ಮುತ್ತಮಂ ವಿದಿತ್ವಾ
ಪಶುಪತಿ ಯೋಗ ಪರೋ ಭವೇತ್ಸ ದೈವ ॥೨೩॥

ಇಮಂ ಪಾಶುಪತಂ ಧ್ಯಾಯನ್ ಸರ್ವ ಪಾಪ ಪ್ರಣಾಶನಂ ।
ಯಃ ಪಠೇ ಚ್ಚ ಶುಚಿರ್ಭೂತ್ವಾ ಶ್ರದ್ದಧಾನೋ ಜಿತೇಂದ್ರಿಯಃ ॥
ಸರ್ವ ಪಾಪ ವಿಶುದ್ಧಾತ್ಮಾ ರುದ್ರ ಲೋಕಂ ಸ ಗಚ್ಛತಿ ।
ತೇ ಸರ್ವೇ ಮುನಯಃ ಶ್ರುತ್ವಾ ವಸಿಷ್ಠಾದ್ಯಾ ದ್ವಿಜೋತ್ತಮಾಃ ॥
ಭಸ್ಮ ಪಾಂಡುರ ದಿಗ್ಧಾಂಗಾ ಬಭೂವು ರ್ವಿಗತ ಸ್ಪೃಹಾಃ ।
ರುದ್ರ ಲೋಕಾಯ ಕಲ್ಪಾಂತೇ ಸಂಸ್ಥಿತಾಃ ಶಿವ ತೇಜಸಾ ॥೨೬॥

ತಸ್ಮಾನ್ನ ನಿಂದ್ಯಾಃ ಪೂಜ್ಯಾಶ್ಚ ವಿಕೃತಾ ಮಲಿನಾ ಅಪಿ ।
ರೂಪಾನ್ವಿತಾಶ್ಚ ವಿಪ್ರೇಂದ್ರಾಃ ಸದಾಯೋಗೀಂದ್ರ ಶಂಕಯಾ॥೨೭॥

---

ವ್ರತವನ್ನು ಆಚರಿಸುತ್ತಿರಬೇಕು. ಪಶುಪತಿ ಶಬ್ದಕ್ಕೆ ಅರ್ಥವನ್ನು ರುದ್ರ ಭಾಷ್ಯದಲ್ಲಿ "ಬ್ರಹ್ಮಾದ್ಯಾಃ ಪಶವಃ ತೇಷಾಂ ಪತಿಃ ಪಶುಪತಿಃ ಸ್ಮೃತಃ" । ಎಂದು ಹೇಳಿದೆ.

೨೪. ಸಮಸ್ತ ಪಾಪಗಳನ್ನೂ ನಾಶಮಾಡುವ ಈಶ್ವರನು ಹೇಳಿದ ಈ ಪಾಶುಪತವ್ರತವನ್ನು ಧ್ಯಾನಮಾಡಿ ಶುಚಿಯಾಗಿ ಜಿತೇಂದ್ರಿಯನಾಗಿ ಭಕ್ತಿಯಿಂದ ಯಾರು ಹೇಳುವರೋ, ಕೇಳುವರೋ, ಅವರು ಸಮಸ್ತ ಪಾಪಗಳನ್ನೂ ಕಳೆದುಕೊಂಡು ಶುದ್ಧನಾದ ಮನಸ್ಸುಳ್ಳವರಾಗಿ ರುದ್ರ ಲೋಕಕ್ಕೆ ಹೋಗುವರು.

೨೫-೨೬. ಶಿವನು ಹೇಳಿದ ಮಾತನ್ನು ಕೇಳಿ ವಸಿಷ್ಠರೇ ಮೊದಲಾದ ಬ್ರಾಹ್ಮಣಶ್ರೇಷ್ಠರು ಬೆಳ್ಳಗಿರುವ ಭಸ್ಮವನ್ನು ತಮ್ಮ ಶರೀರಗಳಿಗೆ ಬಳಿದು ಕೊಂಡು ಆಶಾರಹಿತರಾಗಿ ಶಿವತೇಜಸ್ಸಿನಿಂದ ಕೂಡಿದವರಾಗಿ ಕಲ್ಪಾಂತ ವಲ್ಲಿ ರುದ್ರಲೋಕಕ್ಕೆ ಹೋಗಲು ಸಿದ್ಧರಾಗಿರುವರು.

೨೭-೨೮. ಆದುದರಿಂದ ಎಲೈ ಬ್ರಾಹ್ಮಣರೇ, ಶಿವನಲ್ಲಿ ಭಕ್ತಿಯುಳ್ಳವರೂ, ವ್ರತನಿಯಮವುಳ್ಳವರೂ, ರೂಪವಂತರಾಗಲಿ, ಕುರೂಪಿಗಳಾಗಲೀ, ಶುದ್ಧರಾಗಲಿ, ಮಲಿನರಾಗಲಿ, ಅಂಥವರನ್ನು ನಿಂದಿಸದೆ, ಯೋಗಿ

ಬಹುನಾ ಕಿಂ ಪ್ರಲಾಪೇನ ಭವಭಕ್ತಾ ದ್ವಿಜೋತ್ತಮಾಃ ।
ಸಂಪೂಜ್ಯಾಃ ಸರ್ವಯತ್ನೇನ ಶಿವವನ್ನಾತ್ರ ಸಂಶಯಃ ॥೨೮॥
ಮುನಿನಾಶ್ಚೈವ ವಿಪ್ರೇಂದ್ರಾ ಭವ ಭಕ್ತಾದ್ದೃಢ ವ್ರತಾಃ ।
ದಧೀಚಸ್ತು ಯಥಾ ದೇವದೇವಂ ಜಿತ್ವಾ ವ್ಯವಸ್ಥಿತಃ ॥೨೯॥
ನಾರಾಯಣಂ ತಥಾ ಲೋಕೇ ರುದ್ರಭಕ್ತ್ಯಾ ನ ಸಂಶಯಃ ।
ತಸ್ಮಾ ತ್ಸರ್ವಪ್ರಯತ್ನೇನ ಭಸ್ಮದಿಗ್ಧತನೂ ರುಹಾಃ ॥೩೦॥
ಜಟಿನೋ ಮುಂಡಿನಶ್ಚೈವ ನಗ್ನಾ ನಾನಾ ಪ್ರಕಾರಿಣಃ ।
ಸಂಪೂಜ್ಯಾಃ ಶಿವವನ್ನಿತ್ಯಂ ಮನಸಾ ಕರ್ಮಣಾ ಗಿರಾ ॥೩೧॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಯೋಗ ಪ್ರಶಂಸಾನಾಮ
ಚತುಸ್ತ್ರಿಂಶೋಽಧ್ಯಾಯಃ

---

ಶ್ರೇಷ್ಠರೆಂದು ಪೂಜಿಸಬೇಕು. ಹೆಚ್ಚು ಹೇಳುವುದೇನು? ಶಿವನಲ್ಲಿ ಭಕ್ತಿಯುಳ್ಳವರನ್ನು ಸರ್ವಪ್ರಯತ್ನದಿಂದಲೂ ಪೂಜಿಸಬೇಕು.

೨೯–೩೧. ದಧೀಚನೆಂಬ ಮುನಿಯು ರುದ್ರನಲ್ಲಿರುವ ಭಕ್ತಿಯಿಂದಲೇ ದೇವದೇವನಾದ ನಾರಾಯಣನನ್ನು ಜಯಿಸಿದನು. ಆದುದರಿಂದ ಸರ್ವ ಪ್ರಯತ್ನದಿಂದಲೂ ಭಸ್ಮವನ್ನು ಬಳಿದುಕೊಂಡ ಅವಯವಗಳುಳ್ಳ ಜಟಾಧಾರಿಗಳಾಗಲೀ, ಮುಂಡನ ಮಾಡಿಕೊಂಡವರಾಗಲೀ, ಬೆತ್ತಲೆಯಾಗಿರುವವರಾಗಲಿ, ಬಗೆಬಗೆಯ ವೇಷಗಳಲ್ಲಿರುವ ಶಿವನ ಭಕ್ತರನ್ನು ಶಿವನಂತೆ ಮನೋವಾಕ್ಕಾಯ ರೂಪವಾದ ತ್ರಿಕರಣ ಶುದ್ಧಿಯಿಂದ ಪೂಜಿಸಬೇಕು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಯೋಗಿಗಳ ಗುಣಗಳನ್ನು ತಿಳಿಸುವ ಮೂವತ್ತುನಾಲ್ಕನೆಯ ಅಧ್ಯಾಯವು ಮುಗಿದುದು.

*

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಪಂಚತ್ರಿಂಶೋಽಧ್ಯಾಯಃ

**ಪಂಚ ತ್ರಿಂಶೇ ದಧೀಚೋಽಥ ವಿವಾದೇ ಕ್ಷುಪಘಾತಿನಃ ।**
**ವಜ್ರದೇಹಂ ಮಹೇ ಶಾತ್ತು ಲಬ್ಧ್ವಾ ಮೂರ್ಧ್ನ್ಯಹನತ್ ಕ್ಷುಪಂ ॥**

**॥ ಸನತ್ಕುಮಾರ ಉವಾಚ ॥**

**ಕಥಂ ಜಘಾನ ರಾಜಾನಂ ಕ್ಷುಪಂ ಪಾದೇನ ಸುವ್ರತ ।**
**ದಧೀಚಃ ಸಮರೇ ಜಿತ್ವಾ ದೇವದೇವಂ ಜನಾರ್ದನಂ ॥ ೧ ॥**
**ವಜ್ರಾಸ್ಥಿತ್ವಂ ಕಥಂ ಲೇಭೇ ಮಹಾದೇವಾನ್ಮಹಾತಪಾಃ ।**
**ವಕ್ತು ಮರ್ಹಸಿ ಶೈಲಾದೇ ಜಿತೋ ಮೃತ್ಯುಸ್ತ್ವಯಾ ಯಥಾ॥ ೨ ॥**

**॥ ಶೈಲಾದಿರುವಾಚ ॥**

**ಬ್ರಹ್ಮಪುತ್ರೋ ಮಹಾತೇಜಾ ರಾಜಾ ಕ್ಷುಪ ಇತಿ ಸ್ಮೃತಃ ।**
**ಅಭೂನ್ಮಿತ್ರೋ ದಧೀಚಸ್ಯ ಮುನೀಂದ್ರಸ್ಯ ಜನೇಶ್ವರಂ ॥ ೩ ॥**

---

### ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಮೂವತ್ತೈದನೆಯ ಅಧ್ಯಾಯವು

(ಮೂವತ್ತೈದನೆಯ ಅಧ್ಯಾಯದಲ್ಲಿ ಕ್ಷುಪನೆಂಬ ರಾಜನಿಗೂ, ದಧೀಚನೆಂಬ ಋಷಿಗೂ, ವಿವಾದವು ಪ್ರಾಪ್ತವಾಗಲು ದಧೀಚನು ಮಹೇಶ್ವರನಿಂದ ವಜ್ರದೇಹವನ್ನು ಪಡೆದು ಕ್ಷುಪನನ್ನು ತಲೆಯಮೇಲೆ ಹೊಡೆದನೆಂದು ವರ್ಣಿಸಲಾಗುವುದು.)

೧-೨. ಸನತ್ಕುಮಾರನು ಹೇಳಿದನು: ಓ ಶಿಲಾದ ಮುನಿಯ ಪುತ್ರನಾದ ನಂದಿಯೇ, ದಧೀಚನು ಯುದ್ಧದಲ್ಲಿ ವಿಷ್ಣುವನ್ನು ಜಯಿಸಿ, ರಾಜನಾದ ಕ್ಷುಪನನ್ನು ಒದೆದು, ಹೇಗೆ ಕೊಂದನು? ಮಹಾ ತಪಸ್ವಿಯಾದ ಅವನು ಮಹಾದೇವನಿಂದ ವಜ್ರಸ್ವರೂಪವಾದ ಮೂಳೆಯನ್ನು ಹೇಗೆ ಪಡೆದನು? ನೀನು ಮೃತ್ಯುವನ್ನು ಹೇಗೆ ಜಯಿಸಿದೆ? ಇವೆಲ್ಲವನ್ನೂ ನನಗೆ ವಿಸ್ತಾರವಾಗಿ ಹೇಳು

೩-೪. ನಂದಿಯು ಹೇಳಿದನು: ಹಿಂದೆ ಬ್ರಹ್ಮಪುತ್ರನಾದ ಕ್ಷುಪನೆಂಬ ಪ್ರಸಿದ್ಧನಾದ ರಾಜನಿದ್ದನು. ಆ ರಾಜನು ದಧೀಚ, ಎಂಬ

ಚಿರಾತ್ತಯೋಃ ಪ್ರಸಂಗಾದ್ವೈ ವಾದಃ ಕ್ಷುಪ ದಧೀಚಯೋಃ ।
ಅಭವತ್ ಕ್ಷತ್ರಿಯಃ ಶ್ರೇಷ್ಠೋ ವಿಪ್ರ ಏವೇತಿ ವಿಶ್ರುತಃ ॥ ೪ ॥

ಅಷ್ಟಾನಾಂ ಲೋಕಪಾಲಾನಾಂ ವಪುರ್ಧಾರಯತೇ ನೃಪಃ ।
ತಸ್ಮಾದಿಂದ್ರೋ ಹ್ಯಹಂ ವಹ್ನಿರ್ಯಮಶ್ಚ ನಿರ್ಋತಿ ಸ್ತಥಾ ॥ ೫ ॥

ವರುಣಶ್ಚೈವ ವಾಯುಶ್ಚ ಸೋಮೋ ಧನದ ಏವಚ ।
ಈಶ್ವರೋಽಹಂ ನ ಸಂದೇಹೋ ನಾವ ಮಂತವ್ಯ ಏವಚ ॥ ೬ ॥

ಮಹತೀ ದೇವತಾ ಯಾ ಸಾ ಮಹತಶ್ಚಾಪಿ ಸುವ್ರತ ।
ತಸ್ಮಾತ್ತ್ವಯಾ ಮಹಾಭಾಗ ಚ್ಯಾವನೇಯ ಸದಾ ಹ್ಯಹಂ ॥ ೭ ॥

ನಾವಮಂತವ್ಯ ಏವೇಹ ಪೂಜನೀಯ ಶ್ಚ ಸರ್ವಥಾ ।
ಶ್ರುತ್ವಾ ತಥಾ ಮತಂ ತಸ್ಯ ಕ್ಷುಪಸ್ಯ ಮುನಿಸತ್ತಮಃ ॥ ೮ ॥

---

ಋಷಿಶ್ರೇಷ್ಠನಿಗೆ ಸ್ನೇಹಿತನಾಗಿದ್ದನು. ಆ ಕ್ಷುಪ ದಧೀಚರಿಗೆ ಬಹಳಕಾಲ ದಿಂದ ಬ್ರಾಹ್ಮಣನು ಶ್ರೇಷ್ಠನೋ? ಕ್ಷತ್ರಿಯನು ಶ್ರೇಷ್ಠನೋ? ಎಂಬ ವಿಷಯದಲ್ಲಿ ಪ್ರಸಿದ್ಧವಾದ ಒಂದು ವಾದವು ನಡೆಯಿತು.

೫–೬. ರಾಜನು ಎಂಟು ಜನ ಲೋಕಪಾಲಕರ ಅಂಶಗಳುಳ್ಳ ಶರೀರವನ್ನು ಧರಿಸಿದವನು. ಆದುದರಿಂದ ನಾನೇ ಇಂದ್ರ, ಅಗ್ನಿ, ಯಮ, ನಿಋತಿ, ವರುಣ, ವಾಯು, ಕುಬೇರ, ಈಶಾನ, ಇವರಸ್ವರೂಪನು. ನನ್ನನ್ನು ಅಪಮಾನ ಮಾಡಲಾಗದು.

೭. ಎಲೈ ಚ್ಯವನ ಮುನಿಯ ಪುತ್ರನಾದ ದಧೀಚನೇ, ದೇವತೆ ಗಳಲ್ಲಿ ಶ್ರೇಷ್ಠನಾದ ವಿಷ್ಣುವೇ ನಾನಾಗಿರುವೆನು. ಇದಕ್ಕೆ ಪ್ರಮಾಣವು "ನಾವಿಷ್ಣುಃ ಪೃಥಿವೀಪತಿಃ" "ನರಾಣಾಂ ಚ ನರೇಂದ್ರೋಽಹಂ" ಎಂಬುವುಗಳು, ಆದುದರಿಂದ ನನ್ನನ್ನು ನಿರಾಕರಿಸಲಾಗದು. ಯಾವಾ ಗಲೂ ನಾನು ಪೂಜ್ಯನಾಗಿರುವೆನು, ಎಂದು ಹೇಳಿದನು.

೮–೯. ಆ ಮುನಿಶ್ರೇಷ್ಠನು ಕ್ಷುಪನ ಈ ರೀತಿಯಾದ ಅಭಿಪ್ರಾಯ ವನ್ನು ಕೇಳಿ ಬ್ರಾಹ್ಮಣಶ್ರೇಷ್ಠನಾದ ತಾನು ಆತ್ಮಗೌರವದಿಂದ ಕೂಡಿದ

ದಧೀಚಶ್ಚ್ಯವನಿ ಶ್ಚೋಗ್ರೋ ಗೌರವಾದಾತ್ಮನೋ ದ್ವಿಜಃ ।
ಅತಾಡಯತ್ ಕ್ಷುಪಂ ಮೂರ್ಧ್ನಿ ದಧೀಚೋ ವಾಮ ಮುಷ್ಟಿನಾ ॥
ಚಿಚ್ಛೇದ ವಜ್ರೇಣ ಚ ತಂ ದಧೀಚಂ ಬಲವಾನ್ ಕ್ಷುಪಃ ॥ ೯ ॥

ಬ್ರಹ್ಮಲೋಕೇ ಪುರಾಽಸೌ ಹಿ ಬ್ರಹ್ಮಣಃ ಕ್ಷುತಸಂಭವಃ ।
ಲಬ್ಧಂ ವಜ್ರಂ ಚ ಕಾರ್ಯಾರ್ಥಂ ವಜ್ರಿಣಾ ಚೋದಿತಃ ಪ್ರಭುಃ ॥

ಸ್ವೇಚ್ಛಯೈವ ನರೋ ಭೂತ್ವಾ ನರಪಾಲೋ ಬಭೂವ ಸಃ ।
ತಸ್ಮಾದ್ರಾಜಾ ಸ ವಿಪ್ರೇಂದ್ರ ಮಜಯದ್ವೈ ಮಹಾಬಲಃ ॥೧೧॥

ಯಥಾ ವಜ್ರಧರಃ ಶ್ರೀಮಾ ನ್ಬಲವಾನ್ ತಮಸಾಽನ್ವಿತಃ ।
ಪಪಾತ ಭೂಮೌ ನಿಹತೋ ವಜ್ರೇಣ ದ್ವಿಜ ಪುಂಗವಃ ॥೧೨॥

ಸಸ್ಮಾರ ಚ ತದಾ ತತ್ರ ದುಃಖಾದ್ವೈ ಭಾರ್ಗವಂ ಮುನಿಂ ।
ಶುಕ್ರೋಽಪಿ ಸಂಧಯಾಮಾಸ ತಾಡಿತಂ ಕುಲಿಶೇನ ತಂ ॥೧೩॥

---

ವನಾಗಿ ಕೋಪವನ್ನು ಹೊಂದಿ ತನ್ನ ಎಡಗೈ ಮುಷ್ಟಿಯಿಂದ ಕ್ಷುಪನ ತಲೆಯಮೇಲೆ ಹೊಡೆದನು.

೯—೧೧. ಬಲಶಾಲಿಯಾದ ಕ್ಷುಪನು ವಜ್ರಾಯುಧದಿಂದ ದಧೀಚನನ್ನು ಹೊಡೆದನು. ಹಿಂದೆ ಕ್ಷುಪನು ಬ್ರಹ್ಮಲೋಕದಲ್ಲಿ ಬ್ರಹ್ಮನು ಸೀತ ಸಮಯದಲ್ಲಿ ಆ ಸೀನಿನಿಂದ ಹುಟ್ಟಿದನು. ರಾಕ್ಷಸರನ್ನು ಜಯಿಸುವುದಕ್ಕಾಗಿ ದೇವೇಂದ್ರನು ಅವನಿಗೆ ವಜ್ರಾಯುಧವನ್ನು ಕೊಟ್ಟನು. ಬಳಿಕ ಆ ಕ್ಷುಪನು ತನ್ನ ಇಚ್ಛೆಯಿಂದಲೇ ಮನುಷ್ಯನಾಗಿ ರಾಜನಾದನು. ಆದುದರಿಂದ ಮಹಾಬಲಶಾಲಿಯಾದ ಅವನು ಬ್ರಾಹ್ಮಣ ಶ್ರೇಷ್ಠನಾದ ದಧೀಚನನ್ನು ಜಯಿಸಿದನು.

೧೨. ಬ್ರಾಹ್ಮಣ ಶ್ರೇಷ್ಠನಾದ ದಧೀಚನು ದೇವೇಂದ್ರನಂತೆ ತೇಜಸ್ವಿಯಾಗಿಯೂ, ಬಲಶಾಲಿಯಾಗಿಯೂ, ಇದ್ದರೂ, ವಜ್ರದ ಏಟಿನಿಂದ ಜ್ಞಾನತಪ್ಪಿದವನಾಗಿ ಭೂಮಿಯ ಮೇಲೆ ಬಿದ್ದನು.

೧೩—೧೪. ದಧೀಚನು ಆ ಸಮಯದಲ್ಲಿ ದುಃಖದಿಂದ ತನ್ನ ವಂಶದಲ್ಲಿ ಮಹಾಮಹಿಮನಾದ ಶುಕ್ರನನ್ನು ಯೋಗಶಕ್ತಿಯಿಂದ ಸ್ಮರಿಸಿದನು.

ಯೋಗಾದೇತ್ಯ ದಧೀಚಸ್ಯ ದೇಹಂ ದೇಹಭೃತಾಂ ವರಃ ।
ಸಂಧಾಯ ಪೂರ್ವ ವದ್ದೇಹಂ ದಧೀಚ ಸ್ಯಾಹ ಭಾರ್ಗವಃ ॥೧೪॥

ಭೋ ದಧೀಚ ಮಹಾಭಾಗ ದೇವದೇವ ಮುಮಾಪತಿಂ ।
ಸಂಪೂಜ್ಯ ಪೂಜ್ಯಂ ಬ್ರಹ್ಮಾದ್ಯೈಃ ದೇವದೇವಂ ನಿರಂಜನಂ ॥೧೫॥

ಅವಧ್ಯೋ ಭವ ವಿಪ್ರರ್ಷೇ ಪ್ರಸಾದಾತ್ ತ್ರ್ಯಂಬಕಸ್ಯ ತು ।
ಮೃತ ಸಂಜೀವನಂ ತಸ್ಮಾತ್ ಲಬ್ಧ ಮೇತನ್ಮಯಾ ದ್ವಿಜ ॥೧೬॥

ನಾಸ್ತಿ ಮೃತ್ಯುಭಯಂ ಶಂಭೋಃ ಭಕ್ತಾನಾಮಿಹ ಸರ್ವತಃ ।
ಮೃತಸಂಜೀವನಂ ಚಾಪಿ ಶೈವ ಮದ್ಯ ವದಾಮಿ ತೇ ॥೧೭॥

ತ್ರಿಯಂಬಕಂ ಯಜಾಮಹೇ ತ್ರೈಲೋಕ್ಯಪಿತರಂ ಪ್ರಭುಂ ।
ತ್ರಿಮಂಡಲಸ್ಯ ಪಿತರಂ ತ್ರಿಗುಣಸ್ಯ ಮಹೇಶ್ವರಂ ॥೧೮॥

---

ಶುಕ್ರನು ಯೋಗಶಕ್ತಿಯಿಂದ ಅಲ್ಲಿಗೆ ಬಂದು ವಜ್ರದ ಏಟನ್ನು ತಿಂದು ಬೇರೆಬೇರೆಯಾಗಿದ್ದ ದೇಹದ ಭಾಗಗಳನ್ನು ಕೂಡಿಸಿ ದಧೀಚನ ಶರೀರ ವನ್ನು ಮೊದಲಿನಂತೆ ಮಾಡಿ ಅವನನ್ನು ಕುರಿತು ಹೇಳಿದನು.

೧೫. ಓ ಮಹನೀಯನಾದ ದಧೀಚನೇ, ದೇವದೇವನೂ, ನಿರ್ಗು ಣನೂ, ವಿಕಾರರಹಿತನೂ, ಬ್ರಹ್ಮಾದಿದೇವತೆಗಳಿಗೆ ಪೂಜ್ಯನೂ ಆದ ಉಮಾಪತಿಯಾದ ಶಂಕರನನ್ನು ಪೂಜಿಸು. ಆ ದೇವನ ಅನುಗ್ರಹದಿಂದ ಬ್ರಹ್ಮರ್ಷಿಯಾದ ನೀನು ಅವಧ್ಯನಾಗು.

೧೬–೧೭. ಎಲೈ ಬ್ರಾಹ್ಮಣನೇ, ಆ ಶಂಕರನಿಂದ ನಾನು ಮೃತ ಸಂಜೀವಿನೀ ಮಂತ್ರವನ್ನು ಪಡೆದಿರುವೆನು. ಶಿವನಭಕ್ತರಿಗೆ ಈ ಲೋಕ ದಲ್ಲಿಯಾವುದರಿಂದಲೂ ಮೃತ್ಯುವಿನ ಭಯವಿರುವುದಿಲ್ಲ. ಈಗ ನಿನಗೆ ಶಿವನ ಸಂಬಂಧವಾದ ಮೃತಸಂಜೀವಿನೀ ಮಂತ್ರವನ್ನು ಉಪದೇಶ ಮಾಡುವೆನು.

೧೮–೧೯. ತ್ರಿಯಂಬಕಂ ಯಜಾಮಹೇ ಎಂಬ ಮೃತಸಂಜೀವಿನೀ ಮಂತ್ರದಲ್ಲಿ ತ್ರಿಯಂಬಕಂ, ಎಂಬ ಪದಕ್ಕೆ ಮೂರು ಲೋಕಕ್ಕೂ ತಂದೆ ಎಂದು ಅರ್ಥವು. ಇದಲ್ಲದೆ ತ್ರಿ ಶಬ್ದಕ್ಕೆ ಸೋಮ, ಅಗ್ನಿ, ಸೂರ್ಯ ಮಂಡಲಗಳೆಂದೂ, ಸತ್ವರಜಸ್ತಮೋಗುಣಗಳೆಂದೂ, ಬುದ್ಧಿ, ಅಹಂಕಾರ,

ತ್ರಿತತ್ವಸ್ಯ ತ್ರಿವಹ್ನೇಶ್ಚ ತ್ರಿಧಾಭೂತಸ್ಯ ಸರ್ವತಃ ।
ತ್ರಿದೇವಸ್ಯ ಮಹಾದೇವಂ ಸುಗಂಧಿಂ ಪುಷ್ಟಿವರ್ಧನಂ ॥೧೯॥
ಸರ್ವಭೂತೇಷು ಸರ್ವತ್ರ ತ್ರಿಗುಣೇ ಪ್ರಕೃತೌ ತಥಾ ।
ಇಂದ್ರಿಯೇಷು ತಥಾಽನ್ಯೇಷು ದೇವೇಷು ಚ ಗಣೇಷು ಚ ॥೨೦॥
ಪುಷ್ಪೇಷು ಗಂಧವತ್ ಸೂಕ್ಷ್ಮಃ ಸುಗಂಧಿಃ ಪರಮೇಶ್ವರಃ ।
ಪುಷ್ಟಿಶ್ಚ ಪ್ರಕೃತಿರ್ಯಸ್ಮಾತ್ಪುರುಷಸ್ಯ ದ್ವಿಜೋತ್ತಮ ॥೨೧॥
ಮಹದಾದಿ ವಿಶೇಷಾಂತ ವಿಕಲ್ಪಸ್ಯಾಪಿ ಸುವ್ರತ ।
ವಿಷ್ಣೋಃ ಪಿತಾಮಹಸ್ಯಾಪಿ ಮುನೀನಾಂ ಚ ಮಹಾಮುನೇ ॥೨೨॥

---

ಮನಸ್ಸು, ಎಂಬ ಮೂರು ತತ್ವಗಳಿಂದೂ, ಗಾರ್ಹಪತ್ಯ, ಆಹವನೀಯ, ದಕ್ಷಿಣಾಗ್ನಿಗಳಿಂದೂ, ಬ್ರಹ್ಮ, ವಿಷ್ಣು, ರುದ್ರರೂಪರಾದ ಮೂರು ದೇವತೆಗಳಿಂದೂ, ಅರ್ಥವಾಗುವುದು. ಅಂಬಕ ಶಬ್ದಕ್ಕೆ ತಂದೆ ಎಂದು ಅರ್ಥವು. ಇನ್ನು ಮುಂದೆ "ಸುಗಂಧಿಂ ಪುಷ್ಟಿವರ್ಧನಂ" ಎಂಬ ಪದಗಳ ಅರ್ಥವನ್ನು ಹೇಳಲಾಗುವುದು.

೨೦. ಸಮಸ್ತ ಪ್ರಾಣಿಗಳಲ್ಲಿಯೂ, ಎಲ್ಲ ದೇಶ ಕಾಲಗಳಲ್ಲಿಯೂ, ಸತ್ವರಜಸ್ತಮೋಗುಣರೂಪವಾದ ಪ್ರಕೃತಿಯಲ್ಲಿಯೂ, ಇಂದ್ರಿಯ ಗಳಲ್ಲಿಯೂ, ಇತರ ದೇವತೆಗಳಲ್ಲಿಯೂ, ಗಣಗಳಲ್ಲಿಯೂ, ಹುವ್ವಿನಲ್ಲಿ ವಾಸನೆಯಿರುವಂತೆ ಪರಮೇಶ್ವರನು ಸೂಕ್ಷ್ಮರೂಪದಿಂದಿರುವನು. ಆದುದರಿಂದ ಅವನನ್ನು ಸುಗಂಧಿಯೆಂದು ವೇದದಲ್ಲಿ ಹೇಳಿರುವುದು. ಹೂವಿನಲ್ಲಿರುವ ಸುವಾಸನೆಯು ಹೇಗೆ ಮೂಗು ಒಂದರಿಂದಲೇ ತಿಳಿಯಲು ಸಾಧ್ಯವೋ ಹಾಗೆ, ಪರಮೇಶ್ವರನು ಶುದ್ಧವಾದ ಮನಸ್ಸು ಒಂದರಿಂದಲೇ ತಿಳಿಯಲು ಸಾಧ್ಯನೆಂದು ಮುಖ್ಯಾಭಿಪ್ರಾಯವು.

೨೧–೨೨ ಎಲೈ ಬ್ರಾಹ್ಮಣೋತ್ತಮನೇ, ಪುರುಷನಾದ ಪರಮೇಶ್ವರನಿಗೆ ಪ್ರಕೃತಿಯೇ ಪುಷ್ಟಿಯು. ಮಹತ್ತತ್ವವೊದಲುಗೊಂಡು ಸಮಸ್ತ ಪ್ರಪಂಚ ವಿಕಲ್ಪಗಳಿಗೂ ಮಾಯೆಯೇ ಕಾರಣವು. ವಿಷ್ಣು, ಬ್ರಹ್ಮ, ಮುನಿಗಳು, ದೇವೇಂದ್ರ, ದೇವತೆಗಳು, ಇವರೆಲ್ಲರೂ ಪ್ರಕೃತಿಯಿಂದಲೇ ಅಭಿವೃದ್ಧಿ ಹೊಂದುವರು. ಇವರನ್ನು ಅಭಿವೃದ್ಧಿ ಹೊಂದಿಸುವವನು ಪುರುಷನು, ಆದುದರಿಂದ ಪರಮೇಶ್ವರನನ್ನು ಪುಷ್ಟಿವರ್ಧನನೆಂದು ಹೇಳಿರುವುದು.

ಇಂದ್ರಸ್ಯಾಪಿ ಚ ದೇವಾನಾಂ ತಸ್ಮಾದ್ವೈ ಪುಷ್ಟಿವರ್ಧನಃ ।
ತಂ ದೇವಮಮೃತಂ ರುದ್ರಂ ಕರ್ಮಣಾ ತಪಸಾ ತಥಾ ॥೨೩॥
ಸ್ವಾಧ್ಯಾಯೇನ ಚ ಯೋಗೇನ ಧ್ಯಾನೇನ ಚ ಯಜಾಮಹೇ ।
ಸತ್ಯೇನಾನೇನ ಮುಕ್ಷೀಯಾ ನ್ಮೃತ್ಯುಪಾಶಾದ್ಭವಃ ಸ್ವಯಂ ॥೨೪॥
ಬಂಧ ಮೋಕ್ಷಕರೋ ಯಸ್ಮಾ ದುರ್ವಾರುಕ ಮಿವ ಪ್ರಭುಃ ।
ಮೃತಸಂಜೀವನೋ ಮಂತ್ರೋ ಮಯಾ ಲಬ್ಧಸ್ತು ಶಂಕರಾತ್ ॥
ಜಪ್ತ್ವಾ ಹುತ್ವಾಽಭಿ ಮಂತ್ರ್ಯೈವಂ ಜಲಂ ಪೀತ್ವಾ ದಿವಾನಿಶಂ ।
ಲಿಂಗಸ್ಯ ಸನ್ನಿಧೌ ಧ್ಯಾತ್ವಾ ನಾಸ್ತಿ ಮೃತ್ಯುಭಯಂ ದ್ವಿಜ ॥೨೬॥
ತಸ್ಯ ತದ್ವಚನಂ ಶ್ರುತ್ವಾ ತಪಸಾಽಽರಾಧ್ಯ ಶಂಕರಂ ।
ವಜ್ರಾಸ್ಥಿತ್ವಮವಧ್ಯತ್ವ ಮದೀನತ್ವಂ ಚ ಲಬ್ಧವಾನ್ ॥೨೭॥

---

೨೩–೨೪. ಅಮೃತಸ್ವರೂಪನೂ, ಅಜ್ಞಾನ ನಾಶಕನೂ ಆದ ಆ ದೇವದೇವನನ್ನು ವ್ರತಗಳಿಂದಲೂ, ತಪಸ್ಸಿನಿಂದಲೂ, ವೇದಾಧ್ಯಯನದಿಂದಲೂ, ಸಮಾಧಿಯಿಂದಲೂ, ಧ್ಯಾನದಿಂದಲೂ, ಪೂಜಿಸುತ್ತೇವೆ. ಸತ್ಯಸ್ವರೂಪನಾದ ಆ ದೇವನನ್ನಾಶ್ರಯಿಸುವುದರಿಂದ ನಮ್ಮನ್ನು ಮೃತ್ಯುಪಾಶದಿಂದ ಅವನು ಬಿಡಿಸುವನು. ಸೌತೇಕಾಯಿಯು ಸೂರ್ಯಕಿರಣದಿಂದ ದಪ್ಪವಾಗಿ ತಾನಾಗಿಯೇ ಹೇಗೆ ತೊಟ್ಟು ಕಳಚಿ ಬೀಳುವುದೋ ಹಾಗೆ, ಶಿವನ ಸಂಬಂಧದಿಂದ ಅಜ್ಞಾನವೆಂಬ ಹೃದಯಗ್ರಂಥಿಯು ಕಳಚಿಹೋಗಲಾಗಿ ಮೋಕ್ಷವುಂಟಾಗುವುದು. ಎಂದು ದೃಷ್ಟಾಂತದಿಂದ ಸೂಚಿತವಾಯಿತು.

೨೫–೨೬. ಮೃತಸಂಜೀವಿನೀ ಮಂತ್ರವನ್ನು ಶಿವನ ಅನುಗ್ರಹದಿಂದ ನಾನು ಪಡೆದಿರುವೆನು. ಈ ಮಂತ್ರವನ್ನು ಜಪಮಾಡಿ, ಹೋಮಮಾಡಿ, ಹಗಲೂ ರಾತ್ರಿಯೂ ಈ ಮಂತ್ರದಿಂದ ಅಭಿಮಂತ್ರಿಸಿದ ನೀರನ್ನು ಪಾನಮಾಡಿ, ಲಿಂಗದ ಸಮೀಪದಲ್ಲಿ ಧ್ಯಾನಮಾಡಿ, ವಿಧ್ಯುಕ್ತವಾಗಿ ಅನುಷ್ಠಾನಮಾಡಿ, ಶಿವನ ಅನುಗ್ರಹದಿಂದ ಮೃತ್ಯುಭಯವನ್ನು ನಿವಾರಣೆ ಮಾಡಿಕೊಳ್ಳಬಹುದು.

೨೭. ದಧೀಚನು ಶುಕ್ರನ ಮಾತನ್ನು ಕೇಳಿ ತಪಸ್ಸಿನಿಂದ ಶಿವನನ್ನು ಪೂಜಿಸಿ ವಜ್ರದಂತಿರುವ ಮೂಳೆಗಳನ್ನೂ, ಅವಧ್ಯತ್ವ, ಅದೀನತ್ವಗಳನ್ನೂ ಪಡೆದನು.

ಏವಮಾರಾಧ್ಯ ದೇವೇಶಂ ದಧೀಚೋ ಮುನಿಸತ್ತಮಃ ।
ಪ್ರಾಪ್ಯಾವಧ್ಯತ್ವಮನ್ಯೈಶ್ಚ ವಜ್ರಾಸ್ಥಿತ್ವಂ ಪ್ರಯತ್ನತಃ ॥೨೮॥
ಅತಾಡಯಚ್ಚ ರಾಜೇಂದ್ರಂ ಪಾದಮೂಲೇನ ಮೂರ್ಧನಿ ।
ಕ್ಷುಪೋ ದಧೀಚಂ ವಜ್ರೇಣ ಜಘಾನೋರಸಿ ಚ ಪ್ರಭುಃ ॥೨೯॥
ನಾಭೂನ್ನಾಶಾಯ ತದ್ವಜ್ರಂ ದಧೀಚಸ್ಯ ಮಹಾತ್ಮನಃ ।
ಪ್ರಭಾವಾತ್ಪರಮೇಶಸ್ಯ ವಜ್ರಬದ್ಧಶರೀರಿಣಃ ॥೩೦॥
ದೃಷ್ಟ್ವಾಽಪ್ಯವಧ್ಯತ್ವಮದೀನತಾಂ ಚ ।
ಕ್ಷುಪೋ ದಧೀಚಸ್ಯ ತದಾ ಪ್ರಭಾವಂ ॥
ಆರಾಧಯಾಮಾಸ ಹರಿಂ ಮುಕುಂದಂ ।
ಇಂದ್ರಾನುಜಂ ಪ್ರೇಕ್ಷ್ಯ ತದಾಽಂಬುಜಾಕ್ಷಂ ॥೩೧॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಕ್ಷುಪ ಪರಾಭವೋ
ನಾಮ ಪಂಚ ತ್ರಿಂಶೋಽಧ್ಯಾಯಃ

---

೨೮-೩೦. ಮುನಿಶ್ರೇಷ್ಠನಾದ ದಧೀಚನು ಈ ರೀತಿಯಲ್ಲಿ ಪರಮೇಶ್ವರನನ್ನು ಪೂಜಿಸಿ ಅವಧ್ಯತ್ವವನ್ನೂ, ವಜ್ರಾಸ್ಥಿತ್ವವನ್ನೂ ಪಡೆದ, ರಾಜನಾದ ಕ್ಷುಪನನ್ನು ತನ್ನ ಕಾಲಿನಿಂದ ತಲೆಯ ಮೇಲೆ ಒದೆದನು. ಕ್ಷುಪನೂ ವಜ್ರಾಯುಧದಿಂದ ದಧೀಚನ ಎದೆಗೆ ಹೊಡೆದನು. ಪರಮೇಶ್ವರನ ಮಹಿಮೆಯಿಂದ ವಜ್ರ ಶರೀರಿಯಾದ ಅವನಿಗೆ ರಾಜನ ವಜ್ರಾಯುಧದ ಏಟಿನಿಂದ ನೋವಾಗಲಿಲ್ಲ.

೩೧. ಕ್ಷುಪರಾಜನು ದಧೀಚನ ಅವಧ್ಯತ್ವ ಅದೀನತ್ವರೂಪವಾದ, ಮಹಿಮೆಯನ್ನು ನೋಡಿ ಮೋಕ್ಷವನ್ನು ಕೊಡುವ ಕಮಲಾಕ್ಷನೂ ಉಪೇಂದ್ರನೂ, ಆದ ಹರಿಯನ್ನು ತಪಸ್ಸಿನಿಂದ ಪೂಜಿಸಿದನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಕ್ಷುಪರಾಜನ ಅಪಜಯವನ್ನು
ತಿಳಿಸುವ ಮೂವತ್ತೈದನೆಯ ಅಧ್ಯಾಯವು ಮುಗಿದುದು.

*

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಷಟ್ತ್ರಿಂಶೋಽಧ್ಯಾಯಃ

**ಷಟ್ತ್ರಿಂಶೇಽಸ್ಮಿನ್ಕ್ಷುಪಕೃತಂ ವೈಷ್ಣವಂ ಸ್ತೋತ್ರಮುಚ್ಯತೇ ।**
**ವಿಷ್ಣೋರ್ದೇವಗಣೈರ್ಯುದ್ಧೇ ದಧೀಚಾಚ್ಚ ಪರಾಭವಃ ॥**

**॥ ನಂದಿ ಉವಾಚ ॥**

**ಪೂಜಯಾ ತಸ್ಯ ಸಂತುಷ್ಟೋ ಭಗವಾನ್ಪುರುಷೋತ್ತಮಃ ।**
**ಶ್ರೀಭೂಮಿಸಹಿತಃ ಶ್ರೀಮಾನ್ ಶಂಖಚಕ್ರ ಗದಾಧರಃ ॥ ೧ ॥**

**ಕಿರೀಟೀ ಪದ್ಮಹಸ್ತಶ್ಚ ಸರ್ವಾಭರಣಭೂಷಿತಃ ।**
**ಪೀತಾಂಬರಶ್ಚ ಭಗವಾನ್ ದೇವೈರ್ದೈತ್ಯೈಶ್ಚ ಸಂವೃತಃ ॥ ೨ ॥**

**ಪ್ರದದೌ ದರ್ಶನಂ ತಸ್ಮೈ ದಿವ್ಯಂ ವೈ ಗರುಡಧ್ವಜಃ ।**
**ದಿವ್ಯೇನ ದರ್ಶನೇನೈವ ದೃಷ್ಟ್ವಾ ದೇವಂ ಜನಾರ್ದನಂ ॥ ೩ ॥**

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಮೂವತ್ತಾರನೆಯ ಅಧ್ಯಾಯವು

(ಈ ಮೂವತ್ತಾರನೆಯ ಅಧ್ಯಾಯದಲ್ಲಿ ಕ್ಷುಪರಾಜನು ಮಾಡಿದ ವಿಷ್ಣು ಸ್ತೋತ್ರವನ್ನೂ ವಿಷ್ಣುವು ದೇವತೆಗಳ ಗುಂಪಿನೊಡನೆ ಸೇರಿ ದಧೀಚನ ಮೇಲೆ ಯುದ್ಧ ಮಾಡಿದುದನ್ನೂ, ದಧೀಚನಿಂದ ವಿಷ್ಣುವು ಅಪಜಯ ಹೊಂದಿದುದನ್ನೂ ವರ್ಣಿಸಲಾಗುವುದು.)

೧–೨. ನಂದಿಯು ಹೇಳಿದನು: ಆ ಕ್ಷುಪರಾಜನ ಪೂಜೆಯಿಂದ ಸಂತೋಷ ಹೊಂದಿದ ಮಹಾಮಹಿಮನಾದ ವಿಷ್ಣುವು ಶ್ರೀದೇವಿ, ಭೂದೇವಿಯರಿಂದ ಕೂಡಿ ಶಂಖ, ಚಕ್ರ, ಗದಾಯುಧಗಳನ್ನು ಧರಿಸಿ, ಪೀತಾಂಬರವನ್ನುಟ್ಟು, ಇಂದ್ರಾದಿ ದೇವತೆಗಳಿಂದಲೂ, ಪ್ರಹ್ಲಾದಾದಿ ದೈತ್ಯ ಭಕ್ತರಿಂದಲೂ ಕೂಡಿ, ಗರುಡಧ್ವಜನಾಗಿ, ಆ ಕ್ಷುಪರಾಜನಿಗೆ ದರ್ಶನವನ್ನು ಕೊಟ್ಟನು.

೩. ಕ್ಷುಪರಾಜನು ತನಗೆ ಪ್ರಾಪ್ತವಾದ ದಿವ್ಯದೃಷ್ಟಿಯಿಂದ ಆ ವಿಷ್ಣುವನ್ನು ನೋಡಿ ಅವನಿಗೆ ನಮಸ್ಕಾರವನ್ನು ಮಾಡಿ ತನಗೆ ಇಷ್ಟವಾದ ಮಾತುಗಳಿಂದ ಅವನನ್ನು ಸ್ತೋತ್ರಮಾಡಿದನು.

ತುಷ್ಟಾವ ವಾಗ್ಭಿರಿಷ್ಟಾಭಿಃ ಪ್ರಣಮ್ಯ ಗರುಡಧ್ವಜಂ ।
ತ್ವಮಾದಿಸ್ತ್ವಮನಾದಿಶ್ಚ ಪ್ರಕೃತಿಸ್ತ್ವಂ ಜನಾರ್ದನಃ ॥ ೪ ॥
ಪುರುಷಸ್ತ್ವಂ ಜಗನ್ನಾಥೋ ವಿಷ್ಣುರ್ವಿಶ್ವೇಶ್ವರೋ ಭವಾನ್ ।
ಯೋಽಯಂ ಬ್ರಹ್ಮಾಸಿ ಪುರುಷೋ ವಿಶ್ವಮೂರ್ತಿಃ ಪಿತಾಮಹಃ ॥
ತತ್ತ್ವಮಾದ್ಯಂ ಭವಾನೇವ ಪರಂ ಜ್ಯೋತಿರ್ಜನಾರ್ದನಃ ।
ಪರಮಾತ್ಮಾ ಪರಂಧಾಮ ಶ್ರೀಪತೇ ಭೂಪತೇ ಪ್ರಭೋ ॥ ೬ ॥
ತ್ವತ್ಕ್ರೋಧಸಂಭವೋ ರುದ್ರಸ್ತಮಸಾ ಚ ಸಮಾವೃತಃ ।
ತ್ವತ್ಪ್ರಸಾದಾಜ್ಜಗದ್ಧಾತಾ ರಜಸಾ ಚ ಪಿತಾಮಹಃ ॥ ೭ ॥
ತ್ವತ್ಪ್ರಸಾದಾತ್ಸ್ವಯಂ ವಿಷ್ಣುಃ ಸತ್ತ್ವೇನ ಪುರುಷೋತ್ತಮಃ ।
ಕಾಲಮೂರ್ತೇ ಹರೇ ವಿಷ್ಣೋ ನಾರಾಯಣ ಜಗನ್ಮಯ ॥ ೮ ॥

---

೪–೬. ದುಷ್ಟರನ್ನು ದುರ್ಮಾರ್ಗವನ್ನು ಬಿಡುವಂತೆಯೂ, ಸಜ್ಜನರನ್ನು ಸನ್ಮಾರ್ಗದಲ್ಲಿರುವಂತೆಯೂ, ಶಿಕ್ಷಿಸತಕ್ಕವನೇ, ನೀನೇ ಸಕಲ ಪ್ರಪಂಚಕ್ಕೂ ಆದಿಕಾರಣನು, ನೀನು ಜನ್ಮರಹಿತನು· ನೀನೇ ಪುರುಷನು, ನಿನ್ನ ಶಕ್ತಿಯೇ ಪ್ರಕೃತಿಯು, ನೀನು ಸರ್ವವ್ಯಾಪಿಯು, ಸಮಸ್ತ ಪ್ರಪಂಚಕ್ಕೂ ಒಡೆಯನು. ನೀನೇ ಬ್ರಹ್ಮಸ್ವರೂಪನು. ಮೊದಲನೆಯದಾದ ಮಹತ್ತತ್ವ ರೂಪನು. ಮಹಾಪ್ರಕಾಶಸ್ವರೂಪನು. ಶ್ರೀದೇವೀ, ಭೂದೇವೀ, ಇವರಿಗೂ ಪತಿಯಾದವನು. ಶ್ರೇಷ್ಠನಾದ ಸಮರ್ಥನೇ, ನೀನು ಸಂಸಾರದುಃಖಗಳಲೇಪವಿಲ್ಲದ ಆತ್ಮಸ್ವರೂಪನೂ ನೀನೇ.

೭–೮. ನಿನ್ನ ಕೋಪದಿಂದ ಹುಟ್ಟಿದ ರುದ್ರನು ತಮೋಗುಣದಿಂದ ಕೂಡಿರುವನು. ನಿನ್ನ ಅನುಗ್ರಹದಿಂದ ರಜೋಗುಣದಿಂದ ಕೂಡಿದ ಬ್ರಹ್ಮನು ಜಗತ್ತನ್ನು ಸೃಷ್ಟಿಸುವನು. ನಿನ್ನ ಅನುಗ್ರಹದಿಂದಲೇ ವಿಷ್ಣುವು ಸತ್ವಗುಣದಿಂದ ಕೂಡಿ ಪುರುಷೋತ್ತಮನೆನಿಸಿರುವನು. ನೀನು ಕಾಲಸ್ವರೂಪನು. ಸರ್ವವ್ಯಾಪಿಯು, ಪಾಪ ಪರಿಹಾರಕನು, ಕ್ಷೀರಸಮುದ್ರದಲ್ಲಿ ವಾಸಮಾಡುವವನು, ಪ್ರಪಂಚಸ್ವರೂಪನೂ ನೀನೇ ಆಗಿರುವೆ.

ಮಹಾಂಸ್ತಥಾ ಚ ಭೂತಾದಿ ಸ್ತನ್ಮಾತ್ರಾಣೀಂದ್ರಿಯಾಣಿ ಚ ।
ತ್ವಯ್ಯೇವಾಧಿಷ್ಠಿತಾನ್ಯೇವ ವಿಶ್ವಮೂರ್ತೇ ಮಹೇಶ್ವರ ॥ ೯ ॥
ಮಹಾದೇವ ಜಗನ್ನಾಥ ಪಿತಾಮಹ ಜಗದ್ಗುರೋ ।
ಪ್ರಸೀದ ದೇವದೇವೇಶ ಪ್ರಸೀದ ಪರಮೇಶ್ವರ ॥೧೦॥
ಪ್ರಸೀದ ತ್ವಂ ಜಗನ್ನಾಥ ಶರಣ್ಯಂ ಶರಣಂ ಗತಃ ।
ವೈಕುಂಠ ಶೌರೇ ಸರ್ವಜ್ಞ ವಾಸುದೇವ ಮಹಾಭುಜ ॥೧೧॥
ಸಂಕರ್ಷಣ ಮಹಾಭಾಗ ಪ್ರದ್ಯುಮ್ನ ಪುರುಷೋತ್ತಮ ।
ಅನಿರುದ್ಧ ಮಹಾವಿಷ್ಣೋ ಸದಾ ವಿಷ್ಣೋ ನಮೋಽಸ್ತು ತೇ ॥೧೨॥
ವಿಷ್ಣೋ ತವಾಸನಂ ದಿವ್ಯ ಮವ್ಯಕ್ತಂ ಮಧ್ಯತೋ ವಿಭುಃ ।
ಸಹಸ್ರಫಣ ಸಂಯುಕ್ತಸ್ತಮೋ ಮೂರ್ತಿರ್ಧರಾಧರಃ ॥೧೩॥
ಅಧಶ್ಚ ಧರ್ಮೋ ದೇವೇಶ ಜ್ಞಾನಂ ವೈರಾಗ್ಯಮೇವ ಚ ।
ಐಶ್ವರ್ಯ ಮಾಸನಸ್ಯಾಸ್ಯ ಪಾದರೂಪೇಣ ಸುವ್ರತ ॥೧೪॥

---

೯–೧೨. ಪ್ರಪಂಚಸ್ವರೂಪನಾದ ಓ ಮಹೇಶ್ವರನೇ, ಮಹತ್ತತ್ವ, ಸೂಕ್ಷ್ಮಪಂಚಭೂತಗಳು, ಅಹಂಕಾರತತ್ವ, ಪಂಚತನ್ಮಾತ್ರಗಳು, ಇಂದ್ರಿಯಗಳು, ಇವುಗಳೆಲ್ಲಕ್ಕೂ ನೀನೇ ಆಶ್ರಯನಾಗಿರುವೆ. ಮಹಾದೇವನೂ, ಬ್ರಹ್ಮನೂ, ಜಗದ್ಗುರುವೂ, ನೀನೇ ಆಗಿರುವೆ. ನೀನು ಪ್ರಸನ್ನನಾಗು. ರಕ್ಷಕನಾದ ನಿನ್ನನ್ನು ನಾನು ಶರಣು ಹೊಂದಿರುವೆನು. ವೈಕುಂಠಾಧಿಪತಿಯೂ, ಸರ್ವಜ್ಞನೂ, ಮಹಾಪರಾಕ್ರಮಿಯೂ, ಬಲಶಾಲಿಯೂ, ಸ್ವತಂತ್ರನೂ, ಯಾವ ನಿರ್ಬಂಧವೂ ಇಲ್ಲದವನೂ, ಸರ್ವವ್ಯಾಪಿಯೂ, ಆದ ನಿನಗೆ ನಮಸ್ಕಾರವು.

೧೩. ಓ ವಿಷ್ಣುವೇ, ಕ್ಷೀರ ಸಮುದ್ರ ಮಧ್ಯದಲ್ಲಿ ಪ್ರಕೃತಿರೂಪನಾದ, ಸಾವಿರ ಹೆಡೆಗಳುಳ್ಳ, ಭೂಮಿಯನ್ನು ಧರಿಸಿರುವ, ತಮೋ ಮೂರ್ತಿಯಾದ ಆದಿಶೇಷನು ನಿನಗೆ ವಿಸ್ತಾರವಾದ ಶ್ರೇಷ್ಠ ಪೀಠವಾಗಿರುವನು.

೧೪. ಈ ಪೀಠಕ್ಕೆ ಕೆಳಭಾಗದಲ್ಲಿ ಧರ್ಮ, ಜ್ಞಾನ, ವೈರಾಗ್ಯ, ಐಶ್ವರ್ಯ ಎಂಬ ನಾಲ್ಕುಗುಣಗಳು ಆ ಪೀಠದ ಪಾದ ರೂಪಗಳಾಗಿರುವುವು.

ಸಪ್ತಪಾತಾಲ ಪಾದಸ್ತ್ವಂ ಧರಾಜಘನ ಮೇವ ಚ ।
ವಾಸಾಂಸಿ ಸಾಗರಾಃ ಸಪ್ತ ದಿಶಶ್ಚೈವ ಮಹಾಭುಜಾಃ ॥೧೫॥
ದ್ಯೌರ್ಮೂರ್ಧಾ ತೇ ವಿಭೋ ನಾಭಿಃ ಖಂ ವಾಯು ರ್ನಾಸಿಕಾಂ ಗತಃ।
ನೇತ್ರೇ ಸೋಮಶ್ಚ ಸೂರ್ಯಶ್ಚ ಕೇಶಾ ವೈ ಪುಷ್ಕರಾದಯಃ ॥೧೬॥
ನಕ್ಷತ್ರತಾರಕಾ ದ್ಯೌಶ್ಚ ಗ್ರೈವೇಯಕ ವಿಭೂಷಣಂ ।
ಕಥಂ ಸ್ತೋಷ್ಯಾಮಿ ದೇವೇಶಂ ಪೂಜ್ಯಶ್ಚ ಪುರುಷೋತ್ತಮಃ ॥೧೭॥
ಶ್ರದ್ಧಯಾ ಚ ಕೃತಂ ದಿವ್ಯಂ ಯಚ್ಛ್ರುತಂ ಯಚ್ಚ ಕೀರ್ತಿತಂ ।
ಯದಿಷ್ಟಂ ತತ್ಕ್ಷಮಸ್ವೇಶ ನಾರಾಯಣ ನಮೋಽಸ್ತು ತೇ ॥೧೮॥

॥ ಶೈಲಾದಿರುವಾಚ ॥

ಇದಂ ತು ವೈಷ್ಣವ ಸ್ತೋತ್ರಂ ಸರ್ವಪಾಪ ಪ್ರಣಾಶನಂ ।
ಯಃ ಪಠೇಚ್ಛೃಣುಯಾದ್ವಾಽಪಿ ಕ್ಷುಪೇಣ ಪರಿಕೀರ್ತಿತಂ ॥೧೯॥

---

೧೫-೧೭. ಸಪ್ತಪಾತಾಲ ಲೋಕಗಳೇ ನಿನ್ನಪಾದವು. ನಿನ್ನಸೊಂಟವೇ ಭೂಮಿಯು. ಸಪ್ತಸಮುದ್ರಗಳೇ ನಿನ್ನ ವಸ್ತ್ರವು. ದಿಕ್ಕುಗಳೇ ನಿನ್ನ ಭುಜಗಳು. ಸ್ವರ್ಗಾದಿ ಲೋಕಗಳೇ ನಿನ್ನ ತಲೆಯು. ಆಕಾಶವೇ ನಿನ್ನ ಹೊಕ್ಕುಳು. ನಿನ್ನ ಮೂಗಿನಲ್ಲಿ ಸಂಚರಿಸುವುದೇ ಗಾಳಿಯು. ಚಂದ್ರಸೂರ್ಯರುಗಳೇ ನಿನ್ನ ಕಣ್ಣುಗಳು. ಪುಷ್ಕರಾವರ್ತ ಮುಂತಾದ ಮೇಘಗಳೇ ನಿನ್ನ ತಲೆಯ ಕೂದಲುಗಳು. ಗ್ರಹಗಳೂ, ನಕ್ಷತ್ರಗಳೂ ನಿನ್ನ ಕಂಠಾಭರಣಗಳು. ದೇವೋತ್ತಮನಾದ ನಿನ್ನನ್ನು ಇನ್ನೇನೆಂದು ಹೊಗಳಲಿ? ಪುರುಷ ಶ್ರೇಷ್ಠನಾದ ನೀನು ಪೂಜ್ಯನಾಗಿರುವೆ! ಹೀಗಿರುವಲ್ಲಿ ನಿನ್ನನ್ನು ನಾನು ಇದಕ್ಕಿಂತಲೂ ಬೇರೆಯಾಗಿ ಹೇಗೆ ಪೂಜಿಸಲಿ?

೧೮. ನಿನ್ನಲ್ಲಿ ಭಕ್ತಿಯಿಂದಕೂಡಿ, ಶ್ರೇಷ್ಠವಾದ ಈ ಸ್ತೋತ್ರವನ್ನು ಮಾಡಿರುವೆನು. ನಾನು ಏನನ್ನುಕೇಳಿದೆನೋ, ಏನನ್ನುಹೇಳಿದೆನೋ, ಯಾವ ಯಜ್ಞಾದಿಕಾರ್ಯಗಳನ್ನು ಮಾಡಿದೆನೋ, ಅವುಗಳಲ್ಲಿ ದೋಷಗಳಿದ್ದರೆ ಕ್ಷಮಿಸು. ನಾರಾಯಣನಾದ ನಿನಗೆ ನಮಸ್ಕಾರವು.

೧೯-೨೦. ನಂದಿಯು ಹೇಳಿದನು. ಕ್ಷುಪರಾಜನು ಮಾಡಿದ ಈ ವಿಷ್ಣು ಸ್ತೋತ್ರವು ಸಮಸ್ತ ಪಾಪ ಪರಿಹಾರಕವಾದುದು. ಯಾರು

ಶ್ರಾವಯೇದ್ವಾ ದ್ವಿಜಾನ್ ಭಕ್ತ್ಯಾ ವಿಷ್ಣುಲೋಕಂ ಸ ಗಚ್ಛತಿ ॥೨೦॥
ಸಂಪೂಜ್ಯ ಚೈವಂ ತ್ರಿದಶೇಶ್ವರಾದ್ಯೈಃ ।
ಸ್ತುತ್ವಾ ಸ್ತುತಂ ದೇವ ಮಜೇಯ ಮೀಶಂ ॥
ವಿಜ್ಞಾಪಯಾಮಾಸ ನಿರೀಕ್ಷ್ಯ ಭಕ್ತ್ಯಾ ।
ಜನಾರ್ದನಾಯ ಪ್ರಣಿಪತ್ಯ ಮೂರ್ಧ್ನಾ ॥೨೧॥

॥ ರಾಜೋವಾಚ ॥

ಭಗವನ್ ಬ್ರಾಹ್ಮಣಃ ಕಶ್ಚಿತ್ ದಧೀಚ ಇತಿ ವಿಶ್ರುತಃ ।
ಧರ್ಮವೇತ್ತಾ ವಿನೀತಾತ್ಮಾ ಸಖಾ ಮಮ ಪುರಾಽಭವತ್ ॥೨೨॥
ಅವಧ್ಯಃ ಸರ್ವದಾ ಸರ್ವೈಃ ಶಂಕರಾರ್ಚನ ತತ್ಪರಃ ।
ಸಾವಜ್ಞಂ ವಾಮಪಾದೇನ ಸ ಮಾಂ ಮೂರ್ಧ್ನಿ ಸದಸ್ಯಥ ॥೨೩॥
ತಾಡಯಾಮಾಸ ದೇವೇಶ ವಿಷ್ಣೋ ವಿಶ್ವಜಗತ್ಪತೇ ।
ಉವಾಚ ಚ ಮದಾವಿಷ್ಣೋ ನ ಬಿಭೇಮೀತಿ ಸರ್ವತಃ ॥೨೪॥

---

ಇದನ್ನು ಹೇಳುವರೋ ಅಥವಾ ಕೇಳುವರೋ ಭಕ್ತಿಯಿಂದ ಬ್ರಾಹ್ಮಣರಿಗೆ ಹೇಳುವರೋ ಅವರು ವಿಷ್ಣುಲೋಕಕ್ಕೆ ಹೋಗುವರು.

೨೧. ದೇವೇಂದ್ರನೇ ಮೊದಲಾದವರ ಸ್ತೋತ್ರಗಳಿಂದ ಹೊಗಳಲ್ಪಟ್ಟವನಾದ, ಜಯಿಸಲಸಾಧ್ಯನಾದ, ದೇವನಾದ ವಿಷ್ಣುವನ್ನು ಈ ರೀತಿಯಲ್ಲಿ ಪೂಜಿಸಿ, ಆ ಕ್ಷುಪನು ಜನಾರ್ದನನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ, ಭಕ್ತಿಯಿಂದ ನೋಡುತ್ತಾ ವಿಜ್ಞಾಪನೆ ಮಾಡಿಕೊಂಡನು.

೨೨–೨೪. ರಾಜನು ಹೇಳಿದನು. ಓ ಷಡ್ಗುಣೈಶ್ವರ್ಯಸಂಪನ್ನನಾದ ವಿಷ್ಣುವೇ, ಧರ್ಮಜ್ಞನಾದ ವಿನಯ ಸಂಪನ್ನನಾದ ದಧೀಚನೆಂಬ ಮುನಿಯು ಮೊದಲು ನನಗೆ ಸ್ನೇಹಿತನಾಗಿದ್ದನು. ಅವನು ಶಿವನನ್ನು ಪೂಜಿಸಿ ಯಾವಾಗಲೂ ಯಾರೂ ಅವನನ್ನು ಕೊಲ್ಲದಂತೆ ವರವನ್ನು ಪಡೆದು ಅಲಕ್ಷ್ಯದಿಂದ ನಾನು ಸಭೆಯಲ್ಲಿದ್ದಾಗ ತನ್ನ ಎಡಕಾಲಿನಿಂದ ನನ್ನ ತಲೆಯಮೇಲೆ ಒದೆದನು. ಮತ್ತು ಮದಿಸಿದವನಾಗಿ ನಾನು ಯಾರಿಗೂ ಹೆದರುವುದಿಲ್ಲವೆಂದು ಹೇಳಿದನು.

ಜೇತುಮಿಚ್ಛಾಮಿ ತಂ ವಿಪ್ರಂ ದಧೀಚಂ ಜಗದೀಶ್ವರ ।
ಯಥಾಹಿತಂ ತಥಾಕರ್ತುಂ ತ್ವಮರ್ಹಸಿ ಜನಾರ್ದನ ॥೨೫॥

॥ ಶೈಲಾದಿರುವಾಚ ॥

ಜ್ಞಾತ್ವಾ ಸೋಽಪಿ ದಧೀಚಸ್ಯ ಹ್ಯವಧ್ಯತ್ವಂ ಮಹಾತ್ಮನಃ ।
ಸಸ್ಮಾರ ಚ ಗುಹೇಶಸ್ಯ ಪ್ರಭಾವ ಮತುಲಂ ಹರಿಃ ॥೨೬॥

ಏವಂ ಸ್ಮೃತ್ವಾ ಹರಿಃ ಪ್ರಾಹ ಬ್ರಹ್ಮಣಃ ಕ್ಷುತಸಂಭವಂ ।
ವಿಪ್ರಾಣಾಂ ನಾಸ್ತಿರಾಜೇಂದ್ರ ಭಯ ಮೇತ್ಯ ಮಹೇಶ್ವರಂ ॥೨೭॥

ವಿಶೇಷಾ ದ್ರುದ್ರ ಭಕ್ತಾನಾಮಭಯಂ ಸರ್ವದಾ ನೃಪ ।
ನೀಚಾನಾಮಪಿ ಸರ್ವತ್ರ ದಧೀಚಸ್ಯಾಸ್ಯ ಕಿಂ ಪುನಃ ॥೨೮॥

ತಸ್ಮಾತ್ತವ ಮಹಾಭಾಗ ವಿಜಯೋ ನಾಸ್ತಿ ಭೂಪತೇ ।
ದುಃಖಂ ಕರೋಮಿ ವಿಪ್ರಸ್ಯ ಶಾಪಾರ್ಥಂ ಸ ಸುರಸ್ಯ ಮೇ ॥೨೯॥

---

೨೫. ಓ ಜಗದೀಶ್ವರನೇ, ಆ ದಧೀಚನೆಂಬ ಬ್ರಾಹ್ಮಣನನ್ನು ನಾನು ಜಯಿಸಲಪೇಕ್ಷಿಸುತ್ತೇನೆ. ಹಾಗೆ ಜಯವುಂಟಾಗಲು ನೀನು ಸಹಾಯಮಾಡಬೇಕು.

೨೬–೨೮. ನಂದಿಯು ಹೇಳಿದನು. ಆ ಹರಿಯು ಮಹಾತ್ಮನಾದ ದಧೀಚನು ಅವಧ್ಯನೆಂಬುದನ್ನು ತಿಳಿದು, ಅಸಮಾನವಾದ ಮಹೇಶ್ವರನ ಮಹಿಮೆಯನ್ನು ಜ್ಞಾಪಿಸಿಕೊಂಡು, ಬ್ರಹ್ಮನ ಸೀನಿನಲ್ಲಿ ಹುಟ್ಟಿದ ಕ್ಷುಪರಾಜನನ್ನು ಕುರಿತು, ಎಲೈ ರಾಜನೇ, ಮಹಾದೇವನನ್ನು ಶರಣುಹೊಂದಿದ ಬ್ರಾಹ್ಮಣರಿಗೆ ಭಯವಿಲ್ಲ. ನೀಚರಾದ ರುದ್ರಭಕ್ತರಿಗೂ ಯಾವಾಗಲೂ ಅಭಯಸ್ಥಿತಿಯುಂಟಾಗಿರುವಲ್ಲಿ ದಧೀಚನ ವಿಷಯವನ್ನು ಹೇಳಬೇಕಾದುದೇನು?

೨೯. ಆದುದರಿಂದ ಎಲೈ ರಾಜನೇ, ಪುಣ್ಯವಂತನಾದ ನಿನಗೆ ಜಯವು ಲಭಿಸುವುದಿಲ್ಲ. ಆದರೆ ದೇವತೆಗಳೊಡನೆ ಕೂಡಿದ ನನಗೆ ಶಾಪಪ್ರಾಪ್ತಿಗಾಗಿ ಆ ಬ್ರಾಹ್ಮಣನಿಗೆ ದುಃಖವನ್ನುಂಟುಮಾಡುವೆನು.

ಭವಿತಾ ತಸ್ಯ ಶಾಪೇನ ದಕ್ಷಯಜ್ಞೇ ಸುರೈಃ ಸಮಂ ।
ವಿನಾಶೋ ಮಮ ರಾಜೇಂದ್ರ ಪುನರುತ್ಥಾನ ಮೇವ ಚ ॥೩೦॥

ತಸ್ಮಾತ್ಸಮೇತ್ಯ ವಿಪ್ರೇಂದ್ರ ಸರ್ವಯತ್ನೇನ ಭೂಪತೇ ।
ಕರೋಮಿ ಯತ್ನಂ ರಾಜೇಂದ್ರ ದಧೀಚ ವಿಜಯಾಯ ತೇ ॥೩೧॥

॥ ಶೈಲಾದಿರುವಾಚ ॥

ಶ್ರುತ್ವಾ ವಾಕ್ಯಂ ಕ್ಷುಪಃ ಪ್ರಾಹ ತಥಾಽಸ್ತ್ವಿತಿ ಜನಾರ್ದನಂ ।
ಭಗವಾನಪಿ ವಿಪ್ರಸ್ಯ ದಧೀಚಸ್ಯಾಶ್ರಮಂ ಯಯೌ ॥೩೨॥

ಆಸ್ಥಾಯ ರೂಪಂ ವಿಪ್ರಸ್ಯ ಭಗವಾನ್ ಭಕ್ತವತ್ಸಲಃ ।
ದಧೀಚ ಮಾಹ ಬ್ರಹ್ಮರ್ಷಿ ಮಭಿವಂದ್ಯ ಜಗದ್ಗುರುಂ ॥೩೩॥

॥ ಶ್ರೀಭಗವಾನುವಾಚ ॥

ಭೋಭೋ ದಧೀಚ ಬ್ರಹ್ಮರ್ಷೇ ಭವಾರ್ಚನರತಾವ್ಯಯ ।
ವರಮೇಕಂ ವೃಣೇತ್ವತ್ತಸ್ತ್ವಂ ಭವಾನ್ ದಾತು ಮರ್ಹಸಿ ॥೩೪॥

---

೩೦–೩೧. ರಾಜನೇ, ಆ ದಧೀಚನ ಶಾಪದಿಂದ ಮುಂದೆ ದಕ್ಷ ಯಜ್ಞದಲ್ಲಿ ದೇವತೆಗಳೊಡನೆ ನನ್ನ ನಾಶವೂ, ಪುನರುತ್ಪತ್ತಿಯೂ ಉಂಟಾಗುವುದು. ಆ ಕಾರಣದಿಂದ ಸರ್ವಪ್ರಯತ್ನದಿಂದಲೂ ದಧೀಚನನ್ನು ಜಯಿಸಲು ನಿನಗೆ ಸಹಾಯಕನಾಗುವೆನು

೩೨–೩೩. ನಂದಿಯು ಹೇಳಿದನು: ಈ ಮಾತನ್ನು ಕೇಳಿ ಕ್ಷುಪನು ಹಾಗೆಯೇ ಆಗಲೆಂದು ವಿಷ್ಣುವಿಗೆ ಹೇಳಿದನು. ಭಕ್ತರಲ್ಲಿ ಪ್ರೀತಿಯುಳ್ಳ ಮಹಾಮಹಿಮನಾದ ವಿಷ್ಣುವು ಬ್ರಾಹ್ಮಣನ ರೂಪದಿಂದ ದಧೀಚನ ಆಶ್ರಮಕ್ಕೆ ಹೋಗಿ ಬ್ರಹ್ಮರ್ಷಿಯೂ, ಲೋಕಗುರುವೂ, ಆದ ಅವನಿಗೆ ನಮಸ್ಕಾರವನ್ನು ಮಾಡಿ, ಅವನನ್ನು ಕುರಿತು ಹೇಳಿದನು.

೩೪. ನಾರಾಯಣನು ಹೇಳಿದನು: ಶಿವ ಪೂಜಾಸಕ್ತನೂ, ನಾಶ ರಹಿತನೂ, ಬ್ರಹ್ಮರ್ಷಿಯೂ ಆದ ದಧೀಚನೇ, ನಾನು ಒಂದು ವರವನ್ನು ಕೇಳುವೆನು, ಅದನ್ನು ನೀನು ಕೊಡಬೇಕು.

ಯಾಚಿತೋ ದೇವದೇವೇನ ದಧೀಚಃ ಪ್ರಾಹ ವಿಷ್ಣುನಾ ।
ಜ್ಞಾತಂ ತವೇಪ್ಸಿತಂ ಸರ್ವಂ ನ ಬಿಭೇಮಿ ತವಾಪ್ಯಹಂ ॥೩೫॥

ಭವಾನ್ವಿಪ್ರಸ್ಯ ರೂಪೇಣ ಆಗತೋಽಸಿ ಜನಾರ್ದನ ।
ಭೂತಂ ಭವಿಷ್ಯಂ ದೇವೇಶ ವರ್ತಮಾನಂ ಜನಾರ್ದನ ॥೩೬॥

ಜ್ಞಾತಂ ಪ್ರಸಾದಾದ್ರುದ್ರಸ್ಯ ದ್ವಿಜತ್ವಂ ತ್ಯಜ ಸುವ್ರತ ।
ಆರಾಧಿತೋಽಸಿ ದೇವೇಶ ಕ್ಷುಪೇಣ ಮಧುಸೂದನ ॥೩೭॥

ಜಾನೇ ತವೈನಾಂ ಭಗವನ್ ಭಕ್ತವತ್ಸಲತಾಂ ಹರೇ ।
ಸ್ಥಾನೇ ತವೈಷಾ ಭಗವನ್ ಭಕ್ತವಾತ್ಸಲ್ಯತಾ ಹರೇ ॥೩೮॥

ಅಸ್ತಿಚೇದ್ಭಗವನ್ ಭೀತಿ ರ್ಭವಾರ್ಚನ ರತಸ್ಯ ಮೇ ।
ವಕ್ತುಮರ್ಹಸಿ ಯತ್ನೇನ ವರದಾಂಬುಜ ಲೋಚನ ॥೩೯॥

ವದಾಮಿ ನ ಮೃಷಾ ತಸ್ಮಾನ್ನ ಬಿಭೇಮಿ ಜನಾರ್ದನ ।
ನ ಬಿಭೇಮಿ ಜಗತ್ಯಸ್ಮಿನ್ ದೇವದೈತ್ಯ ದ್ವಿಜಾದಪಿ ॥೪೦॥

---

೩೫-೩೭. ವಿಷ್ಣುವು ಹೀಗೆ ಹೇಳುತ್ತಲು ದಧೀಚನು ವಿಷ್ಣುವನ್ನು ಕುರಿತು, ನಿನ್ನ ಇಷ್ಟವೆಲ್ಲವೂ ನನಗೆ ತಿಳಿಯಿತು. ನಿನಗೂ ನಾನು ಹೆದರುವುದಿಲ್ಲ. ವಿಷ್ಣುವಾದ ನೀನು ಬ್ರಾಹ್ಮಣ ರೂಪದಿಂದ ಬಂದಿರುವೆ. ಮಹಾದೇವನ ಅನುಗ್ರಹದಿಂದ ನಾನು ತ್ರಿಕಾಲಜ್ಞಾನಿಯಾಗಿರುವೆನು. ನಿನ್ನ ವೇಷವನ್ನು ಬಿಡು. ಕ್ಷುಪನು ನಿನ್ನನ್ನು ಪೂಜಿಸಿ ಬೇಡಿಕೊಂಡಿರುವನು.

೩೮-೪೦. ಓ ಹರಿಯೇ, ನಿನ್ನ ಭಕ್ತವಾತ್ಸಲ್ಯವನ್ನು ನಾನು ಬಲ್ಲೆನು. ನಿನಗೆ ಇದು ಯುಕ್ತವಾದುದೇ ಸರಿ. ಶಿವನ ಪೂಜಾಸಕ್ತನಾದ ನನಗೆ ಭಯವುಂಟಾಗುವುದಿದ್ದರೆ ವರಪ್ರದನಾದ ನೀನೇ ಹೇಳು. ನಾನು ಸುಳ್ಳನ್ನು ಹೇಳುವುದಿಲ್ಲ. ಮಹಾದೇವನ ಅನುಗ್ರಹದಿಂದ ಈ ಲೋಕದಲ್ಲಿ ದೇವತೆಗಳು, ದೈತ್ಯರು, ಬ್ರಾಹ್ಮಣರು, ಯಾರಿಂದಲೂ ನನಗೆ ಭಯವಿರುವುದಿಲ್ಲ.

॥ ನಂದ್ಯುವಾಚ ॥

ಶ್ರುತ್ವಾ ವಾಕ್ಯಂ ದಧೀಚಸ್ಯ ತದಾಸ್ಥಾಯ ಜನಾರ್ದನಃ
ಸ್ವರೂಪಂ ಸಸ್ಮಿತಂ ಪ್ರಾಹ ಸಂತ್ಯಜ್ಯ ದ್ವಿಜತಾಂ ಕ್ಷಣಾತ್ ॥೪೧॥

॥ ಶ್ರೀಭಗವಾನುವಾಚ ॥

ಭಯಂ ದಧೀಚ ಸರ್ವತ್ರ ನಾಸ್ತ್ಯೇವ ತವ ಸುವ್ರತ ।
ಭವಾರ್ಚನ ರತೋ ಯಸ್ಮಾ ದ್ಭವಾನ್ ಸರ್ವಜ್ಞ ಏವಚ ॥೪೨॥

ಬಿಭೇಮೀತಿ ಸಕೃದ್ವಕ್ತುಂ ತ್ವಮರ್ಹಸಿ ನಮಸ್ತವ ।
ನಿಯೋಗಾನ್ಮಮ ವಿಪ್ರೇಂದ್ರ ಕ್ಷುಪಂ ಪ್ರತಿ ಸದಸ್ಯಥ ॥೪೩॥

ಏವಂ ಶ್ರುತ್ವಾಽಪಿ ತದ್ವಾಕ್ಯಂ ಸಾಂತ್ವಂ ವಿಷ್ಣೋರ್ಮಹಾಮುನಿಃ ।
ನ ಬಿಭೇಮೀತಿ ತಂ ಪ್ರಾಹ ದಧೀಚೋ ದೇವಸತ್ತಮಂ ॥೪೪॥

ಪ್ರಭಾವಾದ್ದೇವ ದೇವಸ್ಯ ಶಂಭೋಃ ಸಾಕ್ಷಾತ್ಪಿನಾಕಿನಃ ।
ಶರ್ವಸ್ಯ ಶಂಕರಸ್ಯಾಸ್ಯ ಸರ್ವಜ್ಞಸ್ಯ ಮಹಾಮುನಿಃ ॥೪೫॥

---

೪೧. ವಿಷ್ಣುವು ಆ ದಧೀಚನ ಮಾತನ್ನು ಕೇಳಿ ಆ ಕ್ಷಣದಲ್ಲಿಯೇ ಬ್ರಾಹ್ಮಣನ ರೂಪವನ್ನು ಬಿಟ್ಟು ಸ್ವಸ್ವರೂಪದಿಂದ ಕೂಡಿ ನಗುತ್ತಾ ಹೇಳಿದನು.

೪೨–೪೩. ವಿಷ್ಣುವು ಹೇಳಿದನು: ಎಲೈ ಒಳ್ಳೆಯ ಫಲಗಳುಳ್ಳ ದಧೀಚನೇ, ನೀನು ಶಿವಾರ್ಚನೆಯಲ್ಲಿ ಆಸಕ್ತನಾದುದರಿಂದ ಯಾವ ಸಂದರ್ಭದಲ್ಲಿಯೂ ನಿನಗೆ ಭಯವಿಲ್ಲ. ಇದಲ್ಲದೇ ನೀನು ಸರ್ವಜ್ಞನಾಗಿರುವೆ. ನಿನಗೆ ನಮಸ್ಕಾರ ಮಾಡುವೆನು. ಆದರೆ ಎಲೈ ಬ್ರಾಹ್ಮಣಶ್ರೇಷ್ಠನೇ, ನನ್ನ ಪ್ರಾರ್ಥನೆಯಿಂದ ನೀನು ಸಭೆಯಲ್ಲಿ ಕ್ಷುಪನನ್ನು ಕುರಿತು, ನಾನು ಹೆದರುವೆನು, ಎಂದು ಒಂದುಬಾರಿ ಹೇಳಿಬಿಡು!

೪೪–೪೫. ಹೀಗೆಂದು ಹೇಳಿದ ವಿಷ್ಣುವಿನ ಸಮಾಧಾನಕರವಾದ ಮಾತನ್ನು ಕೇಳಿ, ಆ ಮಹರ್ಷಿಯು ಆ ದೇವನನ್ನು ಕುರಿತು, ದೇವದೇವನಾದ ಸರ್ವಜ್ಞನೂ, ಪಿನಾಕಪಾಣಿಯೂ, ಸುಖಕರನೂ ಆದ ಪರಮೇಶ್ವರನ ಮಹಿಮೆಯಿಂದ ನಾನು ಹೆದರುವುದಿಲ್ಲ! ಎಂದು ಹೇಳಿದನು.

ತತಸ್ತಸ್ಯ ಮುನೇಃ ಶ್ರುತ್ವಾ ವಚನಂ ಕುಪಿತೋ ಹರಿಃ ।
ಚಕ್ರ ಮುದ್ಯಮ್ಯ ಭಗವಾನ್ ದಿಧಕ್ಷುರ್ಮುನಿಸತ್ತಮಂ ॥೪೬॥

ಅಭವತ್ಕುಂಠಿತಾಗ್ರಂ ಹಿ ವಿಷ್ಣೋಶ್ಚಕ್ರಂ ಸುದರ್ಶನಂ ।
ಪ್ರಭಾವಾದ್ಧಿ ದಧೀಚಸ್ಯ ಕ್ಷುಪಸ್ಯೈವ ಹಿ ಸಂನಿಧೌ ॥೪೭॥

ದೃಷ್ಟ್ವಾ ತತ್ಕುಂಠಿತಾಗ್ರಂ ಹಿ ಚಕ್ರಂ ಚಕ್ರಿಣಮಾಹ ಸಃ ।
ದಧೀಚಃ ಸಸ್ಮಿತಂ ಸಾಕ್ಷಾತ್ಸದಸದ್ವ್ಯಕ್ತಿ ಕಾರಣಂ ॥೪೮॥

ಭಗವನ್ ಭವತಾಲಬ್ಧಂ ಪುರಾಽತೀವ ಸುದಾರುಣಂ ।
ಸುದರ್ಶನ ಮಿತಿ ಖ್ಯಾತಂ ಚಕ್ರಂ ವಿಷ್ಣೋಃ ಪ್ರಯತ್ನತಃ ॥೪೯॥

ಭವಸ್ಯೈತ ಚ್ಛುಭಂ ಚಕ್ರಂ ನ ಜಿಘಾಂಸತಿ ಮಾಮಿಹ ।
ಬ್ರಹ್ಮಾಸ್ತ್ರಾದ್ಯೈಸ್ತಥಾನ್ಯೈರ್ಹಿ (ವಾರ್ಹಿ) ಪ್ರಯತ್ನಂ ಕರ್ತುಮರ್ಹಸಿ॥

---

೪೬-೪೭. ಆಮೇಲೆ ಆ ಮುನಿಯ ಮಾತನ್ನು ಕೇಳಿ ಹರಿಯು ಕೋಪವನ್ನು ಹೊಂದಿ ಚಕ್ರಾಯುಧವನ್ನು ಎತ್ತಿ ಆ ಮುನಿಯನ್ನು ಕೊಲ್ಲಲು ಯತ್ನಿಸಿದನು. ಆ ಸುದರ್ಶನವೆಂಬ ವಿಷ್ಣುಚಕ್ರವು ದಧೀಚನ ಮಹಿಮೆಯಿಂದ ಕ್ಷುಪರಾಜನು ನೋಡುತ್ತಿದ್ದ ಹಾಗೆಯೇ ಪ್ರಯೋಜನ ವಿಲ್ಲದುದಾಯಿತು! ಎಂದರೆ ಅದರ ಹರಿತವಾದ ಮೊನೆಯು ದಧೀಚನ ಶರೀರದಲ್ಲಿ ಪ್ರವೇಶಿಸದೇ ಮೊನೆಯು ಮುರಿದು ಹೋಯಿತು.

೪೮-೫೦. ಆ ಚಕ್ರಾಯುಧವು ಪ್ರಯೋಜನವಿಲ್ಲದುದಾಗುತ್ತಲೂ ದಧೀಚನು ನಗುತ್ತಾ ವಿಷ್ಣುವನ್ನು ಕುರಿತು, ಓ ಮಹಾತ್ಮನೇ, ಈ ಚಕ್ರಾಯುಧವು ಶಿವನದು, ಹಿಂದೆ ಮಹಾಪ್ರಯತ್ನದಿಂದ ಇದನ್ನು ನೀನು ಪಡೆದಿರುವೆ. ಇದು ಶಿವನ ಚಕ್ರವಾದುದರಿಂದ ಶಿವಭಕ್ತನಾದ ನನ್ನನ್ನು ಕೊಲ್ಲಲೊಲ್ಲದು. ನನಗೆ ಇದು ಮಂಗಳಕರವಾಗಿರುವುದು. ಆದುದರಿಂದ ಬ್ರಹ್ಮಾಸ್ತ್ರವೇ ಮೊದಲಾದ ಬೇರೆ ಅಸ್ತ್ರಗಳಿಂದ ನೀನು ನನ್ನನ್ನು ಜಯಿಸಲು ಪ್ರಯತ್ನಮಾಡು, ಎಂದನು.

॥ ಶೈಲಾದಿರುವಾಚ ॥

ತಸ್ಯ ತದ್ವಚನಂ ಶ್ರುತ್ವಾ ದೃಷ್ಟ್ವಾ ನಿರ್ವೀರ್ಯಮಾಯುಧಂ ।
ಸಸರ್ಜ ಚ ಪುನಸ್ತಸ್ಮೈ ಸರ್ವಾಸ್ತ್ರಾಣಿ ಸಮಂತತಃ ॥೫೧॥

ಚಕ್ರುರ್ದೇವಾಸ್ತತಸ್ತಸ್ಯ ವಿಷ್ಣೋಃ ಸಾಹಾಯ್ಯ ಮವ್ಯಯಾಃ ।
ದ್ವಿಜೇನೈಕೇನ ಯೋದ್ಧುಂ ಹಿ ಪ್ರವೃತ್ತಸ್ಯ ಮಹಾಬಲಾಃ ॥೫೨॥

ಕುಶಮುಷ್ಟಿಂ ತದಾದಾಯ ದಧೀಚಃ ಸಂಸ್ಮರನ್ ಭವಂ ।
ಸಸರ್ಜ ಸರ್ವದೇವೇಭ್ಯೋ ವಜ್ರಾಸ್ಥಿಃ ಸರ್ವತೋ ವಶೀ ॥೫೩॥

ದಿವ್ಯಂ ತ್ರಿಶೂಲ ಮಭವತ್ಕಾಲಾಗ್ನಿ ಸದೃಶಪ್ರಭಂ ।
ದಗ್ಧುಂ ದೇವಾ ನ್ಮತಿಂ ಚಕ್ರೇ ಯುಗಾಂತಾಗ್ನಿರಿವಾಪರಃ ॥೫೪॥

ಇಂದ್ರನಾರಾಯಣಾದ್ಯೈಶ್ಚ ದೇವೈಸ್ತ್ಯಕ್ತಾನಿ ಯಾನಿ ತು ।
ಆಯುಧಾನಿ ಸಮಸ್ತಾನಿ ಪ್ರಣೇಮು ಸ್ತ್ರಿಶಿಖಂ ಮುನೇ ॥೫೫॥

---

೫೧–೫೨. ದಧೀಚನ ಆ ಮಾತನ್ನು ಕೇಳಿ ವಿಷ್ಣುವು ತನ್ನ ಚಕ್ರಾಯುಧವು ಶಕ್ತಿಹೀನವಾದುದನ್ನು ಕಂಡು, ಆ ದಧೀಚನ ಮೇಲೆ ಸಕಲ ಮಂತ್ರಾಸ್ತ್ರಗಳನ್ನೂ ಸೃಷ್ಟಿಸಿ ಪ್ರಯೋಗಿಸಿದನು. ಒಬ್ಬ ಬ್ರಾಹ್ಮಣನ ಸಂಗಡ ಯುದ್ಧಮಾಡುವುದಕ್ಕೆ ಹೊರಟ ವಿಷ್ಣುವಿಗೆ ಸಕಲ ದೇವತೆಗಳೂ, ಹೀಗೆ ಸಹಾಯಕರಾಗಿದ್ದರು !

೫೩–೫೪. ದಧೀಚನು ಶಿವನನ್ನು ಸ್ಮರಿಸಿ ಒಂದು ಹಿಡಿ ದರ್ಭೆಯನ್ನು ತೆಗೆದುಕೊಂಡು ಅದನ್ನು ಸಕಲ ದೇವತೆಗಳ ಮೇಲೆಯೂ ಎಸೆದನು. ಅದು ಒಂದೊಂದೂ ಪ್ರಳಯಕಾಲದ ಅಗ್ನಿಯಂತೆ ಪ್ರಕಾಶಮಾನವಾಗಿ ತ್ರಿಶೂಲಾಯುಧವಾಯಿತು ! ಇಂದ್ರಿಯ ನಿಗ್ರಹವುಳ್ಳ ವಜ್ರಾಸ್ಥಿಯನ್ನು ಪಡೆದ ದಧೀಚನು ಪ್ರಳಯಕಾಲದ ಅಗ್ನಿಯಂತೆ ಆ ತ್ರಿಶೂಲದಿಂದ ದೇವತೆಗಳನ್ನೆಲ್ಲರನ್ನೂ ಸುಟ್ಟುಬಿಡಬೇಕೆಂದು ಮನಸ್ಸು ಮಾಡಿದನು.

೫೫. ಎಲೈ ಸನತ್ಕುಮಾರನೇ, ಕೇಳು. ದೇವೇಂದ್ರ, ನಾರಾಯಣ ಮುಂತಾದ ಸಮಸ್ತ ದೇವತೆಗಳು ಪ್ರಯೋಗಿಸಿದ ಅಸ್ತ್ರಗಳೆಲ್ಲವೂ, ಆ ತ್ರಿಶೂಲಕ್ಕೆ ನಮಸ್ಕಾರ ಮಾಡಿದವು.

ದೇವಾಶ್ಚ ದುದ್ರುವುಃ ಸರ್ವೇ ಧ್ವಸ್ತವೀರ್ಯಾ ದ್ವಿಜೋತ್ತಮ ।
ಸಸರ್ಜ ಭಗವಾನ್ವಿಷ್ಣುಃ ಸ್ವದೇಹಾತ್ಪುರುಷೋತ್ತಮಃ ॥೫೬॥

ಆತ್ಮನಃ ಸದೃಶಾನ್ ದಿವ್ಯಾನ್ ಲಕ್ಷಲಕ್ಷಾಯುತಾನ್ ಗಣಾನ್ ।
ತಾನಿ ಸರ್ವಾಣಿ ಸಹಸಾ ದದಾಹ ಮುನಿಸತ್ತಮಃ ॥೫೭॥

ತತೋ ವಿಸ್ಮಯ ನಾರ್ಥಾಯ ವಿಶ್ವಮೂರ್ತಿರಭೂದ್ಧರಿಃ ।
ತಸ್ಯ ದೇಹೇ ಹರೇಃ ಸಾಕ್ಷಾತ್ ಅಪಶ್ಯದ್ದ್ವಿಜಸತ್ತಮಃ ॥೫೮॥

ದಧೀಚೋ ಭಗವಾನ್ ವಿಪ್ರಃ ದೇವತಾನಾಂ ಗಣಾನ್ಪೃಥಕ್ ।
ರುದ್ರಾಣಾಂ ಕೋಟಿಯಶ್ಚೈವ ಗಣಾನಾಂ ಕೋಟಿಯಸ್ತಥಾ ॥೫೯॥

ಅಂಡಾನಾಂ ಕೋಟಿಯಶ್ಚೈವ ವಿಶ್ವಮೂರ್ತೇಸ್ತನೌ ತದಾ ।
ದೃಷ್ಟ್ವೈತದಖಿಲಂ ತತ್ರ ಚ್ಯಾವನಿರ್ವಿಸ್ಮಿತಂ ತದಾ ॥೬೦॥

ವಿಷ್ಣುಮಾಹ ಜಗನ್ನಾಥಂ ಜಗನ್ಮಯ ಮಜಂ ವಿಭುಂ ।
ಅಂಭಸಾಽಭ್ಯುಕ್ಷ್ಯ ತಂ ವಿಷ್ಣುಂ ವಿಶ್ವರೂಪಂ ಮಹಾಮುನಿಃ ॥೬೧॥

---

೫೬–೫೭. ದೇವತೆಗಳೆಲ್ಲರೂ ಶಕ್ತಿಹೀನರಾಗಿ ಓಡಿಹೋದರು. ಮಹಾಮಹಿಮನಾದ ವಿಷ್ಣುವು ತನ್ನ ಶರೀರದಿಂದ ತನಗೆ ಸಮಾನರಾದ ಹತ್ತುಸಾವಿರ ಲಕ್ಷ ಸಂಖ್ಯೆಯ ವಿಷ್ಣುಗಣಗಳನ್ನು ಸೃಷ್ಟಿಸಿದನು. ಆ ಗಣಗಳನ್ನೆಲ್ಲರನ್ನೂ ದಧೀಚಮುನಿ ಶ್ರೇಷ್ಠನು ಸುಟ್ಟುಬಿಟ್ಟನು.

೫೮–೫೯. ಆಮೇಲೆ ಆ ಮುನಿಯನ್ನು ಆಶ್ಚರ್ಯಪಡಿಸಿ ಗೆಲ್ಲಬೇಕೆಂದು ವಿಷ್ಣುವು ವಿಶ್ವರೂಪವನ್ನು ತೋರಿಸಿದನು. ಆ ಬ್ರಾಹ್ಮಣಶ್ರೇಷ್ಠನಾದ ದಧೀಚನು ಆಶ್ಚರ್ಯಕರವಾದ ಬೇರೆಬೇರೆ ದೇವಗಣಗಳನ್ನೂ ಕೋಟಿ ಸಂಖ್ಯೆಯ ರುದ್ರರನ್ನೂ ಕೋಟಿ ಸಂಖ್ಯೆಯ ಗಣಗಳನ್ನೂ ಕೋಟಿ ಸಂಖ್ಯೆಯ ಬ್ರಹ್ಮಾಂಡಗಳನ್ನೂ ಆ ವಿಶ್ವರೂಪಿಯಾದ ವಿಷ್ಣುವಿನ ಶರೀರದಲ್ಲಿ ನೋಡಿದನು.

೬೦–೬೧. ಚ್ಯವನ ಪುತ್ರನಾದ ದಧೀಚನು ಈ ಆಶ್ಚರ್ಯಗಳನ್ನೆಲ್ಲವನ್ನೂ ನೋಡಿ ವಿಶ್ವರೂಪವನ್ನು ಧರಿಸಿದ ಆ ವಿಷ್ಣುವನ್ನು ನೀರಿನಿಂದ ಪ್ರೋಕ್ಷಿಸಿ ಅವನನ್ನು ಕುರಿತು ಹೇಳಿದನು.

ಮಾಯಾಂ ತ್ಯಜ ಮಹಾಬಾಹೋ ಪ್ರತಿಭಾ ಸಾ ವಿಚಾರತಃ ।
ವಿಜ್ಞಾನಾನಾಂ ಸಹಸ್ರಾಣಿ ದುರ್ವಿಜ್ಞೇಯಾನಿ ಮಾಧವ ॥೬೨॥
ಮಯಿ ಪಶ್ಯ ಜಗತ್ಸರ್ವಂ ತ್ವಯಾ ಸಾರ್ಧಮನಿಂದಿತ ।
ಬ್ರಹ್ಮಾಣಂ ಚ ತಥಾ ರುದ್ರಂ ದಿವ್ಯಾಂ ದೃಷ್ಟಿಂ ದದಾಮಿ ತೇ॥೬೩॥
ಇತ್ಯುಕ್ತ್ವಾ ದರ್ಶಯಾಮಾಸ ಸ್ವತನೌ ನಿಖಿಲಂ ಮುನಿಃ ।
ತಂ ಪ್ರಾಹ ಚ ಹರಿಂ ದೇವಂ ಸರ್ವದೇವ ಭವೋದ್ಭವಂ ॥೬೪॥
ಮಾಯಯಾ ಹ್ಯನಯಾ ಕಿಂ ವಾ ಮಂತ್ರಶಕ್ತ್ಯಾಽಥವಾ ಪ್ರಭೋ ।
ವಸ್ತುಶಕ್ತ್ಯಾಽಥವಾ ವಿಷ್ಣೋ ಧ್ಯಾನ ಶಕ್ತ್ಯಾಽಥವಾ ಪುನಃ ॥೬೫॥
ತ್ಯಕ್ತ್ವಾ ಮಾಯಾಮಿಮಾಂ ತಸ್ಮಾದ್ಯೋದ್ಧುಮರ್ಹಸಿ ಯತ್ನತಃ ।
ಏವಂ ತಸ್ಯ ವಚಃ ಶ್ರುತ್ವಾ ದೃಷ್ಟ್ವಾ ಮಾಹಾತ್ಮ್ಯ ಮದ್ಭುತಂ॥೬೬॥

---

೬೨-೬೩. ಎಲೈ ಪರಾಕ್ರಮಿಯಾದ ವಿಷ್ಣುವೇ, ಮಾಯೆಯನ್ನು ಬಿಡು. ಈ ಮಾಯೆಯನ್ನು ವಿಚಾರಮಾಡಿದರೆ (ಶುಕ್ತಿರಜತದಂತೆ) ಪ್ರಾತಿಭಾಸಿಕಸತ್ತಾಸ್ವರೂಪವಾದುದು. ಎಲೈ ಲಕ್ಷ್ಮೀಪತಿಯೇ, ವಿಜ್ಞಾನಗಳು ಅನೇಕ ಬಗೆಯಾಗಿರುವುವು. ಸಾಮಾನ್ಯರಿಗೆ ಅದು ತಿಳಿಯಲಸಾಧ್ಯವಾದುದು. ನನ್ನ ಶರೀರದಲ್ಲೂ ನಿನ್ನೊಡನೆ ಕೂಡಿದ ಸಕಲ ಜಗತ್ತೂ ಇರುವುದು. ಬ್ರಹ್ಮನೂ, ರುದ್ರನೂ ಇರುವರು. ನಿನಗೆ ದಿವ್ಯ ಚಕ್ಷುಸ್ಸನ್ನು ಕೊಡುವೆನು. ನೀನೂ ನೋಡು!

೬೪. ಹೀಗೆಂದು ಹೇಳಿ ದಧೀಚ ಮುನಿಯು ತನ್ನ ಶರೀರದಲ್ಲಿ ಸಮಸ್ತ ಪ್ರಪಂಚವನ್ನೂ ತೋರಿಸಿದನು! ಮತ್ತು ಸಕಲ ದೇವತೆಗಳಿಗೂ ಉತ್ಪತ್ತಿ ಸ್ಥಾನನಾದ ಆ ಹರಿಯನ್ನು ಕುರಿತು ಹೇಳಿದನು.

೬೫. ಎಲೈ ವಿಷ್ಣುವೇ, ಈ ಮಾಯೆಯಿಂದಲಾಗಲಿ, ಮಂತ್ರಶಕ್ತಿಯಿಂದಲಾಗಲಿ, ವಸ್ತುಶಕ್ತಿ ಧ್ಯಾನಶಕ್ತಿಗಳಿಂದಲಾಗಲಿ, ಏನು ಪ್ರಯೋಜನ? ಎಲ್ಲವೂ ಮಾಯೆಯೇ. ಈ ಮಾಯೆಯನ್ನು ಬಿಟ್ಟು ಪ್ರಯತ್ನಪೂರ್ವಕವಾಗಿ ನನ್ನ ಮೇಲೆ ಯುದ್ಧಮಾಡು!

೬೬-೬೭. ಈ ರೀತಿಯಾದ ಆ ಮುನಿಯ ಮಾತನ್ನು ಕೇಳಿ ಅವನ ಅದ್ಭುತವಾದ ಮಹಿಮೆಯನ್ನು ಕಂಡು ದೇವತೆಗಳೆಲ್ಲರೂ ನಾರಾಯಣನ

ದೇವಾಶ್ಚ ದುದ್ರುವುರ್ಭೂಯೋ ದೇವಂ ನಾರಾಯಣಂ ಚ ತಂ ।
ವಾರಯಾಮಾಸ ನಿಶ್ಚೇಷ್ಟಂ ಪದ್ಮಯೋನಿರ್ಜಗದ್ಗುರುಃ ॥೬೭॥
ನಿಶಮ್ಯ ವಚನಂ ತಸ್ಯ ಬ್ರಹ್ಮಣಸ್ತೇನ ನಿರ್ಜಿತಃ ।
ಜಗಾಮ ಭಗವಾನ್ ವಿಷ್ಣುಃ ಪ್ರಣಿಪತ್ಯ ಮಹಾಮುನಿಂ ॥೬೮॥
ಕ್ಷುಪೋ ದುಃಖಾತುರೋ ಭೂತ್ವಾ ಸಂಪೂಜ್ಯ ಚ ಮುನೀಶ್ವರಂ ।
ದಧೀಚ ಮಭಿವಂದ್ಯಾಶು ಪ್ರಾರ್ಥಯಾಮಾಸ ವಿಕ್ಲವಃ ॥೬೯॥
ದಧೀಚ ಕ್ಷಮ್ಯತಾಂ ದೇವ ಮಯಾಽಜ್ಞಾನಾತ್ಕೃತಂ ಸಖೇ ।
ವಿಷ್ಣುನಾ ಹಿ ಸುರೈರ್ವಾಽಪಿ ರುದ್ರ ಭಕ್ತಸ್ಯ ಕಿಂ ತವ ॥೭೦॥
ಪ್ರಸೀದ ಪರಮೇಶಾನೇ ದುರ್ಲಭಾ ದುರ್ಜನೈ ರ್ದ್ವಿಜ ।
ಭಕ್ತಿರ್ಭಕ್ತಿ ಮತಾಂ ಶ್ರೇಷ್ಠ ಮದ್ವಿಧೈಃ ಕ್ಷತ್ರಿಯಾಧಮೈಃ ॥೭೧॥

---

ಸಮೀಪಕ್ಕೆ ಓಡಿ ಹೋದರು. ಬ್ರಹ್ಮನು ಬಂದು ವಿಷ್ಣುವನ್ನು ಯುದ್ಧ ಮಾಡ ಬೇಡವೆಂದು ತಡೆದನು.

೬೮. ಬ್ರಹ್ಮನ ಮಾತನ್ನು ಕೇಳಿ ವಿಷ್ಣುವು ಸೋತು ಆ ದಧೀಚ ಮುನಿಗೆ ನಮಸ್ಕಾರಮಾಡಿ ಹೊರಟು ಹೋದನು.

೬೯. ಕ್ಷುಪರಾಜನು ದುಃಖದಿಂದ ಕೂಡಿದವನಾಗಿ ದಧೀಚ ಮುನಿಯನ್ನು ಪೂಜಿಸಿ ಅವನಿಗೆ ನಮಸ್ಕಾರಮಾಡಿ ವ್ಯಥೆಪಡುತ್ತಾ ಪ್ರಾರ್ಥಿಸಿಕೊಂಡನು.

೭೦–೭೧. ಓ ಮಿತ್ರನಾದ ದಧೀಚ ಮಹರ್ಷಿಯೇ, ನಾನು ಅಜ್ಞಾನದಿಂದ ಈ ಕೆಲಸವನ್ನು ಮಾಡಿದೆನು, ಕ್ಷಮಿಸು. ರುದ್ರಭಕ್ತನಾದ ನಿನಗೆ ವಿಷ್ಣುವಿನಿಂದಲೂ, ದೇವತೆಗಳಿಂದಲೂ, ಯಾವ ತೊಂದರೆಯೂ ಆಗಲಾರದು. ಪ್ರಸನ್ನನಾಗು. ದುರ್ಜನರಿಗೆ ಪರಮೇಶ್ವರನಲ್ಲಿ ಭಕ್ತಿಯು ದುರ್ಲಭವಾದುದು. ನನ್ನಂತಹ ನೀಚ ಕ್ಷತ್ರಿಯರಿಗೂ ಪರಮೇಶ್ವರನಲ್ಲಿ ಭಕ್ತಿಯು ದುರ್ಲಭವಾದುದು. ನೀನು ಈಶ್ವರಭಕ್ತರಲ್ಲಿ ಅತ್ಯಂತ ಶ್ರೇಷ್ಠನು.

ಶ್ರುತ್ವಾಽನುಗೃಹ್ಯ ತಂ ವಿಪ್ರೋ ದಧೀಚ ಸ್ತಪಸಾಂ ವರಃ ।
ರಾಜಾನಂ ಮುನಿ ಶಾರ್ದೂಲಃ ಶಶಾಪ ಚ ಸುರೋತ್ತಮಾನ್ ॥೭೨॥

ರುದ್ರಕೋಪಾಗ್ನಿನಾ ದೇವಾಃ ಸ ದೇವೇಂದ್ರಾ ಮುನೀಶ್ವರೈಃ ।
ಧ್ವಸ್ತಾ ಭವಂತು ದೇವೇನ ವಿಷ್ಣುನಾ ಚ ಸಮನ್ವಿತಾಃ ॥೭೩॥

ಪ್ರಜಾಪತೇ ರ್ಮಖೇ ಪುಣ್ಯೇ ದಕ್ಷಸ್ಯ ಸುಮಹಾತ್ಮನಃ ।
ಏವಂ ಶಪ್ತ್ವಾ ಕ್ಷುಪಂ ಪ್ರೇಕ್ಷ್ಯ ಪುನರಾಹ ದ್ವಿಜೋತ್ತಮಃ ॥೭೪॥

ದೇವೈಶ್ಚ ಪೂಜ್ಯಾ ರಾಜೇಂದ್ರ ನೃಪೈಶ್ಚ ವಿವಿಧೈರ್ಗಣೈಃ ।
ಬ್ರಾಹ್ಮಣಾ ಏವ ರಾಜೇಂದ್ರ ಬಲಿನಃ ಪ್ರಭವಿಷ್ಣವಃ ॥೭೫॥

ಇತ್ಯುಕ್ತ್ವಾ ಸ್ವೋಟಜಂ ವಿಪ್ರಃ ಪ್ರವಿವೇಶ ಮಹಾದ್ಯುತಿಃ ।
ದಧೀಚ ಮಭಿವಂದ್ಯೈವ ಜಗಾಮ ಸ್ವಂ ನೃಪ ಕ್ಷಯಂ ॥೭೬॥

ತದೇವ ತೀರ್ಥ ಮಭವತ್ ಸ್ಥಾನೇಶ್ವರ ಮಿತಿ ಸ್ಮೃತಂ ।
ಸ್ಥಾನೇಶ್ವರ ಮನುಪ್ರಾಪ್ಯ ಶಿವಸಾಯುಜ್ಯ ಮಾಪ್ನುಯಾತ್ ॥೭೭॥

---

೭೨. ತಪಸ್ವಿಗಳಲ್ಲಿ ಶ್ರೇಷ್ಠನಾದ ದಧೀಚನು ಈ ಮಾತನ್ನು ಕೇಳಿ ರಾಜನಿಗೆ ಅನುಗ್ರಹಮಾಡಿ ದೇವತೆಗಳಿಗೆಲ್ಲರಿಗೂ ಶಾಪವನ್ನು ಕೊಟ್ಟನು.

೭೩–೭೪. ಮಹಾಮಹಿಮನಾದ ದಕ್ಷಬ್ರಹ್ಮನ ಯಜ್ಞದಲ್ಲಿ ವಿಷ್ಣು ದೇವೇಂದ್ರರೇ ಮೊದಲಾದ ದೇವತೆಗಳೆಲ್ಲರೂ ರುದ್ರನ ಕೋಪಾಗ್ನಿಯಿಂದ ನಾಶವಾಗಲಿ! ಎಂದು ಶಾಪವನ್ನು ಕೊಟ್ಟು ಕ್ಷುಪನನ್ನು ಕುರಿತು ಬ್ರಾಹ್ಮಣ ಶ್ರೇಷ್ಠನಾದ ದಧೀಚನು ಮತ್ತೆ ಹೇಳಿದನು.

೭೫. ಎಲೈ ರಾಜಶ್ರೇಷ್ಠನೇ, ದೇವತೆಗಳಿಗೂ, ರಾಜರಿಗೂ, ದೇವ ಗಣಗಳಿಗೂ, ಬ್ರಾಹ್ಮಣರೇ ಪೂಜ್ಯರಾದವರು, ಅವರೇ ಸರ್ವಶಕ್ತರು, ಸಮಸ್ತ ಶಕ್ತಿಗಳನ್ನೂ ಸಂಪಾದಿಸಬಲ್ಲವರು.

೭೬. ಹೀಗೆಂದು ಹೇಳಿ ಮಹಾತೇಜಸ್ವಿಯಾದ ಬ್ರಾಹ್ಮಣನು ತನ್ನ ಪರ್ಣಶಾಲೆಯನ್ನು ಪ್ರವೇಶಿಸಿದನು. ದಧೀಚನಿಗೆ ನಮಸ್ಕಾರಮಾಡಿ ರಾಜನೂ ತನ್ನ ಮನೆಯನ್ನು ಸೇರಿದನು.

೭೭. ಆ ದಧೀಚಮಹರ್ಷಿಯ ಆಶ್ರಮಸ್ಥಾನವೇ ಸ್ಥಾನೇಶರ್ವವೆಂಬ ಪ್ರಸಿದ್ಧವಾದ ಕ್ಷೇತ್ರವು, ಸ್ಥಾನೇಶ್ವರ ಯಾತ್ರೆಯನ್ನು ಮಾಡಿದವಂಗೆ ಶಿವಸಾಯುಜ್ಯದ ಪ್ರಾಪ್ತಿಯಾಗುವುದು.

ಕಥಿತ ಸ್ತ್ವವ ಸಂಕ್ಷೇಪಾದ್ವಿವಾದಃಕ್ಷ್ನುಬ್ದಧೀ ಚಯೋಃ ।
ಪ್ರಭಾವಶ್ಚ ದಧೀಚಸ್ಯ ಭವಸ್ಯ ಚ ಮಹಾಮುನೇ ॥೭೮॥
ಯು ಇದಂ ಕೀರ್ತಯೇ ದ್ದಿವ್ಯಂ ವಿವಾದಂ ಕ್ಷ್ನುಬ್ದಧೀಚಯೋಃ ।
ಜಿತ್ವಾಽಪಮೃತ್ಯುಂ ದೇಹಾಂತೇ ಬ್ರಹ್ಮಲೋಕಂ ಪ್ರಯಾತಿ ಸಃ ॥
ಯು ಇದಂ ಕೀರ್ತ್ಯ ಸಂಗ್ರಾಮಂ ಪ್ರವಿಶೇತ್ತಸ್ಯ ಸರ್ವದಾ ।
ನಾಸ್ತಿ ಮೃತ್ಯು ಭಯಂ ಚೈವ ವಿಜಯೀ ಚ ಭವಿಷ್ಯತಿ ॥೮೦॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಕ್ಷ್ನುಪ ದಧೀಚ ಸಂವಾದೋ ನಾಮ ಷಟ್ತ್ರಂಶೋಽಧ್ಯಾಯಃ

---

೭೮. ಎಲೈ ಸನತ್ಕುಮಾರ ಮಹಾಮುನಿಯೇ ನಿನಗೆ ಕ್ಷ್ನುಪ ಮತ್ತು ದಧೀಚರ ಸಂವಾದ ವಿಚಾರವನ್ನು ಸಂಕ್ಷೇಪವಾಗಿ ಹೇಳಿರುವೆನು. ಮತ್ತು ದಿಧೀಚನ ಮಹಿಮೆಯನ್ನೂ, ಶಿವನ ಮಹಿಮೆಯನ್ನೂ ಹೇಳಿರುವೆನು.

೭೯. ಕ್ಷ್ನುಪ ದಧೀಚರ ಈ ವಿವಾದವನ್ನು ಯಾರು ಕೇಳುವರೋ ಅವರು ಅಪಮೃತ್ಯುವನ್ನು ಜಯಿಸಿ ದೇಹತ್ಯಾಗವಾದಮೇಲೆ ಬ್ರಹ್ಮ ಲೋಕಕ್ಕೆ ಹೊಗುವರು.

೮೦. ಯಾವನು ಈ ಕ್ಷ್ನುಪ ದಧೀಚರ ಸಂವಾದವನ್ನು ಓದಿ ಯುದ್ಧಕ್ಕೆ ಹೋಗುವನೋ ಅವನಿಗೆ ಮೃತ್ಯುಭಯವಿಲ್ಲ, ಜಯವನ್ನೂ ಪಡೆಯುವನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಕ್ಷ್ನುಪದಧೀಚೋಪಾಖ್ಯಾನ ಎಂಬ ಮೂವತ್ತಾರನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀಲಿಂಗಮಹಾಪುರಾಣೇ ಪೂರ್ವಭಾಗೇ
## ಸಪ್ತತ್ರಿಂಶೋಽಧ್ಯಾಯಃ

**ಸಪ್ತತ್ರಿಂಶೇ ಕುಮಾರೇಣ ಪೃಷ್ಟಃ ಶೈಲಾದಿ ರಾದರಾತ್ ।**
**ಸ್ವೋದ್ಭವಂ ಕಥಯ ನ್ಪಿತ್ರೇ ಶಕ್ರ ಪ್ರೋಕ್ತ ಮವರ್ಣಯತ್ ॥**

**॥ ಸನತ್ಕುಮಾರ ಉವಾಚ ॥**

**ಭವಾನ್ಕಥ ಮನುಪ್ರಾಪ್ತೋ ಮಹಾದೇವ ಮುಮಾಪತಿಂ ।**
**ಶ್ರೋತು ಮಿಚ್ಛಾಮಿ ತತ್ಸರ್ವಂ ವಕ್ತು ಮರ್ಹಸಿ ಮೇ ಪ್ರಭೋ ॥**

**॥ ಶೈಲಾದಿರುವಾಚ ॥**

**ಪ್ರಜಾಕಾಮಃ ಶಿಲಾದೋಽಭೂತ್ಪಿತಾ ಮಮ ಮಹಾಮುನೇ ।**
**ಸೋಽಪ್ಯಂಧಃ ಸುಚಿರಂ ಕಾಲಂ ತಪಸ್ತೇಪೇ ಸುದುಶ್ಚರಂ ॥ ೨ ॥**

**ತಪತಸ್ತಸ್ಯ ತಪಸಾ ಸಂತುಷ್ಟೋ ವಜ್ರಧೃಕ್ ಪ್ರಭುಃ ।**
**ಶಿಲಾದ ಮಾಹ ತುಷ್ಟೋಽಸ್ಮಿ ವರಯಸ್ವ ವರಾನಿತಿ ॥ ೩ ॥**

---

### ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಮೂವತ್ತೇಳನೆಯ ಅಧ್ಯಾಯವು

(ಮೂವತ್ತೇಳನೆಯ ಅಧ್ಯಾಯದಲ್ಲಿ ಸನತ್ಕುಮಾರನ ಪ್ರಶ್ನೆಗೆ ನಂದಿಯು ತನ್ನ ಉತ್ಪತ್ತಿಯ ವಿಚಾರವನ್ನು ಪ್ರೀತಿಯಿಂದ ಹೇಳುತ್ತ, ತನ್ನ ತಂದೆಗೆ ದೇವೇಂದ್ರನು ಹೇಳಿದುದನ್ನು ವರ್ಣಿಸಿ ಹೇಳಿರುವನು.)

೧. ಸನತ್ಕುಮಾರನು ಹೇಳಿದನು: ಎಲೈ ನಂದೀಶ್ವರನೇ, ನೀನು ಉಮಾಪತಿಯಾದ ಪರಮೇಶ್ವರನ ಸಮೀಪವನ್ನು ಹೇಗೆ ಸೇರಿದೆ? ಅದೆಲ್ಲವನ್ನೂ ನಾನು ಕೇಳಬೇಕೆಂದು ಅಪೇಕ್ಷಿಸುವೆನು. ನೀನು ಹೇಳಬೇಕು.

೨-೩. ನಂದಿಯು ಹೇಳಿದನು: ಎಲೈ ಮಹಾಮುನಿಯೇ, ಕೇಳು. ಶಿಲಾದನೆಂಬ ತನ್ನ ತಂದೆಯು ಕುರುಡನಾಗಿದ್ದನು. ಮಕ್ಕಳಾಗಬೇಕೆಂದು ಬಹಳಕಾಲ ತಪಸ್ಸುಮಾಡಿದನು. ಅವನ ತಪಸ್ಸಿಗೆ ಸಂತೋಷ ಹೊಂದಿದ ದೇವೇಂದ್ರನು ಆ ಶಿಲಾದನನ್ನು ಕುರಿತು ನಿನ್ನ ತಪಸ್ಸಿಗೆ ಮೆಚ್ಚಿದೆನು, ವರಗಳನ್ನು ಕೇಳು. ಎಂದನು.

ತತಃ ಪ್ರಣಮ್ಯ ದೇವೇಶಂ ಸಹಸ್ರಾಕ್ಷಂ ಸಹಾಮರೈಃ ।
ಪ್ರೋವಾಚ ಮುನಿ ಶಾರ್ದೂಲ ಕೃತಾಂಜಲಿಪುಟೋ ಹರಿಂ ॥ ೪ ॥

॥ ಶಿಲಾದ ಉವಾಚ ॥

ಭಗವನ್ ದೇವತಾರಿಘ್ನ ಸಹಸ್ರಾಕ್ಷ ವರಪ್ರದ ।
ಅಯೋನಿಜಂ ಮೃತ್ಯುಹೀನಂ ಪುತ್ರ ಮಿಚ್ಛಾಮಿ ಸುವ್ರತ ॥ ೫ ॥

॥ ಶಕ್ರ ಉವಾಚ ॥

ಪುತ್ರಂ ದಾಸ್ಯಾಮಿ ವಿಪ್ರರ್ಷೇ ಯೋನಿಜಂ ಮೃತ್ಯು ಸಂಯುತಂ ।
ಅನ್ಯಥಾ ತೇ ನ ದಾಸ್ಯಾಮಿ ಮೃತ್ಯುಹೀನಾ ನ ಸಂತಿ ವೈ ॥ ೬ ॥

ನ ದಾಸ್ಯತಿ ಸುತಂ ತೇಽತ್ರ ಮೃತ್ಯುಹೀನ ಮಯೋನಿಜಂ ।
ಪಿತಾಮಹೋಽಪಿಭಗವಾನ್ ಕಿಮುತಾನ್ಯೇ ಮಹಾಮುನೇ ॥ ೭ ॥

ಸೋಽಪಿ ದೇವಃ ಸ್ವಯಂ ಬ್ರಹ್ಮಾ ಮೃತ್ಯುಹೀನೋ ನ ಚೇಶ್ವರಃ ।
ಯೋನಿಜಶ್ಚ ಮಹಾತೇಜಾ ಶ್ಚಾಂಡಜಃ ಪದ್ಮಸಂಭವಃ ॥ ೮ ॥

---

೪. ಆ ಮೇಲೆ ಶಿಲಾದನು ದೇವತೆಗಳೊಡನೆ ಕೂಡಿದ ದೇವೇಂದ್ರನಿಗೆ ನಮಸ್ಕಾರವನ್ನು ಮಾಡಿ ಕೈಮುಗಿದುಕೊಂಡು ಆ ಇಂದ್ರನನ್ನು ಕುರಿತು ಹೇಳಿದನು.

೫. ಶಿಲಾದನು ಹೇಳಿದನು: ದೇವ ಶತ್ರುಗಳನ್ನು ನಾಶಮಾಡಿದ, ಸಾವಿರ ಕಣ್ಣುಗಳುಳ್ಳ, ವರವನ್ನು ಕೊಡತಕ್ಕ, ದೇವೇಂದ್ರನೇ, ಅಯೋನಿಜನೂ, ಮೃತ್ಯುವಿಲ್ಲದವನೂ, ಆದ ಮಗನನ್ನು ನನಗೆ ಕೊಡು. ಎಂದನು.

೬–೭. ದೇವೇಂದ್ರನು ಹೇಳಿದನು: ಎಲೈ ಮಹಾಮುನಿಯೇ ನಾನು ಯೋನಿಜನೂ, ಮೃತ್ಯು ಸಹಿತನೂ ಆದ ಮಗನನ್ನು ಕೊಡಬಲ್ಲೆನು. ಲೋಕದಲ್ಲಿ ಮರಣವಿಲ್ಲದವರು ಇಲ್ಲವೇ ಇಲ್ಲ. ಮಹಾಮಹಿಮನಾದ ಬ್ರಹ್ಮನೂ ಕೂಡ ನಿನಗೆ ಅಯೋನಿಜನೂ, ಮರಣವಿಲ್ಲದವನೂ ಆದ ಮಗನನ್ನು ಕೊಡಲಾರನು, ಮಿಕ್ಕವರ ಮಾತೇನು!

೮–೯. ಆ ಬ್ರಹ್ಮನೂ ಕೂಡ ಮರಣವಿಲ್ಲದವನಲ್ಲ. ಅವನೂ ಯೋನಿಜನು, ಕಮಲದಲ್ಲಿ ಹುಟ್ಟಿದನು, ಅಂಡದಲ್ಲಿ ಹುಟ್ಟಿದನು.

ಮಹೇಶ್ವರಾಂಗಜಶ್ಚೈವ ಭವಾನ್ಯಾಃ ತನಯಃ ಪ್ರಭುಃ ।
ತಸ್ಯಾ ಪ್ಯಾಯುಃ ಸಮಾಖ್ಯಾತಂ ಪರಾರ್ಧದ್ವಯ ಸಂಮಿತಂ ॥ ೯ ॥
ಕೋಟಿ ಕೋಟಿ ಸಹಸ್ರಾಣಿ ಅಹರ್ಭೂತಾನಿ ಯಾನಿ ವೈ ।
ಸಮತೀತಾನಿ ಕಲ್ಪಾನಾಂ ತಾವಚ್ಛೇಷಾಃ ಪರತ್ರ ಯೇ ॥೧೦॥
ತಸ್ಮಾ ದಯೋನಿಜೇ ಪುತ್ರೇ ಮೃತ್ಯುಹೀನೇ ಪ್ರಯತ್ನತಃ ।
ಪರಿತ್ಯಜಾಶಾಂ ವಿಪ್ರೇಂದ್ರ ಗೃಹಾಣಾತ್ಮ ಸಮಂ ಸುತಂ ॥೧೧॥

॥ ಶೈಲಾದಿರುವಾಚ ॥

ತಸ್ಯ ತದ್ವಚನಂ ಶ್ರುತ್ವಾ ಪಿತಾ ಮೇ ಲೋಕ ವಿಶ್ರುತಃ ।
ಶಿಲಾದ ಇತಿ ಪುಣ್ಯಾತ್ಮಾ ಪುನಃ ಪ್ರಾಹ ಶಚೀಪತಿಂ ॥೧೨॥

॥ ಶಿಲಾದ ಉವಾಚ ॥

ಭಗವನ್ನಂಡಯೋನಿತ್ವಂ ಪದ್ಮಯೋನಿ ತ್ವಮೇವ ಚ ।
ಮಹೇಶ್ವರಾಂಗಯೋನಿತ್ವಂ ಶ್ರುತಂ ವೈ ಬ್ರಹ್ಮಣೋ ಮಯಾ ॥೧೩॥

---

ಮಹೇಶ್ವರನ ಅವಯವದಲ್ಲಿ ಭವಾನಿಯ ಮಗನಾಗಿ ಹುಟ್ಟಿರುವನು. ಅವನಿಗೂ ಎರಡು ಪರಾರ್ಧವರ್ಷಗಳು ಆಯುಸ್ಸು ನಿಯಮಿತವಾಗಿರುವುದು.

೧೦–೧೧. ಅನೇಕ ಸಾವಿರ ಕೋಟಿ ಸಂಖ್ಯೆಯ ದಿನಗಳೂ ಕಲ್ಪಗಳೂ ಕಳೆದುಹೋದವು. ಇನ್ನೂ ಅಷ್ಟೇ ದಿನಗಳು ಮಿಕ್ಕಿವೆ. ಅಂತೂ ಆ ಬ್ರಹ್ಮನೂ ಮರಣ ಹೊಂದತಕ್ಕವನು! ಹೀಗಿರುವುದರಿಂದ ಅಯೋನಿಜನೂ, ಮೃತ್ಯುಹೀನನೂ ಆದ ಪುತ್ರನನ್ನು ಪಡೆಯುವ ಪ್ರಯತ್ನದಲ್ಲಿ ಆಸೆಯನ್ನು ಬಿಡು. ನಿನಗೆ ಸಮಾನನಾದ ಪುತ್ರನನ್ನು ಕೊಡುವೆನು, ಒಪ್ಪಿಕೋ. ಎಂದನು.

೧೨. ನಂದಿಯು ಹೇಳಿದನು: ನನ್ನ ತಂದೆಯಾದ ಪ್ರಸಿದ್ಧನಾದ ಶಿಲಾದಮುನಿಯು ಆ ದೇವೇಂದ್ರನ ಮಾತನ್ನು ಕೇಳಿ ಮತ್ತೆ ಅವನನ್ನು ಕುರಿತು ಹೇಳಿದನು.

೧೩. ಓ ದೇವೇಂದ್ರನೇ, ಬ್ರಹ್ಮನು ಅಂಡದಲ್ಲಿ ಜನಿಸಿದವನು. ಕಮಲದಲ್ಲಿ ಹುಟ್ಟಿದವನು. ಮತ್ತು ಮಹೇಶ್ವರನ ಅವಯವದಲ್ಲಿ ಹುಟ್ಟಿದವನು, ಎಂದು ನಾನು ಕೇಳಿರುವೆನು.

ಪುರಾ ಮಹೇಂದ್ರ ದಾಯಾದಾ ದ್ಗದತ ಶ್ಚಾಸ್ಯ ಪೂರ್ವಜಾತ್ ।
ನಾರದಾದ್ವೈ ಮಹಾಬಾಹೋ ಕಥಮುತ್ಪ್ರಾಶು ನೋ ವದ ॥೧೪॥

ದಾಕ್ಷಾಯಣೀ ಸಾ ದಕ್ಷೋಽಪಿ ದೇವಃ ಪದ್ಮೋದ್ಭವಾತ್ಮಜಃ ।
ಪೌತ್ರೀ ಕನಕ ಗರ್ಭಸ್ಯ ಕಥಂ ತಸ್ಯಾಃ ಸುತೋ ವಿಭುಃ ॥೧೫॥

॥ ಶಕ್ರ ಉವಾಚ ॥

ಸ್ಥಾನೇ ಸಂಶಯಿತುಂ ವಿಪ್ರ ತವ ವಕ್ಷ್ಯಾಮಿ ಕಾರಣಂ ।
ಕಲ್ಪೇ ತತ್ಪುರುಷೇ ವೃತ್ತಂ ಬ್ರಹ್ಮಣಃ ಪರಮೇಷ್ಠಿನಃ ॥೧೬॥

ಸಸರ್ಜ ಸಕಲಂ ಧ್ಯಾತ್ವಾ ಬ್ರಹ್ಮಾಣಂ ಪರಮೇಶ್ವರಃ ।
ಜನಾರ್ದನೋ ಜಗನ್ನಾಥಃ ಕಲ್ಪೇ ವೈ ಮೇಘವಾಹನೇ ॥೧೭॥

---

೧೪. ಓ ಮಹೇಂದ್ರನೇ, ಹಿಂದೆ ಬ್ರಹ್ಮಪುತ್ರನಾದ ನಾರದನು ನನಗೆ ಇದನ್ನು ಹೇಳಿರುವನು. ಈ ಬ್ರಹ್ಮನ ಉತ್ಪತ್ತಿಯು ಹೇಗೆ ಸಂಗತವಾದುದು? ಹೇಳು.

೧೫. ದಕ್ಷನು ಕಮಲದಲ್ಲಿ ಹುಟ್ಟಿದ ಬ್ರಹ್ಮನ ಮಗನು. ದಾಕ್ಷಾಯಣಿಯು ಹಿರಣ್ಯಗರ್ಭಬ್ರಹ್ಮನ ಮೊಮ್ಮಗಳು. ಹೀಗಿರುವಲ್ಲಿ ಬ್ರಹ್ಮನು ಭವಾನಿಯ ಮಗನೆಂಬುದು ಹೇಗೆ ಸಂಗತವಾಗುವುದು?

೧೬. ದೇವೇಂದ್ರನು ಹೇಳಿದನು. ಎಲೈ ಶಿಲಾದಮುನಿಯೇ, ಸಂದೇಹಕ್ಕೆ ಅವಕಾಶವಿರುವುದು ನಿಜವು. ಅದಕ್ಕೆ ಕಾರಣವನ್ನು ಹೇಳುವೆನು. ಕೇಳು. ತತ್ಪುರುಷವೆಂಬ ಕಲ್ಪದಲ್ಲಿ ಪರಮೇಶ್ವರನ ವೃತ್ತಾಂತ ಒಂದಿರುವುದು. ಅದೇನೆಂದರೆ,

೧೭–೧೮. ಶಿವನು ಸೃಷ್ಟಿಮಾಡಬೇಕಾದುದೆಲ್ಲವನ್ನೂ ಮನಸ್ಸಿನಲ್ಲಿ ಯೋಚಿಸಿ ಮೊದಲು ಬ್ರಹ್ಮನನ್ನು ಸೃಷ್ಟಿಸಿದನು. ಮೇಘವಾಹನ ಕಲ್ಪ

ದಿವ್ಯಂ ವರ್ಷ ಸಹಸ್ರಂ ತು ಮೇಘೋ ಭೂತ್ವಾಽವಹದ್ಧರಂ ।
ನಾರಾಯಣೋ ಮಹಾದೇವಂ ಬಹುಮಾನೇನ ಸಾದರಂ ॥೧೮॥

ದೃಷ್ಟ್ವಾಽಭಾವಂ ಮಹಾದೇವೋ ಹರೇಃ ಸ್ವಾತ್ಮನಿ ಶಂಕರಃ ।
ಪ್ರದದೌ ತಸ್ಯ ಸಕಲಂ ಸ್ರಷ್ಟುಂ ವೈ ಬ್ರಹ್ಮಣಾಸಹ ॥೧೯॥

ತದಾ ತಂ ಕಲ್ಪಮಾಹು ರ್ವೈ ಮೇಘವಾಹನ ಸಂಜ್ಞಯಾ ।
ಹಿರಣ್ಯ ಗರ್ಭಸ್ತಂ ದೃಷ್ಟ್ವಾ ತಸ್ಯ ದೇಹೋದ್ಭವಸ್ತದಾ ॥೨೦॥

ಜನಾರ್ದನ ಸುತಃ ಪ್ರಾಹ ತಪಸಾ ಪ್ರಾಪ್ಯ ಶಂಕರಂ ।
ತವ ವಾಮಾಂಗಜೋ ವಿಷ್ಣು ರ್ದಕ್ಷಿಣಾಂಗ ಭವೋ ಹ್ಯಹಂ ॥೨೧॥

ಮಯಾ ಸಹ ಜಗತ್ಸರ್ವಂ ತಥಾಽ ಸ್ಯ ಸೃಜದಚ್ಯುತಃ ।
ಜಗನ್ಮಯೋಽ ವಹದ್ಯಸ್ಮಾನ್ಮೇಘೋ ಭೂತ್ವಾ ದಿವಾನಿಶಂ ॥೨೨॥

---

ವಲ್ಲಿ ನಾರಾಯಣನು ಮೇಘನಾಗಿ ದೇವಮಾನದ ಅನೇಕ ಸಾವಿರವರ್ಷಗಳವರೆಗೆ ಮಹಾದೇವನನ್ನು ಪ್ರೀತಿಯಿಂದ ತನ್ನ ಮೇಲೆ ಕೂಡಿಸಿಕೊಂಡಿದ್ದನು.

೧೯. ಶಿವನು ಹರಿಯ ಮನೋಭಾವವನ್ನು ತಿಳಿದು ಬ್ರಹ್ಮನೊಡನೆ ಕೂಡಿದ ಸಕಲ ಪ್ರಪಂಚವನ್ನೂ ಸೃಷ್ಟಿಮಾಡುವ ಶಕ್ತಿಯನ್ನು ಆ ಹರಿಗೆ ಕೊಟ್ಟನು. ಆಗ ಆ ಕಲ್ಪಕ್ಕೆ ಮೇಘವಾಹನ ಕಲ್ಪವೆಂದು ಹೆಸರು ಬಂದಿತು.

೨೦-೨೧. ಆ ಹರಿಯ ದೇಹದಲ್ಲಿ ಹುಟ್ಟಿದ ಹಿರಣ್ಯಗರ್ಭಬ್ರಹ್ಮನು ತಪಸ್ಸಿನಿಂದ ಶಿವನನ್ನು ಪ್ರತ್ಯಕ್ಷಮಾಡಿಕೊಂಡು ಅವನನ್ನು ಕುರಿತು ಹೇಳಿದನು. ನಿನ್ನ ಎಡಭಾಗದ ಅವಯವದಿಂದ ವಿಷ್ಣುವು ಹುಟ್ಟಿದನು, ಬಲಭಾಗದ ಅವಯವದಿಂದ ನಾನು ಹುಟ್ಟಿದೆನು, ನನ್ನೊಡನೆ ಕೂಡಿ ನಾರಾಯಣನು ಈ ಸಕಲ ಜಗತ್ತನ್ನೂ ಸೃಷ್ಟಿಸಿದನು.

೨೨-೨೪. ದೇವದೇವನೂ ಲೋಕಕ್ಕೆ ಗುರುವೂ ಆದ ನಿನ್ನನ್ನು ವಿಶ್ವರೂಪನಾದ ವಿಷ್ಣುವು ಮೇಘನಾಗಿ ಹಗಲೂ, ರಾತ್ರಿಯೂ, ಹೊತ್ತು

ಭವಂತ ಮವಹದ್ವಿಷ್ಣು ರ್ದೇವದೇವಂ ಜಗದ್ಗುರುಂ ।
ನಾರಾಯಣಾ ದಪಿ ವಿಭೋ ಭಕ್ತೋಽಹಂ ತವ ಶಂಕರ ॥೨೩॥

ಪ್ರಸೀದ ದೇಹಿ ಮೇ ಸರ್ವಂ ಸರ್ವಾತ್ಮತ್ವಂ ತವ ಪ್ರಭೋ ।
ತದಾಽಥ ಲಬ್ಧ್ವಾ ಭಗವಾನ್ ಭವಾತ್ ಸರ್ವಾತ್ಮತಾಂ ಕ್ಷಣಾತ್ ॥

ತ್ವರಮಾಣೋಽಥ ಸಂಗಮ್ಯ ದದರ್ಶ ಪುರುಷೋತ್ತಮಂ ।
ಏಕಾರ್ಣವಾಲಯೇ ಶುಭ್ರೇ ತ್ವಂಧಕಾರೇ ಸುದಾರುಣೇ ॥೨೫॥

ಹೇಮರತ್ನ ಚಿತೇ ದಿವ್ಯೇ ಮನಸಾ ಚ ವಿನಿರ್ಮಿತೇ ।
ದುಷ್ಪ್ರಾಪ್ಯೇ ದುರ್ಜನೈಃ ಪುಣ್ಯೈಃ ಸನಕಾದ್ಯೈರಗೋಚರೇ ॥೨೬॥

ಜಗದಾವಾಸಹೃದಯಂ ದದರ್ಶ ಪುರುಷಂ ತ್ವಜಃ ।
ಅನಂತ ಭೋಗ ಶಯ್ಯಾಯಾಂ ಶಾಯಿನಂಪಂಕಜೇಕ್ಷಣಂ ॥೨೭॥

ಶಂಖ ಚಕ್ರಗದಾಪದ್ಮಂ ಧಾರಯಂತಂ ಚತುರ್ಭುಜಂ ।
ಸರ್ವಾಭರಣ ಸಂಯುಕ್ತಂ ಶಶಿಮಂಡಲ ಸನ್ನಿಭಂ ॥೨೮॥

---

ಕ್ಕೊಂಡಿದ್ದನು. ಓ ಶಂಕರನೇ ಆ ನಾರಾಯಣನಿಗಿಂತಲೂ ನಾನು ನಿನ್ನಲ್ಲಿ ಹೆಚ್ಚುಭಕ್ತಿಯುಳ್ಳವನಾಗಿರುವೆನು. ನೀನು ಪ್ರಸನ್ನನಾಗಿ ನನಗೆ ನಿನ್ನ ಸರ್ವಾತ್ಮಸ್ವರೂಪವನ್ನು ಕರುಣಿಸು. ಎಂದನು.

೨೪-೨೫. ಆಗ ಬ್ರಹ್ಮನು ಆ ಕ್ಷಣದಲ್ಲಿಯೇ ಶಿವನಿಂದ ಸರ್ವಾತ್ಮ ಭಾವವನ್ನು ಪಡೆದು ಆತುರದಿಂದ ಹೋಗಿ ಬೆಳಗಿರುವ ಪ್ರಳಯ ಸಮುದ್ರದಲ್ಲಿ ಭಯಂಕರವಾದ ಅಂಧಕಾರದಲ್ಲಿ ಪುರುಷೋತ್ತಮನಾದ ನಾರಾಯಣನನ್ನು ಕಂಡನು.

೨೬-೨೭. ಚಿನ್ನ ಮುತ್ತು ರತ್ನಗಳ ಕೆಲಸಮಾಡಿದ, ಅತ್ಯುತ್ತಮ ವಾದ, ಮನಸ್ಸಿನಿಂದಲೇ ನಿರ್ಮಿಸಿದ, ದುರ್ಜನರಿಗೆ ಹೊಂದಲಸಾಧ್ಯವಾದ, ಪುಣ್ಯವಂತರಾದ ಸನಕಾದಿ ಮುನಿಗಳಿಗೂ ಕಾಣದಿರುವ, ಆದಿಶೇಷನ ಶರೀರವೆಂಬ ಹಾಸಿಗೆಯಲ್ಲಿ ಮಲಗಿರುವ, ಕಮಲಾಕ್ಷನಾದ ಜಗತ್ತಿಗೆ ಆಶ್ರಯಸ್ಥಾನನಾದ, ಮಹಾ ವಿಷ್ಣುವನ್ನು ಬ್ರಹ್ಮನು ನೋಡಿದನು.

೨೮-೨೯. ಆ ಮಹಾವಿಷ್ಣುವು ನಾಲ್ಕು ಕೈಗಳಲ್ಲಿ ಶಂಖ, ಚಕ್ರ, ಗದೆ, ಪದ್ಮ, ಇವುಗಳನ್ನು ಧರಿಸಿದ್ದನು. ಚಂದ್ರಮಂಡಲದಂತೆ ಕಾಂತಿ

ಶ್ರೀವತ್ಸ ಲಕ್ಷಣಂ ದೇವಂ ಪ್ರಸನ್ನಾಸ್ಯಂ ಜನಾರ್ದನಂ ।
ರಮಾ ಮೃದು ಕರಾಂಭೋಜ ಸ್ಪರ್ಶರಕ್ತ ಪದಾಂಬುಜಂ ॥೨೯॥
ಪರಮಾತ್ಮಾನಮೀಶಾನಂ ತಮಸಾ ಕಾಲರೂಪಿಣಂ ।
ರಜಸಾ ಸರ್ವ ಲೋಕಾನಾಂ ಸರ್ಗ ಲೀಲಾಪ್ರವರ್ತಕಂ ॥೩೦॥
ಸತ್ವೇನ ಸರ್ವ ಭೂತಾನಾಂ ಸ್ಥಾಪಕಂ ಪರಮೇಶ್ವರಂ ।
ಸರ್ವಾತ್ಮಾನಂ ಮಹಾತ್ಮಾನಂ ಪರಮಾತ್ಮಾನ ಮೀಶ್ವರಂ ॥೩೧॥
ಕ್ಷೀರಾರ್ಣವೇऽಮೃತಮಯೇ ಶಾಯಿನಂ ಯೋಗನಿದ್ರಯಾ ।
ತಂ ದೃಷ್ಟ್ವಾ ಪ್ರಾಹ ವೈ ಬ್ರಹ್ಮಾ ಭಗವಂತಂ ಜನಾರ್ದನಂ ॥೩೨॥
ಗ್ರಸಾಮಿ ತ್ವಾಂ ಪ್ರಸಾದೇನ ಯಥಾ ಪೂರ್ವಂ ಭವಾನಹಂ ।
ಸ್ಮಯಮಾನಸ್ತುಭಗವಾನ್ ಪ್ರತಿಬುಧ್ಯ ಪಿತಾಮಹಂ ॥೩೩॥
ಉದೈಕ್ಷತ ಮಹಾಬಾಹುಃ ಸ್ಮಿತ ಮೀಷ ಚ್ಚಕಾರ ಸಃ ।
ವಿವೇಶ ಚಾಂಡಜಂ ತಂತು ಗ್ರಸ್ತಸ್ತೇನ ಮಹಾತ್ಮನಾ ॥೩೪॥

---

ಯುಕ್ತನಾಗಿ ಸಮಸ್ತವಾದ ಆಭರಣಗಳನ್ನೂ ಧರಿಸಿದ್ದನು. ಅವನ ಎದೆಯಲ್ಲಿ ಶ್ರೀವತ್ಸವೆಂಬ ಚಿನ್ಹೆಯಿದ್ದಿತು. ಲಕ್ಷ್ಮೀದೇವಿಯು ತನ್ನ ಮೃದುವಾದ ಹಸ್ತಕಮಲಗಳಿಂದ ಆ ನಾರಾಯಣನ ಪಾದಕಮಲಗಳನ್ನು ಒತ್ತುತ್ತಿದ್ದಳು.

೩೦–೩೧. ತಮೋಗುಣದಿಂದ ಯಮಸ್ವರೂಪನಾಗಿಯೂ, ರಜೋಗುಣದಿಂದ ಸಕಲ ಲೋಕಗಳನ್ನೂ ಸೃಷ್ಟಿಸುವ ಆಟದಲ್ಲಿ ಆಸಕ್ತನಾಗಿಯೂ, ಸತ್ವಗುಣದಿಂದ ಸಕಲ ಲೋಕಗಳನ್ನೂ ಪಾಲಿಸುತ್ತಿರುವವನಾಗಿಯೂ, ಸಕಲ ಜೀವಗಳಿಗೂ ಆತ್ಮಸ್ವರೂಪನಾಗಿ ಅಮೃತದಿಂದ ತುಂಬಿದ ಕ್ಷೀರಸಮುದ್ರದಲ್ಲಿ ಯೋಗ ನಿದ್ರೆಯಿಂದ ಮಲಗಿರುವ ಮಹಾಮಹಿಮನಾದ ಪರಮಾತ್ಮ ಸ್ವರೂಪನಾದ ನಾರಾಯಣನನ್ನು ಕಂಡನು.

೩೨–೩೪. ಬ್ರಹ್ಮನು ಆ ಜನಾರ್ದನನನ್ನು ನೋಡಿ; ಎಲೈ ನಾರಾಯಣನೇ, ಹಿಂದೆ ನೀನು ನನ್ನನ್ನು ಹೇಗೆ ನುಂಗಿದೆಯೋ ಹಾಗೆ ಶಿವನ ಅನುಗ್ರಹದಿಂದ ನಾನು ನಿನ್ನನ್ನು ನುಂಗುವೆನು, ಎಂದನು. ವಿಷ್ಣುವು ಯೋಗನಿದ್ರೆಯಿಂದ ಎಚ್ಚರವನ್ನು ಹೊಂದಿ ಬ್ರಹ್ಮನನ್ನು ನೋಡಿ ಮುಗುಳು ನಗೆಯಿಂದ ನಗುತ್ತ ಆ ಹಿರಣ್ಯಗರ್ಭನ ಶರೀರಸೊಳಕ್ಕೆ ಪ್ರವೇಶಮಾಡಿದನು.

ತತಸ್ತಂ ಚಾಸೃಜ ದ್ಬ್ರಹ್ಮಾ ಭ್ರುವೋರ್ಮಧ್ಯೇನ ಚಾಚ್ಯುತಂ ।
ಸೃಷ್ಟಸ್ತೇನ ಹರಿಃ ಪ್ರೇಕ್ಷ್ಯ ಸ್ಥಿತ ಸ್ತಸ್ಯಾಥ ಸನ್ನಿಧೌ ॥೩೫॥

ಏತಸ್ಮಿನ್ನಂತರೇ ರುದ್ರಃ ಸರ್ವದೇವ ಭವೋದ್ಭವಃ ।
ವಿಕೃತಂ ರೂಪಮಾಸ್ಥಾಯ ಪುರಾ ದತ್ತವರಸ್ತಯೋಃ ॥೩೬॥

ಆಗಚ್ಛ ದ್ಯತ್ರ ವೈ ವಿಷ್ಣುಃ ವಿಶ್ವಾತ್ಮಾ ಪರಮೇಶ್ವರಃ ।
ಪ್ರಸಾದ ಮತುಲಂ ಕರ್ತುಂ ಬ್ರಹ್ಮಣಶ್ಚ ಹರೇಃ ಪ್ರಭುಃ ॥೩೭॥

ತತಃ ಸಮೇತ್ಯ ತೌ ದೇವೌ ಸರ್ವದೇವ ಭವೋದ್ಭವಂ ।
ಅಪಶ್ಯತಾಂ ಭವಂ ದೇವಂ ಕಾಲಾಗ್ನಿ ಸದೃಶಂ ಪ್ರಭುಂ ॥೩೮॥

ತೌ ತಂ ತುಷ್ಟುವತುಶ್ಚೈವ ಶರ್ವಮುಗ್ರಂ ಕಪರ್ದಿನಂ ।
ಪ್ರಣೇಮತು ಶ್ಚ ವರದಂ ಬಹುಮಾನೇನ ದೂರತಃ ॥೩೯॥

---

೩೫. ಆ ಮೇಲೆ ಬ್ರಹ್ಮನು ಆ ನಾರಾಯಣನನ್ನು ತನ್ನ ಭ್ರೂಮಧ್ಯ ದಿಂದ ಸೃಷ್ಟಿಸಿದನು. ಆ ಹರಿಯು ತನ್ನನ್ನು ಸೃಷ್ಟಿಸಿದ ಬ್ರಹ್ಮನ ಸಮೀಪ ದಲ್ಲಿಯೇ ಇದ್ದನು.

೩೬–೩೭. ಈ ಸಮಯಕ್ಕೆ ಸರಿಯಾಗಿ ಸಕಲ ದೇವತೆಗಳ ಉತ್ಪತ್ತಿಗೂ ಕಾರಣನಾದ ಪರಮೇಶ್ವರನು, ಹಿಂದೆ ಆ ವಿಷ್ಣು ಬ್ರಹ್ಮರಿಗೆ ವರ ವನ್ನು ಕೊಟ್ಟಿದ್ದುದರಿಂದ, ಈಗ ಅವರಿಗೆ ಅನುಗ್ರಹಮಾಡಬೇಕೆಂದು ವಿಕಾರವಾದ ರೂಪದಿಂದ ಅಲ್ಲಿಗೆ ಬಂದನು.

೩೮. ಆ ಬಳಿಕ ಆ ವಿಷ್ಣು ಬ್ರಹ್ಮರಿಬ್ಬರೂ ಪ್ರಳಯಾಗ್ನಿಗೆ ಸಮಾನ ನಾದ ಆ ಶಿವನನ್ನು ಕಂಡರು.

೩೯. ಅವರಿಬ್ಬರೂ ಜಟಾಧಾರಿಯೂ, ಪಾಪಿಗಳಿಗೆ ಕ್ರೂರನೂ ಆದ ಶಿವನನ್ನು ನೋಡಿ ಗೌರವದಿಂದ ದೂರದಲ್ಲಿ ನಿಂತು ಸ್ತೋತ್ರಮಾಡಿ ವರ ವನ್ನು ಕೊಡತಕ್ಕ ಆ ಶಿವನಿಗೆ ನಮಸ್ಕಾರ ಮಾಡಿದರು.

ಭವೋಽಪಿ ಭಗವಾನ್ ದೇವ ಮನುಗೃಹ್ಯ ಪಿತಾಮಹಂ ।
ಜನಾರ್ದನಂ ಜಗನ್ನಾಥ ಸ್ತತ್ರೈವಾಂತರಧೀಯತ ॥೪೦॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಬ್ರಹ್ಮಣೋ ವರಪ್ರದಾನಂ ನಾಮ ಸಪ್ತತ್ರಿಂಶೋಽಧ್ಯಾಯಃ

---

೪೦. ಶಿವನೂ ಕೂಡ ಬ್ರಹ್ಮನಿಗೂ, ವಿಷ್ಣುವಿಗೂ ಅನುಗ್ರಹವನ್ನು ಮಾಡಿ ವರವನ್ನು ಕೊಟ್ಟು ಅಲ್ಲಿಯೇ ಅಂತರ್ಧಾನನಾದನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಬ್ರಹ್ಮನಿಗೆ ವರಲಾಭವನ್ನು ವರ್ಣಿಸಿರುವ ಮೂವತ್ತೇಳನೆಯ ಅಧ್ಯಾಯವು ಮುಗಿದುದು.



## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಅಷ್ಟತ್ರಿಂಶೋಽಧ್ಯಾಯಃ

ಅಷ್ಟತ್ರಿಂಶೇ ಮಹೇಶಸ್ಯ ಮಹಿಮಾನಂ ಜನಾರ್ದನಃ ।
ವಿಧಾತ್ರೇ ಕಥ ಯಿತ್ವಾಽಽದೌ ಸರ್ಗಂ ಪೂರ್ವವದಾ ಕರೋತ್ ॥

॥ ಶೈಲಾದಿರುವಾಚ ॥

ಗತೇ ಮಹೇಶ್ವರೇ ದೇವೇ ತಮುದ್ದಿಶ್ಯಜನಾರ್ದನಃ ।
ಪ್ರಣಮ್ಯ ಭಗವಾನ್‌ಪ್ರಾಹ ಪದ್ಮಯೋನಿ ಮಜೋದ್ಭವಃ ॥ ೧ ॥

॥ ಶ್ರೀ ವಿಷ್ಣುರುವಾಚ ॥

ಪರಮೇಶೋ ಜಗನ್ನಾಥಃ ಶಂಕರಸ್ತ್ವೇಷ ಸರ್ವಗಃ ।
ಆವಯೋರಖಿಲಸ್ಯೇಶಃ ಶರಣಂ ಚ ಮಹೇಶ್ವರಃ ॥ ೨ ॥

ಅಹಂ ವಾಮಾಂಗಜೋ ಬ್ರಹ್ಮನ್ ಶಂಕರಸ್ಯ ಮಹಾತ್ಮನಃ ।
ಭವಾನ್ ಭವಸ್ಯ ದೇವಸ್ಯ ದಕ್ಷಿಣಾಂಗ ಭವಃ ಸ್ವಯಂ ॥ ೩ ॥

---

### ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಮೂವತ್ತೆಂಟನೆಯ ಅಧ್ಯಾಯವು

(ಮೂವತ್ತೆಂಟನೆಯ ಅಧ್ಯಾಯದಲ್ಲಿ ವಿಷ್ಣುವು ಮಹೇಶ್ವರನ ಮಹಿಮೆಯನ್ನು ಬ್ರಹ್ಮನಿಗೆ ಹೇಳಿ ಮೊದಲಿನಂತೆಯೇ ಸೃಷ್ಟಿಕಾರ್ಯವನ್ನು ಮಾಡಿದನೆಂದು ವರ್ಣಿಸಲಾಗುವುದು.)

೧. ನಂದಿಯು ಹೇಳಿದನು: ಪರಮೇಶ್ವರನು ಅಂತರ್ಧಾನನಾಗಿ ಹೋಗುತ್ತಲೂ, ಬ್ರಹ್ಮನ ಭ್ರೂಮಧ್ಯದಲ್ಲಿ ಹುಟ್ಟಿದ ವಿಷ್ಣುವು ಆ ಪರಮೇಶ್ವರನಿಗೆ ನಮಸ್ಕರಿಸಿ ಕಮಲದಲ್ಲಿ ಹುಟ್ಟಿದ ಬ್ರಹ್ಮನಿಗೆ ಹೇಳಿದನು.

೨. ವಿಷ್ಣುವು ಹೇಳಿದನು. ಈ ಪರಮೇಶ್ವರನು ಲೋಕಕ್ಕೆಲ್ಲಕ್ಕೂ ಒಡೆಯನು. ಸಮಸ್ತ ಜೀವರುಗಳಲ್ಲಿಯೂ ಇರತಕ್ಕವನು. ಈ ಮಹೇಶ್ವರನು ನಮ್ಮಿಬ್ಬರಿಗೂ, ಸಮಸ್ತ ಪ್ರಪಂಚಕ್ಕೂ ರಕ್ಷಕನಾಗಿರುವನು.

೩–೪. ಎಲೈ ಬ್ರಹ್ಮನೇ, ಮಹಾತ್ಮನಾದ ಶಂಕರನ ಎಡಭಾಗದಲ್ಲಿ ನಾನು ಹುಟ್ಟಿದೆನು. ನೀನು ಆ ದೇವನ ಬಲಭಾಗದಲ್ಲಿ ಹುಟ್ಟಿರುವೆ.

ಮಾಮಾಹುಃ ಋಷಯಃ ಪ್ರೇಕ್ಷ್ಯ ಪ್ರಧಾನಂ ಪ್ರಕೃತಿಂ ತಥಾ ।
ಅವ್ಯಕ್ತಮಜಮಿತ್ಯೇವಂ ಭವಂತಂ ಪುರುಷಸ್ತ್ವಿತಿ ॥ ೪ ॥

ಏವಮಾಹು ರ್ಮಹಾದೇವ ಮಾವಯೋರಪಿಕಾರಣಂ ।
ಈಶಂ ಸರ್ವಸ್ಯ ಜಗತಃ ಪ್ರಭುಮವ್ಯಯ ಮೀಶ್ವರಂ ॥ ೫ ॥

ಸೋಽಪಿ ತಸ್ಯಾ ಮರೇಶಸ್ಯ ವಚನಾದ್ವಾರಿಜೋದ್ಭವಃ ।
ವರೇಣ್ಯಂ ವರದಂ ರುದ್ರ ಮಸ್ತೌತ್ಪ್ರಣನಾಮ ಚ ॥ ೬ ॥

ಅಥಾಂಭಸಾ ಪ್ಲುತಾಂ ಭೂಮಿಂ ಸಮಾದಾಯ ಜನಾರ್ದನಃ ।
ಪೂರ್ವವತ್ ಸ್ಥಾಪಯಾಮಾಸ ವಾರಾಹಂರೂಪಮಾಸ್ಥಿತಃ ॥ ೭ ॥

ನದೀನದ ಸಮುದ್ರಾಂಶ್ಚ ಪೂರ್ವವಚ್ಚಾಕರೋತ್ಪ್ರಭುಃ ।
ಕೃತ್ವಾ ಚೋರ್ವೀಂ ಪ್ರಯತ್ನೇನ ನಿಮ್ನೋನ್ನತ ವಿವರ್ಜಿತಾಂ ॥ ೮ ॥

---

ಋಷಿಗಳು ನನ್ನನ್ನು ನೋಡಿ ಪ್ರಧಾನ, ಪ್ರಕೃತಿ, ಅವ್ಯಕ್ತ, ಅಜ, ಎಂಬ ಹೆಸರಿನಿಂದ ಕರೆಯುವರು, ನಿನ್ನನ್ನು ಪುರುಷನೆಂದು ಕರೆಯುವರು.

೫. ಸಮಸ್ತ ಜಗತ್ತಿಗೂ ಒಡೆಯನಾದ ನಾಶರಹಿತನಾದ ಈಶ್ವರನನ್ನು ನಮ್ಮಿಬ್ಬರಿಗೂ, ಕಾರಣಪುರುಷನನ್ನಾಗಿ ಹೇಳುವರು.

೬. ಆ ದೇವತೆಗಳಿಗೊಡೆಯನಾದ ವಿಷ್ಣುವಿನ ಮಾತಿನಿಂದ ಕಮಲದಲ್ಲಿ ಹುಟ್ಟಿದ ಬ್ರಹ್ಮನು ಶ್ರೇಷ್ಠನೂ ವರವನ್ನು ಕೊಡತಕ್ಕವನೂ ಆದ ರುದ್ರನನ್ನು ಸ್ತೋತ್ರಮಾಡಿ ನಮಸ್ಕಾರವನ್ನು ಮಾಡಿದನು.

೭. ಆ ಮೇಲೆ ವಿಷ್ಣುವು ವರಾಹಾವತಾರವನ್ನು ಮಾಡಿ ಪ್ರಳಯ ಜಲದಲ್ಲಿ ಮುಳುಗಿದ್ದ ಭೂಮಿಯನ್ನು ತಂದು ಹಿಂದಿನಂತೆ ಆದರ ಸ್ಥಾನದಲ್ಲಿ ಸ್ಥಾಪಿಸಿದನು.

೮–೯. ಆ ವರಾಹಾವತಾರವನ್ನು ಮಾಡಿದ ಹರಿಯು ಭೂಮಿಯ ಮೇಲೆ ನದೀ, ನದ, ಸಮುದ್ರಗಳನ್ನು, ಪರ್ವತಗಳನ್ನೂ, ಹಳ್ಳತಿಟ್ಟುಗಳಿಲ್ಲದ ಸಮಭೂಮಿಯನ್ನೂ ಹಿಂದಿನಂತೆ ನಿರ್ಮಿಸಿದನು. ಮತ್ತು

**ಧರಾಯಾಂ ಸೋಽಚಿನೋತ್ಸರ್ವಾನ್ ಭೂಧರಾನ್ ಭೂಧರಾಕೃತಿಃ ।
ಭೂರಾದ್ಯಾಂಶ್ಚತುರೋ ಲೋಕಾನ್ ಕಲ್ಪಯಾಮಾಸ ಪೂರ್ವವತ್ ॥**

**ಸ್ರಷ್ಟುಂ ಚ ಭಗವಾಂಶ್ಚಕ್ರೇ ಮತಿಂ ಮತಿಮತಾಂ ವರಃ ।
ಮುಖ್ಯಂಚ ತೈರ್ಯಗ್ಯೋನ್ಯಂಚ ದೈವಿಕಂ ಮಾನುಷಂ ತಥಾ ॥೧೦॥**

**ವಿಭುಶ್ಚಾನುಗ್ರಹಂ ತತ್ರ ಕೌಮಾರಕ ಮುದೀನಧೀಃ ।
ಪುರಸ್ತಾದಸೃಜದ್ದೇವಃ ಸನಂದಂ ಸನಕಂ ತಥಾ ॥೧೧॥**

**ಸನಾತನಂ ಸತಾಂ ಶ್ರೇಷ್ಠಂ ನೈಷ್ಕರ್ಮ್ಯೇಣ ಗತಾಃ ಪರಂ ।
ಮರೀಚಿ ಭೃಗ್ವಂಗಿರಸಂ ಪುಲಸ್ತ್ಯಂ ಪುಲಹಂ ಕ್ರತುಂ ॥೧೨॥**

**ದಕ್ಷಮತ್ರಿಂ ವಸಿಷ್ಠಂ ಚ ಸೋಽಸೃಜ ದ್ಯೋಗವಿದ್ಯಯಾ ।
ಸಂಕಲ್ಪಂ ಚೈವ ಧರ್ಮಂ ಚ ಹ್ಯಧರ್ಮಂ ಭಗವಾನ್ ಪ್ರಭುಃ ॥೧೩॥**

---

ಭೂಮಿಯಲ್ಲಿ ಸಕಲ ಸಸ್ಯಸಂಪತ್ಸಮೃದ್ಧಿಯನ್ನೂ ವಿಸ್ತರಿಸಿದನು. ಭೂಲೋಕ, ಭುವರ್ಲೋಕ ಸ್ವರ್ಗಲೋಕ, ಮಹರ್ಲೋಕಗಳೆಂಬ ನಾಲ್ಕು ಲೋಕಗಳನ್ನೂ ಮೊದಲಿನಂತೆಯೇ ಕಲ್ಪಿಸಿದನು.

೧೦. ಬುದ್ಧಿವಂತರಲ್ಲಿ ಶ್ರೇಷ್ಠನಾದ ಆ ಮಹಾಮಹಿಮನಾದ ಹರಿಯು ಮುಖ್ಯವಾದ ಸಸ್ಯಾದಿಗಳನ್ನೂ, ಪಶುವರ್ಗಗಳನ್ನೂ, ಆ ಮೇಲೆ ದೇವತೆಗಳನ್ನೂ, ಮನುಷ್ಯವರ್ಗವನ್ನೂ, ಸೃಷ್ಟಿಮಾಡಬೇಕೆಂದು ಮನಸ್ಸು ಮಾಡಿದನು.

೧೧. ಸರ್ವವ್ಯಾಪಿಯಾದ ವಿಷ್ಣುವು ಆ ಸಂದರ್ಭದಲ್ಲಿ ಮೊದಲು ಕುಮಾರ ಸೃಷ್ಟಿಯನ್ನು ಮಾಡಿ ಸನಕ, ಸನಂದನ, ಸನಾತನ, ಎಂಬುವರನ್ನು ಸೃಷ್ಟಿಸಿದನು. ಅವರೆಲ್ಲರೂ ಪ್ರವೃತ್ತಿಕರ್ಮವನ್ನು ಬಿಟ್ಟು, ಜ್ಞಾನಯೋಗನಿಷ್ಠರಾಗಿ ಸನ್ಯಾಸಿಗಳಾಗಿ ಪರಬ್ರಹ್ಮಸ್ವರೂಪರಾದರು.

೧೨-೧೩. ಮರೀಚಿ, ಭೃಗು, ಅಂಗಿರಸ, ಪುಲಸ್ತ್ಯ, ಪುಲಹ, ಕ್ರತು, ದಕ್ಷ, ಅತ್ರಿ, ವಸಿಷ್ಠ, ಸಂಕಲ್ಪ, ಧರ್ಮ, ಅಧರ್ಮ, ಎಂಬ ಹನ್ನೆರಡು ಜನರು ಪ್ರಕೃತಿಯಿಂದ ಉತ್ಪನ್ನನಾದ ಬ್ರಹ್ಮನ ಯೋಗವಿದ್ಯೆಯಿಂದ ಜನಿಸಿದ ಪ್ರಜೆಗಳು. ಇವರೆಲ್ಲರನ್ನೂ ಆ ವಿಷ್ಣುವೇ ಸೃಷ್ಟಿಸಿದನು.

ದ್ವಾದಶೈವ ಪ್ರಜಾಸ್ತ್ವೇತಾ ಬ್ರಹ್ಮಣೋಽವ್ಯಕ್ತ ಜನ್ಮನಃ ।
ಋಭುಂ ಸನತ್ಕುಮಾರಂಚ ಸಸರ್ಜಾದೌ ಸನಾತನಃ ॥೧೪॥
ತೌ ಚೋರ್ಧ್ವರೇತಸೌ ದಿವ್ಯೌ ಚಾಗ್ರಜೌ ಬ್ರಹ್ಮವಾದಿನೌ ।
ಕುಮಾರೌ ಬ್ರಹ್ಮಣ ಸ್ತುಲ್ಯೌ ಸರ್ವಜ್ಞೌ ಸರ್ವಭಾವಿನೌ ॥೧೫॥
ಏವಂ ಮುಖ್ಯಾದಿಕಾನ್ ಸೃಷ್ಟ್ವಾ ಪದ್ಮಯೋನಿಃ ಶಿಲಾಶನ ।
ಯುಗಧರ್ಮಾನಶೇಷಾಂಶ್ಚ ಕಲ್ಪಯಾಮಾಸ ವಿಶ್ವಸೃಕ್ ॥೧೬॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ವೈಷ್ಣವಸೃಷ್ಟಿ ಕಥನಂ ನಾಮ ಅಷ್ಟ ತ್ರಿಂಶೋಽಧ್ಯಾಯಃ

---

೧೪-೧೫. ಅನಾದಿಯಾದ ಆ ಮಹಾವಿಷ್ಣುವು ಎಲ್ಲರಿಗಿಂತಲೂ ಮೊದಲು ಋಭು, ಸನತ್ಕುಮಾರ, ಎಂಬಿಬ್ಬರನ್ನು ಸೃಷ್ಟಿಮಾಡಿದನು. ಅವರಿಬ್ಬರೂ ಬ್ರಹ್ಮಜ್ಞಾನಿಗಳೂ, ಊರ್ಧ್ವರೇತಸ್ಸುಗಳಾದವರೂ, ಯಾವಾಗಲೂ ಕೌಮಾರಾವಸ್ಥೆಯಲ್ಲಿರತಕ್ಕವರೂ, ಬ್ರಹ್ಮನಿಗೆ ಸಮಾನರಾಗಿ ಸರ್ವಜ್ಞರಾಗಿರುವರು. ಮತ್ತು ಸಕಲ ಸಿದ್ಧಿಯನ್ನೂ ಪಡೆದವರು.

೧೬. ಎಲೌ ಶಿಲಾದಮುನಿಯೇ, ಕಮಲಕ್ಕೆ ಕಾರಣನಾದ ವಿಷ್ಣುವು ಹೀಗೆ ಮುಖ್ಯ ಸೃಷ್ಟಿಯೇ ಮೊದಲಾದುವನ್ನು ಮಾಡಿ ಭೂಮಿಯಲ್ಲಿ ಸಮಸ್ತ ಯುಗಧರ್ಮಗಳನ್ನೂ ಮುಂದೆಹೇಳಿರುವಂತೆ ಕಲ್ಪನೆಮಾಡಿದನು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ವಿಷ್ಣುವುಮಾಡಿದ ಮುಖ್ಯ ಸೃಷ್ಟಿಯನ್ನು ತಿಳಿಸುವ ಮೂವತ್ತೆಂಟನೆಯ ಅಧ್ಯಾಯವು ಮುಗಿದುದು.

## ಅಥ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ
## ಏಕೋನ ಚತ್ವಾರಿಂಶೋಽಧ್ಯಾಯಃ

**ಏಕೋನ ಚತ್ವಾರಿಂಶೇಽಸ್ಮಿನ್ ಯುಗಧರ್ಮಾಶ್ಚ ವೃತ್ತಯಃ ।**
**ವೇದವ್ಯಾಸಃ ಪುರಾಣಾನಾಂ ಕ್ರಮಶ್ಚೈವ ನಿರೂಪ್ಯತೇ ॥**

**॥ ಶೈಲಾದಿರುವಾಚ ॥**

**ಶ್ರುತ್ವಾ ಶಕ್ರೇಣ ಕಥಿತಂ ಪಿತಾ ಮಮ ಮಹಾಮುನಿಃ ।**
**ಪುನಃ ಪಪ್ರಚ್ಛ ದೇವೇಶಂ ಪ್ರಣಮ್ಯ ರಚಿತಾಂಜಲಿಃ ॥ ೧ ॥**

**॥ ಶೈಲಾದ ಉವಾಚ ॥**

**ಭಗವನ್ ಶಕ್ರ ಸರ್ವಜ್ಞ ದೇವದೇವನಮಸ್ಕೃತ ।**
**ಶಚೀಪತೇ ಜಗನ್ನಾಥ ಸಹಸ್ರಾಕ್ಷ ಮಹೇಶ್ವರಃ ॥ ೨ ॥**

**ಯುಗಧರ್ಮಾನ್ ಕಥಂ ಚಕ್ರೇ ಭಗವಾನ್ ಪದ್ಮಸಂಭವಃ ।**
**ವಕ್ತುಮರ್ಹಸಿ ಮೇ ಸರ್ವಂ ಸಾಂಪ್ರತಂ ಪ್ರಣತಾಯ ಮೇ ॥ ೩ ॥**

---

ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಮೂವತ್ತೊಂಬತ್ತನೆಯ ಅಧ್ಯಾಯವು

( ಈ ಮೂವತ್ತೊಂಬತ್ತನೆಯ ಅಧ್ಯಾಯದಲ್ಲಿ ಯುಗಧರ್ಮಗಳೂ, ಜನರ ಜೀವನೋಪಾಯಗಳೂ, ವೇದಗಳ ವಿಭಾಗಕ್ರಮವೂ, ಪುರಾಣಗಳ ಕ್ರಮವೂ, ಇವನ್ನು ವರ್ಣನೆ ಮಾಡಲಾಗುವುದು. )

೧. ನಂದಿಯು ಹೇಳಿದನು: ಸನತ್ಕುಮಾರನೇ, ಕೇಳು. ದೇವೇಂದ್ರನು ಹೇಳಿದ ಮಾತನ್ನು ನನ್ನ ತಂದೆಯಾದ ಶಿಲಾದಮುನಿಯು ಕೇಳಿ ಆ ದೇವೇಂದ್ರನಿಗೆ ನಮಸ್ಕಾರಮಾಡಿ ಕೈಮುಗಿದುಕೊಂಡು ಮತ್ತೆ ಪ್ರಶ್ನೆಮಾಡಿದನು.

೨-೩. ಶಿಲಾದಮುನಿಯು ಸರ್ವಜ್ಞನೂ, ಮಹಾಮಹಿಮನೂ ಆದ ಎಲೈ ದೇವೇಂದ್ರನೇ, ಮಹಾತ್ಮನಾದ ಪದ್ಮದಲ್ಲಿ ಹುಟ್ಟಿದ ಬ್ರಹ್ಮನು ಯುಗಧರ್ಮಗಳನ್ನು ಯಾವರೀತಿಯಲ್ಲಿ ಗೊತ್ತು ಮಾಡಿದನು? ನಮಸ್ಕಾರ ಮಾಡಿದ ನನಗೆ ಎಲ್ಲವನ್ನೂ ವಿಸ್ತಾರವಾಗಿ ಹೇಳಬೇಕು, ಎಂದನು.

॥ ಶೈಲಾದಿರುವಾಚ ॥

ತಸ್ಯ ತದ್ವಚನಂ ಶ್ರುತ್ವಾ ಶಿಲಾದಸ್ಯ ಮಹಾತ್ಮನಃ ।
ವ್ಯಾಜಹಾರ ಯಥಾ ದೃಷ್ಟಂ ಯುಗಧರ್ಮಂ ಸುವಿಸ್ತರಂ ॥ ೪ ॥

॥ ಶಕ್ರ ಉವಾಚ ॥

ಆದ್ಯಂ ಕೃತಯುಗಂ ವಿದ್ಧಿ ತತಸ್ತ್ರೇತಾಯುಗಂ ಮುನೇ ।
ದ್ವಾಪರಂ ತಿಷ್ಯಮಿತ್ಯೇತೇ ಚತ್ವಾರಸ್ತು ಸಮಾಸತಃ ॥ ೫ ॥

ಸತ್ವಂ ಕೃತಂ ರಜಸ್ತ್ರೇತಾ ದ್ವಾಪರಂ ಚ ರಜಸ್ತಮಃ ।
ಕಲಿಸ್ತಮಶ್ಚ ವಿಜ್ಞೇಯಂ ಯುಗವೃತ್ತಿರ್ಯುಗೇಷು ಚ ॥ ೬ ॥

ಧ್ಯಾನಂ ಪರಂ ಕೃತಯುಗೇ ತ್ರೇತಾಯಾಂ ಯಜ್ಞ ಉಚ್ಯತೇ ।
ಭಜನಂ ದ್ವಾಪರೇ ಶುದ್ಧಂ ದಾನಮೇವ ಕಲೌ ಯುಗೇ ॥ ೭ ॥

---

೪. ಶಿಲಾದನ ಮಾತನ್ನು ಕೇಳಿದ ದೇವೇಂದ್ರನು ತನಗೆ ತಿಳಿದಿದ್ದ ಯುಗಧರ್ಮವನ್ನು ವಿಸ್ತಾರವಾಗಿ ಹೇಳಿದನು.

೫. ಕೃತ, ತ್ರೇತಾ, ದ್ವಾಪರ, ಕಲಿ, ಎಂದು ನಾಲ್ಕು ಯುಗಗಳೂ, ಈ ಯುಗಾಭಿಮಾನಿಗಳಾದ ದೇವತೆಗಳಿಗೂ ಇದೇ ಹೆಸರುಗಳೂ ಇರುವುವು.

೬. ಕೃತಯುಗವು ಸತ್ವಗುಣಸ್ವರೂಪವಾದುದು. ತ್ರೇತಾಯುಗವು ರಜೋಗುಣಸ್ವರೂಪವಾದುದು. ದ್ವಾಪರಯುಗವು ರಜಸ್ತಮೋಗುಣಗಳ ಮಿಶ್ರಣದಿಂದ ಕೂಡಿದುದು. ಕಲಿಯುಗವು ತಮೋಗುಣಸ್ವರೂಪವಾದುದು. ಆ ಯುಗಗಳಲ್ಲಿ ಜನಜೀವನಾದಿಗಳೂ, ಅದೇಗುಣಗಳನ್ನು ಅನುಸರಿಸಿರುವುವು.

೭. ಕೃತಯುಗದಲ್ಲಿ ಈಶ್ವರ ಚಿಂತನೆಯೇ ಸರ್ವೋತ್ಕೃಷ್ಟವಾದ ಧರ್ಮವು. ತ್ರೇತಾಯುಗದಲ್ಲಿ ಯಜ್ಞವೂ, ದ್ವಾಪರದಲ್ಲಿ ಭಕ್ತಿಯಿಂದ ನೆಡೆಸುವ ಪೂಜಾದಿಗಳೂ, ಕಲಿಯುಗದಲ್ಲಿ ದಾನವೂ, ಅತ್ಯಂತಶ್ರೇಷ್ಠವಾದ ಕರ್ಮ ಅಥವಾ ಧರ್ಮವೆನಿಸುವುದು.

**ಚತ್ವಾರಿ ಚ ಸಹಸ್ರಾಣಿ ವರ್ಷಾಣಾಂ ತತ್ಕೃತಂ ಯುಗಂ ।**
**ತಸ್ಯ ತಾವಚ್ಛತೀ ಸಂಧ್ಯಾ ಸಂಧ್ಯಾಂಶಶ್ಚ ತಥಾ ವಿಧಃ ॥ ೮ ॥**
**ಚತ್ವಾರಿ ಚ ಸಹಸ್ರಾಣಿ ಮಾನುಷಾಣಿ ಶಿಲಾಶನ ।**
**ಆಯುಃ ಕೃತಯುಗೇ ವಿದ್ಧಿ ಪ್ರಜಾನಾ ಮಿಹ ಸುವ್ರತ ॥ ೯ ॥**
**ತತಃ ಕೃತಯುಗೇ ತಸ್ಮಿನ್ ಸಂಧ್ಯಾಂಶೇ ಚ ಗತೇ ತು ವೈ ।**
**ಪಾದಾವಶಿಷ್ಟೋ ಭವತಿ ಯುಗಧರ್ಮಸ್ತು ಸರ್ವತಃ ॥೧೦॥**
**ಚತುರ್ಭಾಗೈಕ ಹೀನಂ ತು ತ್ರೇತಾಯುಗ ಮನುತ್ತಮಂ ।**
**ಕೃತಾರ್ಧಂ ದ್ವಾಪರಂ ವಿದ್ಧಿ ತದರ್ಧಂ ತಿಷ್ಯಮುಚ್ಯತೇ ॥೧೧॥**
**ತ್ರಿಶತೀ ದ್ವಿಶತೀ ಸಂಧ್ಯಾ ತಥಾ ಚೈಕ ಶತೀ ಮುನೇ ।**
**ಸಂಧ್ಯಾಂಶಕಂ ತಥಾಽಪ್ಯೇವಂ ಕಲ್ಪೇಷ್ವೇವಂ ಯುಗೇಯುಗೇ॥೧೨॥**

---

೮. ಕೃತಯುಗಕ್ಕೆ ದೇವಮಾನದ ನಾಲ್ಕು ಸಾವಿರ ವರ್ಷಗಳು. ಸಂಧಿಕಾಲವು ನಾನೂರು ವರ್ಷಗಳು. ಸಂಧ್ಯಾಂಶವೂ, ನಾನೂರು ವರ್ಷಗಳು.

೯. ಕೃತಯುಗದಲ್ಲಿ ಮನುಷ್ಯರ ಪ್ರಮಾಣದಲ್ಲಿ ಪ್ರಜೆಗಳಿಗೆ ನಾಲ್ಕುಸಾವಿರ ವರ್ಷಗಳ ಆಯುಸ್ಸು ಇರುವುದು. ಎಲೈ ಶಿಲಾದ ಮುನಿಯೇ, ಭರತ ಖಂಡದಲ್ಲಿ ಈ ವ್ಯವಹಾರವೆಂದು ತಿಳಿ.

೧೦. ಕೃತಯುಗದಲ್ಲಿ ಧರ್ಮವು ಪೂರ್ಣವಾಗಿರುವುದು. ಸಂಧಿ ಕಾಲವು ಕಳೆಯುತ್ತಲೂ. ಕಾಲುಭಾಗ ಧರ್ಮವು ಕಡಿಮೆಯಾಗುವುದು. ಹೀಗೆಯೇ ಪ್ರತಿಯೊಂದು ಯುಗದಲ್ಲೂ ಧರ್ಮವು ಕಾಲುಭಾಗ ಕಡಿಮೆ ಯಾಗುತ್ತ ಬರುವುದು.

೧೧-೧೨. ತ್ರೇತಾಯುಗ ಪ್ರಮಾಣವು ಕೃತಯುಗದ ನಾಲ್ಕನೆಯ ಒಂದು ಪಾಲು ಕಡಿಮೆಯಾದುದು. ದ್ವಾಪರಯುಗ ಪ್ರಮಾಣವು ಕೃತಯುಗದ ಅರ್ಧಭಾಗವು. ಕಲಿಯುಗ ಪ್ರಮಾಣವು ದ್ವಾಪರದ ಅರ್ಧ ಭಾಗವು. ಸಂಧಿಕಾಲವು ಕ್ರಮವಾಗಿ ಮುನ್ನೂರು, ಇನ್ನೂರು, ಒಂದು ನೂರು, ವರ್ಷಗಳು. ಸಂಧ್ಯಾಂಶವೂ ಅಷ್ಟೇವರ್ಷಗಳು. ಪ್ರತಿಯೊಂದು ಕಲ್ಪದಲ್ಲಿಯೂ ಕಾಲಪ್ರಮಾಣವ್ಯವಸ್ಥೆಯು ಹೀಗೆಯೇ ಇರುವುದು.

ಆದ್ಯೇ ಕೃತಯುಗೇ ಧರ್ಮ ಶ್ಚತುಷ್ಪಾದಃ ಸನಾತನಃ ।
ತ್ರೇತಾಯುಗೇ ತ್ರಿಪಾದಸ್ತು ದ್ವಿಪಾದೋ ದ್ವಾಪರೇ ಸ್ಥಿತಃ ॥೧೩॥

ತ್ರಿಪಾದ ಹೀನಸ್ತಿಷ್ಯೇ ತು ಸತ್ತಾ ಮಾತ್ರೇಣ ಧಿಷ್ಠಿತಃ ।
ಕೃತೇ ತು ಮಿಥುನೋತ್ಪತ್ತಿಃ ವೃತ್ತಿಃ ಸಾಕ್ಷಾದ್ರಸೋಲ್ಲಸಾ ॥೧೪॥

ಪ್ರಜಾಸ್ತೃಪ್ತಾಃ ಸದಾ ಸರ್ವಾಃ ಸರ್ವಾನಂದಾ ಶ್ಚ ಭೋಗಿನಃ ।
ಅಧಮೋತ್ತಮ ತಾ ತಾಸಾಂ ನ ವಿಶೇಷಾಃ ಪ್ರಜಾಃ ಶುಭಾಃ ॥೧೫॥

ತುಲ್ಯಮಾಯುಃ ಸುಖಂ ರೂಪಂ ತಾಸಾಂ ತಸ್ಮಿನ್ಕೃತೇ ಯುಗೇ ।
ತಾಸಾಂ ಪ್ರೀತಿರ್ನ ಚ ದ್ವಂದ್ವಂ ನ ದ್ವೇಷೋ ನಾಸ್ತಿ ಚ ಕ್ಲಮಃ ॥೧೬॥

---

೧೩. ಮೊದಲನೆಯದಾದ ಕೃತಯುಗದಲ್ಲಿ ಸನಾತನ ಧರ್ಮವು ನಾಲ್ಕುಭಾಗ (ಪಾದ) ದಿಂದ ಪೂರ್ಣವಾಗಿರುವುದು. ತ್ರೇತಾಯುಗದಲ್ಲಿ ಮೂರು ಪಾದಗಳು. ದ್ವಾಪರಯುಗದಲ್ಲಿ ಎರಡು ಪಾದಗಳು. ಕಲಿ ಯುಗದಲ್ಲಿ ಮೂರುಪಾದಗಳಿಲ್ಲದುದಾಗಿ ಒಂದು ಪಾದದಿಂದ ಹೆಸರು ಉಳಿದಿರುವಷ್ಟು ಮಾತ್ರ ಧರ್ಮವಿರುವುದು.

೧೪–೧೬. ಕೃತಯುಗದಲ್ಲಿ ಸ್ತ್ರೀಪುರುಷರೂಪವಾದ ಮಿಥುನೋತ್ಪತ್ತಿಯೂ, ಮಧುರಾದಿ ರಸಗಳ ಪೂರ್ಣತೆಯಿಂದ ಕೂಡಿದ ಆಹಾರಗಳ ಉಪಯೋಗವೂ. ಪ್ರಜೆಗಳೆಲ್ಲರೂ ತೃಪ್ತರಾಗಿ ಯಾವಾಗಲೂ ಸಂತೋಷ ದಿಂದ ಕೂಡಿ ಸುಖಾನುಭವದಲ್ಲಾಸಕ್ತರಾಗಿರುವಿಕೆಯೂ, ಪ್ರಜೆಗಳಲ್ಲಿ ಒಬ್ಬರಿಗೊಬ್ಬರಿಗೆ ಉತ್ತಮಾಧಮವೆಂಬ ಭೇದವಿಲ್ಲದಿರುವಿಕೆಯೂ, ಶುಭ ಕಾರ್ಯಪ್ರವರ್ತನೆಯೂ, ಸ್ತ್ರೀ ಪುರುಷರಿಗೆ ಸಮಾನವಾದ ಆಯುಃ ಪ್ರಮಾಣವೂ, ರೂಪವೂ, ಸುಖವೂ, ಸಮಾನವಾದುದಾಗಿಯೂ, ಇರುವುದು. ಸ್ತ್ರೀಪುರುಷರು ಪ್ರೀತಿಯಲ್ಲಿ ಸಮಾನವಾದವರಾಗಿ ಶಿತೋಷ್ಣಾದಿ ದ್ವಂದ್ವ ಬಾಧೆಗಳಿಲ್ಲದವರಾಗಿ ಪರಸ್ಪರ ದ್ವೇಷ, ಅಸೂಯಾ ಮುಂತಾದುವಿಲ್ಲದ ವರಾಗಿರುವರು.

ಪರ್ವತೋ ದಧಿ ವಾಸಿನ್ಯೋ ಹ್ಯನಿಕೇತಾಶ್ರಯಾಸ್ತು ತಾಃ ।
ವಿಶೋಕಾಃ ಸತ್ವಬಹುಲಾ ಏಕಾಂತ ಬಹುಲಾಸ್ತಥಾ ॥೧೭॥
ತಾ ವೈ ನಿಷ್ಕಾಮ ಚಾರಿಣ್ಯೋ ನಿತ್ಯಂಮುದಿತ ಮಾನಸಾಃ।
ಅಪ್ರವೃತ್ತಿಃ ಕೃತಯುಗೇ ಕರ್ಮಣೋಃ ಶುಭಪಾಪಯೋಃ ॥೧೮॥
ವರ್ಣಾಶ್ರಮ ವ್ಯವಸ್ಥಾಚ ತದಾಽಽಸೀನ್ನಚ ಸಂಕರಃ ।
ರಸೋಲ್ಲಾಸಃ ಕಾಲಯೋಗಾ ತ್ರೇತಾಖ್ಯೇ ನಶ್ಯತೇ ದ್ವಿಜ ॥೧೯॥
ತಸ್ಯಾಂ ಸಿದ್ಧೌ ಪ್ರಣಷ್ಟಾಯಾಮನ್ಯಾ ಸಿದ್ಧಿಃ ಪ್ರಜಾಯತೇ ।
ಅಪಾಂ ಸೌಕ್ಷ್ಮ್ಯೇ ಪ್ರತಿಗತೇ ತದಾ ಮೇಘಾತ್ಮನಾ ತು ವೈ ॥೨೦॥
ಮೇಘೇಭ್ಯಸ್ತನಯಿತ್ನುಭ್ಯಃ ಪ್ರವೃತ್ತಂ ವೃಷ್ಟಿಸರ್ಜನಂ ।
ಸಕೃದೇವ ತಥಾ ವೃಷ್ಟ್ಯಾ ಸಂಯುಕ್ತೇ ಪೃಥಿವೀತಲೇ ॥೨೧॥

---

೧೭. ಪ್ರಜೆಗಳು, ಪರ್ವತಗಳು, ಸಮುದ್ರತೀರಗಳು, ಮುಂತಾದ ಸುಂದರಪ್ರದೇಶಗಳಲ್ಲಿ ಮನೆಗಳನ್ನು ಕಟ್ಟಿಕೊಳ್ಳದೆ ದುಃಖವಿಲ್ಲದೇ ಸತ್ವ ಗುಣದಿಂದ ಕೂಡಿ ಒಬ್ಬೊಬ್ಬರೇ ವಾಸಮಾಡುವುದರಲ್ಲಾಸಕ್ತ ರಾಗಿರುವರು.

೧೮. ಆ ಪ್ರಜೆಗಳು ನಿಷ್ಕಾಮಕರ್ಮಾಚರಣದಲ್ಲಾಸಕ್ತರಾಗಿಯೂ, ಯಾವಾಗಲೂ ಸಂತೋಷಚಿತ್ತರಾಗಿರುವರು. ಕೃತಯುಗದಲ್ಲಿ ಜನರಿಗೆ ಶುಭಕರ್ಮಗಳಲ್ಲಿಯಾಗಲೀ, ಪಾಪಕರ್ಮಗಳಲ್ಲಿಯಾಗಲೀ ರಾಗದ್ವೇಷದ ಪ್ರವೃತ್ತಿ ಇಲ್ಲವು. ಆಗ ವರ್ಣಗಳ ಮತ್ತು ಆಶ್ರಮಗಳ ವ್ಯವಸ್ಥೆಯೂ ಕೂಡ ಸರಿಯಾಗಿತ್ತು. ಆದುದರಿಂದ ವರ್ಣಸಾಂಕರ್ಯವೂ ಇರಲಿಲ್ಲ.

೧೯–೨೦. ತ್ರೇತಾಯುಗವು ಬಂದಮೇಲೆ ಕೃತಯುಗದ ರಸಪುಷ್ಟಿ ಯು ನಾಶವಾಗುವುದು. ಈ ರಸಪುಷ್ಟಿ ರೂಪವಾದ ಸಿದ್ಧಿಯು ನಷ್ಟವಾ ದರೆ ಮತ್ತೊಂದು ಸಿದ್ಧಿಯುಂಟಾಗುವುದು. ಅದೇನೆಂದರೆ? : ನೀರು ಸೂರ್ಯಕಿರಣಗಳಿಂದ ಸೂಕ್ಷ್ಮವಾಗಿ ಮೇಘವಾಗಿ ಪರಿಣಮಿಸುವುದು. ಧ್ವನಿಮಾಡುತ್ತಿರುವ ಆ ಮೇಘಗಳ ದೆಸೆಯಿಂದ ಭೂಮಿಯ ಮೇಲೆ ಮಳೆಯು ಬೀಳುವುದು.

೨೧–೨೨. ಒಂದಾವೃತ್ತಿ ಮಳೆಯು ಬಿದ್ದರೇ ಸಾಕು. ಆ ಮಳೆಯಿಂದ ನೆನೆದ ಭೂಮಿಯಲ್ಲಿ ಗೃಹವೆಂಬ ಹೆಸರಿನ ಅನೇಕ ಮರಗಳು ಬೆಳೆದು

ಪ್ರಾದುರಾಸಂ ಸ್ತದಾ ತಾಸಾಂ ವೃಕ್ಷಾಸ್ತೇ ಗೃಹಸಂಜ್ಞಿತಾಃ ।
ಸರ್ವವೃತ್ತ್ಯುಪಭೋಗಸ್ತು ತಾಸಾಂ ತೇಭ್ಯಃ ಪ್ರಜಾಯತೇ ॥೨೨॥
ವರ್ತಯಂತಿ ಸ್ಮ ತೇಭ್ಯಸ್ತಾ ಸ್ತ್ರೇತಾಯುಗ ಮುಖೇ ಪ್ರಜಾಃ ।
ತತಃ ಕಾಲೇನ ಮಹತಾ ತಾಸಾಮೇವ ವಿಪರ್ಯಯಾತ್ ॥೨೩॥
ರಾಗ ಲೋಭಾತ್ಮಕೋ ಭಾವ ಸ್ತದಾ ಹ್ಯಾಕಸ್ಮಿಕೋಽಭವತ್ ।
ವಿಪರ್ಯಯೇಣ ತಾಸಾಂ ತು ತೇನ ತತ್ಕಾಲ ಭಾವಿನಾ ॥೨೪॥
ಪ್ರಣಶ್ಯಂತಿ ತತಃ ಸರ್ವೇ ವೃಕ್ಷಾಸ್ತೇ ಗೃಹಸಂಜ್ಞಿತಾಃ ।
ತತಸ್ತೇಷು ಪ್ರಣಷ್ಟೇಷು ವಿಭ್ರಾಂತಾ ಮೈಥುನೋದ್ಭವಾಃ ॥೨೫॥
ಅಭಿಧ್ಯಾಯಂತಿ ತಾಂ ಸಿದ್ಧಿಂ ಸತ್ಯಾಭಿಧ್ಯಾಯಿನ ಸ್ತದಾ ।
ಪ್ರಾದುರ್ಭಭೂವುಸ್ತಾಸಾಂ ತು ವೃಕ್ಷಾಸ್ತೇ ಗೃಹಸಂಜ್ಞಿತಾಃ ॥೨೬॥
ವಸ್ತ್ರಾಣಿ ತೇ ಪ್ರಸೂಯಂತೇ ಫಲಾನ್ಯಾಭರಣಾನಿ ಚ ।
ತೇಷ್ವೇವ ಜಾಯತೇ ತಾಸಾಂ ಗಂಧ ವರ್ಣ ರಸಾನ್ವಿತಂ ॥೨೭॥

---

ಸಕಲ ಪ್ರಜೆಗಳಿಗೂ ಜೀವನಕ್ಕೆ ಬೇಕಾದ ವಸ್ತುಗಳೆಲ್ಲವೂ ಅವುಗಳಿಂದ ದೊರಕುವುವು.

೨೩–೨೪. ತ್ರೇತಾಯುಗದ ಆದಿಯಲ್ಲಿ ಪ್ರಜೆಗಳು ಆ ಮರಗಳಿಂದ ದೊರಕಿದ ವಸ್ತುಗಳಿಂದಲೇ ಜೀವನವನ್ನು ನಡೆಸುವರು. ಹೀಗೆಯೇ ಅನೇಕ ವರ್ಷಗಳು ಕಳೆಯಲು ಆ ಪ್ರಜೆಗಳ ಬುದ್ಧಿ ವ್ಯತ್ಯಾಸದಿಂದ ಅಕಸ್ಮಾತ್ತಾಗಿ ಪ್ರೀತಿ ಅತ್ಯಾಶೆ ಮುಂತಾದ ಮನೋಭಾವಗಳುಂಟಾಗುವುವು. ಪ್ರಜೆಗಳ ಆದುಷ್ಟಭಾವಗಳ ವ್ಯತ್ಯಾಸದಿಂದ ಗೃಹವೆಂಬ ಹೆಸರಿನ ಮರಗಳೆಲ್ಲವೂ ನಾಶವಾಗುವುವು.

೨೫–೨೬. ಆ ಗೃಹಸಂಜ್ಞೆಯ ಮರಗಳು ನಾಶವಾಗುತ್ತಲೂ ಸ್ತ್ರೀ ಪುರುಷರೂಪದಿಂದ ಏಕಕಾಲದಲ್ಲಿ ಹುಟ್ಟಿದ ಪ್ರಜೆಗಳು ಆ ಸಿದ್ಧಿಯನ್ನು ಮತ್ತೆ ಧ್ಯಾನಮಾಡುವರು. ಅವರ ಧ್ಯಾನವು ಸತ್ಯಸ್ವರೂಪವಾದುದರಿಂದ ಮತ್ತೆ ಆ ವೃಕ್ಷಗಳು ಉತ್ಪತ್ತಿಯಾಗವುವು.

೨೭–೨೮. ಆ ಮರಗಳು ವಸ್ತ್ರಗಳನ್ನೂ, ಫಲಗಳನ್ನೂ, ಆಭರಣಗಳನ್ನೂ ಕೊಡುವುವು. ಆಮರಗಳಲ್ಲಿಯೇ ಪ್ರತಿಯೊಂದು ಎಲೆಯಲ್ಲಿಯೂ

ಅಮಾಕ್ಷಿಕಂ ಮಹಾವೀರ್ಯಂ ಪುಟಕೇ ಪುಟಕೇ ಮಧು ।
ತೇನ ತಾ ವರ್ತಯಂತಿ ಸ್ಮ ಸುಖ ಮಾಯುಃ ಸದೈವ ಹಿ ॥೨೮॥

ಹೃಷ್ಟಪುಷ್ಟಾಸ್ತಯಾ ಸಿದ್ಧ್ಯಾ ಪ್ರಜಾ ವೈ ವಿಗತಜ್ವರಾಃ ।
ತತಃ ಕಾಲಾಂತರೇಣೈವ ಪುನರ್ಲೋಭಾವೃತಾಸ್ತು ತಾಃ ॥೨೯॥

ವೃಕ್ಷಾಂಸ್ತಾನ್ಪರ್ಯ ಗೃಹ್ಣಂತಿ ಮಧು ವಾ ಮಾಕ್ಷಿಕಂ ಬಲಾತ್ ।
ತಾಸಾಂ ತೇನೋಪಚಾರೇಣ ಪುನರ್ಲೋಭ ಕೃತೇನ ವೈ ॥೩೦॥

ಪ್ರಣಷ್ಟಾ ಮಧುನಾ ಸಾರ್ಧಂ ಕಲ್ಪವೃಕ್ಷಾಃ ಕ್ವಚಿತ್ಕ್ವಚಿತ್ ।
ತಸ್ಯಾಮೇವಾಲ್ಪಶಿಷ್ಟಾಯಾಂ ಸಿಧ್ಧ್ಯಾಂ ಕಾಲವಶಾತ್ತದಾ ॥೩೧॥

ಆವರ್ತನಾತ್ತು ತ್ರೇತಾಯಾಂ ದ್ವಂದ್ವಾನ್ಯಭ್ಯುತ್ಥಿತಾನಿ ವೈ ।
ಶೀತವರ್ಷಾತಪೈ ಸ್ತೀವ್ರೈಸ್ತತಸ್ತಾ ದುಃಖಿತಾ ಭೃಶಂ ॥೩೨॥

---

ಸುವಾಸನೆಯಿಂದಲೂ, ಒಳ್ಳೆಯ ಬಣ್ಣದಿಂದಲೂ, ಉತ್ತಮವಾದ ರುಚಿಯಿಂದಲೂ ಕೂಡಿದ, ನೊಣಗಳು ಮುತ್ತದ, ಅತ್ಯಂತಬಲವನ್ನು ಕೊಡುವ, ಮಧುವು ತುಂಬಿರುವುದು. ಆ ಮಧುವಿನಿಂದ ಆ ಪ್ರಜೆಗಳು ತಮ್ಮ ಆಯುಸ್ಸು ಕಳೆಯುವವರೆಗೂ ಸುಖವಾಗಿ ಜೀವನ ಮಾಡಿಕೊಂಡಿರುವರು.

೨೯–೩೦. ಆ ಸಿದ್ಧಿಯಿಂದ ಪ್ರಜೆಗಳು ಸಂತೋಷಚಿತ್ತರಾಗಿ ಪುಷ್ಟಿಯುಳ್ಳವರಾಗಿಯೂ, ಯಾವ ದುಃಖವೂ ಇಲ್ಲದವರಾಗಿದ್ದರು. ಕೆಲವು ಕಾಲದ ಮೇಲೆ ಆ ಪ್ರಜೆಗಳು ಮತ್ತೆ ಅತ್ಯಾಸೆಯಿಂದ ಪೀಡಿತರಾಗಿ ಆ ವೃಕ್ಷಗಳಲ್ಲಿ ಮಧುವನ್ನು ಬಲಾತ್ಕಾರದಿಂದ ಗ್ರಹಿಸಬೇಕಾಯಿತು. ಜೇನು ನೊಣಗಳು ಸಂಗ್ರಹಿಸಿದ ಜೇನನ್ನು ತೆಗೆದುಕೊಳ್ಳಬೇಕಾಯಿತು. ಆ ಪ್ರಜೆಗಳ ಅತ್ಯಾಸೆಯಿಂದ ಕೂಡಿದ ಅಪಚಾರದಿಂದ ಆ ಕಲ್ಪವೃಕ್ಷಗಳು ಅಲ್ಲಲ್ಲಿ ನಾಶವಾದವು. ಜೇನೂ ಕೂಡ ನಾಶವಾಯಿತು.

೩೧–೩೨. ಕಾಲವಶದಿಂದ ಸಿದ್ಧಿಯು ಸ್ವಲ್ಪಮಾತ್ರ ಉಳಿದುಕೊಂಡಿದ್ದಿತು. ತ್ರೇತಾಯುಗವು ಮುಂದರಿಯುತ್ತ ಪ್ರಜೆಗಳು ಸೀತ, ಉಷ್ಣ, ಮಳೆ, ಗಾಳಿ, ಬಿಸಿಲು ಮುಂತಾದುವುಗಳ ಬಾಧೆಯಿಂದ

ದ್ವಂದ್ವೈಃ ಸಂಪೀಡ್ಯಮಾನಾಶ್ಚ ಚಕ್ರುರಾವರಣಾನಿ ತು ।
ಕೃತ ದ್ವಂದ್ವಪ್ರತೀಘಾತಾಃ ಕೇತನಾನಿ ಗಿರೌ ತತಃ ॥೩೩॥

ಪೂರ್ವಂ ನಿಕಾಮ ಚಾರಾಸ್ತಾ ಹ್ಯನಿಕೇತಾ ಅಥಾವಸನ್ ।
ಯಥಾ ಯೋಗಂ ಯಥಾಪ್ರೀತಿ ನಿಕೇತೇಷ್ವವಸನ್ಪುನಃ ॥೩೪॥

ಕೃತ್ವಾ ದ್ವಂದ್ವೋಪಘಾತಾಂಸ್ತಾನ್ವೃತ್ತ್ಯುಪಾಯಮಚಿಂತಯನ್ ।
ನಷ್ಟೇಷು ಮಧುನಾ ಸಾರ್ಧಂ ಕಲ್ಪವೃಕ್ಷೇಷು ವೈ ತದಾ ॥೩೫॥

ವಿವಾದವ್ಯಾಕುಲಾಸ್ತಾವೈ ಪ್ರಜಾಸ್ತೃಷ್ಣಾಕ್ಷುಧಾರ್ದಿತಾಃ ।
ತತಃ ಪ್ರಾದುರ್ಬಭೌ ತಾಸಾಂ ಸಿದ್ಧಿಸ್ತ್ರೇತಾಯುಗೇ ಪುನಃ ॥೩೬॥

ವಾರ್ತಾಯಾಃ ಸಾಧಿಕಾಽಪ್ಯನ್ಯಾ ವೃಷ್ಟಿಸ್ತಾಸಾಂ ನಿಕಾಮತಃ ।
ತಾಸಾಂ ವೃಷ್ಟ್ಯುದಕಾದೀನಿ ಹ್ಯಭವನ್ನಿಮ್ನಗಾನಿ ತು ॥೩೭॥

---

ದುಃಖವುಳ್ಳವರಾದರು. ಈ ದ್ವಂದ್ವ ದುಃಖಗಳಿಂದ ಪೀಡಿತರಾದ ಆ ಪ್ರಜೆಗಳು ಆ ದುಃಖ ನಿವಾರಣೆಗಾಗಿ ಪರ್ವತಗಳಲ್ಲಿ ಮನೆಗಳನ್ನು ಕಟ್ಟಿಕೊಂಡು ವಾಸವಾಗಿದ್ದರು.

೩೪–೩೫. ಆ ಪ್ರಜೆಗಳು ಪೂರ್ವದಲ್ಲಿ ಮನೆಯಿಲ್ಲದೇ ಸ್ವೇಚ್ಛಾಚಾರಿಗಳಾಗಿ ಹೇಗೆ ವಾಸವಾಗಿದ್ದರೋ ಹಾಗೆಯೇ ಮನೆಗಳನ್ನು ಕಟ್ಟಿಕೊಂಡ ಮೇಲೆಯೂ ತಮ್ಮ ತಮ್ಮ ಪ್ರೀತಿ ಸಂಬಂಧಗಳಿಗನುಸಾರವಾಗಿ ವಾಸವಾಗಿದ್ದರು. ಶೀತೋಷ್ಣಾದಿ ದ್ವಂದ್ವಗಳ ಬಾಧೆಗೆ ಪ್ರತೀಕಾರವನ್ನು ಮಾಡಿದಮೇಲೆ ಕಲ್ಪವೃಕ್ಷಗಳು ಮಧುವಿಲ್ಲದೇ ನಾಶವಾದುದರಿಂದ ಜೀವನೋಪಾಯದ ಯೋಚನೆಯನ್ನು ಮಾಡಿದರು.

೩೬–೩೭. ಪ್ರಜೆಗಳು ಈ ವಿಚಾರದಲ್ಲಿ ಒಬ್ಬರಿಗೊಬ್ಬರು ವಿವಾದ ಮಾಡುತ್ತಾ ಹಸಿವು ಬಾಯಾರಿಕೆಗಳಿಂದ ಪೀಡಿತರಾಗಿರಲು, ಆ ತ್ರೇತಾಯುಗದಲ್ಲಿ ಮತ್ತೆ ಇನ್ನೊಂದು ಸಿದ್ಧಿಯು ಅವರಿಗೆ ಕಾಣಿಸಿಕೊಂಡಿತು. ಅವರ ಜೀವನೋಪಾಯ ಸಾಧಕವಾದ ಮತ್ತೊಂದು ಮಳೆಯು ವಿಶೇಷವಾಗಿ ಸುರಿಯಿತು. ಆ ಮಳೆಯ ನೀರುಗಳು ದೊಡ್ಡ ದೊಡ್ಡ ನದಿಗಳಾದುವು.

ಅಭವನ್ವೃಷ್ಟಿಸಂತತ್ಯಾ ಸ್ರೋತಸ್ಥಾನಾನಿ ನಿಮ್ನಗಾಃ ।
ಏವಂ ನದ್ಯಃ ಪ್ರವೃತ್ತಾಸ್ತು ದ್ವಿತೀಯೇ ವೃಷ್ಟಿ ಸರ್ಜನೇ ॥೩೮॥

ಯೇ ಪುನಸ್ತದಪಾಂ ಸ್ತೋಕಾಃ ಪತಿತಾಃ ಪೃಥಿವೀತಲೇ ।
ಅಪಾಂ ಭೂಮೇಶ್ಚ ಸಂಯೋಗಾದೋಷಧ್ಯಸ್ತಾಸ್ತದಾಭವನ್॥೩೯॥

ಅಥಾಲ್ಪಕೃಷ್ಟಾಶ್ಚಾನುಪ್ತಾ ಗ್ರಾಮ್ಯಾರಣ್ಯಾಶ್ಚತುರ್ದಶ ।
ಋತು ಪುಷ್ಪ ಫಲಾಶ್ಚೈವ ವೃಕ್ಷಗುಲ್ಮಾಶ್ಚಜಜ್ಞಿರೇ ॥೪೦॥

ಪ್ರಾದುರ್ಭೂತಾನಿ ಚೈತಾನಿ ವೃಕ್ಷಜಾತ್ಯೌಷಧಾನಿ ಚ ।
ತೇನೌಷಧೇನ ವರ್ತಂತೇ ಪ್ರಜಾಸ್ತ್ರೇತಾಯುಗೇ ತದಾ ॥೪೧॥

ತತಃ ಪುನರಭೂತ್ತಾಸಾಂ ರಾಗೋ ಲೋಭಶ್ಚ ಸರ್ವಶಃ ।
ಅವಶ್ಯಂಭಾವಿನಾರ್ಥೇನ ತ್ರೇತಾಯುಗವಶೇನ ಚ ॥೪೨॥

---

೩೮–೩೯. ಮಳೆಯು ಹೆಚ್ಚಾಗಿ ಆಗಲು ಗಿರಿ ನದಿಗಳೂ ದೊಡ್ಡ ಹೊಳೆಗಳಾದುವು. ಎರಡನೆಯ ಮಳೆಯಿಂದ ಹೀಗೆ ನದಿಗಳುಂಟಾಗಲು, ಭೂಮಿಯ ಮೇಲೆ ಬಿದ್ದ ಮಳೆಯ ನೀರಿನ ಸಂಬಂಧದಿಂದ ಭೂಮಿಯಲ್ಲಿ ಸಸ್ಯಗಳು ಉಂಟಾದುವು.

೪೦. ಆ ಮೇಲೆ ಸ್ವಲ್ಪಮಟ್ಟಿಗೆ ಉತ್ತ ಭೂಮಿಯಲ್ಲಿ ಗ್ರಾಮಗಳಲ್ಲಿ ಬೆಳೆಯುವ ಸಸ್ಯಗಳೂ, ಬೀಜವನ್ನು ಬಿತ್ತದೆ ಕಾಡಿನಲ್ಲಿ ಬೆಳೆಯುವ ಸಸ್ಯಗಳೂ ಸೇರಿ ಹದಿನಾಲ್ಕು ಬಗೆಯ ಧಾನ್ಯಗಳೂ, ಋತುಗಳಿಗನುಸಾರ ವಾದ ಹೂಗಳೂ, ಹಣ್ಣುಗಳೂ, ಮರಗಳೂ, ಪೊದೆಗಳೂ, ಉಂಟಾದುವು. ಭತ್ತ, ಜವೇಗೋಧಿ, ಉದ್ದು, ಗೋಧಿ, ಕಡಲೆ, ಎಳ್ಳು, ಹೆಸರು, ಹುರಳಿ, ಇವು ಗ್ರಾಮದಲ್ಲಿ ಬೆಳೆವುವು. ಸಾವೆ, ತೃಣಧಾನ್ಯ, ಕಾಡುಎಳ್ಳು, ಬಿಳೀಗುಲಗಂಜಿ, ಬಿದಿರಕ್ಕಿ, ಕಾಡುಹೆಸರು, ಇವು ಬಿತ್ತದೇ ಕಾಡಿನಲ್ಲಿ ಬೆಳೆವ ಧಾನ್ಯಗಳು. ಇವೇ ಹದಿನಾಲ್ಕು ಬಗೆಯ ಧಾನ್ಯಗಳು.

೪೧. ಈ ರೀತಿಯಲ್ಲಿ ಬೇರೆ ಬೇರೆ ಮರಗಳ ಜಾತಿಗಳೂ, ಸಸ್ಯಗಳೂ, ಬೆಳೆದುವು. ಇವುಗಳಿಂದ ತ್ರೇತಾಯುಗದಲ್ಲಿ ಪ್ರಜೆಗಳು ಜೀವನವನ್ನು ನೆಡೆಸುತ್ತಿದ್ದರು.

೪೨–೪೩. ಮತ್ತೆ ಆ ಜನರಿಗೆ ಪ್ರೀತಿಯೂ, ಅತ್ಯಾಸೆಯೂ, ವಿಶೇಷವಾಗಿ ಹೆಚ್ಚಿ, ಆ ತ್ರೇತಾಯುಗದ ಕಾಲಧರ್ಮಕ್ಕನುಸಾರವಾಗಿ ಪದಾರ್ಥ

ತತಸ್ತಾಃ ಪರ್ಯ ಗೃಹ್ಣಂತ ನದೀಕ್ಷೇತ್ರಾಣಿ ಪರ್ವತಾನ್ ।
ವೃಕ್ಷ ಗುಲ್ಮೌಷಧೀಶ್ಚೈವ ಪ್ರಸಹ್ಯ ತು ಯಥಾಬಲಂ ॥೪೩॥

ವಿಪರ್ಯಯೇಣ ಚೌಷಧ್ಯಃ ಪ್ರಣಷ್ಟಾಸ್ತಾಶ್ಚತುರ್ದಶ ।
ಮತ್ವಾ ಧರಾಂ ಪ್ರವಿಷ್ಟಾಸ್ತಾ ಇತ್ಯೌಷಧ್ಯಃ ಪಿತಾಮಹಃ ॥೪೪॥

ದುದೋಹ ಗಾಂ ಪ್ರಯತ್ನೇನ ಸರ್ವಭೂತಹಿತಾಯ ವೈ ।
ತದಾ ಪ್ರಭೃತಿ ಚೌಷಧ್ಯಃ ಫಾಲಕೃಷ್ಟಾಸ್ತ್ವಿತಸ್ತತಃ ॥೪೫॥

ವಾರ್ತಾಂ ಕೃಷಿಂ ಸಮಾಯಾತಾ ವರ್ತುಕಾಮಾಃ ಪ್ರಯತ್ನತಃ ।
ವಾರ್ತಾವೃತ್ತಿಃ ಸಮಾಖ್ಯಾತಾ ಕೃಷಿಕಾಮ ಪ್ರಯತ್ನತಃ ॥೪೬॥

---

ಗಳ ಆವಶ್ಯಕತೆಯು ಹೆಚ್ಚಿದುದರಿಂದ ಆ ಪ್ರಜೆಗಳು ಪ್ರಯತ್ನ ಪೂರ್ವಕವಾಗಿ ತಮ್ಮ ಶಕ್ತಿಗನುಸಾರವಾಗಿ ನದಿಗಳನ್ನೂ, ಹೊಲಗದ್ದೆಗಳನ್ನೂ, ಪರ್ವತಗಳನ್ನೂ, ಆಶ್ರಯಿಸಿ, ಮರ ಗಿಡಗಳನ್ನೂ, ಸಸ್ಯಗಳನ್ನೂ ಬೆಳೆ ಮಾಡಿದರು.

೪೪–೪೫. ಕಾಲ ವಿಪರ್ಯಾಸದಿಂದ ಹಿಂದೆ ಹೇಳಿದ ಹದಿನಾಲ್ಕು ಬಗೆಯ ಸಸ್ಯಗಳೂ ನಾಶಹೊಂದಿದುವು. ಅವುಗಳೆಲ್ಲವೂ ಭೂಮಿಯನ್ನು ಪ್ರವೇಶಿಸಿದುವೆಂದು ತಿಳಿದು ವಿಷ್ಣುವು ಪೃಥು ಚಕ್ರವರ್ತಿಯ ರೂಪದಿಂದ ಪ್ರಯತ್ನ ಪೂರ್ವಕವಾಗಿ ಸಕಲ ಪ್ರಾಣಿಗಳ ಹಿತಕ್ಕಾಗಿ ಆ ಭೂಮಿಯನ್ನು ಗೋವನ್ನಾಗಿ ಭಾವಿಸಿ ಸಕಲ ವಸ್ತುಗಳನ್ನೂ ಕರೆದನು. ಎಂದರೆ ಸಕಲ ವಸ್ತುಗಳೂ ಭೂಮಿಯಲ್ಲಿ ಬೆಳೆಯುವಂತೆ ಮಾಡಿದನು. ಅದು ಮೊದಲುಗೊಂಡು ಸಸ್ಯಗಳೆಲ್ಲವೂ ನೇಗಿಲಿನಿಂದ ಉತ್ತ ಭೂಮಿಯಲ್ಲಿ ಬೆಳೆಯುವ ಅಭ್ಯಾಸವಾಯಿತು.

೪೬. ಜೀವಿಸಲಿಚ್ಛೆಯುಳ್ಳ ಪ್ರಜೆಗಳು ಕೃಷಿರೂಪ ಜೀವನವನ್ನು ಹೊಂದಿದರು. ಕೃಷಿಮಾಡಬೇಕೆಂಬ ಪ್ರಯತ್ನವನ್ನು ವಾರ್ತಾವೃತ್ತಿಯೆಂದು ಹೇಳುವರು.

ಅನ್ಯಥಾ ಜೀವಿತಂ ತಾಸಾಂ ನಾಸ್ತಿ ತ್ರೇತಾಯುಗಾತ್ಯಯೇ ।
ಹಸ್ತೋದ್ಭವಾ ಹ್ಯಪಶ್ಚೈವ ಭವಂತಿ ಬಹುಶಸ್ತದಾ ॥೪೭॥
ತತ್ರಾಪಿ ಜಗೃಹುಃಸರ್ವೇ ಚಾನ್ಯೋನ್ಯಂ ಕ್ರೋಧಮೂರ್ಚ್ಛಿತಾಃ ।
ಸುತದಾರ ಧನಾದ್ಯಾಂಸ್ತು ಬಲಾದ್ಯುಗಬಲೇನ ತು ॥೪೮॥
ಮರ್ಯಾದಾಯಾಃ ಪ್ರತಿಷ್ಠಾರ್ಥಂ ಜ್ಞಾತ್ವಾ ತದಖಿಲಂ ವಿಭುಃ ।
ಸಸರ್ಜ ಕ್ಷತ್ರಿಯಾಂಸ್ತ್ರಾತುಂ ಕ್ಷತಾತ್ಕಮಲ ಸಂಭವಃ ॥೪೯॥
ವರ್ಣಾಶ್ರಮ ಪ್ರತಿಷ್ಠಾಂ ಚ ಚಕಾರ ಸ್ವೇನ ತೇಜಸಾ ।
ವೃತ್ತೇನ ವೃತ್ತಿನಾ ವೃತ್ತಂ ವಿಶ್ವಾತ್ಮಾ ನಿರ್ಮಮೇ ಸ್ವಯಂ ॥೫೦॥
ಯಜ್ಞಪ್ರವರ್ತನಂ ಚೈವ ತ್ರೇತಾಯಾ ಮಭವತ್ಕ್ರಮಾತ್ ।
ಪಶುಯಜ್ಞಂ ನ ಸೇವಂತೇ ಕೇಚಿತ್ತತ್ರಾಪಿ ಸುವ್ರತಾಃ ॥೫೧॥

---

೪೭. ತ್ರೇತಾಯುಗದ ಕೊನೆಯಲ್ಲಿ ಜನಗಳಿಗೆ ಕೃಷಿಯನ್ನು ಬಿಟ್ಟು ಮತ್ತೊಂದರಿಂದ ಜೀವನವು ದೊರೆಯುತ್ತಿರಲಿಲ್ಲ. ಆ ಕಾಲದಲ್ಲಿ ಹರಿಯುವ ನೀರನ್ನು ಗುದ್ದಲಿ ಮುಂತಾದುವುಗಳ ಸಹಾಯವಿಲ್ಲದೇ ಕೈಯಿಂದಲೇ ಬೇಕಾದ ಕಡೆಗೆ ತಿರುಗಿಸಿಕೊಂಡು ವ್ಯವಸಾಯ ಮಾಡುತ್ತಿದ್ದರು.

೪೮. ಆ ಕಾಲದಲ್ಲಿಯೂ ಜನರು ಒಬ್ಬರಮೇಲೊಬ್ಬರು ಕೋಪವನ್ನು ಹೊಂದಿ ಹೆಂಡತಿ, ಮಕ್ಕಳು, ಮುಂತಾದವರ ಧನವನ್ನು ಬಲಾತ್ಕಾರದಿಂದ ಕಿತ್ತುಕೊಳ್ಳುತ್ತಿದ್ದರು. ಯುಗಧರ್ಮವು ಈ ಸ್ಥಿತಿಗೆ ಬಂದಿತು.

೪೯. ಇವನ್ನು ಕಂಡು ಸರ್ವವ್ಯಾಪಿಯಾದ ವಿಷ್ಣುವು ಲೋಕದಲ್ಲಿ ಧರ್ಮರಕ್ಷಣೆಮಾಡಿ ಅದನ್ನು ನೆಲೆಗೊಳಿಸುವುದಕ್ಕೂ, ಜನರ ದುಃಖವನ್ನು ನಾಶಮಾಡಿ ರಕ್ಷಿಸುವುದಕ್ಕೂ, ಕ್ಷತ್ರಿಯರನ್ನು ಸೃಷ್ಟಿಮಾಡಿದನು.

೫೦. ಆ ಪ್ರಪಂಚಸ್ವರೂಪನಾದ ವಿಷ್ಣುವು ತನ್ನ ತೇಜಸ್ಸಿನ ಶಕ್ತಿಯಿಂದಲೇ ವರ್ಣಾಶ್ರಮ ಧರ್ಮಗಳನ್ನು ಪ್ರತಿಷ್ಠೆಮಾಡಿದನು. ಸ್ವಧರ್ಮದಿಂದಲೂ, ಜೀವನೋಪಾಯದಿಂದಲೇ ಜೀವನಮಾಡಬೇಕೆಂಬ ನಿಯಮವನ್ನೂ ನಿರ್ಮಿಸಿದನು.

೫೧. ಆ ತ್ರೇತಾಯುಗದಲ್ಲಿ ಕ್ರಮವಾಗಿ ಯಜ್ಞಕಾರ್ಯ ಪ್ರವರ್ತನೆಯುಂಟಾಯಿತು. ಆ ಕಾಲದಲ್ಲಿಯೂ ಕೆಲವರು ಮೋಕ್ಷೇಚ್ಛೆಯುಳ್ಳವರು ಪಶುಯಜ್ಞವನ್ನು ಮಾಡುತ್ತಿರಲಿಲ್ಲ.

ಬಲಾದ್ವಿಷ್ಣುಸ್ತದಾ ಯಜ್ಞಮಕರೋತ್ಸರ್ವದೃಕ್ ಕ್ರಮಾತ್ ।
ದ್ವಿಜಾಸ್ತದಾ ಪ್ರಶಂಸಂತಿ ತತಸ್ತ್ವಹಿಂಸಕಂ ಮುನೇ ॥೫೨॥
ದ್ವಾಪರೇ ಷ್ವಪಿ ವರ್ತಂತೇ ಮತಿಭೇದಾಸ್ತದಾ ನೃಣಾಂ ।
ಮನಸಾ ಕರ್ಮಣಾ ವಾಚಾ ಕೃಚ್ಛ್ರಾದ್ವಾರ್ತಾ ಪ್ರಸಿಧ್ಯತಿ ॥೫೩॥
ತದಾ ತು ಸರ್ವಭೂತಾನಾಂ ಕಾಯಕ್ಲೇಶವಶಾತ್ಕ್ರಮಾತ್ ।
ಲೋಭೋ ಧೃತಿ ರ್ವಣಿಗ್ಯುದ್ಧಂ ತತ್ತ್ವಾನಾಮವಿ ನಿಶ್ಚಯಃ ॥೫೪॥
ವೇದ ಶಾಖಾಪ್ರಣಯನಂ ಧರ್ಮಾಣಾಂ ಸಂಕರಸ್ತಥಾ ।
ವರ್ಣಾಶ್ರಮ ಪರಿಧ್ವಂಸಃ ಕಾಮದ್ವೇಷೌ ತಥೈವ ಚ ॥೫೫॥

---

೫೨. ಶಿಲಾದಮುನಿಯೇ, ಕೇಳು. ಸರ್ವಜ್ಞನಾದ ವಿಷ್ಣುವು ಕ್ರಮವಾಗಿ ಆ ತ್ರೇತಾಯುಗದ ಕೊನೆಯಲ್ಲಿ ಬಲಾತ್ಕಾರದಿಂದ ಪಶುಯಜ್ಞವನ್ನು ಮಾಡಿದನು. ಆಗ ಬ್ರಾಹ್ಮಣರು ಪಶುಯಜ್ಞ ಮಾಡುವವನಿಗಿಂತಲೂ ಅಹಿಂಸಾಧರ್ಮದಿಂದ ಚರುಪುರೋಡಾಶಾದಿಗಳನ್ನು ಉಪಯೋಗಿಸಿ ಯಜ್ಞಮಾಡುವವನನ್ನು ಹೊಗಳುತ್ತಿದ್ದರು.

೫೩. ದ್ವಾಪರಯುಗದಲ್ಲಿಯೂ ಕೂಡ ಮನುಷ್ಯರಲ್ಲಿ ಬುದ್ಧಿಭೇದಗಳುಂಟಾಗಿದ್ದುವು. ಮನಸ್ಸಿನಿಂದಲೂ, ಮಾತಿನಿಂದಲೂ, ಕಾರ್ಯದಿಂದಲೂ, ಪ್ರತಿಯೊಬ್ಬರೂ ಬೇರೆ ಬೇರೆ ಭಾವಗಳನ್ನು ತೋರ್ಪಡಿಸುವರು. ಒಂದೆಡೆಯ ವರ್ತಮಾನವು ಮತ್ತೊಂದೆಡೆಗೆ ಬಹು ಕಷ್ಟದಿಂದ ತಿಳಿಯಬೇಕಾಗಿದ್ದಿತು.

೫೪. ಆ ಯುಗದಲ್ಲಿ ಸಮಸ್ತ ಪ್ರಾಣಿಗಳಿಗೂ ಶರೀರಾಯಾಸದಿಂದ ಜೀವನವು ಜರುಗಬೇಕಾಗಿದ್ದಿತು. ಈ ಕಾರಣದಿಂದ ಲೋಭಬುದ್ಧಿಯೂ ಸಂಬಳವನ್ನು ತೆಗೆದುಕೊಂಡು ಸೇವೆಮಾಡುವುದೂ, ವ್ಯಾಪಾರ ಸಂಬಂಧವಾದ ಪರಸ್ಪರ ವಿವಾದವೂ, ಉಂಟಾಗಿ ಚಿತ್ತಕಾಲುಷ್ಯದಿಂದ ಯಥಾರ್ಥಸ್ವರೂಪವಾದ ಆತ್ಮವಸ್ತುವಿನ ನಿಶ್ಚಯವು ಇಲ್ಲದೇ ಹೋಯಿತು.

೫೫–೫೬. ದ್ವಾಪರಯುಗದಲ್ಲಿ ಕ್ರಮವಾಗಿ ಜನರಲ್ಲಿ **ಕಾಮ, ದ್ವೇಷ, ಪ್ರೀತಿ, ಲೋಭ, ಮದ ಮುಂತಾದ ದುರ್ಗುಣಗಳು ಹೆಚ್ಚಿ ಧರ್ಮಗಳ ಸಾಂಕರ್ಯವುಂಟಾಗಿ ಬ್ರಾಹ್ಮಣಾದಿ ವರ್ಣಗಳ ಮತ್ತು ಬ್ರಹ್ಮ**

ದ್ವಾಪರೇ ತು ಪ್ರವರ್ತಂತೇ ರಾಗೋ ಲೋಭೋ ಮದಸ್ತಥಾ ।
ವೇದೋ ವ್ಯಾಸೈಶ್ಚತುರ್ಧಾ ತು ವ್ಯಸ್ಯತೇ ದ್ವಾಪರಾದಿಷು ॥೫೬॥
ಏಕೋ ವೇದಶ್ಚತುಷ್ಪಾದ ಸ್ತ್ರೇತಾಸ್ವಿಹ ವಿಧೀಯತೇ ।
ಸಂಕ್ಷಯಾದಾಯುಷಶ್ಚೈವ ವ್ಯಸ್ಯತೇ ದ್ವಾಪರೇಷು ಸಃ ॥೫೭॥
ಋಷಿ ಪುತ್ರೈಃ ಪುನರ್ಭೇದಾ ಭಿದ್ಯಂತೇ ದೃಷ್ಟಿ ವಿಭ್ರಮೈಃ ।
ಮಂತ್ರ ಬ್ರಾಹ್ಮಣ ವಿನ್ಯಾಸೈಃ ಸ್ವರವರ್ಣ ವಿಪರ್ಯಯೈಃ ॥೫೮॥
ಸಂಹಿತಾ ಋಗ್ಯ ಜುಃಸಾಮ್ನಾಂ ಸಂಹನ್ಯಂತೇ ಮನೀಷಿಭಿಃ ।
ಸಾಮಾನ್ಯಾ ವೈಕೃತಾಶ್ಚೈವ ದೃಷ್ಟಿಭಿಸ್ತೈಃಪೃಥಕ್ಪೃಥಕ್ ॥೫೯॥
ಬ್ರಾಹ್ಮಣಂ ಕಲ್ಪ ಸೂತ್ರಾಣಿ ಮಂತ್ರಪ್ರವಚನಾನಿ ಚ ।
ಅನ್ಯೇ ತು ಪ್ರಸ್ಥಿತಾ ಸ್ತಾನ್ವೈ ಕೇಚಿತ್ತಾ ನ್ಪ್ರತ್ಯವಸ್ಥಿತಾಃ ॥೬೦॥

---

ಚರ್ಯಾದ್ಯಾಶ್ರಮಗಳ ನಾಶವುಂಟಾಗಿ ವೇದಕ್ಕೆ ಶಾಖಾ ಭೇದಗಳುಂಟಾಗುವುವು. ವ್ಯಾಸರೆಂಬ ಋಷಿಗಳು ದ್ವಾಪರಾದಿ ಯುಗಗಳಲ್ಲಿ ವೇದವನ್ನು ನಾಲ್ಕು ಭಾಗವಾಗಿ ವಿಂಗಡಿಸುವರು.

೫೭. ತ್ರೇತಾಯುಗದ ಕೊನೆಯಲ್ಲಿ ಈ ಭೂಲೋಕದಲ್ಲಿ ಒಂದೇ ವೇದವು ನಾಲ್ಕುಭಾಗವಾಗಿ ಅಭ್ಯಾಸಮಾಡಲಾಗುತ್ತದೆ. ದ್ವಾಪರ ಯುಗದಲ್ಲಿ ಮನುಷ್ಯರ ಆಯುಸ್ಸು ಕಡಿಮೆಯಾಗುವುದರಿಂದ ಆ ವೇದವನ್ನು ನಾಲ್ಕು ಭಾಗವಾಗಿ ವಿಂಗಡಿಸುವರು.

೫೮–೫೯. ಬುದ್ಧಿವಂತರಾದ ಋಷಿಪುತ್ರರು ದೃಷ್ಟಿಭೇದದಿಂದ ಋಗ್ವೇದ, ಯುಜುರ್ವೇದ, ಸಾಮವೇದಗಳ ಸಂಹಿತೆಯನ್ನು ಕ್ರಮಪಡಿಸುವರು. ಇದಲ್ಲದೆ ಮಂತ್ರಗಳು, ಬ್ರಾಹ್ಮಣಗಳು, ಎಂಬ ಭೇದದಿಂದಲೂ, ಸ್ವರಗಳ, ಮತ್ತು ವರ್ಣಗಳ ವ್ಯತ್ಯಾಸದಿಂದಲೂ, ಸಾಮಾನ್ಯವೆಂದೂ ವಿಕಾರವೆಂದೂ, ಬೇರೆ ಬೇರೆಯಾಗಿ ವಿಂಗಡಿಸುವರು.

೬೦. ಯಜ್ಞಾದಿಗಳ ವಿಧಿಯನ್ನು ಹೊಗಳಿ ಮಂತ್ರಗಳನ್ನು ಉಪಯೋಗಿಸುವ ಕ್ರಮವನ್ನು ಬ್ರಾಹ್ಮಣಭಾಗವು ಹೇಳುವುದು. ಯಜ್ಞಾದಿಗಳಲ್ಲಿ ಮಾಡಬೇಕಾದ ಕಾರ್ಯಗಳನ್ನು ಕಲ್ಪಸೂತ್ರಗಳು ಹೇಳುವುವು. ಮೀಮಾಂಸಾನ್ಯಾಯಸೂತ್ರಗಳೇ ಮಂತ್ರಪ್ರವಚನಗಳೆನಿಸುವುವು. ಇವುಗಳನ್ನು ಬುದ್ಧಿವಂತರಾದ ಋಷಿಗಳು ಮಾಡಿದರು. ಕೆಲವರು ಇವುಗಳನ್ನು ಪ್ರತಿಭಟಿಸಿದರು. ಮತ್ತೆ ಕೆಲವರು ಇವನ್ನು ಹೊಗಳಿದರು.

ಇತಿಹಾಸ ಪುರಾಣಾನಿ ಭಿದ್ಯಂತೇ ಕಾಲಗೌರವಾತ್ ।
ಬ್ರಾಹ್ಮಂ ಪಾದ್ಮಂ ವೈಷ್ಣವಂ ಚ ಶೈವಂ ಭಾಗವತಂ ತಥಾ ॥೬೧॥
ಭವಿಷ್ಯಂ ನಾರದೀಯಂ ಚ ಮಾರ್ಕಂಡೇಯ ಮತಃ ಪರಂ ।
ಆಗ್ನೇಯಂ ಬ್ರಹ್ಮವೈವರ್ತಂ ಲೈಂಗಂ ವಾರಾಹಮೇವ ಚ ॥೬೨॥
ವಾಮನಾಖ್ಯಂ ತತಃ ಕೂರ್ಮಂ ಮಾತ್ಸ್ಯಂ ಗಾರುಡ ಮೇವ ಚ ।
ಸ್ಕಾಂದಂ ತಥಾ ಚ ಬ್ರಹ್ಮಾಂಡಂ ತೇಷಾಂ ಭೇದಃ ಪ್ರಕಥ್ಯತೇ ॥೬೩॥
ಲೈಂಗ ಮೇಕಾದಶವಿಧಂ ಪ್ರಭಿನ್ನಂ ದ್ವಾಪರೇ ಶುಭಂ ।
ಮನ್ವತ್ರಿ ವಿಷ್ಣುಹಾರೀತ ಯಾಜ್ಞವಲ್ಕ್ಯೋಶನೋಽಂಗಿರಾಃ ॥೬೪॥
ಯಮಾಪಸ್ತಂಬ ಸಂವರ್ತಾಃ ಕಾತ್ಯಾಯನ ಬೃಹಸ್ಪತೀ ।
ಪರಾಶರ ವ್ಯಾಸ ಶಂಖ ಲಿಖಿತೌ ದಕ್ಷಗೌತಮೌ ॥೬೫॥
ಶಾತಾತಪೋ ವಸಿಷ್ಠಶ್ಚ ಏವಮಾದ್ಯೈಃ ಸಹಸ್ರಶಃ ।
ಅವೃಷ್ಟಿರ್ಮರಣಂ ಚೈವ ತಥಾ ವ್ಯಾಧ್ಯಾದ್ಯುಪದ್ರವಾಃ ॥೬೬॥

---

೬೧–೬೩. ಇತಿಹಾಸ ಪುರಾಣಗಳೂ ಕೂಡ ಅನೇಕ ಕಲ್ಪಗಳ ಭೇದದಿಂದ ಬೇರೆ ಬೇರೆ ಯಾಗಿರುವುವು. ಬ್ರಹ್ಮ, ಪದ್ಮ, ವಿಷ್ಣು, ಶಿವ, ಭಾಗವತ, ಭವಿಷ್ಯ, ನಾರದೀಯ, ಮಾರ್ಕಂಡೇಯ, ಆಗ್ನೇಯ, ಬ್ರಹ್ಮ ವೈವರ್ತ, ಲಿಂಗ, ವರಾಹ, ವಾಮನ, ಕೂರ್ಮ, ಮಾತ್ಸ್ಯ, ಗರುಡ, ಸ್ಕಾಂದ, ಬ್ರಹ್ಮಾಂಡ, ಎಂದು ಪುರಾಣಗಳು ಹದಿನೆಂಟಿರುವುವು.

೬೪–೬೫ ದ್ವಾಪರಯುಗದಲ್ಲಿ ಲಿಂಗಪುರಾಣವು ಹನ್ನೊಂದು ವಿಧ ವಾಗಿ ವಿಭಾಗವಾಯಿತು. ಮನು, ಅತ್ರಿ, ವಿಷ್ಣು, ಹಾರೀತ, ಯಾಜ್ಞ ವಲ್ಕ್ಯ, ಶುಕ್ರ, ಅಂಗಿರಸ್ಸು, ಯಮ, ಆಪಸ್ತಂಬ, ಸಂವರ್ತ, ಕಾತ್ಯಾ ಯನ, ಬೃಹಸ್ಪತಿ, ಪರಾಶರ, ವ್ಯಾಸ, ಶಂಖ, ಲಿಖಿತ, ದಕ್ಷ, ಗೌತಮ, ಶಾತಾತಪ, ವಸಿಷ್ಠ, ಇವರೇ ಮುಂತಾದ ಋಷಿಗಳಿಂದ ಈ ಪುರಾಣವು ಅನೇಕ ಭಾಗವಾಗಿರುವುದು.

೬೬–೬೮. ಮಳೆ ಯಿಲ್ಲದಿರುವುದು, ಅಕಾಲಮರಣ, ರೋಗಾದಿಗಳ ಬಾಧೆ, ಇವುಗಳಿಂದ ಪ್ರಾಣಿಗಳಿಗೆ ಮಾತು, ಮನಸ್ಸು, ಕಾರ್ಯ, ಇವುಗ ಳಲ್ಲಿ ದುಃಖವುಂಟಾಗುವುದು. ಈ ದುಃಖದಿಂದ ಬೇಸರವು ಉತ್ಪತ್ತಿ ಯಾಗುವುದು. ಬೇಜಾರಿನಿಂದ ದುಃಖವನ್ನು ತಪ್ಪಿಸಿಕೊಳ್ಳ ಬೇಕೆಂದು

ವಾಙ್ಮನಃ ಕರ್ಮಜೈರ್ದುಃಖೈ ರ್ನಿರ್ವೇದೋ ಜಾಯತೇ ತತಃ ।
ನಿರ್ವೇದಾಜ್ಜಾಯತೇ ತೇಷಾಂ ದುಃಖ ಮೋಕ್ಷ ವಿಚಾರಣಾ ॥೬೭॥

ವಿಚಾರಣಾಚ್ಚ ವೈರಾಗ್ಯಂ ವೈರಾಗ್ಯಾದ್ದೋಷದರ್ಶನಂ ।
ದೋಷಾಣಾಂ ದರ್ಶನಾಚ್ಚೈವ ದ್ವಾಪರೇ ಜ್ಞಾನ ಸಂಭವಃ ॥೬೮॥

ಏಷಾ ರಜಸ್ತಮೋಯುಕ್ತಾ ವೃತ್ತಿರ್ವೈದ್ವಾಪರೇ ಸ್ಮೃತಾ ।
ಆದ್ಯೇ ಕೃತೇ ತು ಧರ್ಮೋಽಸ್ತಿ ಸ ತ್ರೇತಾಯಾಂ ಪ್ರವರ್ತತೇ ॥೬೯॥
ದ್ವಾಪರೇ ವ್ಯಾಕುಲೀಭೂತ್ವಾ ಪ್ರಣಶ್ಯತಿ ಕಲೌ ಯುಗೇ ॥೭೦॥

ಇತಿ ಶ್ರೀ ಲಿಂಗಮಹಾಪುರಾಣೇ ಪೂರ್ವಭಾಗೇ ಯುಗಧರ್ಮ ಕಥನಂ
ನಾಮ ಏಕೋನಚತ್ವಾರಿಂಶೋಽಧ್ಯಾಯಃ

---

ಯುಕ್ತಾ ಯುಕ್ತ ವಿಮರ್ಶೆಯು ಹುಟ್ಟುವುದು. ವಿವೇಕದಿಂದ ವೈರಾಗ್ಯವೂ, ವೈರಾಗ್ಯದಿಂದ ಸಕಲವಸ್ತುಗಳಲ್ಲಿಯೂ ದೋಷದರ್ಶನವೂ, ದೋಷದರ್ಶನದಿಂದ ಜ್ಞಾನ ಸಂಪಾದನೆಯ ವೃತ್ತಿಯೂ ಉಂಟಾಗುವುದು. ಇದು ದ್ವಾಪರಯುಗದಲ್ಲಿ ಜ್ಞಾನೋತ್ಪತ್ತಿ ಕ್ರಮವು. ಕೃತ, ತ್ರೇತಾಯುಗ ಗಳಲ್ಲಿ ಸ್ವಾಭಾವಿಕವಾಗಿ ಮನುಷ್ಯರಿಗೆ ಜ್ಞಾನದಲ್ಲಿ ಪ್ರವೃತ್ತಿಯುಂಟಾಗು ವುದೆಂದು ಇದರಿಂದ ಸೂಚಿತವಾದಂತಾಯಿತು.

೬೯-೭೦. ಈ ರೀತಿಯಲ್ಲಿ ರಜೋಗುಣ, ತಮೋಗುಣಗಳಿಂದ ಕೂಡಿದ ಕಾರ್ಯಪ್ರವೃತ್ತಿಯು ದ್ವಾಪರಯುಗದಲ್ಲಿರುವುದು. ಮೊದಲನೆಯ ಕೃತಯುಗದಲ್ಲಿ ಧರ್ಮವು ಎಲ್ಲೆಡೆಯಲ್ಲಿಯೂ, ಇರುವುದು. ತ್ರೇತಾ ಯುಗದಲ್ಲಿ ಅದು ಶಾಸ್ತ್ರ ವಿಧಿಯಿಂದಲೂ, ಮಹಾತ್ಮರ ಪ್ರೇರಣೆಯಿಂ ದಲೂ, ಆಚರಣೆಯಲ್ಲಿರುತ್ತದೆ. ದ್ವಾಪರಯುಗದಲ್ಲಿ ಭೇದಬುದ್ಧಿಯಿಂದ ಧರ್ಮಕ್ಕೆ ಗ್ಲಾನಿಯುಂಟಾಗುವುದು. ಕಲಿಯುಗದಲ್ಲಿ ಆ ಧರ್ಮವು ಬಹುಮಟ್ಟಿಗೆ ಕುಗ್ಗಿ ಕಡೆಗೆ ನಾಶವನ್ನೈದುವುದು.

ಇಲ್ಲಿಗೆ ಲಿಂಗಮಹಾಪುರಾಣದ ಪೂರ್ವಭಾಗದಲ್ಲಿ ಯುಗಗಳಲ್ಲಿನ ಸಾಮಾನ್ಯಧರ್ಮಗಳ ವಿವರಣೆ ಎಂಬ ಮೂವತ್ತೊಂಬತ್ತನೆಯ ಅಧ್ಯಾಯವು ಮುಗಿದುದು.

## ಶ್ರೀ ಲಿಂಗಮಹಾಪುರಾಣ

ಶ್ರೀ ಕರ್ಣಾಟಾಧಿಪ ಜಯಚಾಮರಾಜೇಂದ್ರ ಶಾಸನಾತ್ ।
ಮಹಾಪುರಾಣಂ ಲೈಂಗಾಖ್ಯಂ ವರ ಕರ್ಣಾಟ ಭಾಷಯಾ ॥

ಸುಬ್ಬಮ್ಮಾಂಬಾ ದೇವಯಜ್ವ ತನಯಃ ಚಂದ್ರಶೇಖರಃ ।
ಜನಾನಾ ಮುಪಕಾರಾಯ ಪರ್ಯವರ್ತಯ ದಾದರಾತ್ ॥

ಈಶಸೇವಾಂ ದೇಶಸೇವಾಂ ಭಾಷಾಸೇವಾಂ ಮುದಾ ಕೃತಾಂ ।
ಸ್ವೀಕೃತ್ಯ ತುಷ್ಯತು ಗುರುಃ ದೇವೋ ರಾಜಾ ಚ ಭಾರತೀ ॥

ಶ್ರೀ ಸಾಂಬಶಿವಾರ್ಪಣಮಸ್ತು



ಬೆಂಗಳೂರು ಪ್ರೆಸ್, ಮೈಸೂರು ಬ್ರಾಂಚಿನಲ್ಲಿ ಮುದ್ರಿಸಲ್ಪಟ್ಟಿತು.